ಕನಕ ಸಾಹಿತ್ಯ
ದರ್ಶನ ಸಂಪುಟ-4



# ಕನಕದಾಸರ ಕೀರ್ತನೆಗಳು ಮತ್ತು ಮುಂಡಿಗೆಗಳು

ಕನಕ ಸಾಹಿತ್ಯ ದರ್ಶನ ಸಂಪುಟ ೪

# ಕನಕದಾಸರ ಕೀರ್ತನೆಗಳು ಮತ್ತು ಮುಂಡಿಗೆಗಳು

ಸಂಪಾದಕರು

**ಪ್ರೊ. ಸುಧಾಕರ**

ಕರ್ನಾಟಕ ಸರ್ಕಾರ

**ಕನ್ನಡ ಮತ್ತು ಸಂಸ್ಕೃತಿ ಇಲಾಖೆ**
ಕನ್ನಡ ಭವನ, ಜೆ.ಸಿ.ರಸ್ತೆ
ಬೆಂಗಳೂರು – ೫೬೦ ೦೦೨

**KANAKA SAHITYA DARSHANA-4** (Kannada) Reprint of A collection of poetical works of Kanakadasa; Edited by **Prof. Sudhakara**; Published by **Dr. Manu Baligar**, Commissioner, Department of Kannada and Culture, Kannada Bhavan, J.C.Road, Bengaluru - 02.



ಮೊದಲ ಮುದ್ರಣ : ೧೯೯೯

ಎರಡನೆಯ ಮುದ್ರಣ : ೨೦೧೨

ಪ್ರತಿಗಳು : ೧೦೦೦

ಪುಟಗಳು : xiv+೮೩೦+೧೬

ಬೆಲೆ : ರೂ. ೧೫೦/-

ರಕ್ಷಾಪುಟ ವಿನ್ಯಾಸ : **ಯು.ಟಿ. ಸುರೇಶ್**

ಮುದ್ರಕರು :

**ಮೆ॥ ಮಯೂರ ಪ್ರಿಂಟ್ ಆ್ಯಡ್ಸ್**

ನಂ. ೬೯, ಸುಬೇದಾರ್ ಛತ್ರಂ ರೋಡ್

ಬೆಂಗಳೂರು – ೫೬೦ ೦೨೦ ದೂ : ೨೩೩೪೨೬೨೪



## ಪ್ರಕಾಶಕರ ಮಾತು

ಕನಕದಾಸರು ಕವಿ ವಿಶಿಷ್ಟವಾದ ಸಹಜ ಪ್ರತಿಭೆಯಿಂದ, ಉದಾರತೆಯಿಂದ, ವಸ್ತುವೈವಿಧ್ಯ ಹಾಗೂ ಛಂದೋ ವೈವಿಧ್ಯತೆಯಿಂದ, ಸಮಕಾಲೀನ ಪ್ರಜ್ಞೆಯಿಂದ ಹರಿದಾಸ ಸಾಹಿತ್ಯ ಪರಂಪರೆಯಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದಿದ್ದಾರೆ. ಕನಕದಾಸರು ದಾಸರಲ್ಲಿ ಕವಿಗಳು. ಇದೇ ಅವರ ವೈಶಿಷ್ಟ್ಯ. ಕನಕದಾಸರು ಹಲವಾರು ಭಾವಪೂರ್ಣ ಕೀರ್ತನೆಗಳನ್ನು ರಚಿಸಿದ್ದಾರೆ. ಅವರ ಸಾಹಿತ್ಯ ರಚನೆ ಕೇವಲ ಕೀರ್ತನೆಗಳಿಗೆ ಸೀಮಿತಗೊಳ್ಳದೆ, ಮೋಹನತರಂಗಿಣಿ, ನಳಚರಿತ್ರೆ, ಹರಿಭಕ್ತಿಸಾರ, ರಾಮಧಾನ್ಯಚರಿತ್ರೆ, ನೃಸಿಂಹಸ್ತವ ಎಂಬ ಕೃತಿಗಳನ್ನೂ ರಚಿಸಿದ್ದಾರೆ. ನೃಸಿಂಹಸ್ತವ ಉಪಲಬ್ಧವಿಲ್ಲ. ತತ್ತ್ವ–ನೀತಿ ಭಕ್ತಿಗಳಿಂದ ಮುಪ್ಪುರಿಗೊಂಡ ಹರಿಭಕ್ತಿಸಾರ, ನಳದಮಯಂತಿಯರ ಹೃದಯಸ್ಪರ್ಶಿಯಾದ ಪಾತ್ರ ಚಿತ್ರಣದ ನಳಚರಿತ್ರೆ, ಜನಾದರಣೀಯವಾಗಿದೆ. ಅಂದಿನ ಸಮಾಜದಲ್ಲಿ ನೆಲಸಿದ್ದ ವರ್ಗ, ವರ್ಣದ ಅಂತರವನ್ನು ವ್ಯಂಗ್ಯವಾಗಿ, ಮಾರ್ಮಿಕವಾಗಿ ಎತ್ತಿತೋರಿಸುವ ರಾಮಧಾನ್ಯಚರಿತ್ರೆಯು ವಿನೂತನವಾಗಿದ್ದು, ಕನ್ನಡ ಕಾವ್ಯಲೋಕದಲ್ಲಿ ಅನನ್ಯ ಕೃತಿಯೆನಿಸಿದೆ. ಕನಕದಾಸರು ತಮ್ಮ ಸ್ವೋಪಜ್ಞ ಸಾಧನೆ–ಸಿದ್ಧಿಗಳಿಂದ ದಾಸ ಪರಂಪರೆಯಲ್ಲಿ ಮಹತ್ವದ ಸ್ಥಾನವನ್ನು ಪಡೆದಿದ್ದಾರೆ.

ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ದಾಸಶ್ರೇಷ್ಠರಲ್ಲಿ ಒಬ್ಬರಾದ ಕನಕದಾಸರ ೫೦೦ನೆಯ ಜಯಂತ್ಯುತ್ಸವದ ಅಂಗವಾಗಿ ಡಾ. ದೇ. ಜವರೇಗೌಡ ಅವರ ಅಧ್ಯಕ್ಷತೆಯಲ್ಲಿ ಡಾ. ಹೆಚ್.ಜೆ. ಲಕ್ಕಪ್ಪಗೌಡ, ಡಾ. ಬರಗೂರು ರಾಮಚಂದ್ರಪ್ಪ ಮತ್ತು ಡಾ. ಸಾ.ಶಿ. ಮರುಳಯ್ಯನವರನ್ನೊಳಗೊಂಡ ಸಂಪಾದಕ ಮಂಡಳಿಯನ್ನು ರಚಿಸಿ, ಕನಕದಾಸರ ಸಮಗ್ರ ಸಾಹಿತ್ಯವನ್ನು ಕನಕಸಾಹಿತ್ಯ ದರ್ಶನ ಎಂಬ ಹೆಸರಿನಲ್ಲಿ ನಾಲ್ಕು ಸಂಪುಟಗಳಲ್ಲಿ ಹೊರತಂದಿತ್ತು.

ಕನಕ ಸಾಹಿತ್ಯ ದರ್ಶನದ ನಾಲ್ಕು ಸಂಪುಟಗಳು ಅಲಭ್ಯವಾಗಿದ್ದು, ಅದಕ್ಕೆ ಸಾರ್ವಜನಿಕರಿಂದ ಅಪಾರ ಬೇಡಿಕೆಯಿರುವುದರಿಂದ ಪ್ರಸಕ್ತ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ವತಿಯಿಂದ ಮೂರು ಸಂಪುಟಗಳ ಶೀರ್ಷಿಕೆಯಲ್ಲಿ ಅಲ್ಪ ಬದಲಾವಣೆಯೊಂದಿಗೆ ಮರುಮುದ್ರಣ ಮಾಡಲಾಗುತ್ತಿದೆ. ಮತ್ತು ಹೊಸದಾಗಿ ಪ್ರೊ॥ ಸುಧಾಕರ ಅವರು ಸಂಪಾದಿಸಿರುವ ಮೋಹನ ತರಂಗಿಣಿ ಕೃತಿಯನ್ನು ಗದ್ಯಾನುವಾದದೊಂದಿಗೆ ಪ್ರಕಟಿಸಲಾಗುತ್ತಿದೆ.

ಕನಕದಾಸರ ಕೀರ್ತನೆಗಳು ಮತ್ತು ಮುಂಡಿಗೆಗಳು ಸಂಪುಟದಲ್ಲಿ ಹಿಂದೆ ಬಳಸಲಾದ ಚಿತ್ರಗಳನ್ನು ಕೈಬಿಟ್ಟು, ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರ, ಹಾವೇರಿ ಇವರು ಹೊರತಂದಿರುವ 'ಸಂತ ಶ್ರೀ ಕನಕದಾಸರ ಪಾರಂಪರಿಕ ಸ್ಥಳಗಳು' ಎಂಬ ಕಿರುಪುಸ್ತಕದಿಂದ ಚಿತ್ರಗಳನ್ನು ಆಯ್ದು ಬಳಸಿಕೊಳ್ಳಲಾಗಿದೆ. ಅವರಿಗೆ ನನ್ನ ಕೃತಜ್ಞತೆಗಳು.

ಕನಕದಾಸರ ಸಮಗ್ರ ಸಾಹಿತ್ಯ ಸಂಪುಟಗಳನ್ನು ಮರುಮುದ್ರಿಸಲು ಸಹಕರಿಸಿದ ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರದವರಿಗೂ, ಈ ಸಂಪುಟದ ಸಂಪಾದಕರಾದ ಡಾ. ಸಾ.ಶಿ. ಮರುಳಯ್ಯ ಅವರಿಗೂ ನನ್ನ ಕೃತಜ್ಞತೆಗಳು ಸಲ್ಲುತ್ತವೆ. ಸದರಿ ಸಂಪುಟಗಳನ್ನು ಹೊರತರಲು ಒಪ್ಪಿಗೆ ನೀಡಿದ ಇಲಾಖೆಯ ಕಾರ್ಯದರ್ಶಿಗಳಾದ ಶ್ರೀ ಬಸವರಾಜು ಅವರಿಗೂ, ಈ ಸಂಪುಟಗಳನ್ನು ಹೊರತರಲು ಸಹಕರಿಸಿದ ಶ್ರೀ ಕಾ.ತ. ಚಿಕ್ಕಣ್ಣ, ಜಂಟಿ ನಿರ್ದೇಶಕರು (ಆಡಳಿತ), ಶ್ರೀ ಬಲವಂತರಾವ್ ಪಾಟೀಲ್, ಜಂಟಿ ನಿರ್ದೇಶಕರು (ಸು.ಕ.), ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ, ಕಾರ್ಯಕ್ರಮ ಅಧಿಕಾರಿ ಮತ್ತು ಪ್ರಕಟಣಾ ಶಾಖೆಯ ಸಿಬ್ಬಂದಿಯವರಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ. ಈ ಸಂಪುಟಗಳನ್ನು ಅಂದವಾಗಿ ಮುದ್ರಿಸಿಕೊಟ್ಟ ಮಯೂರ ಪ್ರಿಂಟ್ ಆ್ಯಡ್ಸ್‌ನ ಮಾಲೀಕರು ಹಾಗೂ ಸಿಬ್ಬಂದಿ ವರ್ಗದವರಿಗೆ ನನ್ನ ಕೃತಜ್ಞತೆಗಳು.

ಕನ್ನಡ ಹರಿದಾಸ ಪರಂಪರೆಯಲ್ಲಿ ವೈಶಿಷ್ಟ್ಯಪೂರ್ಣ ವ್ಯಕ್ತಿತ್ವವುಳ್ಳ ಕನಕದಾಸರ ಕೃತಿಗಳನ್ನು ಸುಲಭ ಬೆಲೆಯಲ್ಲಿ ಕನ್ನಡಿಗರಿಗೆ ಒದಗಿಸುವುದು ನಮ್ಮ ಆಶಯವಾಗಿದೆ. ಈ ಸಂಪುಟಗಳ ಪ್ರಯೋಜನವನ್ನು ಓದುಗರು ಪಡೆದುಕೊಂಡರೆ ನಮ್ಮ ಶ್ರಮ ಸಾರ್ಥಕ.

೧೮.೦೧.೨೦೧೨

**ಡಾ. ಮನು ಬಳಿಗಾರ್**
ಆಯುಕ್ತರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ



## ಮೊದಲ ಮುದ್ರಣದ ಮುನ್ನುಡಿ

ಕನ್ನಡ ಸಾಹಿತ್ಯದ ಚರಿತ್ರೆಯಲ್ಲಿ ದಾಸಸಾಹಿತ್ಯ ನಿರ್ಮಾತೃಗಳಾದ, ಕನ್ನಡ ನಾಡೆಲ್ಲ ಗೌರವಿಸುವ, ಹಿರಿಯ ಚೇತನಗಳು ಕೆಲವಿವೆ. ಅವುಗಳಲ್ಲಿ ಕನ್ನಡ ಕವಿಗಳ ಸಾಲಿನಲ್ಲಿ ಮಕುಟಮಣಿಯಾಗಿ ಕೊಂಡಾಟಕ್ಕೆ ಪಾತ್ರವಾದ ಹೆಸರು ಕನಕದಾಸರದು. ದಾಸಪರಂಪರೆಯಲ್ಲಿ ಕವಿಯಾಗಿ ಗಣನೆಗೆ ಬರುವ ಮೊದಲ ಹೆಸರು ಅದು. ಭಕ್ತಿ ಪ್ರಧಾನವಾದ ಕೀರ್ತನೆಗಳ ನಿರ್ಮಾಣಕ್ಕೆ ಮಾತ್ರ ಅಂಟಿಕೊಳ್ಳದೆ ನಳಚರಿತ್ರೆ, ಮೋಹನ ತರಂಗಿಣಿ, ರಾಮಧಾನ್ಯ ಚರಿತ್ರೆ ಮುಂತಾಗಿ ಸ್ವಾರಸ್ಯಪೂರ್ಣ ದೀರ್ಘಕಾವ್ಯಗಳನ್ನೂ ಅವರು ರಚಿಸಿದ್ದಾರೆ. ರಾಮಧಾನ್ಯ ಚರಿತ್ರೆಯಂಥ ವಿಡಂಬನ ಕಾವ್ಯ ಆಧುನಿಕ ದೃಷ್ಟಿಯ ಜನರೆಲ್ಲರ ವಿಶ್ವಾಸಕ್ಕೆ ಪಾತ್ರವಾಗಿದೆ. ನಳಚರಿತ್ರೆಯನ್ನೂ, ಮೋಹನ ತರಂಗಿಣಿಯನ್ನೂ ಗ್ರಾಮಾಂತರಗಳಲ್ಲಿ ದೇವಸ್ಥಾನಗಳಲ್ಲಿ ದಿನನಿತ್ಯದ ಪ್ರವಚನ ಗ್ರಂಥಗಳಾಗಿ ವಿದ್ವಾಂಸರು ಉಪಯೋಗಿಸುತ್ತಿದ್ದರು. ಹರಿಭಕ್ತಿಸಾರವನ್ನು ಬಾಯಿಪಾಠ ಮಾಡಿದ ಸಾಮಾನ್ಯರಿದ್ದರು. ಇಂಥ ಕವಿಚೇತನವು ರಚಿಸಿರುವ ಕೀರ್ತನೆಗಳೂ ಮುಂಡಿಗೆಗಳೂ ಜನಪ್ರಿಯತೆಯನ್ನು ಗಳಿಸಿ ಇಂದಿಗೂ ಪ್ರಸಿದ್ಧವಾಗಿವೆ.

ಕನಕದಾಸರ ೫೦೦ನೆಯ ಜಯಂತಿಯ ಸಮಯದಲ್ಲಿ ಕನಕದಾಸರ ಎಲ್ಲ ಕೃತಿಗಳು ಜನತೆಗೆ ಸುಲಭ ಬೆಲೆಯಲ್ಲಿ ದೊರೆಯುವಂತೆ ಮಾಡಲು ಕರ್ನಾಟಕ ಸರಕಾರವು ಒಂದು ಯೋಜನೆಯನ್ನು ಕೈಗೊಂಡಿತು. ಕನಕ ಸಾಹಿತ್ಯ ದರ್ಶನ ಎಂಬ ಹೆಸರಿನಲ್ಲಿ ನಾಲ್ಕು ಸಂಪುಟಗಳಲ್ಲಿ ಕನಕದಾಸರ ಎಲ್ಲ ಕೃತಿಗಳನ್ನು ವಿದ್ವಾಂಸರ ಸಹಾಯದಿಂದ ಅಚ್ಚುಕಟ್ಟಾಗಿ ಸಂಪಾದನೆ ಮಾಡಿಸಿ ಪ್ರಕಟಿಸಬೇಕೆಂಬ ಉದ್ದೇಶ ಅದಾಗಿತ್ತು. ಆ ಸಂಪುಟಗಳಲ್ಲಿ ಮೊದಲನೆಯದು ೧೯೯೦ರಲ್ಲಿ ಪ್ರಕಟವಾಯಿತು. ಇದರಲ್ಲಿ ೫೮ ಲೇಖನಗಳಿವೆ; ನಾಡಿನ ಅನೇಕ ವಿದ್ವಾಂಸರು ಕನಕದಾಸರ ಎಲ್ಲ ಸಾಹಿತ್ಯ ರಚನೆಯ ಸಮಗ್ರ ಪರಿಚಯವನ್ನು ಮಾಡಿಕೊಟ್ಟಿದ್ದಾರೆ. ಕನಕದಾಸರ ಬಗ್ಗೆ ಇಷ್ಟು ವಿಸ್ತಾರವಾದ ವಿಮರ್ಶೆಯ ಗ್ರಂಥ ಇದುವರೆಗೆ ರಚಿತವಾಗಿರಲಿಲ್ಲ.

ಕನಕ ಸಾಹಿತ್ಯ ದರ್ಶನ ಎರಡನೆಯ ಸಂಪುಟದಲ್ಲಿ ಕನಕದಾಸರ ಹರಿಭಕ್ತಿಸಾರ, ರಾಮಧಾನ್ಯ ಚರಿತ್ರೆ ಮತ್ತು ನಳಚರಿತ್ರೆಗಳನ್ನು ಪ್ರಕಟಿಸಲಾಗಿದೆ. ಇದನ್ನು ಶ್ರೀ ಸಾ.ಶಿ.ಮರುಳಯ್ಯನವರು ಅತ್ಯುಚಿತ ರೀತಿಯಲ್ಲಿ ಸಂಪಾದಿಸಿಕೊಟ್ಟಿದ್ದಾರೆ.

ಈಗ ಪ್ರಕಟವಾಗುತ್ತಿರುವುದು ನಾಲ್ಕನೆಯ ಸಂಪುಟ. ಇದರಲ್ಲಿ ಕನಕದಾಸರ ಕೀರ್ತನೆಗಳನ್ನು ಮುಂಡಿಗೆಗಳನ್ನೂ ಸೇರಿಸಲಾಗಿದೆ. ಪ್ರೊ. ಸುಧಾಕರ ಅವರು ಸಂಪೂರ್ಣವಾಗಿ ಪರಾಮರ್ಶಿಸಿ, ಅವುಗಳಲ್ಲಿ ತೊಡರಿಕೊಂಡಿದ್ದ ಅನೇಕ ಸಿಕ್ಕುಗಳನ್ನು ಬಿಡಿಸಿ, ಅತ್ಯುತ್ತಮವಾಗಿ ಸಂಪಾದಿಸಿಕೊಟ್ಟಿದ್ದಾರೆ.

ರಾಮಾನುಜರ ಶ್ರೀವೈಷ್ಣವದರ್ಶನವನ್ನು ಅನುಸರಿಸುತ್ತ, ವ್ಯಾಸರಾಯರ ಭಕ್ತಿಯ ಬೋಧೆಯ ಬೆಳಕಿನಲ್ಲಿ ಬಾಳುತ್ತ, ಜನತೆಗೆ ಸನ್ಮಾರ್ಗದರ್ಶನವನ್ನು ಬೆರಳಿಟ್ಟು ತೋರಿಸಿದ ಕನಕರ ಕೃತಿಗಳನ್ನು ಅನೇಕ ವಿಭಾಗಗಳಾಗಿ ವಿಂಗಡಿಸಿ ದೇವತೆಗಳ ಸ್ತುತಿಗಳು, ಹರಿಸರ್ವೋತ್ತಮತ್ವ, ಹರಿದಾಸರ ಹಿರಿಮೆ, ಸಮಾಜ ಸುಧಾರಣೆಯ ದೃಷ್ಟಿ, ಕೃಷ್ಣಲೀಲೆ, ದಶಾವತಾರಲೀಲೆ, ತತ್ವನಿರೂಪಣೆ, ಮುಂಡಿಗೆಗಳು, ಉದಯರಾಗ, ಉಗಾಭೋಗ– ಎಂಬ ವಿವರಗಳಿಂದ ಒಳಗೊಂಡಿರುವ ಈ ಗ್ರಂಥ ಶ್ರೀ ಸುಧಾಕರ ಅವರ ವಿಮರ್ಶನ ಶಕ್ತಿಯನ್ನೂ ರಸಾಸ್ವಾದನ ಚೈತನ್ಯವನ್ನೂ ಸಮಸ್ಯಾಪರಿಹಾರದ ವಿದ್ವತ್ತನ್ನೂ ಪ್ರದರ್ಶಿಸುತ್ತದೆ. ಅವರು ಪ್ರತಿಯೊಂದು ಕೃತಿಗೂ ನೀಡಿರುವ ಅರ್ಥವಿವರಗಳೂ ಸಂಬಂಧಸ್ವಾರಸ್ಯಗಳೂ ಓದುಗರಿಗೆ ಬಹಳವಾಗಿ ಸಹಾಯವನ್ನು ಮಾಡುತ್ತವೆ. ಶ್ರೀ ಸುಧಾಕರರ ಈ ಕಾರ್ಯದ ಕಡೆಗೆ ಓದುಗರ ಗಮನವನ್ನು ಸೆಳೆಯಲು ನಾನು ಅಪೇಕ್ಷಿಸುತ್ತೇನೆ. ಈ ಸಾಹಿತ್ಯ ಕಾರ್ಯದಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರಾದ ಶ್ರೀ ವೈ.ಕೆ.ಮುದ್ದುಕೃಷ್ಣ ಅವರೂ, ಜಂಟಿ ನಿರ್ದೇಶಕರಾದ ಶ್ರೀ ಕಾ.ತ. ಚಿಕ್ಕಣ್ಣ ಅವರೂ ನಿರ್ದೇಶನಾಲಯದ ಎಲ್ಲ ಕಾರ್ಯಕರ್ತರೂ ನೀಡುತ್ತಿರುವ ಸಹಾಯ ಸಹಕಾರಗಳಿಗೆ ನಾನು ಕೃತಜ್ಞನಾಗಿದ್ದೇನೆ.

ಈ ಸಂಪುಟದ ಸಂಪಾದಕರಾದ ಪ್ರೊ. ಸುಧಾಕರರ ವಿದ್ವತ್ಕಾರ್ಯಕ್ಕಾಗಿ ಅವರಿಗೆ ನನ್ನ ಅಭಿನಂದನೆಗಳು. ಕನ್ನಡನಾಡಿನ ಜನ ಈ ಸಂಪುಟದ ಪ್ರಯೋಜನವನ್ನು ಪಡೆಯಲಿ ಎಂದು ನನ್ನ ಹಾರೈಕೆ.

ಬೆಂಗಳೂರು
೧.೬.೧೯೯೯

**ಜಿ. ವೆಂಕಟಸುಬ್ಬಯ್ಯ**
ಅಧ್ಯಕ್ಷ
ಜನಪ್ರಿಯ ಸಾಹಿತ್ಯ ಪ್ರಕಟನ
ಸಲಹಾ ಸಮಿತಿ



## ಮೊದಲ ಮುದ್ರಣದ ಸಂಪಾದಕರ ಮಾತು

ಕರ್ನಾಟಕ ಸರ್ಕಾರ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ವತಿಯಿಂದ ಕನಕ ಸಾಹಿತ್ಯ ಸಂಪುಟಗಳನ್ನು ಪ್ರಕಟಿಸಲು ಪ್ರಸಿದ್ಧ ಸಾಹಿತಿಗಳಾದ ಡಾ. ದೇಜಗೌ ಅವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ರಚಿಸಿತು. ಕನಕದಾಸರ ಕೀರ್ತನ ಸಾಹಿತ್ಯವನ್ನು ಸಂಪಾದಿಸಿಕೊಡಲು ಸಮಿತಿಯ ಸದಸ್ಯರಲ್ಲೊಬ್ಬರಾದ ಬರಗೂರು ರಾಮಚಂದ್ರಪ್ಪನವರಿಗೆ ವಹಿಸಲಾಗಿತ್ತು. ಆದರೆ ಅವರು ಅನ್ಯಕಾರ್ಯ ನಿಮಿತ್ತ ಸಂಪಾದನಾ ಕಾರ್ಯದಲ್ಲಿ ಪೂರ್ಣ ತೊಡಗಿಸಿಕೊಳ್ಳಲು ಸಾಧ್ಯವಾಗುವುದಿಲ್ಲವೆಂದು ಹೇಳಿದಾಗ, ಅಧ್ಯಕ್ಷರು ಅದರ ಜವಾಬ್ದಾರಿಯನ್ನು ನನಗೆ ವಹಿಸಿದರು.

ಅಂದಿನಿಂದಲೇ ನಾನು ಕನಕದಾಸರಿಗೆ ನ್ಯಾಯ ಒದಗಿಸಬೇಕೆಂದು (ಏನು ಅನ್ಯಾಯವಾಗಿದೆ ಎಂಬುದು ಅನೇಕರಿಗೆ ತಿಳಿದಿದ್ದರೂ, 'ಮೊಗಂ' ಆಗಿ ಇದ್ದುದರಿಂದ) ನಾನಾ ಮೂಲಗಳನ್ನು ಸೋಸತೊಡಗಿದೆ. ಕೈಗೆ ಸಿಕ್ಕಿದ ಕಲಬೆರಕೆ ಬೆಣ್ಣೆಯನ್ನು ಕಾಸತೊಡಗಿದೆ. ತಿಳಿದುಪ್ಪವನ್ನು ಬಸಿದು ತಳದಲ್ಲಿರುವ 'ಗಷ್ಟಕ್ಕೆ' ಅನಿಷ್ಟ ಕಲಬೆರಕೆ ವಸ್ತು ಕಾರಣವೆಂದು ತೀರ್ಮಾನಿಸಿ, ೧೯೯೨ರಲ್ಲಿ "ಕನಕದಾಸರ ಕೀರ್ತನೆಗಳ ಕೃತಿಚೌರ್ಯ" ಎಂಬ ಕೃತಿಯನ್ನು ಹೊರತಂದೆ. ನಾನು ಈ ನಿಟ್ಟಿನಲ್ಲಿ ಇನ್ನೂ ಮುಂದುವರಿದಾಗ "ಇದು ಮಳ್ಳ ಹಗೇವು; ತೋಡಿದಷ್ಟೂ ಇದೆ" ಎಂದು ಮನಗಂಡು, ಗುಡಿ–ಗುಂಡಾರ, ಮಠ–ಮಾನ್ಯಗಳ ಒಳಹೊರಗೆ ವಿಚಾರಿಸಿ, ನಾಡಿನ ಮೂಲ ಮೂಲೆಯ ಊರುಕೇರಿ, ಸಂದಿಗೊಂದಿ, ಮೂಲೆಮುಡುಕುಗಳನ್ನು ಹುಡುಕಿದೆ, ತಡಕಿದೆ. ಕನಕ ಕೀರ್ತನಾ 'ಸಾಹಿತ್ಯಾನ್ವೇಷಣೆ'ಗಾಗಿ ಸಾಗರೋಲ್ಲಂಘನ ಮಾಡದಿದ್ದರೂ, ಕೃತಿಚೌರ್ಯದ ಆಕರೋಲ್ಲಂಘನವನ್ನು ಮಾಡಿ, ನಿಜದ 'ನೆಲಮಗಳ' ನೆಲೆಗಂಡು, ಪ್ರಥಮ ಘಟ್ಟದ ಮಾಹಿತಿಯನ್ನು ಮಾತ್ರ ನಾನಿಲ್ಲಿ ಒದಗಿಸಿದ್ದೇನೆ.

ದ್ವಿತೀಯ ಘಟ್ಟದ ಮಾಹಿತಿಯು ಇಲ್ಲಿ ಸೇರ್ಪಡೆಯಾಗಿಲ್ಲ. ಏಕೆಂದರೆ ಹದಿನೇಳನೆಯ ಶತಮಾನದ ಆದಿಭಾಗಕ್ಕೆ ಸೇರಿದ 'ಗ್ರಂಥ ಲಿಪಿ'ಯಲ್ಲಿರುವ ಕನಕದಾಸರ ೧೭೫ ಕೀರ್ತನೆಗಳ ಒಂದು ಓಲೆಗರಿ ಕಟ್ಟು ಇತ್ತೀಚೆಗೆ ನನಗೆ ದೊರಕಿದೆ. ಅದರ ಪರಿವಿಡಿಯನ್ನು (ಕೀರ್ತನೆಗಳ ಮೊದಲ ಸಾಲನ್ನು) ಓದಿಸಿದಾಗ, ಆ ನೂರೆಪ್ಪತ್ತೈದು ಕೀರ್ತನೆಗಳಲ್ಲಿ ಸುಮಾರು ನೂರು ಚಿಲ್ಲರೆ ಕೀರ್ತನೆಗಳು ಪುರಂದರ ದಾಸರ ಹೆಸರಲ್ಲೂ ಹಾಗೂ ಏಳೆಂಟು ಕೀರ್ತನೆಗಳು ಶ್ರೀಪಾದರಾಜರ

ಹೆಸರಲ್ಲೂ ಇರುವುದು ಬೆಳಕಿಗೆ ಬಂದಿದೆ. ಅವುಗಳ ಪೂರ್ಣಪಾಠವನ್ನು ಓದಿಸಲು ಸಾಕಷ್ಟು ಕಾಲ ಹಿಡಿಯುವುದರಿಂದ, ಅವುಗಳನ್ನು ಪ್ರಸ್ತುತ ಸಂಪುಟದಲ್ಲಿ ಸೇರಿಸಿಲ್ಲ. ಮರುಮುದ್ರಣದ ಸಮಯದಲ್ಲಿ ಸೇರಿಸಲಾಗುವುದು ಅಥವಾ ಪ್ರತ್ಯೇಕವಾಗಿ ಹೊರ ತರಲಾಗುವುದು.

ಕನಕದಾಸರ ಸುಳಾದಿಗಳನ್ನು ಇಲ್ಲಿ ಸೇರಿಸಿಲ್ಲ. ಏಕೆಂದರೆ ಕನಕದಾಸರ ಸಾಕಷ್ಟು ಮುಂಡಿಗೆಳು, ಸುಳಾದಿಗಳು ಹಾಗೂ ಉಗಾಭೋಗಗಳು ಇಂದು ಪುರಂದರ ದಾಸರ ಹೆಸರಲ್ಲಿ ವಿರಾಜಮಾನವಾಗಿವೆ. ಇಲ್ಲಿ ಎಲ್ಲವನ್ನೂ ಹೇಳದೆ ಸ್ಯಾಂಪಲ್‌ಗಾಗಿ 'ಏನಾದರೂ ಒಂದಾಗಲಿ' ಎಂಬ ಮುಂಡಿಗೆಯನ್ನೂ, 'ಅಣುವಾಗಬಲ್ಲ ಮಹತ್ತಾಗಬಲ್ಲ' ಎಂದು ಮೊದಲಾಗುವ ಒಂದು ಸುಳಾದಿಯನ್ನೂ 'ಕೋಳಿಗೆ ಹೊನ್ನ ಪಂಜರವ್ಯಾತಕೆ' ಎಂಬ ಉಗಾಭೋಗವನ್ನು ಮಾತ್ರ ಹೆಸರಿಸುತ್ತೇನೆ ಅಷ್ಟೆ. ಮುಂದೆ ಕನಕದಾಸರ ಅಮೂಲ್ಯ ಆಸ್ತಿಯ ಚಕ್ಕುಬಂದಿಯನ್ನು ಓದುಗರ ಗಮನಕ್ಕೆ ತರಲಾಗುವುದು. ಅನ್ಯರ ಆಸ್ತಿಯನ್ನು ದುರಾಸೆಯಿಂದ ದೋಚಿಕೊಂಡವರು ಒಂದಲ್ಲ ಒಂದು ದಿವಸ ನಿರಾಸೆಯಿಂದ ನೀಚಿಕೊಳ್ಳಬೇಕಾದ ಅನಿವಾರ್ಯತೆ ಬಂದೊದಗುತ್ತದೆ ಎಂಬ ಸತ್ಯ ಗೊತ್ತಿದ್ದೂ, ಉತ್ತುಂಗ ಧೀಶಕ್ತಿಯುಳ್ಳ ನಾವು ಎಂಥದನ್ನಾದರೂ ನುಂಗಿ ದಕ್ಕಿಸಿಕೊಳ್ಳಬಲ್ಲೆವು ಎಂಬ ಹುಂಬ ಅಹಂಕಾರದಿಂದ ಬೀಗುತ್ತಾ ಕೆಲವರು ಅನಭಿಜ್ಞರು ಹಿಂದೆ ಇಂಥ ಸಣ್ಣ ಕೆಲಸವನ್ನು ಮಾಡಿದ್ದಾರೆ; ಆದರೆ "ನಾವು ನುಂಗಿರುವುದು ದಕ್ಕನ್ನು; ಅದನ್ನು ದಕ್ಕಿಸಿಕೊಳ್ಳಲು ಸಾಧ್ಯವಿಲ್ಲ; ಬದಲಾಗಿ ಕಕ್ಕಬೇಕು" ಎಂಬುದನ್ನು ಮರೆತಿದ್ದಾರೆ. ಎಂಥ ವಿಪರ್ಯಾಸ! ಕಾಲಾಯ ತಸ್ಮೈನಮಃ!

ಕನಕದಾಸರ ಕೀರ್ತನೆಗಳೆಂದು ಇದುವರೆಗೆ ಅಚ್ಚಾಗುತ್ತಿದ್ದ ನೂರೆಪ್ಪತ್ತೈದು ಅಥವಾ ಇನ್ನೂರು ಚಿಲ್ಲರೆ ಕೀರ್ತನೆಳಿಗೆ ಬದಲಾಗಿ ಇಲ್ಲಿ ಮುನ್ನೂರು ಚಿಲ್ಲರೆ ಕೀರ್ತನೆಗಳನ್ನು ಕಲೆ ಹಾಕಿದ್ದೇನೆ. ಮೇಲೆ ಪ್ರಸ್ತಾಪಿಸಲ್ಪಟ್ಟಿರುವ 'ಗ್ರಂಥಲಿಪಿ'ಯಲ್ಲಿರುವ ಕೀರ್ತನೆಗಳನ್ನು ಸೇರಿಸಿದರೆ ನಾನೂರು ಚಿಲ್ಲರೆ ಕೀರ್ತನೆಗಳಾಗುತ್ತವೆ. ಇನ್ನೂ ಹೆಚ್ಚಾಗಬಹುದು. ಆ ಕಾಲ ಬಂದೇ ಬರುತ್ತದೆ. ಅದು ದೂರವಿಲ್ಲ, 'ಆಸನ್ನ ಭವ್ಯ.'

ಸಾಮಾನ್ಯ ಓದುಗರಿಗೆ ಸಹಾಯಕವಾಗಲೆಂದು ಪ್ರತಿಯೊಂದು ಕೀರ್ತನೆಯ ಭಾವ ಮತ್ತು ಅರ್ಥಗಳನ್ನು ಆಯಾ ಕೀರ್ತನೆಗಳ ಅಡಿಯಲ್ಲಿಯೇ ಕೊಟ್ಟಿದ್ದೇನೆ. ಆದರೆ 'ಕನಕನನ್ನು ಕೆಣಕಬೇಡ, ಕೆಣಕಿ ತಿಣಕಬೇಡ' ಎಂಬ ಗಾದೆ ಮಾತಿನ ಆವಿರ್ಭಾವಕ್ಕೆ ಮೂಲ ಕಾರಣವಾದ ಕನಕದಾಸರ ಮುಂಡಿಗೆಗಳಿಗೆ ಅರ್ಥ ಹೇಳುವುದು ಎಂಥ ಪ್ರಕಾಂಡ ಪಂಡಿತರಿಗೂ ಕಷ್ಟ. ಮಾನ್ಯ ಬುರ್ಲಿ ಬಿಂದು ಮಾದವ ಹಾಗೂ ಡಾ॥ ವೆಂಕಟ್ರಾಯ ಶೆಣೈ ಕೆಲವಕ್ಕೆ ವ್ಯಾಖ್ಯಾನ ನೀಡಲು ಪ್ರಯತ್ನಿಸಿದ್ದಾರೆ. ದಿವಂಗತ ಬೆಟಗೇರಿ ಕೃಷ್ಣಶರ್ಮರು ಪೌರಾಣಿಕ ವಾವೆವರಸೆಯ ಮುಂಡಿಗೆಗಳಿಗೆ ವ್ಯಾಖ್ಯಾನವನ್ನು ನೀಡಿದ್ದರೂ, ಅನುಭಾವದ ನಿಗೂಢ ಮುಂಡಿಗೆಗಳಿಗೆ



ವ್ಯಾಖ್ಯಾನವನ್ನು ನೀಡಲಾಗದೆ ಬಿಟ್ಟಿದ್ದಾರೆ. ಇವುಗಳನ್ನು ಎಲ್ಲರೂ ಹೀಗೆ ಬಿಟ್ಟರೆ ಯಾರೂ ಪ್ರಯತ್ನಿಸುವುದೇ ಇಲ್ಲ, ತಪ್ಪಾಗಲೀ ಒಪ್ಪಾಗಲೀ 'ಹೊನ್ನಾರು' ಹೂಡಿ ಉಕ್ಕೆ ಮಾಡಿದರೆ, ಉಳಿದವರೂ ಉಳುಮೆಗೆ ಕೈ ಹಾಕುತ್ತಾರೆ ಎಂದು ಭಾವಿಸಿ, ಒಂದೊಂದು ಅನುಭಾವದ ನಿಗೂಢ ಮುಂಡಿಗೆಯನ್ನು ನೂರಾರು ಬಾರಿ ಓದಿ, ಹಗಲಿರುಳು ಅದನ್ನೇ ಹಾಸಿ ಹೊದ್ದುಕೊಂಡು ಚಿಂತನ–ಮಂಥನ–ಮನನ ಮಾಡಿ, ನನ್ನ ಗ್ರಹಿಕೆಗೆ ಸೂಕ್ತವೆನ್ನಿಸಿದ ವ್ಯಾಖ್ಯಾನವನ್ನು ನಾನಿಲ್ಲಿ ಕೊಟ್ಟಿದ್ದೇನೆ– ತಪ್ಪುಗಳಿದ್ದರೆ ಮುಂದಿನವರು ಅದನ್ನು ತಿದ್ದಿ ಶುದ್ಧಿಗೊಳಿಸಲು ಸನ್ನೆಗೋಲಾಗುತ್ತದೆ ಎಂಬ ಸದುದ್ದೇಶದಿಂದ. ಈ ನನ್ನ ಸದುದ್ದೇಶ ಸಫಲವಾಗುತ್ತದೆ, ಸಮೃದ್ಧ ಫಸಲನ್ನು ನೀಡುತ್ತದೆ ಎಂಬ ನಂಬಿಕೆ ನನಗಿದೆ.

ಕನಕದಾಸರಿಗೆ ನ್ಯಾಯ ಒದಗಿಸಲು ನೀವೇ ತಕ್ಕ ವ್ಯಕ್ತಿ ಎಂದು ನನಗೆ ಹೇಳಿ ಕೀರ್ತನೆಗಳ ಸಂಪಾದನಾ ಕಾರ್ಯವನ್ನು ನನಗೆ ವಹಿಸಿದ. ನನ್ನ ಗುರುಗಳಾದ ಡಾ. ದೇಜಗೌ ಅವರಿಗೆ; ಕ್ಷೇತ್ರಕಾರ್ಯ ಮಾಡಿದಂತೆಲ್ಲ ಹೊಸಹೊಸವು ಸಿಕ್ಕುತ್ತಲೇ ಇರುತ್ತವೆ. ಈಗಾಗಲೇ ಸಾಕಷ್ಟು ತಡವಾಗಿರುವುದರಿಂದ ಈಗ ನೀವು ಕಲೆ ಹಾಕಿರುವಷ್ಟನ್ನು ಮುದ್ರಣಕ್ಕೆ ಸಿದ್ಧಮಾಡಿ ಕೊಡಿ ಎಂದು ಸಿಕ್ಕಿದಾಗಲೆಲ್ಲ ನನ್ನ ಕಿವಿಗೆ 'ಕಲ್ಮುಳ್ಳು ಹುಯ್ದು' ಬೇಗ ಮುದ್ರಣಕ್ಕೆ ಅಣಿ ಮಾಡಿಸಿದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರಾದ ಶ್ರೀ ವೈ.ಕೆ. ಮುದ್ದುಕೃಷ್ಣ, ಉಪನಿರ್ದೇಶಕರಾದ ಶ್ರೀ ಕಾ.ತ. ಚಿಕ್ಕಣ್ಣನವರಿಗೆ ಮತ್ತು ಅವರ ಸಿಬ್ಬಂದಿವರ್ಗದವರಿಗೆ; ನನ್ನ ಸಂಪಾದನಾ ಕಾರ್ಯದ ಬಗೆಗೆ ಮುನ್ನುಡಿಯಲ್ಲಿ ಬಹಳ ಒಳ್ಳೆಯ ಮಾತಾಡಿರುವ ಹಿರಿಯ ವಿದ್ವಾಂಸರಾದ ಪ್ರೊ. ಜಿ.ವೆಂಕಟಸುಬ್ಬಯ್ಯನವರಿಗೆ; ಕನಕದಾಸರ ಎರಡು ಮುಂಡಿಗೆಗಳನ್ನು ಹಾಡುತ್ತೇನೆ ಎಂದು ಹೇಳಿ, 'ಮುಳ್ಳ ಮೊನಿಯ ಮ್ಯಾಲೆ ಮೂರು ಕೆರಿಯ ಕಟ್ಟಿ' ಹಾಗೂ 'ಬಯಲ ಬಾವಿ ನೀರಿಗ್ಹೊಂಟಾಳೊಬ್ಬ ಬಾಲಿ' ಎಂಬ ಎರಡು ಮುಂಡಿಗೆಗಳನ್ನು (ಈಗವು ಪುರಂದರದಾಸರ ಹೆಸರಿಗೆ ವರ್ಗಾವಣೆಯಾಗಿವೆ!) ಹಾಡಿದ, ಕನಕದಾಸರ ಆಡುಂಬೊಲವಾದ ಬಂಕಾಪುರದ ನಿವಾಸಿ ಹಾಗೂ ಜನಪದ ಹಾಡುಗಾರ ಶ್ರೀ ಜಗದೀಶ್ ಹುರಳಿ ಅವರಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

**–ಸುಧಾಕರ**

**BLANK PAGE**



## ಪರಿವಿಡಿ

**BLANK PAGE**

೧

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಹನ್ನೆರಡನೆಯ ಶತಮಾನದ ವಚನ ಸಾಹಿತ್ಯ ಹಾಗೂ ಹದಿನಾರನೆಯ ಶತಮಾನದ ಹರಿದಾಸ ಸಾಹಿತ್ಯ ಹೆಚ್ಚು ಜನಸಂಮುಖ ವಾದಂಥವು. ಆದರೆ ವಚನ ಸಾಹಿತ್ಯದ ಸ್ವಸ್ಥತೆ, ಸಮಗ್ರತೆ, ವ್ಯಾಪಕತೆ ದಾಸ ಸಾಹಿತ್ಯಕ್ಕೆ ದಕ್ಕಲಿಲ್ಲ ಎಂಬುದು ಸತ್ಯ. ಏಕೆಂದರೆ ಅಲ್ಲಿ ಜಾತಿಗಿಂತ ನೀತಿ ಮುಖ್ಯವಾಯಿತು; ಇಲ್ಲಿ ನೀತಿಗಿಂತ ಜಾತಿ ಮುಖ್ಯವಾಯಿತು. ಅಲ್ಲಿ ಎಲ್ಲ ವರ್ಗವರ್ಣಗಳ ಜನರಿಗೂ ಮುಕ್ತ ಅವಕಾಶ; ಇಲ್ಲಿ ಎಲ್ಲರಿಗೂ ಮುಕ್ತ ಅವಕಾಶವಿಲ್ಲ. ಹೀಗಾಗಿ ವಚನ ಸಾಹಿತ್ಯದಲ್ಲಿ ನಾನಾ ವರ್ಗವರ್ಣಗಳ ವಚನಕಾರರು ಕಂಡು ಬಂದರೆ, ಹರಿದಾಸ ಸಾಹಿತ್ಯದಲ್ಲಿ ಒಂದೇ ವರ್ಗವರ್ಣದ ಕೀರ್ತನಕಾರರು ಕಂಡು ಬರುತ್ತಾರೆ– ವ್ಯಾಸರಾಯರ ಮತ್ತು ವಾದಿರಾಜರ ಪ್ರಯತ್ನದ ಫಲವಾಗಿ ದಾಸಕೂಟದ ದಳವಾಯಿಯಾಗಿ ಕಾರ್ಯ ನಿರ್ವಹಿಸಲು ಹೋದ ಕುರುಬ ಜನಾಂಗದ ಕನಕದಾಸರೊಬ್ಬರನ್ನು ಬಿಟ್ಟು. ಆದರೆ ವ್ಯಾಸರಾಯ ಮಠದ ಕರ್ಮಠ ಶಿಷ್ಯರೆಲ್ಲ "ಅವರವರೆ ಒಂದು, ಅವರೆ ಕೇರಿದ ಮೊರವೇ ಒಂದು" ಎಂಬಂತೆ ಕನಕದಾಸರೊಡನೆ ನಡೆದುಕೊಂಡರು; ಚುಚ್ಚು ಮಾತುಗಳ ಚಿಟುಕುಮುಳ್ಳಾಡಿಸಿ ನೋಯಿಸಿದರು. ಇಲ್ಲಿ ಆ ಕಥೆಯನ್ನು ಲಂಬಿಸುವುದು ಬೇಡ.

ಕನಕದಾಸರಿಗೆ ದೊರಕಿದ್ದದ್ದು ರಾಮಾನುಜ ಮತದ ದೀಕ್ಷೆಯೇ ಹೊರತು ಮಾಧ್ಯಮತದ ದೀಕ್ಷೆಯಲ್ಲ ಎನಿಸುತ್ತದೆ. ಏಕೆಂದರೆ ಅವರು ಮೋಹನ ತರಂಗಿಣಿಯಲ್ಲಿ ರಾಮಾನುಜಾಚಾರ್ಯರನ್ನೂ, ತಾತಾಚಾರ್ಯರನ್ನೂ ನೆನೆದಿದ್ದಾರೆಯೇ ವಿನಾ ಮಾಧ್ವ ಮತದ ವ್ಯಾಸರಾಯರನ್ನು ನೆನೆದಿಲ್ಲ. ಅಷ್ಟೇ ಅಲ್ಲದೆ ಕೀರ್ತನೆಗಳಲ್ಲೂ 'ರಾಮಾನುಜರೇ ನಮೋ ನಮೋ। ಸ್ವಾಮಿ ಲಕ್ಷ್ಮಣ ರೂಪ ನಮೋ ನಮೊ' 'ಮತವೆ ಒಳ್ಳೆಯದು ಭಾಗತವವು ನಮ್ಮ। ಯತಿ ರಾಮಾನುಜ ಎಂಬ ಬೇರೆ ಮನಸಿನ ಮತವೆ ಒಳ್ಳೆಯದು' 'ರಾಮಾನುಜ ಮತೋದ್ಧಾರಕ। ತಾಮಸಗುಣಪಾಶ ಗಿರಿವಜ್ರದಂಡ' ಎಂಬ ಮೂರು ಕೀರ್ತಣೆಗಳು ಅದಕ್ಕೆ ಸಾಕ್ಷ್ಯವನ್ನು ನೀಡುತ್ತವೆ. ಜೊತೆಗೆ ಕೀರ್ತನೆಗಳಲ್ಲಿ ಬಂದಿರುವ 'ತಿರುಮಂತ್ರ', 'ತಿರುಲಾಂಛನ', 'ತಿರುಮಣಿ', 'ತಿರುಚೂರ್ಣ' ಎಂಬ ಪ್ರಯೋಗಗಳು ಶ್ರೀವೈಷ್ಣವ ಮತವನ್ನೇ ಸೂಚಿಸುವುದು ಗಮನಾರ್ಹ.

೧೧–೧೨ನೆಯ ಶತಮಾನದ ಕಾಗಿನೆಲೆಯ ಶಾಸನವೊಂದು 'ದೇಸಿಗ ಛಾತ್ರರು ಮತ್ತು ಮಠದ ಜೀಯರು'ಗಳಿಗಾಗಿ ಗದ್ದೆಯನ್ನು ದತ್ತಿಯನ್ನಾಗಿ ಬಿಟ್ಟಿದ್ದನ್ನು ಸೂಚಿಸುತ್ತದೆ. ಇಲ್ಲಿ ಬರುವ 'ಜೀಯರ್' ಎಂಬ ಶಬ್ದ ಪ್ರಯೋಗ ಮುಖ್ಯವಾದದ್ದು. ರಾಮಾನುಜ ಮತದಲ್ಲಿ ತೆಂಗಲೈ ಮತ್ತು ವಡಗಲೈ ಎಂಬ ಎರಡು ಬಣಗಳುಂಟು. ತೆಂಗಲೈ ಬಣದವರು 'ನಾಲಾಯರ' ಪ್ರಬಂಧವನ್ನು ಮುಖ್ಯವೆಂದು ಭಾವಿಸುವವರು ಹಾಗೂ ತಮಿಳಿನಲ್ಲೇ ವ್ಯವಹರಿಸುವವರು. ವಡಗಲೈ ಬಣದವರು ವೇದ ಶಾಸ್ತ್ರಗಳನ್ನು ಮುಖ್ಯವೆಂದು ಪರಿಗಣಿಸುವವರು ಹಾಗೂ ಸಂಸ್ಕೃತಕ್ಕೆ ಜೋತು ಬಿದ್ದವರು. ವಡಗಲೈ ಪಂಥದವರು ಮಠದ ಅಧಿಪತಿಗಳನ್ನು 'ಸ್ವಾಮಿಗಳ್' ಎಂದು ಕರೆದರೆ, ತೆಂಗಲೈ ಪಂಥದವರು ಮಠದ ಅಧಿಪತಿಗಳನ್ನು 'ಜೀಯರ್' ಎಂದು ಕರೆಯುತ್ತಾರೆ. ಆದ್ದರಿಂದ ಕಾಗಿನೆಲೆಯಲ್ಲಿದ್ದ ಮಠ ತೆಂಗಲೈ ಬಣದ್ದು. ಅಂದರೆ ಭಕ್ತಿಗೆ ದೇಸಿ ನುಡಿಗೆ ಆದ್ಯತೆ ನೀಡುವಂಥದ್ದು; ವೇದ ಶಾಸ್ತ್ರಗಳ ಜ್ಞಾನಕ್ಕೆ ಸಂಸ್ಕೃತಕ್ಕೆ ಆದ್ಯತೆ ಕೊಡುವಂಥದಲ್ಲ. ಕನಕದಾಸರ ಕಾಲದ ಹೊತ್ತಿಗೆ ಆ ಮಠದ ಅರ್ಥಾತ್ ರಾಮಾನುಜ ಮತದ ಪ್ರಭಾವ ಅಲ್ಲೆಲ್ಲ ಹರಡಿರಬೇಕು. ತಾನು ಹುಟ್ಟಿದ ಪರಿಸರದಲ್ಲಿದ್ದ ಆ ಮಠ–ಮತದ ಪ್ರಭಾವಕ್ಕೆ ಕನಕದಾಸರು ಸಹಜವಾಗಿಯೇ ಒಳಗಾಗಿರಬೇಕು; ದೀಕ್ಷೆಯನ್ನು ಪಡೆದಿರಬೇಕು ಎಂಬುದು ಹೆಚ್ಚು ವಿಹಿತ, ಸಂಭಾವ್ಯ. ವ್ಯಾಸರಾಯರು ತೆಂಗಲೈ ಮಾದರಿಯ ದಾಸಕೂಟವನ್ನು ಮಾಧ್ವಮತದಲ್ಲೂ ಚಾಲ್ತಿಗೆ ತರಬೇಕೆಂದು, ಸದೃಢವಾಗಿ ಕಟ್ಟಿ ಬೆಳೆಸಬೇಕೆಂದು, ದೇಸಿ ನುಡಿಯ ಗರುಡಿಯಲ್ಲಿ ಪಳಗಿದ ಜಾನಪದ ನೆಲೆಯ ಕನಕದಾಸರನ್ನು ಮಾರ್ಗದರ್ಶನಕ್ಕಾಗಿ ತಮ್ಮತ್ತ ಸೆಳೆದುಕೊಂಡಿರಬಹುದು– ವಾದಿರಾಜರ ಮೂಲಕ. ವಾದಿರಾಜರಿಗೂ ಕನಕದಾಸರಿಗೂ ಮೊದಲೇ ಸ್ನೇಹ ಸೌಹಾರ್ದತೆ ಇದ್ದಿರಬೇಕು. ಏಕೆಂದರೆ ಮೋಹನತರಂಗಿಣಿಯಲ್ಲಿ 'ತ್ರಿವಿಕ್ರಮ ದಾಸಸ್ಯದಾಸ' ಎಂದು ತಮ್ಮನ್ನು ಕರೆದುಕೊಳ್ಳುತ್ತಾರೆ. ಅಷ್ಟೇ ಅಲ್ಲದೆ, ತಮ್ಮದೊಂದು ಕೀರ್ತನೆಯಲ್ಲಿ ವಾದಿರಾಜರನ್ನು 'ಸುಗುಣ ವಾದಿರಾಜರೆ' ಎಂದು ಸಂಬೋಧಿಸುತ್ತಾರೆ. ಅಂದರೆ ಇತರೆ ಕರ್ಮಠರಲ್ಲಿದ್ದ ಸಣ್ಣತನ ಅವರಲ್ಲಿಲ್ಲದ್ದರಿಂದ, ಗುಣವಂತರಾದದ್ದರಿಂದ 'ಸುಗುಣ' ಎಂಬ ವಿಶೇಷಣ ಹಚ್ಚಿ ಸಂಬೋಧಿಸಿದ್ದಾರೆ. 'ಎಲ್ಲ ಮತದ ಹೊಟ್ಟ ತೂರಿ, ಎಲ್ಲ ತತ್ತ್ವದೆಲ್ಲೆ ಮೀರಿ, ನಿರ್ದಿಗಂತವಾಗಿ ಏರಿ' ನಿಂತ ಕನಕದಾಸರು ಅವರೀರ್ವರ ಆತ್ಮೀಯತೆಯ ಕರೆಗೆ ಮಾರು ಹೋಗಿ, ಸತ್ ಪ್ರಯತ್ನಕ್ಕೆ ಸಹಾಯಕರಾಗಿ ಸೇವೆ ಸಲ್ಲಿಸಲು ಅಲ್ಲಿಗೆ ಹೋಗಿರುವುದು ನಿಜ. ಆದರೆ ಮಾಧ್ವಮತ ನಿಷ್ಠೆಯ ಕರ್ಮಠರು, ಛಾಂದಸರು ಕನಕದಾಸರ



ಆಗಮನವನ್ನೇ ಸಹಿಸದಾದರು; ವ್ಯಾಸರಾಯರು ಅವರಿಗೆ ತೋರಿಸುತ್ತಿದ್ದ ಪ್ರೀತಿಗೌರವಗಳನ್ನು ತಾಳಿಕೊಳ್ಳಲಾರದೆ ಹೋದರು. ಇಂಥ 'ಗಾಂಧಾರಿ ಹೊಟ್ಟೆ ಹೊಸೆತ'ದ ಜನರು ಕನಕದಾಸರಿಗೆ ದೀಕ್ಷೆ ಕೊಡಲು ಅವಕಾಶ ಕೊಡುವರೆ? ಹಟ್ಟಿ ಬಾಗಿಲಿಗೆ ಹೋದರೇ ಗಳ್ಳು ಹಾಕುವ 'ಕನಕನ ಕಿಂಡಿಯ ಜನಕರು' ಇನ್ನು ಅವರಿಗೆ ಅಂಕಿತ ನೀಡಲು ಅವಕಾಶ ಕೊಡುವರೆ? ಆದರೆ ಕನಕದಾಸರು ಅನನ್ಯ ಸಾಧಕರೆಂದೂ, ಅಪರೋಕ್ಷ ಜ್ಞಾನಿಗಳೆಂದೂ ಗ್ರಹಿಸಿದ ವ್ಯಾಸರಾಯರು 'ವಟವಟಗುಟ್ಟುವ ವಟುಗಳ ಪಟಾಲಂ' ಅಂಕಿತ ನೀಡಲು ಅಡ್ಡಿಪಡಿಸಿದರೂ ಗುರೂಪದೇಶ ನೀಡಿ ಗೌರವಿಸಿದರು. ಕರ್ಮಠ ಶಿಷ್ಯರ ಕಣ್ಣುಗಳ ಮೇಲೆ ಬೆಳೆದುಕೊಂಡಿದ್ದ ಮತಾಂಧತೆಯ ಪೊರೆಯನ್ನು ಅನೇಕ ನಿದರ್ಶನಗಳ ಶಸ್ತ್ರ ಚಿಕಿತ್ಸೆಯನ್ನು ನೀಡಿ ತೆಗೆದು ಹಾಕಲು ಪ್ರಯತ್ನಪಟ್ಟರೆಂಬುದು 'ಬಾಳೆಹಣ್ಣಿನ ಪ್ರಸಂಗ', 'ಸಾಲಿಗ್ರಾಮ ಪ್ರಸಂಗ', ದೇವರನ್ನು ತೋರಿಸುವ ಪ್ರಸಂಗ', 'ಮೋಕ್ಷಕ್ಕೆ ಯಾರು ಹೋಗಬಹುದು?' ಎಂಬ ಪ್ರಸಂಗಗಳಿಂದ ಮನದಟ್ಟಾಗುತ್ತದೆ. ವ್ಯಾಸರಾಯರು–

**ನಾಡಾಡಿಯಂತೆಯೇ ಮಾಡಿಬಿಟ್ಟರಿ ಇವಗೆ**
**ನಾಡೆಲ್ಲ ಹುಡುಕಿದರು ಈಡಾರ ಕಾಣೆ**

ಎಂದು ಕರ್ಮಠ ಶಿಷ್ಯರ ಗುಂಡಿಗೆಗಳಿಗೆ ಉಂಡಿಗೆ ಹಾಕಿದಂತೆ, ಗುಂಡು ಹೊಡೆದಂತೆ ಪ್ರತ್ಯಕ್ಷವಾಗಿ ಪ್ರಶಂಸಿಸಿದರೂ 'ಕರ್ಮಠಾವತಾರಿಗಳು' ಆರ್ಷೇಯ ಆಸ್ತಿ ಎಂಬಂತೆ ಈರ್ಷೆಯನ್ನು ಉಳಿಸಿಕೊಂಡದ್ದು, ಬೆಳೆಸಿಕೊಂಡದ್ದು, ಮುಂದಿನ ಪೀಳಿಗೆಗೆ ಹಸ್ತಾಂತರಿಸುತ್ತಾ ಬಂದದ್ದು ದುರ್ದೈವ. ಇಲ್ಲದಿದ್ದರೆ ಇಪ್ಪತ್ತನೆಯ ಶತಮಾನದ ವಿದ್ವಾಂಸರೂ ಸಹ ವಾಸ್ತವ ಸತ್ಯಕ್ಕೆ ಅಪಚಾರವೆಸಗುವಂತೆ 'ವ್ಯಾಸರಾಜರ ತರುವಾಯ ಪುರಂದರ ದಾಸರು ಏಕಾಕಿಯಾಗಿ ಧರ್ಮ ಪ್ರಚಾರ ಮಾಡುತ್ತಾ ಸಮಾಜದ ಈ ಎಲ್ಲ ಕೊಳೆಗಳ ಕಡೆಗೆ ಕಣ್ಣಾಡಿಸಿದರು' ಎಂಬಂಥ ಮಾತನ್ನಾಡಿ 'ಕನಕದಾಸರು ಬಣ್ಣದ ಮನೆಯಲ್ಲೇ ಇರಲಿ, ಬೇರೆಯವರು ರಂಗಸ್ಥಳದ ಮೇಲೆ ಮೆರೆಯಲಿ' ಎಂಬ ಧೋರಣೆಗೆ ಪಕ್ಕಾಗುತ್ತಿರಲಿಲ್ಲ. ಹೊಸ ಕಾಲಕ್ಕನು ಗುಣವಾಗಿ ಅಸೂಯೆಯ ಅಭಿವ್ಯಕ್ತಿಯೂ ನಯನಾಜೂಕಿನಿಂದ ಬಾಗಿ ಬಳುಕುತ್ತಿರಬೇಡವೆ! ಆದರೆ ಯಾವುದೇ ಬಗೆಯ ಲಾಗ ಅಂತರ್ಲಾಗಗಳು ಸತ್ಯವನ್ನು ಮುಚ್ಚಿಡಲಾರವು, ಸತ್ತ್ವವನ್ನು ತುಳಿದಿಡಲಾರವು ಎಂಬುದನ್ನು ಅರ್ಥ ಮಾಡಿಕೊಳ್ಳುವುದು ಮೇಲು. ಏಕೆಂದರೆ ಮಿಥ್ಯೆಯ ಹಂಡೆ ಬಾಯನ್ನು

ಮುಚ್ಚಬಹುದು, ಆದರೆ ಸತ್ಯದ ಬ್ರಹ್ಮಾಂಡ ಬಾಯನ್ನು ಮುಚ್ಚಲು ಸಾಧ್ಯವಿಲ್ಲ. ಅದು ಒಂದಲ್ಲ ಒಂದು ರೀತಿಯಲ್ಲಿ ಬೆಳಕಿಗೆ ಬಂದೇ ಬರುತ್ತದೆ, ಮಿಥ್ಯೆ ನೇಪಥ್ಯಕ್ಕೆ ಸರಿಯಲೇ ಬೇಕಾಗುತ್ತದೆ.

## ೨

ಕನಕದಾಸರ ಜೀವನಕ್ಕೆ ಸಂಬಂಧಿಸಿದಂತೆ ಹರಿದಾಸರ ಮನೆತನಗಳಲ್ಲಿ ಉಳಿಸಿಕೊಂಡು ಬಂದಿರುವ ದಾಖಲೆಗಳಂತೆ, ಜನಜೀವನದಲ್ಲಿ ಕರ್ಣ ಪರಂಪರೆಯಾಗಿ ಬಂದಿರುವ ಐತಿಹ್ಯದಂತೆ ಹಾಗೂ ಡೊಳ್ಳಿನ ಹಾಡಿನಲ್ಲಿ ಸಿಗುವ ಮಾಹಿತಿಯಂತೆ ಅವರ ತಂದೆತಾಯಿಗಳ ಹೆಸರು ಬೀರಪ್ಪ ಮತ್ತು ಬಚ್ಚಮ್ಮ (< ಭತ್ಯಮ್ಮ < ಭಕ್ತ್ಯಮ್ಮ). ಬೀರಪ್ಪ ಬಾಡ ಬಂಕಾಪುರದ ಸುತ್ತಲ ಪ್ರದೇಶಕ್ಕೆ ನಾಡಗೌಡ ಅಥವಾ ದಣ್ಣಾಯಕನಾಗಿದ್ದವನು. ತಿರುಪತಿಯ ತಿಮ್ಮಪ್ಪನ ವರಪ್ರಸಾದದಿಂದ ಹುಟ್ಟಿದ ಮಗನಿಗೆ ತಿಮ್ಮಪ್ಪ ಎಂದೇ ಹೆಸರಿಟ್ಟರು. ಸಿಕ್ಕಿದ ಕನಕನಿಧಿಯನ್ನು ಜನರಿಗೆ ಹಂಚಿದ್ದರಿಂದ ಕನಕಪ್ಪ ಆದ; ದಂಡನಾಯಕ ಪದವಿ ದೊರಕಿದ್ದರಿಂದ ಕನಕನಾಯಕನಾದ. ದಾಸ ದೀಕ್ಷೆ ತೆಗೆದುಕೊಂಡ ಮೇಲೆ ಕನಕದಾಸ ಎಂಬ ಹೆಸರು ರೂಢಿಗೆ ಬಂತು. ಆದರೆ ಹುಟ್ಟು ಹೆಸರೇ ಕನಕ ಎಂದಿರಬೇಕು. ಅವರ ಹಲವಾರು ಕೀರ್ತನೆಗಳಲ್ಲಿ ಅಂದರೆ ದಾಸರಾಗುವ ಮೊದಲು ಬರೆದವುಗಳಲ್ಲಿ ಕನಕ, ಕನಕಯ್ಯ, ಕನಕಪ್ಪ ಎಂಬ ಹೆಸರುಗಳೇ ಕಂಡು ಬರುತ್ತವೆಯಾದ್ದರಿಂದ ಕನಕ ಎಂಬುದೇ ಹುಟ್ಟಿದಾಗಿನ ಹೆಸರಾಗಿರ ಬೇಕು ಎನ್ನಿಸುತ್ತದೆ.

ಚಿಕ್ಕಂದಿನಲ್ಲೇ ಬಂಕಾಪುರದ ಶ್ರೀನಿವಾಸಾಚಾರ್ಯ ಎಂಬುವವರ ಬಳಿ ವಿದ್ಯಾಭ್ಯಾಸವಾಗಿ ತರ್ಕ, ವ್ಯಾಕರಣ, ಮೀಮಾಂಸೆ, ಸಾಹಿತ್ಯಗಳಲ್ಲಿ ಸಿದ್ಧಹಸ್ತನಾದ. ಸಂಸ್ಕೃತದಲ್ಲೂ ಪಾರಂಗತನಾದ. ತಂದೆ ಕ್ಷತ್ರಿಯೋಚಿತ ವಿದ್ಯೆಯನ್ನು ಕಲಿಸಿದ. ಚಿಕ್ಕಂದಿನಿಂದಲೇ ಬಾಡದ ಆದಿಕೇಶವನ ಭಕ್ತನಾಗಿ ಹಾಡುಗಳನ್ನು ರಚಿಸುತ್ತಿದ್ದ. ಆತನ ದೈಹಿಕ ಮಾನಸಿಕ ಬೆಳವಣಿಗೆಯನ್ನು ಕಂಡು ಎಲ್ಲರೂ ಬಾಯ ಮೇಲೆ ಬೆರಳಿಟ್ಟುಕೊಳ್ಳುತ್ತಿದ್ದರು. ಆತನಿಗೆ ೧೦–೧೨ ವರ್ಷವಾಗಿದ್ದಾಗ ತಂದೆ ತೀರಿಕೊಂಡ. ಅವರ ದಾಯಾದಿ ಇದೇ ಸಮಯವೆಂದು ಸಾಳುವ ನರಸಿಂಹನ ಮಗ ಇಮ್ಮಡಿ ನರಸಿಂಹನ ಬಳಿ ಚಾಡಿ ಹೇಳಿ, ಕುತಂತ್ರ ಮಾಡಿ, ನಾಡಗೌಡಿಕೆಯನ್ನು ತಾನು ಪಡೆದುಕೊಂಡು ಅವರನ್ನು ಬಾಡದಿಂದಲೇ ಬುಡಸಹಿತ ಕಿತ್ತೆಸೆಯಬೇಕೆಂದು ಇಲ್ಲದ ಕಿರುಕುಳ ಕೊಟ್ಟ. ತಾಯಿ ಮಗನನ್ನು ಕರೆದುಕೊಂಡು ತನ್ನ ತೌರೂರಾದ



ಕಾಗಿನೆಲೆಗೆ ಬಂದಳು. ನೆಂಟರ ಮನೆಯಲ್ಲಿ ಕನಕ ಕುರಿಗಳನ್ನು ಕಾಯುತ್ತ, ಎದೆಗುಂದದೆ ಊರ ಕೆಲಸಗಳಲ್ಲಿ ಭಾಗಿಯಾಗಿ ದುಡಿಯುತ್ತ, ತಾನು ಕಟ್ಟಿದ ಹಾಡುಗಳನ್ನು ಹಾಡುತ್ತ, ಭಜನಮಂಡಲಿಯನ್ನು ಸ್ಥಾಪಿಸಿ ಊರಿನ ಯುವಕರನ್ನೆಲ್ಲ ಅದರಲ್ಲಿ ಪಾಲುಗೊಳ್ಳುವಂತೆ ಹುರಿದುಂಬಿಸುತ್ತ, ತಾನೇ ರಚಿಸಿದ ಕೆಲವು ಬಯಲಾಟಗಳನ್ನು ಕಲಿಸಿ ಊರಲ್ಲಿ ಅಭಿನಯಿಸುತ್ತ ಎಲ್ಲರ ಕಣ್ಮಣಿಯಾದ. ದೇವಸ್ಥಾನಗಳನ್ನು ನಿರ್ಮಿಸಿ, ಪೂಜೆ ಪುನಸ್ಕಾರ ಉತ್ಸವಗಳನ್ನು ಏರ್ಪಡಿಸಿ ಸುತ್ತಮುತ್ತಲ ಊರುಗಳ ಜನರ ಪ್ರೀತಿ ವಿಶ್ವಾಸಗಳಿಗೆ ಪಾತ್ರನಾಗಿ ಜನಪ್ರಿಯತೆಯನ್ನು ಗಳಿಸಿದ. ಇದು ದಾಯಾದಿ ಎದೆಯಲ್ಲಿ ದಳ್ಳುರಿ ಎಬ್ಬಿಸಿತು. ಕನಕನ ಪ್ರತಿಭೆ, ಸಾಹಸ, ಸಮೂಹ ಹಿತದ ಕೆಲಸ ಕಾರ್ಯಗಳ ಕೀರ್ತಿ ೧೫೦೯ರಲ್ಲಿ ಅಧಿಕಾರಕ್ಕೆ ಬಂದ ಕೃಷ್ಣದೇವರಾಯನ ಕಿವಿಗೆ ಬಿದ್ದು ಕೂಡಲೆ ಬಾಡಬಂಕಾಪುರ ಕಾಗಿನೆಲೆ ಪ್ರಾಂತ್ಯಕ್ಕೆ ದಂಡನಾಯಕನನ್ನಾಗಿ ನೇಮಿಸಿದ. ತಾಯಿ ಸಂತಸಗೊಂಡು ತನ್ನ ಮನಸ್ಸಿನ ಆಸೆಯನ್ನು ತೋಡಿಕೊಂಡಳು. ಏಕೆಂದರೆ ೧೪–೧೫ ವರ್ಷಗಳ ಮಗ ೨೦–೨೫ ವರ್ಷಗಳ ಕಟ್ಟರೆಯದ ಕಟ್ಟಾಳುವಿನಂತೆ ಕಂಗೊಳಿಸುತ್ತಿರುವುದನ್ನು ಕಂಡು ಸುಮ್ಮನಿರಲಾಗಲಿಲ್ಲ. ಆ ಆಸೆಯೆಂದರೆ ಮಗನಿಗೆ ಮದುವೆ ಮಾಡಿ ಮೊಮ್ಮಗನನ್ನು ಕಾಣುವ ತವಕವಲ್ಲದೆ ಬೇರೆಯಲ್ಲ. ಮಗ ಒಪ್ಪಿದಾಗ ಶಿಗ್ಗಾವಿಯ ಶ್ರೀಮಂತ ಮನೆತನದ ಹೆಣ್ಣನ್ನು ತಂದು ಮದುವೆ ಮಾಡಿದಳು.

ಈ ಮಧ್ಯೆ ಕೃಷ್ಣದೇವರಾಯ ರಾಜ್ಯವಿಸ್ತರಣಾಕಾಂಕ್ಷೆಯಿಂದ ೧೫೧೮ರ ವರೆಗೂ ದಿಗ್ವಿಜಯದಲ್ಲೇ ಮುಳುಗಿದ್ದ. ಅವನ ಮೂವರು ರಾಣಿಯರಲ್ಲಿ ಇಬ್ಬರು ಹೆಣ್ಣುಮಕ್ಕಳು ಇಬ್ಬರು ಗಂಡು ಮಕ್ಕಳಾಗಿದ್ದರು. ಮೊದಲನೆಯ ಮಗನನ್ನು ಪ್ರಧಾನಿ ಸಾಳುವ ತಿಮ್ಮರಸನ ಕಡೆಯವರೇ ಕೊಲ್ಲಿಸಿದರು ಎಂದು ನಂಬಿದ ಕೃಷ್ಣದೇವರಾಯ ಅವರನ್ನು ಸೆರೆಹಿಡಿಸಿ ಆ ಮೂವರ– ಸಾಳುವ ತಿಮ್ಮರಸ ಹಾಗೂ ಅವನ ಇಬ್ಬರು ಮಕ್ಕಳ– ಕಣ್ಣು ಕೀಳಿಸಿದ. ಈ ಕಾರ್ಯದಿಂದ ಅವನು ದೈಹಿಕವಾಗಿ ಹಾಗೂ ಮಾನಸಿಕವಾಗಿ ಕುಸಿದು ಕಾಯಿಲೆ ಬಿದ್ದ. (ಕುಹೂ ಯೋಗ ಬಂದಿತ್ತು. ವ್ಯಾಸರಾಯರು ಹೋಗಲಾಡಿಸಿದರು ಎಂಬ ಕಟ್ಟುಕತೆ ಕಟ್ಟು ಹರಿದ ಪಂಜಾಗಿ ಉರಿದು, ಇಂದಿಗೂ ಅದನ್ನು ವಿದ್ವಾಂಸರು ಹೇಳುತ್ತಾ ಬರುತ್ತಿರುವುದು ಕಂಡುಬರುತ್ತದೆ) ಆಗ ಕೃಷ್ಣದೇವರಾಯನ ಕಿರಿಯ ಮಗನೇ ಪಟ್ಟವೇರಿದರೂ, ಕೃಷ್ಣದೇವರಾಯನ ತಮ್ಮ ಅಚ್ಯುತರಾಯ ಆಡಳಿತದ ಕಾರುಬಾರು ನೋಡಿಕೊಳ್ಳುತ್ತಿದ್ದ. ಆ ಸಮಯದಲ್ಲಿ ಕನಕನ ದಾಯಾದಿ 'ರಾಜ್ಯದ ಬೊಕ್ಕಸವನ್ನು ದೇವರ ಉತ್ಸವ ಮತ್ತೊಂದು ಮಗದೊಂದಕ್ಕೆ ಅಡ್ಡಾದಿಡ್ಡಿಯಾಗಿ ವ್ಯಯ

ಮಾಡುತ್ತಿದ್ದಾನೆ' ಎಂದು ಅಚ್ಯುತರಾಯನಿಗೆ ಚಾಡಿ ಹೇಳಿದ. ಆ ನಿಮಿತ್ತ ಅಚ್ಯುತರಾಯ ಕನಕನನ್ನು ದಂಡನಾಯಕ ಪದವಿಯಿಂದ ಪದಚ್ಯುತಗೊಳಿಸಿದ. ಅದರ ವಿವರ ಕನಕದಾಸರ 'ಆರಿಗಾರಿಲ್ಲ ಆಪತ್ಕಾಲದೊಳಗೆ' ಎಂಬ ಕೀರ್ತನೆಯಲ್ಲಿ ಸಿಕ್ಕುತ್ತದೆ. 'ಚಾಡಿ ಮಾತಿಗೆ ಭೂಪ ಘುಳುಘುಳಿಸುತ ಕೋಪವನು ತೋರಿದಾಗ' 'ನಿಂದೆ ಹೊಂದಿರುವಾಗ' 'ಪದವಿ ತಪ್ಪಿರುವಾಗ' ಎಂಬ ಮಾತುಗಳು ಇಡೀ ಚರಿತ್ರೆಯನ್ನು ಪರಿಚಯಿಸುತ್ತವೆ. ಅದೇ ಸಮಯದಲ್ಲಿ ತಾಯಿಯೂ ತೀರಿಕೊಂಡಳು. ಕನಕ ಎದೆಗುಂದದೆ ತನ್ನ ಗರ್ಭಿಣಿ ಹೆಂಡತಿಯೊಡನೆ ಕೆಲವು ಕಾಲ ತನ್ನ ಮಾವನ ಮನೆಯಲ್ಲಿ ಉಳಿದುಕೊಂಡ. ಹೆಂಡತಿ ಗಂಡು ಮಗುವಿಗೆ ಜನ್ಮ ನೀಡಿದಳು. ಆದರೆ ಕೆಲಕಾಲದ ನಂತರ ಮಾವನ ಮನೆಯವರ ಚಿಟುಕು ಮುಳ್ಳಾಡಿಸುವ ಮಾತುಗಳನ್ನು ಕೇಳಿ ಕೇಳಿ ಸಾಕಾಗಿ ಹೆಂಡತಿಯೊಡನೆ ಕಾಗಿನೆಲೆಗೆ ಬಂದು ಆದಿಕೇಶವನ ದೇವಸ್ಥಾನದಲ್ಲೇ ಉಳಿದ. 'ನಮಗೆಲ್ಲಿ ಮನೆಗಳಯ್ಯಾ ನಾರಾಯಣ' ಎಂಬ ಕೀರ್ತನೆಯಲ್ಲಿ ಬರುವ 'ನಿಮ್ಮ ಗುಡಿಯಲಿಪ್ಪೆನು' ಎಂಬ ಮಾತು ಸಾಕ್ಷಿ. ಅಥವಾ 'ಮಾವನ ಮನೆಯಲ್ಲಿ ಇರಬಹುದೆ ಕೋವಿದರು' ಎಂಬ ಕೀರ್ತನೆಯಲ್ಲಿ ಬರುವ 'ಗೋಪಾಳಬುಟ್ಟಿ ಲೇಸು' ಎಂಬ ಮಾತು ಇದಕ್ಕೆ ಪುಷ್ಟಿ ನೀಡುತ್ತದೆ.

ಕನಕದಾಸರ ಆತ್ಮಚರಿತ್ರೆಯ ಪ್ರತಿರೂಪದಂತಿರುವ "ಹರಿ ನಿಮ್ಮ ಪದಕಮಲ ನಿರುತಧ್ಯಾನದಿಂ ದೊರಕಿತೀ ಗುರುಸೇವೆ ಹರಿಯೆ' ಎಂಬ ಕೀರ್ತನೆ ಹಾಗೂ 'ಸಾಲದೆ ನಿನ್ನದೊಂದು ದಿವ್ಯನಾಮ ಅಕಾಲ ಮೃತ್ಯುವಿನ ಗಂಟಲಗಾಣ ಹರಿಯೆ' ಎಂಬ ಕೀರ್ತನೆ– ಎರಡೂ ಕೂಡ ಸಾಕಷ್ಟು ಮಾಹಿತಿಯನ್ನು ನೀಡುತ್ತವೆ: ಮಾಂಡಲಿಕ ದೊರೆತನ, ಯುದ್ಧರಂಗದಲ್ಲಿ ಶೌರ್ಯಪರಾಕ್ರಮ, ಇವರ ದರ್ಶನ ಮಾತ್ರದಿಂದಲೇ ಪರರಾಜರು ನಡುಗುತ್ತಿದ್ದುದು, ಹೆಜ್ಜೆ ಹೆಜ್ಜೆಗೂ ಆದಿಕೇಶವ ತನ್ನತ್ತ ಎಳೆದುಕೊಳ್ಳಲು, ತನ್ನನ್ನು ಉತ್ತಮ ದಡಕ್ಕೆ ತಲುಪಿಸಲು ನಿನ್ನ ಕಾರ್ಯಕ್ಷೇತ್ರ ಇದಲ್ಲ ಎಂದು ಹೇಳುತ್ತಿದ್ದ ಬುದ್ಧಿವಾದ, ಮಾಡುತ್ತಿದ್ದ ಒತ್ತಾಯ ಸಂಕ್ಷಿಪ್ತವಾಗಿದ್ದರೂ ಸ್ಪಂದನಗೊಳಿಸುವ ತಾಜಾ ಮಾಹಿತಿ.

ಉಡುಪಿಯ ಕೃಷ್ಣದರ್ಶನಕ್ಕೆ ಬಂದಾಗ ಕರ್ಮಠರು ನಾಯಿಯನ್ನು ಬಡಿಯುವಂತೆ ಬಡಿದು ಒಳಕ್ಕೆ ಬಿಡದಿದ್ದಾಗ, ಬಡಪೆಟ್ಟಿಗೆ ಬಗ್ಗದ ಕನಕದಾಸರು ಪಶ್ಚಿಮ ಭಾಗದಲ್ಲಿ ಧರಣಿ ಕುಳಿತು ಹಾಡತೊಡಗಿದ್ದು, ಈ ಸುದ್ದಿಯನ್ನು ಕೇಳಿ ತಂಡೋಪತಂಡವಾಗಿ ದಂಡಿನೋಪಾದಿಯಲ್ಲಿ ಕನಕಾನುಯಾಯಿಗಳು ಘೇರಾಯಿಸಿದ್ದು, ಒಂದು ರೀತಿಯಲ್ಲಿ ಮಿತ್ರರೂ ಗುರುಗಳೂ ಆಗಿದ್ದ ವಾದಿರಾಜರು



ಕನಕದಾಸರಿಗೆ ನ್ಯಾಯ ದೊರಕಿಸಲು ಛಾಂದಸರ ಉಡದ ಪಟ್ಟಿನಿಂದ ಅಸಹಾಯಕರಾದದ್ದು, ಕೊನೆಗೆ ಪಶ್ಚಿಮ ಭಾಗದಲ್ಲಿ ಕಿಟಕಿಯನ್ನಿಟ್ಟು, ಅದಕ್ಕೆ 'ಕನಕನ ಕಿಂಡಿ' ಎಂದು ನಾಮಕರಣ ಮಾಡಿ ಅದರ ಮೂಲಕ ಕೃಷ್ಣದರ್ಶನಕ್ಕೆ ಅನುವು ಮಾಡಿಕೊಟ್ಟದ್ದು, ಆದರೂ ಕನಕದಾಸರಿಗೆ ನೋವಾಗಬಾರದು, ಕೀಳರಿಮೆ ಮೂಡಬಾರದು ಎಂಬ ಭಾವನೆಯಿಂದ ತಾವೂ ಕೂಡ ಮೊದಲು 'ಕನಕನ ಕಿಂಡಿ'ಯಿಂದ ಕೃಷ್ಣದರ್ಶನ ಮಾಡಿ, ಉಳಿದವರೂ ಅದನ್ನು ತಪ್ಪದಂತೆ ಅನುಸರಿಸುವಂತೆ ಮಾಡಿ ಧರ್ಮ ಸಂಕಟದಿಂದ ಪಾರಾದದ್ದು, ಆಮೇಲೆ ಮತ–ಮಠಗಳಿಗೆ ಕೆಟ್ಟ ಹೆಸರು ಬರಬಾರದೆಂದು, ಜನರ ಕ್ರೋಧದ ದಳ್ಳುರಿ ಆರಿ ತಣ್ಣಗಾಗಲೆಂದು ಪರಂಪರಾಗತ ಕೃತಕ ಕಥಾಸೃಷ್ಟಿಯ ತಂತ್ರಪ್ರಾವೀಣ್ಯದ ಪ್ರಕಾಂಡ ಪಂಡಿತರು 'ಪೂರ್ವಾಭಿಮುಖವಾಗಿದ್ದ ಶ್ರೀಕೃಷ್ಣ ಕನಕದಾಸರ ಭಕ್ತಿಯ ದೃಢಪಟ್ಟಿಗೆ ಮೆಚ್ಚಿ ಪಶ್ಚಿಮಾಭಿಮುಖವಾಗಿ ತಿರುಗಿ ಗೋಡೆಯಲ್ಲಿ ಬಿರುಕು ಮಾಡಿ ಕನಕದಾಸರಿಗೆ ದರ್ಶನ ನೀಡಿದ' ಎಂಬ ಕಟ್ಟುಕತೆಯನ್ನು ಸೃಷ್ಟಿಸಿ ತೇಲಿಬಿಟ್ಟದ್ದು– ಎಲ್ಲ ವಾಸ್ತವ. ಏಕೆಂದರೆ ಕೃಷ್ಣವಿಗ್ರಹ ಪ್ರತಿಷ್ಠಾಪನೆಗೊಂಡದ್ದೇ ಪಶ್ಚಿಮಾಭಿಮುಖವಾಗಿ ಎಂಬ ಸತ್ಯ ದೇವಸ್ಥಾನದ ವಿನ್ಯಾಸದಲ್ಲೇ– ಅಂದರೆ ಗರ್ಭಗುಡಿಯ ಮುಂದೆ ಭಕ್ತರು ನೆರೆಯಲು ವಿಶಾಲ ಜಾಗವಿರುವುದರಿಂದಲೇ– ಎಲ್ಲರಿಗೂ ಅರ್ಥವಾಗಿಬಿಡುತ್ತದೆ. ಸತ್ಯ ಸೂರ್ಯನ ಮುಂದೆ ಸುಳ್ಳಿನ ಹಿಮ ಹೆಚ್ಚು ಕಾಲ ಇರಲು ಸಾಧ್ಯವಿಲ್ಲ. ಕಾಲ ಹೋಗುತ್ತದೆ. ಆಡಿದ ಮಾತು ಮಾಡಿದ ಕೃತ್ಯ– ವಿವೇಕವೋ ಅವಿವೇಕವೋ– ಕೊನೆಯವರೆಗೂ ಉಳಿಯುತ್ತದೆ ಎಂಬ ಸತ್ಯ ಮಲಿನರಿಗೆ ಅರ್ಥವಾದರೂ ಕುಲೀನರಿಗೆ ಅರ್ಥವಾಗದಿರುವುದು ಆಶ್ಚರ್ಯ.

## ೩

ಈಗ ಕನಕದಾಸರ ಕಾಲದ ಬಗೆಗೆ ಪರಿಶೀಲಿಸಬೇಕಾಗುತ್ತದೆ. ಕನಕದಾಸರು ತಮ್ಮ ಕೃತಿ 'ಮೋಹನತರಂಗಿಣಿ'ಯಲ್ಲಿ ರಾಮಾನುಜಾಚಾರ್ಯ ಹಾಗೂ ತಾತಾಚಾರ್ಯರನ್ನು ಸ್ಮರಿಸಿರುವುದರಿಂದ ಹಾಗೂ ಶ್ರೀಕೃಷ್ಣನೊಂದಿಗೆ ಕೃಷ್ಣದೇವರಾಯನನ್ನು ಸಮೀಕರಿಸಿ ಕೃತಿರಚನೆ ಮಾಡಿರುವುದರಿಂದ (ಕೃಷ್ಣನನ್ನು 'ದೇಶಾಧಿಪ ಕೃಷ್ಣರಾಯ' 'ಜಗದೊಳು ಶ್ರೀಕೃಷ್ಣದೇವರಾಯಗೆ ಗಂಡುಮಗನಾದ ಪರಮ ಸಂಭ್ರಮದಿಂ' ಎಂದು ವರ್ಣಿಸಿರುವುದರಿಂದ) ಹಾಗೂ ತಾತಾಚಾರ್ಯರೂ ವ್ಯಾಸರಾಜರೂ ಸಮಕಾಲೀನರಾಗಿ ಕೃಷ್ಣದೇವರಾಯನ ಆಸ್ಥಾನದಲ್ಲಿ ಗೌರವಕ್ಕೆ ಭಾಜನರಾಗಿದ್ದುದರಿಂದ ಕೃಷ್ಣದೇವರಾಯನ ಆಡಳಿತಾವಧಿಯಲ್ಲಿ ಕನಕದಾಸ

ರಿದ್ದರು ಎನ್ನಲು ಹಿಂದುಮುಂದು ನೋಡಬೇಕಾಗಿಲ್ಲ. ಅದೂ ಅಲ್ಲದೆ ಅದೇ ಕೃತಿಯಲ್ಲಿ 'ಗದುಗಿನ ಭಾರತ'ವನ್ನು ಬರೆದ ಕುಮಾರವ್ಯಾಸನನ್ನೂ, 'ತೊರವೆ ರಾಮಾಯಣ'ವನ್ನು ಬರೆದ ಕುಮಾರವಾಲ್ಮೀಕಿಯನ್ನೂ ನೆನೆದಿರುವುದರಿಂದ (ಉರಗಾಲಯವೆ ಪೆಸರ್ವಡೆದನ ಮತ್ಸ್ಯೋದರಜಾತೆಯಾತ್ಮಸಂಭವನ ವರ ಪುರಾಣಂಗಳ ಕನ್ನಡಿಸಿದ ಕವೀಶ್ವರರ ಕೊಂಡಾಡುವೆ ಮುದದಿ) ಅವರಿಬ್ಬರಿಗಿಂತ ಈಚಿನವರು ಎಂಬುದು ವೇದ್ಯವಾಗುತ್ತದೆ. ೧೭ನೇ ಶತಮಾನದ ಕಾಖಂಡಕಿ ಮಹಿಪತಿರಾಯರ ಮಗನಾದ ಕಾಖಂಡಕೀ ಕೃಷ್ಣರಾಯರು ಹರಿದಾಸ ಪರಂಪರೆಯನ್ನು ಸ್ಮರಿಸುತ್ತ "ನೆರೆ ತಾಳಪಾಕರ ಸಂತ ಮತಿ ಕನಕರ ಹರಿಭಕ್ತಿ ಉಲ್ಲಾಸಕರ' ಎಂದು ತೆಲುಗಿನ ಅನ್ನಮಾಚಾರ್ಯರನ್ನೂ ಕನ್ನಡದ ಕನಕದಾಸರನ್ನೂ ಜೊತೆಯಲ್ಲಿ ನೆನೆದಿರುವುದರಿಂದ ಆ ಕಾಲಕ್ಕಿಂತ ಹಿಂದಿನವರು ಎಂಬುದು ಸ್ಪಷ್ಟವಾಗುತ್ತದೆ. ಮೇಲಾಗಿ ಮೋಹನ ತರಂಗಿಣಿ ಕೃತಿಯಲ್ಲೇ 'ಪೆಟಲಂಬಿನವರ' (ತುಬಾಕಿಯವರ) ಪ್ರಸ್ತಾಪವಿರುವುದರಿಂದ ಪೆಟಲಂಬುಗಳ ಬಳಕೆ ೧೫೨೦ರಲ್ಲಿ ಜರುಗಿದ ರಾಯಚೂರು ಯುದ್ಧದಲ್ಲಿ ಆಗಿರುವುದರಿಂದ ಆ ಕಾಲದಲ್ಲಿ ಜೀವಿಸಿದ್ದರು ಎಂಬುದು ಸ್ಥಿರವಾಗುತ್ತದೆ.

ಶ್ರೀಕೃಷ್ಣದೇವರಾಯ ೧೫೦೯ರಲ್ಲಿ ಪಟ್ಟಕ್ಕೆ ಬಂದು ೧೫೨೯ರಲ್ಲಿ ಕಾಲವಶರಾದರೆಂದು ತಿಳಿದು ಬರುವುದರಿಂದ, ಅವರ ಆಡಳಿತಾವಧಿಯ ವಿಜಯನಗರದ ಜನಜೀವನವನ್ನು ಸಚಿತ್ರವಾಗಿ ಮೋಹನತರಂಗಿಣಿಯಲ್ಲಿ ಸೆರೆ ಹಿಡಿದು ಕೊಟ್ಟಿರುವುದರಿಂದ ಆ ಕಾಲದಲ್ಲಿದ್ದರು ಎಂಬುದಕ್ಕೆ ಯಾವುದೇ ಅನುಮಾನ ಪಡಬೇಕಾಗಿಲ್ಲ.

ಇನ್ನೊಂದು ಆಧಾರವೆಂದರೆ ಯದುಗಿರಿಯ (ಮೇಲುಕೋಟೆಯ) ಚಲುವರಾಯನ ರಥೋತ್ಸವ ಸಮಾರಂಭದಲ್ಲಿ ಭಾಗಿಯಾಗಿದ್ದ ಕನಕದಾಸರು "ಕೈಯ ತೋರಿದ ಬಗೆಯ, ಅಮ್ಮಮ್ಮ ಯಾದವಗಿರಿ ಕಲ್ಯಾಣಿ ನೀನು" ಎಂದು ಮೊದಲಾಗುವ ಕೀರ್ತನೆಯೊಂದನ್ನು ರಚಿಸಿದ್ದಾರೆ. ಅದರಲ್ಲಿ ಯದುಶೈಲೋತ್ಸವ ನಡೆದದ್ದು "ವಿಕೃತಿವತ್ಸರ ಚೈತ್ರ ದ್ವಿತೀಯೇಕಾದಶಿಯೊಳು ಪ್ರಕಟಿತ ಶುಕ್ರವಾರದೊಳು" ಎಂದಿರುವುದರಿಂದ ಅದು ಮಾರ್ಚ್ ೨೫ ಶುಕ್ರವಾರ ೧೫೩೦ ಇಸವಿಗೆ ಸರಿ ಹೊಂದುತ್ತದೆ. ಅಂದರೆ ಕೃಷ್ಣದೇವರಾಯ ತೀರಿಕೊಂಡ ಮಾರನೆಯ ವರ್ಷ ಅವರು ಕ್ಷೇತ್ರಪರ್ಯಟನೆ ಮಾಡುತ್ತ ಆ ಉತ್ಸವದಲ್ಲಿ ಪಾಲ್ಗೊಂಡಿದ್ದರು ಎಂಬುದು ದೃಢವಾಗುತ್ತದೆ.



ಇನ್ನೊಂದು ಆಧಾರವೆಂದರೆ ಅವರು ಭೂಕಂಪವೊಂದನ್ನು ಕುರಿತು "ಏಕೆ ನಡುಗಿದೆ ತಾಯೆ ಭೂಮಿ ನಡುರಾತ್ರಿಯೊಳು ಜಗದೇಕ ಪೊಡವಿಗೊಡೆಯನ ರಾಣಿ ಪರಮಕಲ್ಯಾಣಿ" ಎಂಬ ಕೀರ್ತನೆಯನ್ನು ರಚಿಸಿದ್ದಾರೆ. ಸಮಾಜದಲ್ಲಿ ಅವಿನಯದ, ಮೋಸ ವಂಚನೆಯ, ಅಧಾರ್ಮಿಕತೆಯ, ಲಂಪಟತನದ ಪ್ರವೃತ್ತಿ ಹೆಜ್ಜೆ ಇಡುತ್ತಿರುವುದನ್ನು ಗಮನಿಸಿದ ಕನಕದಾಸರು ಅದನ್ನು ದಾಖಲು ಮಾಡಲು 'ನೆಲನಡುಗ'ನ್ನು ನೆಲೆಗಟ್ಟಾಗಿ ಮಾಡಿಕೊಂಡಿರುವುದು ಇದರಿಂದ ಮನದಟ್ಟಾಗುತ್ತದೆ. 'ಕನಕಪ್ರಿಯ ತಿರುಪತಿಯ ಗಿರಿಯಾದಿಕೇಶವ' ಎಂದು ಕೀರ್ತನೆಯಲ್ಲಿ ಉಕ್ತವಾಗಿರುವುದರಿಂದ ಅವರು ದಾಸರಾಗುವುದಕ್ಕಿಂತ ಮೊದಲಿನ ರಚನೆ ಇದು ಎನ್ನಿಸುತ್ತದೆ. ಅಂದರೆ ಬಾಲ್ಯದಿಂದಲೇ ಹೀಗೆ ಹಾಡನ್ನು ಕಟ್ಟುವ ಕಲೆ ಹುಟ್ಟಿನೊಡನೆಯೇ ಜನ್ಮಕವಚವಾಗಿ ಬಂದಿರಬೇಕೆಂದು ತೋರುತ್ತದೆ. ಕನಕದಾಸಪ್ರಿಯ' ಎಂದಿರದೆ, 'ಕನಕಪ್ರಿಯ' ಎಂದಿರುವುದು ಮೇಲಿನ ಅಭಿಪ್ರಾಯಕ್ಕೆ ಪುಷ್ಟಿ ನೀಡುತ್ತದೆ.

ಭೂಕಂಪವನ್ನು ದಾಖಲಿಸಿರುವ ಶಾಸನಗಳು ಕರ್ನಾಟಕದಲ್ಲಿ ಎಷ್ಟಿವೆಯೋ ನನಗೆ ನಿಖರ ಮಾಹಿತಿ ಗೊತ್ತಿಲ್ಲ. ಆದರೆ ಬೆಂಗಳೂರು ಜಿಲ್ಲೆಯ ನೆಲಮಂಗಲ ತಾಲ್ಲೂಕಿನ ಸೋಮಪುರ ಹೋಬಳಿಯ ಬಿಲ್ಲನಕೋಟೆ ಎಂಬ ಗ್ರಾಮದ ಬಂಡೆಯ ಮೇಲೆ "ಕಲಿ ವರುಷದ ೪೬೦೮ನೇ ಪ್ರಭವ ಸಂವತ್ಸರದ ಶ್ರಾವಣ ಸುದ ೬ ಗುಲು ಭೂಮಿ ನಡುಗಿತು ವಾರ ೪ಲ್ಕು ಬಿಲ್ಲನಕೊಡೆಯ (ಕೋಟೆಯ) ಖಬಿನಗೆಲಸಿ (ಕಬ್ಬಿಣದ ಕೆಲಸಗಾರ, ಕಮ್ಮಾರ) ವೀರೈಯನ ಮಗ ದೊಡ್ಡವೀರೈಯ ಹೊಯಿದ ಸೇಸನ" ಎಂಬ ಶಾಸನವಿದೆ. ಇದರ ಕಾಲ ೧೫–೭–೧೫೦೭ ಗುರುವಾರಕ್ಕೆ ಸರಿ ಹೊಂದುತ್ತದೆ. ಕಬ್ಬಿಣಗೆಲಸಿಯೊಬ್ಬ ಹೊಯಿದ ಸೇಸನ (ಹೊಯ್ಯಿಸಿದ ಸೇಸನ ಎಂದಿಲ್ಲದಿರುವುದು ಗಮನಾರ್ಹ) ಎಂದಿರುವುದರಿಂದ ಒಬ್ಬ ಸಾಮಾನ್ಯ ಹಳ್ಳಿಗ ಬಂಡೆಯ ಮೇಲೆ ಶಾಸನ ಕೆತ್ತಬೇಕಾದರೆ ಅದು ಭೀಕರವಾದ ಭೂಕಂಪವೇ ಆಗಿರಬೇಕು. ಆದ್ದರಿಂದ ಕನಕದಾಸರ ಹಾಡು ೧೫–೭–೧೫೦೭ರಲ್ಲಿ ಜರುಗಿದ ಭೂಕಂಪವನ್ನೇ ಆಧಾರವಾಗಿಟ್ಟುಕೊಂಡು ಬರೆದದ್ದಿರಬೇಕು ಎಂದು ಊಹಿಸಿದರೆ ತಪ್ಪಾಗಲಾರದು.

ಇನ್ನು ಮೋಹನತರಂಗಿಣಿಯಲ್ಲಿ ಅನಿರುದ್ಧನ ಜನನ ಯಾವಾಗ ಆಯಿತು ಎಂಬುದನ್ನು ದಾಖಲಿಸುವ ಪದ್ಯ ಕೆಳಕಂಡಂತಿದೆ–

**ಆನಂದ ಸಂವತ್ಸರ ಮಾಘ ಶುದ್ಧ ನ**
**ವೀನ ಪಂಚಮಿ ರವಿವಾರ**

**ಭಾನು ಉದಯದ ಸ್ವಾತಿಯ ನಕ್ಷತ್ರದೆ**
**ತಾನುದಿಸಿದ ಗಂಡು ಮಗನು**

ಪ್ರದ್ಯುಮ್ನನ ಗೃಹಪ್ರವೇಶ ಸಂದರ್ಭದಲ್ಲಿ ಸಂವತ್ಸರ ಹೇಳದೆ "ಮಾಘ ಸಿತ ಪಂಚಮಿ ಬೃಹಸ್ಪತಿವಾರ" ಎಂದು ಹೇಳಿ, ಅನಿರುದ್ಧನ ಜನನ ಕಾಲದಲ್ಲಿ ಮಾತ್ರ ಸಂವತ್ಸರ, ಮಾಸ, ತಿಥಿ, ವಾರ, ನಕ್ಷತ್ರಗಳನ್ನೆಲ್ಲ ದಾಖಲಿಸಿರುವುದು ನಿಗೂಢವಾಗಿದೆ, ಅರ್ಥಪೂರ್ಣವಾಗಿದೆ. ಕಟ್ಟಿಶೇಷಾಚಾರ್ಯರು ಇದನ್ನು ಗ್ರಂಥರಚನೆಯ ಕಾಲ ಎಂದು ಭಾವಿಸಿದ್ದಾರೆ. ಆದರೆ ಗ್ರಂಥ ರಚನೆಯ ಕಾಲವನ್ನು ಗ್ರಂಥಾಂತ್ಯದಲ್ಲಿ ಹೇಳಬಹುದಾಗಿತ್ತು, ಮಧ್ಯೆ ಹೇಳಬೇಕಾಗಿರಲಿಲ್ಲ. ಗ್ರಂಥ ರಚನೆಯ ಕಾಲವನ್ನು ಹೇಳುವುದಕ್ಕೆ ಯಾವ ಮುಚ್ಚುಮರೆಯೂ ಬೇಕಾಗುವುದಿಲ್ಲ, ಸಂಕೋಚವೂ ಬಾಧಿಸುವುದಿಲ್ಲ. ಆದರೆ ಕನಕದಾಸರು ತಮ್ಮ ಜನ್ಮದಿನವನ್ನು ಮುಚ್ಚುಮರೆಯಿಲ್ಲದೆ ನೇರವಾಗಿ ದಾಖಲಿಸಲು ಸಂಕೋಚವಿರುವುದರಿಂದಲೇ ಅನಿರುದ್ಧನ ಜನನ ಕಾಲದೊಡನೆ ಸಂಲಗ್ನಗೊಳಿಸಿದ್ದಾರೆ ಎಂಬುದು ನಂಬಲರ್ಹವಾದ ಅಂಶ. ಈ ಸಮೀಕರಣವಿಲ್ಲದಿದ್ದರೆ ಪ್ರದ್ಯುಮ್ನನ ಗೃಹಪ್ರವೇಶ ಸಂದರ್ಭದಲ್ಲಿ ಸಂವತ್ಸರ ಹೆಸರಿಸದೆ ಇರುವಂತೆ ಇಲ್ಲಿಯೂ ಹೆಸರಿಸದೆ ಇರುತ್ತಿದ್ದರು. ವೈಯಕ್ತಿಕ ಅಂಶ ಇರುವುದರಿಂದ ಎಲ್ಲ ವಿವರವನ್ನು ದಾಖಲಿಸಿದ್ದಾರೆ ಎಂಬುದು ಸತ್ಯ. ಇನ್ನು ಪದ್ಯದ ಪಾಠದ ಬಗೆಗೆ ಯೋಚಿಸಬೇಕು. ಸಿತ, ಶುಕ್ಲ, ಶುದ್ಧ ಪಂಚಮಿ ಎಂದೂ ಹಾಗೂ ಅಸಿತ, ಕೃಷ್ಣ, ಬಹುಳ ಪಂಚಮಿ ಎಂದೂ ಹೆಸರಿಸುವ ರೂಢಿ ಇದೆ. ಆದರೆ ಇಲ್ಲಿ 'ಶುದ್ಧ ನವೀನ ಪಂಚಮಿ' ಎಂದಿದೆ. ಇಲ್ಲಿ ಏನೋ ಪಾಠದೋಷವಿದೆ ಎಂಬುದು ಖಾತ್ರಿ. ಏಕೆಂದರೆ 'ಶುದ್ಧನವೀನ ಪಂಚಮಿ' ಎಂಬುದಿಲ್ಲ, ಅದು 'ಶುದ್ಧವಿಹೀನ ಪಂಚಮಿ' ಎಂದಿರಬೇಕು. ಆಗ ಅದಕ್ಕೆ ಅಸಿತ, ಕೃಷ್ಣ, ಬಹುಳ ಪಂಚಮಿ ಎಂಬ ಅರ್ಥ ಬರುತ್ತದೆ. ಅಸಿತ ಅಥವಾ ಕೃಷ್ಣ ಅಥವಾ ಬಹುಳ ಪಂಚಮಿ ಎಂದು ಬಳಸಿದರೆ ಸಾಂಗತ್ಯದ ಎರಡನೇ ಸಾಲಿನಲ್ಲಿ ದ್ವಿತೀಯಾಕ್ಷರ ಪ್ರಾಸಕ್ಕೆ ಚ್ಯುತಿ ಬರುತ್ತದೆಂದು ಕನಕದಾಸರು 'ಶುದ್ಧವಿಹೀನ' (ಅಂದರೆ ಅಶುದ್ಧವಾದದ್ದು) ಅರ್ಥಾತ್ ಬಹುಳ ಪಂಚಮಿ ಎಂದು ಅರ್ಥ ಬರುವಂತೆ ಶಬ್ದವನ್ನು ಟಂಕಿಸಿದ್ದಾರೆ. ಹೀಗೆ ಹೊಸ ಶಬ್ದಗಳನ್ನು ಸಮಾಸ ಪದಗಳನ್ನು ಟಂಕಿಸುವುದರಲ್ಲಿ ಕನಕದಾಸರು ಎತ್ತಿದಕೈ. ಉದಾಹರಣೆಗೆ ಮೋಹನ ತರಂಗಿಣಿಯಲ್ಲಿ ಗಂಗಾಧರ ಎಂಬುದಕ್ಕೆ 'ಮಡುದಲೆಯ' ಎಂದೂ, ಚಂದ್ರಶೇಖರ ಎಂಬುದಕ್ಕೆ 'ಹೆರೆದಲಗ' ಎಂದೂ ಪೂರ್ಣಚಂದ್ರ ಎನ್ನುವದಕ್ಕೆ



ನೆರೆವೆರೆ (<ನೆರೆ+ಪೆರೆ=ತುಂಬುಚಂದಿರ) ಎಂದೂ ಹೊಸದಾಗಿ ಟಂಕಿಸಿರುವುದನ್ನು ಕಾಣಬಹುದು. ಬಹುಶಃ ಪ್ರತಿಕಾರ 'ಶುದ್ಧವಿಹೀನ' ಎಂಬುದನ್ನು 'ಶುದ್ಧನವೀನ' ಇರಬಹುದೆಂದು ಗ್ರಹಿಸಿಕೊಂಡು ಬರೆದಿರಬಹುದು. ಆದ್ದರಿಂದ 'ಮಾಘ ಶುದ್ಧವಿಹೀನ ಪಂಚಮಿ' ಎಂಬ ಪಾಠ ಸೂಕ್ತವಾದದ್ದು, ಪ್ರಸ್ತುತವಾದದ್ದು. ಅಷ್ಟೇ ಅಲ್ಲದೆ 'ಭಾನುವುದಯದ ಸ್ವಾತಿಯ ನಕ್ಷತ್ರದೆ' ಎಂಬುದನ್ನೂ ಕೂಡ ಕನಕದಾಸರು ತೂಕ ಮಾಡಿ ಇಟ್ಟಿದ್ದಾರೆ. ಏಕೆಂದರೆ ತಡವಾದರೆ ಅದು ವಿಶಾಖಾ ನಕ್ಷತ್ರವಾಗಿ ಬಿಡುತ್ತದೆ. ಅದಕ್ಕೋಸ್ಕರವೇ 'ಭಾನುವುದಯದ' ಎಂಬ ಪ್ರಯೋಗವಿರುವುದು. ಈ ಎಲ್ಲ ವಿವರದ ಪ್ರಕಾರ ಅನಿರುದ್ಧನ ಜನನ ಕಾಲ ೧೫–೨–೧೪೯೫ ಭಾನುವಾರ ಸ್ವಾತಿಯ ನಕ್ಷತ್ರ ಎಂಬುದು ಖಚಿತವಾಗುತ್ತದೆ. ಆದ್ದರಿಂದ ಕನಕದಾಸರ ಜನ್ಮದಿನ ಫೆಬ್ರವರಿ ೧೫, ೧೪೯೫ ಎಂದು ಗ್ರಹಿಸಿಕೊಳ್ಳಬಹುದು. ಕೃಷ್ಣದೇವರಾಯ ಸತ್ತಾಗ ಇವರಿಗೆ ೩೫ ವರ್ಷವಾಗಿತ್ತು.

ಕನಕದಾಸರ ಜನನ ಖಚಿತವಾದ ಮೇಲೆ ಮರಣ ಎಂದು ಎಂಬ ಪ್ರಶ್ನೆ ಮೂಡುತ್ತದೆ. ೧೫೩೯ರಲ್ಲಿ ವ್ಯಾಸರಾಯರು, ೧೫೬೪ರಲ್ಲಿ ಪುರಂದರದಾಸರು ತೀರಿಕೊಂಡ ಮೇಲೂ ಕನಕದಾಸರು ಬದುಕಿದ್ದರು ಎಂಬುದಕ್ಕೆ ಕೀರ್ತನೆಗಳಲ್ಲಿನ ಮಾಹಿತಿ ಪುಷ್ಟಿ ನೀಡುತ್ತದೆ. ೧೫೬೫ರಲ್ಲಿ ರಕ್ಕಸತಂಗಡಿ ಯುದ್ಧವಾದ ಮೇಲಿನ ಸಮಾಜದ ಸ್ಥಿತಿಯನ್ನು, ಕೃಷ್ಣದೇವರಾಯನ ತರುವಾಯದವರ ದುರಾಡಳಿತದ ದೆಸೆಯಿಂದಾಗಿ ಸಮಾಜ ಕಟ್ಟು ಹರಿದ ಪಂಜಾಗಿ, ದುರಾಚಾರಿಗಳ ಆಡುಂಬೊಲವಾಗಿ ಪತನಮುಖಿಯಾದುದನ್ನು 'ಕಲಿ ಹೆಚ್ಚಿತು', 'ಕಣಿಯ ಹೇಳಬಂದೆ' ಮೊದಲಾದ ಕೀರ್ತನೆಗಳಲ್ಲಿ ದಾಖಲಿಸಲಾಗಿದೆ. ಆದ್ದರಿಂದ ಪುರಂದರದಾಸರು ಸತ್ತ ಮೇಲೆ ಎಷ್ಟು ವರ್ಷಗಳ ಕಾಲ ಬದುಕಿದ್ದರು ಎಂಬ ಪ್ರಶ್ನೆ ಮುಖ್ಯವಾಗುತ್ತದೆ.

ಈ ಬಗ್ಗೆ ಬೆಳಕು ಚೆಲ್ಲುವ ಒಂದು ಐತಿಹ್ಯವಿದೆ. ರಾಜಾಸ್ಥಾನದ ರಾಣಾ ಪ್ರತಾಪ್‌ಸಿಂಗ್ ಮುಸ್ಲಿಮರ ದಾಳಿಯನ್ನೆದುರಿಸಲು ದಕ್ಷಿಣದೇಶಗಳ ರಾಜರ ಕುಮ್ಮಕ್ಕು ಕೇಳಿದ್ದನೆಂದೂ, ಮುಸ್ಲಿಮರ ಸತತ ದಾಳಿಯಿಂದ ನೊಂದು ಬೆಂದು ರಾಜಾಸ್ಥಾನದಿಂದ ಓಡಿ ಬಂದ ಲಂಬಾಣಿ ಜನಾಂಗದವರು ಉತ್ತರ ಕರ್ನಾಟಕದಲ್ಲಿ ನೆಲಸಿದ್ದು ರಾಜಾಸ್ಥಾನಕ್ಕೂ ಕರ್ನಾಟಕಕ್ಕೂ ಒಂದು ಬಗೆಯ ಅವ್ಯಕ್ತನಂಟು ಉಂಟಾಗಿತ್ತೆಂದೂ, ಕನಕದಾಸರು ಗಯಾ, ಮಥುರಾ, ಕಾಶಿ, ದ್ವಾರಕಾಗಳಿಗೆ ತೀರ್ಥಯಾತ್ರೆಗೆ ಹೋಗಿದ್ದಾಗ ಕನಕದಾಸರ ಹಿರಿಮೆ ರಾಣಾಪ್ರತಾಪಸಿಂಗನಿಗೂ

ಗೊತ್ತಾಗಿ ಪರಸ್ಪರ ಆದರಾಭಿಮಾನ ಸ್ನೇಹ ಬೆಳೆದಿತ್ತೆಂದೂ, ಆದ್ದರಿಂದಲೇ ಕನಕದಾಸರು ಜೀವ ಬಿಡುವ ಮುನ್ನ ರಾಣಾಪ್ರತಾಪಸಿಂಗನ ಕನಸಿನಲ್ಲಿ ಕಾಣಿಸಿಕೊಂಡು ಜೀವ ತೊರೆಯುತ್ತಿದ್ದೇನೆ ಎಂದು ಹೇಳಿದಂತಾಯಿತೆಂದೂ, ಸಂತಶಿರೋಮಣಿಯೊಬ್ಬ ತನ್ನ ಕನಸಿನಲ್ಲಿ ಕಾಣಿಸಿಕೊಂಡು ಜೀವ ತೊರೆಯುವ ಸುದ್ದಿಯನ್ನು ತನಗೆ ಮುಟ್ಟಿಸಿದ್ದು ಸಾಮಾನ್ಯ ಸಂಗತಿಯಲ್ಲವೆಂದೂ ಬಗೆದು, ರಾಣಾಪ್ರತಾಪ್‌ಸಿಂಗ್ ಕೂಡಲೇ ತನ್ನ ಪೌಜೀದಾರನೊಬ್ಬನನ್ನು ನಿಖರ ಸುದ್ದಿಗಾಗಿ ಕರ್ನಾಟಕದ ಕಾಗಿನೆಲೆಗೆ ಕಳಿಸಿದನೆಂದೂ, ಪೌಜೀದಾರ ವಾಪಸ್ಸು ಹೋಗಿ ಅದು ಸತ್ಯವೆಂದು ತಿಳಿಸಿದಾಗ ಕಣ್ಣು ಹನಿಗೊಂಡ ಪ್ರತಾಪ್‌ಸಿಂಗ್ ಕೃತಜ್ಞತಾ ಪೂರ್ವಕವಾಗಿ ಜಯಪುರದ ಅರಮನೆಯ ಪ್ರದೇಶದಲ್ಲಿ 'ಕನಕಬೃಂದಾವನ' ಸ್ಥಾಪಿಸಿದನೆಂದೂ ಅಲ್ಲಿಯ ಸ್ಥಳೀಯ ಜನರು ಹೇಳುತ್ತಾರಂತೆ. ಅಲ್ಲಿಗೆ ಹೋಗಿ ಬಂದಿರುವ, ಕನಕಬೃಂದಾವನ ಎಂಬ ನಾಮ ಫಲಕವನ್ನು ನೋಡಿ ಬಂದಿರುವ ಧಾರವಾಡದ ನನ್ನ ಪರಿಚಿತರೊಬ್ಬರು ನನಗೆ ಇದನ್ನು ಹೇಳಿದರು. ನಾನಿನ್ನೂ ಅಲ್ಲಿಗೆ ಹೋಗಲು ಸಾಧ್ಯವಾಗಿಲ್ಲ. ಏನಾದರಾಗಲಿ ರಾಜಾಸ್ಥಾನದ ಜನಸಾಮಾನ್ಯರ ನಾಲಗೆಯ ಮೇಲೆ ಕರ್ನಾಟಕದ ಕನಕದಾಸರ ಹೆಸರು ನಲಿಯಬೇಕಾದರೆ, ಕನಕದಾಸರು ಅಲ್ಲಿಯ ಸಂತರೊಡನೆ ಸುತ್ತಾಡಿ ಜನಪ್ರೀತಿಯನ್ನು ಗಳಿಸಿಕೊಂಡಿರ ಬಹುದು, ಜನಮನವನ್ನು ಸೆರೆಗೊಂಡಿರಬಹುದು. (ರಾಣಾಪ್ರತಾಪ್‌ಸಿಂಗ್‌ರ ಕನಸಿನಲ್ಲಿ ಪ್ರಾಣ ಬಿಡುವ ಸೂಚನೆ ನೀಡಿದ್ದರ ಬಗೆಗೆ ಯಾರೂ ಅನುಮಾನ ಪಡಬೇಕಾಗಿಲ್ಲ. ಸ್ವಾಮಿ ವಿವೇಕಾನಂದರು ಪ್ರಾಣಬಿಟ್ಟಾಗ ಮದ್ರಾಸಿನಲ್ಲಿದ್ದ ಅವರ ನಿಷ್ಠ ಕಾರ್ಯಕರ್ತ ಅಳಸಿಂಗಾಚಾರ್ಯರ ಕನಸಿನಲ್ಲಿ ಕಾಣಿಸಿಕೊಂಡು 'ಪ್ರಾಣ ತೊರೆದುಬಿಟ್ಟೆ' ಎಂದು ಹೇಳಿದ್ದರ ಪ್ರಸ್ತಾಪ ವಿವೇಕಾನಂದರ ಸಂಪುಟದಲ್ಲಿ ದೊರಕುತ್ತದೆ)

ರಾಣಾಪ್ರತಾಪ್‌ಸಿಂಗ್ ೧೫೭೨ರಿಂದ ೧೫೯೭ರವರೆಗೆ ರಾಜ್ಯವಾಳಿದನು. ಕನಕದಾಸರು ೯೮ ವರ್ಷಗಳ ಕಾಲ ಜೀವಿಸಿದ್ದರು ಎಂಬ ಪರಂಪರಾಗತ ನಂಬಿಕೆ ಜನರಲ್ಲಿರುವುದರಿಂದ, ಕನಕದಾಸರನ್ನು ಕುರಿತು ಡೊಳ್ಳಿನವರು ಹಾಡುವ ಹಾಡುಗಳಲ್ಲಿಯೂ ಹಾಗೆಯೇ ಇರುವುದರಿಂದ ೧೫೯೩–೯೪ರಲ್ಲಿ ಅವರು ಇಹಲೋಕ ತ್ಯಜಿಸಿರಬಹುದು. ಆ ಅವಧಿಯಲ್ಲೇ ರಾಣಾಪ್ರತಾಪ್‌ಸಿಂಗ್ ಕನಕದಾಸರ ನೆನಪಿಗಾಗಿ 'ಕನಕಬೃಂದಾವನ'ವನ್ನು ಸ್ಥಾಪಿಸಿರಬೇಕು ಎಂದು ಊಹಿಸಬಹುದು. ಒಟ್ಟಿನಲ್ಲಿ ಅವರ ಜನನ ಮರಣದ ಕಾಲವನ್ನು ೧೪೯೫–೧೫೯೩ ಎಂದಿಟ್ಟುಕೊಳ್ಳಬಹುದು.



೪

ಕರ್ನಾಟಕ ಸಂಗೀತಕ್ಕೆ ಕನಕದಾಸರ ಕೊಡುಗೆ ಏನೂ ಇಲ್ಲವೆ ಎಂಬುದರ ಬಗೆಗೆ ಕೊಂಚ ಚಿಂತನೆ ಅಗತ್ಯ. ವಿದ್ವಾಂಸರೊಬ್ಬರು 'ಕೃಷ್ಣದೇವರಾಯನ ಕಾಲದಲ್ಲಿ ಕರ್ನಾಟಕ ಸಂಗೀತದ ಪ್ರಾಚುರ್ಯಕ್ಕೆ ವ್ಯಾಸರಾಜರು ಮತ್ತು ಅವರ ಶಿಷ್ಯ ಪುರಂದರ ದಾಸರೇ ಕಾರಣ' ಎಂದು ಹೇಳಿದ್ದಾರೆ. ಆದರೆ ಕನಕದಾಸರೂ ಕೂಡ ವ್ಯಾಸರಾಯರ ಶಿಷ್ಯರೇ ಅಲ್ಲವೇ? ಅವರ ಕೊಡುಗೆ ಇಲ್ಲವೆ? ಎಂದು ಯೋಚಿಸುವ ಗೊಡವೆಗೂ ಹೋಗಿಲ್ಲ. ಅಂದರೆ ಅವರ ದೃಷ್ಟಿಯಲ್ಲಿ ಪುರಂದರ ದಾಸರು ಮಾತ್ರ ವಾಗ್ಗೇಯಕಾರರು, ಕನಕದಾಸರಲ್ಲ ಎಂಬ ಧ್ವನಿ ಇದ್ದಂತಿದೆ. ಇದಕ್ಕೆ ಆಧಾರ ತಂಜಾವೂರಿನ ತುಳಜಾಜಿ ತನ್ನ 'ಸಂಗೀತ ಸಾರಾಮೃತ' ಎಂಬ ಗ್ರಂಥದಲ್ಲಿ ಪುರಂದರದಾಸರ 'ಹಸುಗಳು ಕರೆವ ದನಿ' ಎಂದು ಮೊದಲಾಗುವ ಸುಳಾದಿಯನ್ನು ಲಕ್ಷ್ಯವನ್ನಾಗಿ ಉದಾಹರಿಸಿದ್ದಾನೆ ಎಂಬುದೇ ಆಗಿರಬಹುದು. ಆದರೆ ಆ ಸುಳಾದಿ ಮೊದಲು ಯಾರದು ಎಂಬುದು ನಿರ್ಧಾರವಾಗಬೇಕು. ಏಕೆಂದರೆ ೧೭ನೇ ಶತಮಾನದ ಆದಿಭಾಗಕ್ಕೆ ಸೇರಿದ್ದ 'ಗ್ರಂಥಲಿಪಿ'ಯಲ್ಲಿರುವ ಕನಕದಾಸರ ೧೭೫ ಕೀರ್ತನೆಗಳ ಓಲೆಗರಿಕಟ್ಟು ದೊರಕಿದೆ. ಆ ೧೭೫ರಲ್ಲಿ ಸುಮಾರು ೧೫೦ ಕೀರ್ತನೆಗಳು, ಮುಂಡಿಗೆಗಳು ಸುಳಾದಿಗಳು, ಉಗಾಭೋಗಗಳು ಇಂದು ಪುರಂದರರ ಹೆಸರಲ್ಲಿ ವಿಜೃಂಭಿಸುತ್ತಿವೆ– ಅಂಕಿತ ಬದಲಾವಣೆಯ ಮೂಲಕ. ಹದಿನೆಂಟನೆಯ ಶತಮಾನದ ವಿಜಯದಾಸರ ಕಾಲದಲ್ಲಿ ಜರುಗಿದ್ದು ಈ ವಿರಾಡ್‌ರೂಪದ ವರ್ಗಾವಣೆ! ಆದ್ದರಿಂದ ಅದರ ನಿಜವಾದ ಹಕ್ಕುದಾರರು ಯಾರೆಂಬುದು ನಿಜವಾಗುವವರೆಗೂ ಅದನ್ನು ಒಂದು ಆಧಾರವೆಂದು ಗ್ರಹಿಸುವುದು ತಪ್ಪಾಗುತ್ತದೆ. ಮೇಲಾಗಿ ಲಕ್ಷ್ಯಕ್ಕೆ ಆರಿಸಿ ಕೊಂಡಾಕ್ಷಣ, ಅವರು ಶಾಸ್ತ್ರೀಯ ಸಂಗೀತ ವಿದ್ವಾಂಸರು ಎಂದು ಗ್ರಹಿಸುವುದೂ ತಪ್ಪಾಗುತ್ತದೆ.

ಪುರಂದರದಾಸರಾಗಲೀ, ಕನಕದಾಸರಾಗಲೀ ಸಂಗೀತ ಕೃತಿಗಳನ್ನು ರಚಿಸಿಲ್ಲ. ಗುರುಮುಖೇನ ಶಾಸ್ತ್ರೀಯ ಸಂಗೀತವನ್ನು ಅಭ್ಯಾಸ ಮಾಡಿದವರು ಎಂಬುದಕ್ಕೆ ಉಪಲಬ್ಧ ಆಧಾರವಿಲ್ಲ. ಆದರೆ ಇಷ್ಟನ್ನು ಹೇಳಬಹುದು. ಸಂಗೀತದ ಒಳಹೊರಗನ್ನು ಬಲ್ಲವರು; ಸಂಗೀತದ ತುಡಿತವನ್ನು ತಮ್ಮ ನಾಡಿಮಿಡಿತವನ್ನಾಗಿ ಮಾಡಿಕೊಂಡಿದ್ದವರು. ಸಾಹಿತ್ಯಸಂಗೀತಗಳ ಗುಂಗಿನಿಂದ ಜನಸಮೂಹದ ಮನಸ್ಸನ್ನು ಸೆರೆ ಹಿಡಿದವರು; ಭಕ್ತಿಯ ಹೊಳೆಯಲ್ಲಿ ಮೀಯುವಂತೆ ಪ್ರೇರೇಪಿಸಿದವರು; ಆತ್ಮವಿಶ್ವಾಸವನ್ನು ಮೂಡಿಸಿದವರು.

ಅದರಲ್ಲೂ ಕನಕದಾಸರು ಜನಪದ ವಾದ್ಯ, ಗೀತ, ನರ್ತನಗಳನ್ನು ಶ್ವಾಸೋಚ್ಛ್ವಾಸವನ್ನಾಗಿ ಮಾಡಿಕೊಂಡು ಬೆಳೆದವರು. ಯಕ್ಷಗಾನ ಬಯಲಾಟಗಳಲ್ಲಿ ಹಾಡಿ ಕುಣಿದು ಕುಪ್ಪಳಿಸಿದವರು. ಅವರಿಗೆ ಸಂಗೀತದ ಗಂಧವೇ ಗೊತ್ತಿಲ್ಲವೆಂಬಂತೆ ಕಿಗ್ಗಣ್ಣಿನಲ್ಲಿ ನೋಡುವುದಗಲೀ, ಅಲಕ್ಷಿಸುವುದಾಗಲೀ ಸ್ವಸ್ಥ ನಿಲುವು ಎನ್ನಿಸುವುದಿಲ್ಲ.

ಕನಕದಾಸರ ಮೋಹನತರಂಗಿಣಿ ಕೃತಿಯಲ್ಲಿ ಸಂದರ್ಭಕ್ಕನುಗುಣವಾಗಿ ವಾದ್ಯವಿಶೇಷಗಳ ಜಾತ್ರೆಯೇ ಜರುಗಿರುವುದನ್ನು ಕೆಳಗಿನ ಉದಾಹರಣೆಗಳಿಂದ ತಿಳಿದುಕೊಳ್ಳಬಹುದು–

**ಹಸ್ತಿವಾವುಜ ವೀಣೆ ಮದ್ದಳೆ ರಾವಣ**
**ಹಸ್ತ ಕಿನ್ನರಿ ಜಂತ್ರವುಡುಕು**
**ದುಸ್ತರ ಸ್ವರ ಮಂಡಲ ಮುಖ್ಯ ಸಕಲ ವಿ**
**ದ್ಯಾ ಸ್ತ್ರೀಯರಿರ್ದರಿಕ್ಕೆಲದಿ॥**

**ತಾಳುಮದ್ದಳೆ ಪಾವುಜ ಶ್ರುತಿ ಮುಖವೀಣೆ**
**ಸಾಳಂಗ ಶುದ್ಧ ಗಾನೆಯರ**
**ಮೇಳ ನಟ್ಟುವ ನಾನಾ ವಿದ್ಯೆಗಳ ಗಟ್ಟಿ**
**ವಾಳರ ಮನೆಗಳೊಪ್ಪಿದವು॥**

**ವರ ರುದ್ರವೀಣೆ ಧನುರ್ವೀಣೆ ಜಂತ್ರ ತುಂ**
**ಬುರುವೀಣೆ ಕೂರ್ಮವೀಣೆಗಳ**
**ಸ್ವರಮಂಡಲ ಮುಖ್ಯ ತಂತ್ರೀವಾದ್ಯದ ಹೆಣ್ಣು**
**ನೆರೆದುದು ಕುವರಿಯೋಲಗದಿ॥**

ಹಸ್ತಿವಾವುಜ, ವೀಣೆ, ಮದ್ದಳೆ, ರಾವಣಹಸ್ತ, ಕಿನ್ನರಿ, ಜಂತ್ರ, ಉಡುಕು, ದುಸ್ತರ ಸ್ವರಮಂಡಳ, ತಾಳಮದ್ದಳೆ, ಶ್ರುತಿ, ಮುಖವೀಣೆ, ರುದ್ರವೀಣೆ, ಧನುರ್ವೀಣೆ, ತುಂಬುರುವೀಣೆ, ಕೂರ್ಮವೀಣೆಗಳ ಪ್ರಸ್ತಾಪದಿಂದ ಕನಕದಾಸರಗಿದ್ದ ಸಂಗೀತದ ನಿಕಟ ಪರಿಚಯ ವೇದ್ಯವಾಗುತ್ತದೆ. ಇಷ್ಟೇ ಅಲ್ಲ, ಅವರು ಹೆಸರಿಸಿರುವ ರಾಗಗಳು ಹಾಗೂ ಲಕ್ಷಣಾಂಶಗಳನ್ನು ಕೆಳಗಿನ ಉದಾಹರಣೆಗಳಿಂದ ಗ್ರಹಿಸಿಕೊಳ್ಳಬಹುದು:



**ಆ ಸಮಯದಿ ತಾಳ ದಂಡಿಗೆ ವಿಡಿದು ಸು**
**ವಾಸಿನಿಯರು ಬಂದು ನಿಂದು**
**ದೇಶಾಕ್ಷಿ ನಾರಾಯಣಿ ಘೂರ್ಜರಿಯಿಂ ರ**
**ತೀಶನ ಪಿತನ ಪಾಡಿದರು॥**

**ತಾಳದಂಡಿಗೆವಿಡಿದಮಳ ಗಾನೆಯರು ಹಿಂ**
**ದೋಳ ವಸಂತರಾಗದಲಿ**
**ಆಳಾಪಗೈದುತ್ಸವದಿ ಪಾಡಿದರು ಗೋ**
**ಪಾಲಕೃಷ್ಣನ ಮುದ್ರಿಕೆಯ॥**

**ಆಯತವಿಡುವು ಸುಸ್ವರ ಷಡ್ಜ ಪಂಚಮ**
**ಸ್ಥಾಯಿ ಸಂಚರ ಠಾಯೆ ನೇಮ**
**ಬಾಯಿದೆರೆಯಿನಾಣೆಯಾಯ ತಪ್ಪದ ಗೀತ**
**ಗಾಯಕಿಯರುಗಳೊಪ್ಪಿದರು॥**

**ಮೇಳವ ಮಾಡಿ ದಂಡಿಗೆವಿಡಿವರು ಶುದ್ಧ**
**ಸಾಳಗ ಸಂಕೀರ್ಣ ವಿಧದಿ**
**ಆಳಾಪ ಠಾಯೆ ನೇಮಗಳಿಂದ ನೂರೆಂಟು**
**ತಾಳಗೀತೆಗಳ ಪಾಡಿದರು॥**

**ನಾರಾಣಿ ದೇಶಾಕ್ಷಿ ಗುರ್ಜರಿ ದೇವಗಾಂ**
**ಧಾರಿ ಗುಂಡಕ್ರೀ ವಸಂತ**
**ಆರಭಿ ಸಾಮಂತ ಮಲಹರಿಯಿಂದೆ ಕೈ**
**ವಾರಿಸಿ ಖಳನ ಪಾಡಿದರು॥**

ಅವರ ಉದಯರಾಗವೊಂದರಲ್ಲಿ ದಾಖಲಾಗಿರುವ ಕೆಳಗಿನ ವಿವರ ನೋಡಬಹುದು–

**ತಾಳದಂಡಿಗೆವಿಡಿದು ತುಂಬುರು ನಾರದರು ಭೂ**
**ಪಾಳ ದೇಶಾಕ್ಷಿ ನಾರಾಯಣಿ ಗುಜ್ಜರಿ**

**ಮಾಳವಿ ಶ್ರೀದೇವಿ ಗಾಂಧಾರಿ ಮಲಹರಿ**
**ಸಾಳಗವು ಸೌರಾಷ್ಟ್ರ ಗುಂಡಕ್ರಿಯಾ ಲಲಿತ**
**ಸುಳಾದಿಯಲಿ ನಾಮ ಕೀರ್ತನೆಗಳ ಪಾಡಿ**
**ಮೇಳೈಸಿ ವಾದ್ಯ ನೃತ್ಯಗಳಾಡಿದರು**

ಮೇಲೆ ಉಕ್ತವಾಗಿರುವ ಸಂಗೀತಕ್ಕೆ ಸಂಬಂಧಪಟ್ಟ ಆಯತ, ವಿಡುಪು, ಸುಸ್ವರ, ಷಡ್ಜ, ಪಂಚಮ, ಸ್ಥಾಯಿ, ಸಂಚರ, ತಾಯೆ, ನೇಮ ಮೊದಲಾದ ಪಾರಿಭಾಷಿಕ ಶಬ್ದಗಳು ಕನಕದಾಸರಿಗೆ ಗಾಢವಾದ ಸಂಗೀತಜ್ಞಾನವಿದ್ದಿತು ಎಂಬುದನ್ನು ರುಜುವಾತುಪಡಿಸುತ್ತವೆ. ಮೇಲಾಗಿ 'ಭೂಪಾಳಿ, ದೇಶಾಕ್ಷಿ, ನಾರಾಯಣಿ, ಗುಜ್ಜರಿ, ಮಾಳವಿ, ಶ್ರೀದೇವಿ, ಗಾಂಧಾರಿ, ಮಲಹರಿ, ಸಾಳಗ, ಸೌರಾಷ್ಟ್ರ, ಗುಂಡಕ್ರಿಯಾ, ಹಿಂದೋಳ, ವಸಂತ, ದೇವಗಾಂಧಾರಿ, ಆರಭಿ, ಸಾಮಂತ, ರಾಮಕ್ರಿಯೆ ಎಂಬ ರಾಗಗಳ ಪ್ರಸ್ತಾಪದಿಂದ ಅವರಿಗಿರುವ ಸಂಗೀತದ ಸ್ವಾನುಭವ ಸಾಬೀತಾಗುತ್ತದೆ. ಇಷ್ಟೇ ಅಲ್ಲದೆ, ರಾಗವರ್ಗೀಕರಣದ ಪಾರಿಭಾಷಿಕ ಶಬ್ದಗಳಾದ ಶುದ್ಧ, ಸಾಳಗ, ಸಂಕೀರ್ಣ ಎಂಬವುಗಳ ಪ್ರಸ್ತಾಪ ಸಂಗೀತದಲ್ಲಿ ಅವರಿಗಿರುವ ಆಳವಾದ ಜ್ಞಾನವನ್ನು ಸೂಚಿಸುತ್ತದೆ. ಅಂದರೆ ಶುದ್ಧ ವರ್ಗದ ರಾಗಗಳು, ಸಾಳಗ ವರ್ಗದ ರಾಗಗಳು, ಸಂಕೀರ್ಣವರ್ಗದ ರಾಗಗಳನ್ನು ಹಾಡಿದರು ಎಂದು ಇದರಿಂದ ಗೊತ್ತಾಗುತ್ತದೆ. ಬಹುಶಃ ೧೫–೧೬ನೇ ಶತಮಾನಗಳಲ್ಲಿ ರೂಢಿಯಲ್ಲಿದ್ದ ರಾಗವರ್ಗೀಕರಣ ಪದ್ಧತಿಯನ್ನು ಇದು ಸೂಚಿಸುತ್ತದೆ. ಶುದ್ಧ ಎಂದರೆ ಹಿಂದಿನಿಂದ ನಿಜರೂಪ ಉಳಿಸಿಕೊಂಡು ಬಂದ, ಕಲಬೆರಕೆಗೊಳ್ಳದ ರಾಗಗಳು ಎಂದೂ; ಸಾಳಗ ಎಂದರೆ ಬೇರೆ ರಾಗದ ಛಾಯೆಯುಳ್ಳವು ಎಂದೂ, ಸಂಕೀರ್ಣ ಎಂದರೆ ಎರಡು ಮೂರು ರಾಗಗಳ ಕಲಸುಮೇಲೋಗರ ರಾಗಗಳೆಂದೂ ಅರ್ಥವಿರಬಹುದು. ಕನಕದಾಸರಲ್ಲಿ ಕಾಣುವ ಹಾಗೆ ಪುರಂದರರಲ್ಲಿ ಹಲವಾರು ಬಗೆಯ ವಾದ್ಯವಿಶೇಷಗಳ ಪ್ರಸ್ತಾಪವಾಗಲೀ, ರಾಗವರ್ಗೀಕರಣ ಪದ್ಧತಿಯ ಪ್ರಸ್ತಾಪವಾಗಲೀ, ಸಂಗೀತದ ಲಕ್ಷಣಾಂಶಗಳನ್ನು ಕುರಿತ ಪಾರಿಭಾಷಿಕ ಶಬ್ದಗಳ ಪ್ರಸ್ತಾಪವಾಗಲೀ ಕಂಡು ಬರುವುದಿಲ್ಲ.

ಕನಕದಾಸರ ಕೀರ್ತನೆಯೊಂದರಲ್ಲಿ ಬರುವ "ಸ್ವರಭೇದವಿಲ್ಲದಿಹ ಸಂಗೀತ ವಿಂಗೀತ" ಎಂಬ ಮಾತು ಅವರಿಗೆ ತಲಸ್ಪರ್ಶಿಯಾದ ಸಂಗೀತಜ್ಞಾನವಿತ್ತು ಎಂಬುದನ್ನು ಸ್ಪಷ್ಟಪಡಿಸುತ್ತದೆ. ಇದರ ಜೊತೆಗೆ ಪ್ರಸಿದ್ಧ ಸಂಗೀತ ವಿದ್ವಾಂಸರಾದ ಡಾ॥ ಆರ್.ಸತ್ಯಾನಾರಾಯಣ ಅವರು ಹೇಳಿರುವ "ಕೃತಿಯ ಚೌಕಟ್ಟಿನಲ್ಲಿಯೇ



ಮುಂಡಿಗೆ ಎಂಬ ಹೊಸ ಪ್ರಕಾರವನ್ನು ಇಡೀ ಭಾರತೀಯ ಸಂಗೀತದಲ್ಲಿ ಪ್ರವೇಶ ಮಾಡಿಸಿದ ಯಶಸ್ಸು ಕನಕದಾಸರಿಗೆ ಸಲ್ಲುತ್ತದೆ" ಎಂಬ ಮಾತು ಮೇಲಿನ ಅಭಿಪ್ರಾಯವನ್ನು ಸಮರ್ಥಿಸುತ್ತದೆ. ಇಷ್ಟೆಲ್ಲ ವಿಪುಲವಾದ ಆಧಾರ ಗಳಿದ್ದರೂ ಸಹ ಕನಕದಾಸರನ್ನು ಲೆಕ್ಕಕ್ಕೇ ತೆಗೆದುಕೊಳ್ಳದೆ "ವಿಜಯನಗರ ಸಾಮ್ರಾಜ್ಯ ಕಾಲದಲ್ಲಿ ಕರ್ನಾಟಕ ಸಂಗೀತದ ಪ್ರಾಚುರ್ಯಕ್ಕೆ ವ್ಯಾಸರಾಯರು ಮತ್ತು ಅವರ ಶಿಷ್ಯ ಪುರಂದರದಾಸರೇ ಕಾರಣ" ಎಂಬ ಹೇಳಿಕೆ 'ಅರ್ಹರೊಬ್ಬರನ್ನು ಮೂಲ ವಿಗ್ರಹವನ್ನಾಗಿ ಮಾಡಿ ಮೂಲೆಯಲ್ಲಿ ಕೂಡಿಸಿ, ಮತ್ತೊಬ್ಬರನ್ನು ಉತ್ಸವಮೂರ್ತಿಯನ್ನಾಗಿ ಮಾಡಿ ಬೀದಿಬೀದಿಯಲ್ಲಿ ಮೆರವಣಿಗೆ ಮಾಡುವ' ಹುನ್ನಾರಿನಿಂದ ಕೂಡಿದೆಯೇ ವಿನಾ ಸಮಗ್ರದೃಷ್ಟಿಯ ಪ್ರಾಂಜಲ ಮನಸ್ಸಿನ ನಿಜನಿರೂಪಣೆಯ ಅಭಿಪ್ರಾಯ ಎನ್ನಿಸುವುದಿಲ್ಲ.

೫

ಕನಕದಾಸರು ಕೇವಲ ಕೀರ್ತನಕಾರರಲ್ಲ, ಕವಿಯೂ ಹೌದು; ಕೇವಲ ಕವಿಯಲ್ಲ, ಕಲಿಯೂ ಹೌದು. ಈ ಕಲಿ, ಕವಿ, ಕೀರ್ತನಕಾರ ಕನಕದಾಸರು ಕನ್ನಡ ಸಾಹಿತ್ಯಕ್ಕೆ ವಿಶಿಷ್ಟವಾದ ಕೊಡುಗೆಯನ್ನು ಕೊಟ್ಟಿರುವುದು ಎಲ್ಲರಿಗೂ ತಿಳಿದ ವಿಚಾರ. ಅವರ ಕೀರ್ತನೆಗಳ ಕಾವ್ಯಧರ್ಮ, ಸತ್ತ್ವ, ಪ್ರಯೋಗಶೀಲತೆ, ವೈಚಾರಿಕತೆ, ಜಾನಪದ ಸೊಗಡು ಮೊದಲಾದವುಗಳ ಬಗೆಗೆ ವಿಚಾರ ಮಾಡುವ ಮುನ್ನ ಅವರ ಕಾವ್ಯಗಳ ಬಗ್ಗೆ ಸಂಕ್ಷಿಪ್ತವಾಗಿ ವಿಚಾರ ಮಾಡುವುದು, ಪರಿಚಯಿಸುವುದು ವಿಹಿತ.

ಕನಕದಾಸರ 'ಹರಿಭಕ್ತಿಸಾರ' ಎಂಬ ಕೃತಿ ಅಧ್ಯಾತ್ಮಸಾಧನೆಯ, ದೈವಭಕ್ತಿ ಬೋಧನೆಯ ಸುಭಗಸುಂದರ ಶೈಲಿಯ ಚಿಕ್ಕ ಹಾಗೂ ಚೊಕ್ಕ ಕೃತಿ. ಪಂಡಿತ ಪಾಮರರ ಹೃದಯವನ್ನು ಆರ್ದ್ರಗೊಳಿಸುವ, ಭಗವದ್‌ಭಕ್ತಿ ಅಂಕುರವಾಗುವಂತೆ ಮಾಡುವ ಕೃತಿ. ಶಾಶ್ವತವಾದ ದೇವಾಧಿದೇವನ ಗುಣಗಾನ, ಅಶಾಶ್ವತವಾದ ದೇಹದ ಅವಸಾನ, ಇರುವಷ್ಟು ಕಾಲದಲ್ಲಿ ತಾನು ಏರಬೇಕಾದ ಅನುಭಾವದ ಸೋಪಾನಗಳನ್ನು ತುಂಬಿದ ತೊರೆಯಂತೆ ಗಂಭೀರವಾಗಿ ಹೇಳಿರುವ ರೀತಿ ಚಿತ್ತಾಕರ್ಷಕ.

**ದೀನ ನಾನು ಸಮಸ್ತ ಲೋಕಕೆ**
**ದಾನಿ ನೀನು ವಿಚಾರಿಸಲು ಮತಿ**
**ಹೀನ ನಾನು ಮಹಾಮಹಿಮ ಕೈವಲ್ಯಪತಿ ನೀನು**

**ಏನ ಬಲ್ಲೆನು ನಾನು ನೆರೆ ಸು**
**ಜ್ಞಾನ ಮೂರುತಿ ನೀನು ನಿನ್ನ ಸ**
**ಮಾನರುಂಟೇ ದೇವ ರಕ್ಷಿಸು ನಮ್ಮನನವರತ॥**

ಎಂಬ ಪದ್ಯವನ್ನು ಒಮ್ಮೆ ಓದಿದವರು ಮತ್ತೆ ಮತ್ತೆ ಮನಸ್ಸಿನಲ್ಲಿ ನೆನೆಸಿಕೊಂಡು ಗುನುಗುನಿಸದಿರರು. ಹಾಗೆಯೇ ಪ್ರತಿಯೊಬ್ಬ ಮನುಷ್ಯನಲ್ಲಿಯೂ ಪರಮಾತ್ಮನಿದ್ದಾನೆಂದೂ, ಅವನಿರುವ ತನಕ ದೇಹದ ಚಟುವಟಿಕೆ ಇರುತ್ತದೆಂದೂ, ಅವನು ಕಾಲ್ತೆಗೆದ ತಕ್ಷಣ ದೇಹಚಟುವಟಿಕೆ ನಿಲ್ಲುತ್ತದೆಂದೂ ದೇಹದ ಅನಿತ್ಯತೆಯನ್ನು ಮನಗಾಣಿಸುವ "ನೆಂಟ ನೀನಿರ್ದಗಲಿದೊಡೆ ಒಣ ಹೆಂಟೆಯಲಿ ಮುಚ್ಚುವರು" ಎಂಬುದನ್ನು ಓದಿದ ರಾಜಸಿಕ ತಾಮಸಿಕ ಜನರಲ್ಲೂ 'ಇದ್ದಷ್ಟು ಕಾಲ ಸಾತ್ವಿಕ ಮಾರ್ಗದಲ್ಲಿ ಹೋಗೋಣ' ಎಂಬ ಭಾವನೆ ಅಂಕುರಿಸಲು ಸಾಧ್ಯ.

ಅವರ 'ನಳಚರಿತ್ರೆ' ಎಂಬ ಕೃತಿ ಸರಳವಾಗಿ, ಬಿಟ್ಟ ಬಾಣದಂತೆ ನೇರವಾಗಿ ಪರಸ್ಪರ ನಿಷ್ಕಲ್ಮಶ ಪ್ರೇಮದ ಗುರಿಯತ್ತ ಸಾಗುವ, ಪರಸ್ಪರ ಪ್ರೇಮದಲ್ಲಿಯೇ ಸುಖಶಾಂತಿಯಿದೆ ಎಂದು ಸಾರುವ ಉತ್ತಮ ಕಾವ್ಯ. ಪಂಡಿತಪಾಮರರಿಬ್ಬರ ಮನಸ್ಸನ್ನು ಸೆರೆಹಿಡಿಯುವ ಮೋಹಕಶಕ್ತಿ ಅಭಿವ್ಯಕ್ತಿಯಲ್ಲಿ ಅಡಕಗೊಂಡಿದೆ. ಪ್ರಾಥಮಿಕ ಮಾಧ್ಯಮಿಕ ಶಾಲೆಯ ಮಕ್ಕಳೂ ಸಹ ಒಮ್ಮೆ ಓದಿದ 'ಅಡ್ಡ ಮೋರೆಯ ಗಂಟು ಮೂಗಿನ ಗಿಡ್ಡ ದೇಹದ' ಎಂಬ ಪದ್ಯವನ್ನು ಎಂದೆಂದೂ ಮರೆಯಲಾರರು. ಅಂಥ ಚಿತ್ರಕ ಶಕ್ತಿ ಅಭಿವ್ಯಕ್ತಿಯಲ್ಲಿದೆ.

ಇನ್ನು ಅವರ 'ರಾಮಧಾನ್ಯ ಚರಿತ್ರೆ' ಭರತಖಂಡದ ವರ್ಗವರ್ಣ ವ್ಯವಸ್ಥೆಯ ವಿರುದ್ಧ ಖಡ್ಗ ಝಳಪಿಸುವ, ಮೇಲುಕೀಳು ಜಾತಿ ವ್ಯವಸ್ಥೆಯ ಪೊಳ್ಳುತನವನ್ನು ಬಯಲು ಮಾಡುವ, ಧರಾಮರರು ಧರಾಧಮರಾಗಿ ವರ್ತಿಸದೆ ಶೂದ್ರರೊಡನೆ ಕೂಡಿ ಬಾಳಬೇಕೆಂಬ ರಾಮಸಂದೇಶವನ್ನು ಹೊತ್ತ ಅಣಕು ಮಹಾಕಾವ್ಯ ಎಂದರೆ ತಪ್ಪಾಗದು. "ದೇವರಿಗೆ ಪರಮಾನ್ನ ನೀ, ಮನುಜಾವಳಿಗೆ ಪಕ್ವಾನ್ನಮೀತನು, ನೀವು ಧರೆಯೊಳಗಿಬ್ಬರತಿ ಹಿತದಲಿ ಬಾಳುವುದು" ಎಂಬ ರಾಮನ ಬುದ್ಧಿವಾದ, ಬ್ರಾಹ್ಮಣ ಶೂದ್ರ ವೈಮನಸ್ಯಕ್ಕಿಂತ ಸಾಮರಸ್ಯವೇ ಸಮಾಜದ ಶಾಂತಿಸುಭಿಕ್ಷಕ್ಕೆ ಸೋಪಾನ ಎಂಬ ಸತ್ಯವನ್ನು ಪ್ರಚುರಪಡಿಸುವ ಕೃತಿ. ರಾಗಿ ತನ್ನನ್ನು ಬಾಯಿಗೆ ಬಂದ ಹಾಗೆ ಬೈದು ಹೀಯಾಳಿಸಿದ ನೆಣಗೊಬ್ಬಿನ ನೆಲ್ಲನ್ನು ಕೊನೆಯಲ್ಲಿ ಸಂತೈಸಲು ಹೋಗಬಾರದಿತ್ತು. ಆ ಸನ್ನಿವೇಶ ನಿರ್ಮಾಣವನ್ನು ಕೈಬಿಡಬೇಕಾಗಿತ್ತು ಎಂದು ಕೆಲವರಿಗೆ ಅನ್ನಿಸಬಹುದು. ಆದರೆ ಶತ್ರುವನ್ನೂ ಸಹ ಮಿತ್ರನನ್ನಾಗಿ



ಕಂಡು ಅವನ ಮನಃ ಪರಿವರ್ತನೆಗೆ ಪ್ರಯತ್ನಿಸಬೇಕು ಎಂಬ ಕನಕದಾಸರ ಪೂರ್ಣದೃಷ್ಟಿಗೆ ಅದು ಪೂರಕವಾಗಿದೆ.

ಉಪಲಬ್ಧವಿಲ್ಲದ ಅವರ 'ನೃಸಿಂಹಸ್ತವ' ಎಂಬ ಕೃತಿ ನರಸಿಂಹನನ್ನು ಕುರಿತ ಸ್ತೋತ್ರರೂಪೀ ಕೃತಿ ಎಂದು ಊಹಿಸಬಹುದು. ಇನ್ನು ಹೆಚ್ಚು ಹೇಳಲು ಸಾಧ್ಯವಿಲ್ಲ. ಆದರೆ ಒಮ್ಮೆ ಅದರ ಹಸ್ತಪ್ರತಿಯನ್ನು ನೋಡಿದವರಿದ್ದು (ಆರ್.ನರಸಿಂಹಾಚಾರ್ಯರು) ಆಮೇಲೆ ಅದು ಏನಾಯಿತು ಎಂಬುದು ಚಿದಂಬರ ರಹಸ್ಯವಾಗುಳಿದಿದೆ.

'ಮೋಹನ ತರಂಗಿಣಿ' ಕೃಷ್ಣ-ರುಕ್ಮಿಣಿಯರ, ರತಿ-ಮನ್ಮಥರ, ಉಷಾ-ಅನಿರುದ್ಧರ ಪ್ರೇಮಕಥೆಯ ಮೂಲಕ, ಪರಸ್ಪರ ಪ್ರೇಮ ವಿಶ್ವಾಸಗಳಲ್ಲೇ ಮನುಷ್ಯ ಸಮಾಜದ ಸುಖಶಾಂತಿ ಇರುವುದು ಎಂದು ರುಜುವಾತುಪಡಿಸುವ ಹಾಗೂ ಹರಿಹರ ಹಗರಣಕ್ಕೆ ಪರದೆ ಎಳೆಯುವಂತೆ ಹರಿಹರ ಮೈತ್ರಿಯನ್ನು ಸಾದರಪಡಿಸುವ ಮಹತ್ವಾಕಾಂಕ್ಷೆಯ ಕೃತಿ. ಶಿವನ ಭಕ್ತನಾದ ಬಾಣಾಸುರನ ಮಗಳು ಉಷೆಗೂ, ಕೃಷ್ಣನ ಮೊಮ್ಮಗನಾದ ಅನಿರುದ್ಧನಿಗೂ ವಿವಾಹವಾಗುವುದು ಹರಿಹರ ಮೈತ್ರಿಯನ್ನು ಸಾಂಕೇತಿಕವಾಗಿ ಸೂಚಿಸುವ ವಿಧಾನವಷ್ಟೆ. ಆದರೆ ಕೃತಿ ಅಷ್ಟಾದಶವರ್ಣನೆಯ ಅಷ್ಟಪದಿಯ ಹಿಡಿತಕ್ಕೆ ಒಳಗಾಗಿ ಕೆಲವು ಕಡೆ ಏಕತಾನತೆಯ ದೋಷಕ್ಕೆ ಗುರಿಯಾಗಿದ್ದರೂ- ಉದಾಹರಣೆಗೆ ಅನಿರುದ್ಧನ ನಗರಶೋಧನೆಯ ವರ್ಣನೆ, ಬೇಟೆ ವರ್ಣನೆ ಕೇವಲ ವರ್ಣನೆಗಾಗಿಯೇ ಬಂದು ಮುಖ್ಯ ಕಥೆಗೆ ತೇಪೆಯಂತಿದ್ದರೂ- ಉಳಿದ ಕಡೆ ಕನಕದಾಸರ ಕಾವ್ಯ ಪ್ರತಿಭೆ ಮಿಂಚಿದೆ; ನಾಟಕೀಯ ಗುಣ ನರ್ತಿಸಿದೆ; ಜಾನಪದ ಸತ್ತ್ವದ ಸೊಗಡು-ಸೊನೆ ಜಿನುಗುವ ಭಾಷಾ ಶೈಲಿ ಕಂಗೊಳಿಸಿದೆ; ಕೃಷ್ಣನನ್ನು ಕೃಷ್ಣದೇವರಾಯನೊಡನೆ ಸಮೀಕರಿಸಿ ವಿಜಯನಗರ ಸಾಮ್ರಾಜ್ಯದ ಜನಜೀವನದ ದಿಗ್ದರ್ಶನ ನೀಡಿದೆ.

## ೬

ಹನ್ನೆರಡನೆಯ ಶತಮಾನದ ವಚನಸಾಹಿತ್ಯ ಸಂದರ್ಭದಲ್ಲಿ ಬಸವಣ್ಣನವರು ಹೇಗೆ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಕ್ಷೇತ್ರಗಳ ಶುದ್ಧೀಕರಣದ ಹರಿಕಾರರಾಗಿ ಅಹರ್ನಿಶಿ ದುಡಿದರೋ ಹಾಗೆ ಹದಿನಾರನೆಯ ಶತಮಾನದ ದಾಸ ಸಾಹಿತ್ಯ ಸಂದರ್ಭದಲ್ಲಿ ಕನಕದಾಸರು ದುಡಿದರು; ಬಸವಣ್ಣನವರು ಹೇಗೆ ಶ್ರೀಸಾಮಾನ್ಯರಲ್ಲೊಬ್ಬರಾಗಿ, ಅವರೊಡನೆ ಕುಂತು ನಿಂತು ಮಲಗಿ, ಅವರ ಕಷ್ಟಸುಖಗಳಲ್ಲಿ ಭಾಗಿಯಾಗಿ, ಅವರನ್ನು ಕೈಹಿಡಿದು ಸಲಹುವ ತಾಯಿಯಾಗಿ, ದಾರಿ ತೋರುವ

ಮಾರ್ಗದರ್ಶಕರಾಗಿ ಜನರ ಪ್ರೀತಿವಿಶ್ವಾಸ ಗಳಿಸಿಕೊಂಡು ಜನಪ್ರಿಯ ವಚನಕಾರ ರಾಗಿದ್ದರೋ ಹಾಗೆ ಕನಕದಾಸರು ಜನಪ್ರಿಯ ಕೀರ್ತನಕಾರರಾಗಿದ್ದರು. ಬಸವಣ್ಣನವರ ಜನಪ್ರಿಯತೆಯ ದ್ಯೋತಕವಾಗಿ ಬಸವನಬಾಗೇವಾಡಿ, ಬಸವಕಲ್ಯಾಣ, ಬಸವನಕೊಪ್ಪ, ಬಸವಾಪಟ್ಟಣ, ಬಸವನ ಹಳ್ಳಿ ಮೊದಲಾದ ಊರ ಹೆಸರುಗಳು ಇರುವಂತೆಯೇ ಕನಕದಾಸರ ಜನಪ್ರಿಯತೆಯ ಕುರುಹಾಗಿ ಕಂಕನಾಡಿ (<ಕನಕನ+ಹಾಡಿ; ಮಂಗಳೂರಿಗೆ ಹೊಂದಿಕೊಂಡಂತಿರುವುದು) ಕಂಕನವಾಡಿ (<ಕನಕನ+ಹಾಡಿ; ಜಮಖಂಡಿ ತಾಲ್ಲೂಕು) ಕನಗನ ಮರಡಿ (<ಕನಕನ ಮರಡಿ; ಪಾಂಡವಪುರ ತಾಲ್ಲೂಕು) ಕಾನಕಾನ ಹಳ್ಳಿ (<ಕನಕನಹಳ್ಳಿ; ಇಂದು ಕನಕಪುರ ಎಂದಾಗಿದೆ, ಬೆಂಗಳೂರು ಜಿಲ್ಲೆ) ಕನಕನಪಾಳ್ಯ (ಬೆಂಗಳೂರು ಜಯನಗರ ಬಡಾವಣೆಯಲ್ಲಿ ಲೀನವಾಗಿದೆ) ಕನಕೇನ ಹಳ್ಳಿ (<ಕನಕನಹಳ್ಳಿ; ಮಾಗಡಿ ತಾಲ್ಲೂಕು ಬೆಂಗಳೂರು ಜಿಲ್ಲೆ) ಕನಕಾಪುರ (<ಕನಕಪುರ; ಹಾವೇರಿ ಕಾಗಿನೆಲೆಗಳ ಮಧ್ಯೆ ಇದೆ) ಹಾಗೆಯೇ ಬಳ್ಳಾರಿ ಜಿಲ್ಲೆಯ ಹೊಸಪೇಟೆ ಬಳಿ ಇರುವ 'ಕನಕಾಪುರ', ಬೀರೂರು ಬಳಿಯ 'ಕನಕನಗುಡ್ಡ' ಹಾಗೂ ಬೆಳಗಾಂ ಜಿಲ್ಲೆಯ ರಾಯಭಾಗ್ ತಾಲ್ಲೂಕಿನಲ್ಲಿರುವ 'ಕಂಕನಾಡಿ' ಮೊದಲಾದ ಊರ ಹೆಸರುಗಳು ಸಾಕ್ಷೀಭೂತವಾಗಿ ನಮ್ಮ ಕಣ್ಣೆದುರಿವೆ. ಬಹುಶಃ ಬೇರೆ ವಚನಕಾರರ ಹೆಸರಿನಲ್ಲಿ, ಕೀರ್ತನಕಾರರ ಹೆಸರಿನಲ್ಲಿ ಇಷ್ಟೊಂದು ಊರುಗಳಿರುವುದು ಕಂಡು ಬರುವುದಿಲ್ಲ.

ಕನಕದಾಸರು ಕೇವಲ ಕರ್ನಾಟಕದಲ್ಲಿ ಮಾತ್ರ ಜನಪ್ರಿಯರಾಗಿರಲಿಲ್ಲ. ಆಂಧ್ರ, ತಮಿಳುನಾಡು, ರಾಜಾಸ್ಥಾನಗಳಲ್ಲಿ ಜನರ ಪ್ರೀತಿಗೆ ಪಾತ್ರರಾಗಿದ್ದರು. ಮಲೆಯಾಳದ ಅನಂತಶಯನಂ ಬಳಿ ಇರುವ 'ಕನಕನ ಕೊಳ' ಎಂಬ ಸ್ಥಳ (ತಂಜಾವೂರು ಬಳಿಯ ವರವೂರು ಎಂಬಲ್ಲಿ ಕನಕದಾಸರ ೧೭೫ ಕೀರ್ತನೆಗಳ ಓಲೆಗರಿ ಕಟ್ಟು ಸಿಕ್ಕಿರುವುದು ಇದಕ್ಕೆ ಪೂರಕವಾಗಿದೆ) ರಾಜಾಸ್ಥಾನದ ಜಯಪುರದ ಅರಮನೆಯ ಪ್ರದೇಶದಲ್ಲಿ ಇರುವ 'ಕನಕಬೃಂದಾವನ' (ಇದರ ಐತಿಹ್ಯ ಕಾಲನಿರ್ಣಯ ಭಾಗದಲ್ಲಿ ಬಂದಿದೆ) ಎಂಬ ಸ್ಮಾರಕ, ಆಂಧ್ರದ ಜನರ "ಕನಕ, ಮೀರು ಬಂಗಾರ ತುನಕ, ಕನ್ನಡ ಕವುಲೆಲ್ಲ ನೀವೆನಕ' ಎಂಬ ಪ್ರಶಂಸೆಯ ಮಾತು ಕನಕದಾಸರು ಅನ್ಯ ಪ್ರಾಂತ್ಯಗಳಲ್ಲೂ ಜನಪ್ರೀತಿಗೆ ಪಾತ್ರರಾಗಿದ್ದರೆಂಬುದನ್ನು ಸೂಚಿಸುತ್ತದೆ.

ಕನಕದಾಸರು ಯಾವುದೇ ಒಂದು ಮತಕ್ಕೆ ಕಟ್ಟುಬಿದ್ದವರಲ್ಲ. ಎಲ್ಲ ಮತ ಧರ್ಮಗಳ ಒಳ್ಳಿತನ್ನು ಸ್ವೀಕರಿಸಿ ಸ್ವತಂತ್ರ ವ್ಯಕ್ತಿತ್ವವನ್ನು ಬೆಳೆಸಿಕೊಂಡು ಬಾಳಿದವರು;



ಉಳಿದವರಿಗೂ ಹಾಗೆ ಬಾಳುವಂತೆ ಹೇಳಿದವರು. ಜನಹಿತ, ಅದರಲ್ಲೂ ನತಜನಹಿತದ ಬಗ್ಗೆ ಬಾಳಿನುದ್ದಕ್ಕೂ ಜೀವ ತೇದವರು. ತಮ್ಮ ವಿಚಾರಧಾರೆಯ ಸನ್ನೆಗೋಲಿನಿಂದ ಸುಲಿಗೆಗೊಳಗಾದ ಶೋಷಿತರನ್ನು ಮೇಲೆತ್ತಲು ಪ್ರಯತ್ನಿಸಿ ದಂತೆಯೇ ('ಜಾತಿ ಜಾತಿಗಳಲ್ಲಿ ತಿರಸ್ಕೃತರಾದವರಿಗೆ ಪುರಸ್ಕಾರ ಕೊಟ್ಟವರು ಕನಕದಾಸರು' ಎಂಬ ಬೇಲೂರು ಕೇಶವದಾಸರ ಮಾತು ಇಲ್ಲಿ ಸ್ಮರಣೀಯ) ಸುಲಿಗೆ ಮಾಡುವ ಶೋಷಕರಿಗೆ ಶಂಕರ ರಾಮಾನುಜ ಮಧ್ವ ಧರ್ಮಗಳಿಗಿಂತ ಮಾನವಧರ್ಮ ದೊಡ್ಡದು ಎಂದು ಹೇಳಿ, ಅವರ ಕಣ್ಣ ಮೇಲಿನ ಪೊರೆ ತೆಗೆಯಲು ಶಸ್ತ್ರಚಿಕಿತ್ಸೆಗೆ ಕೈಹಾಕಿದವರು. ಅದಕ್ಕೆ ಅವರ ರಾಮಧಾನ್ಯ ಚರಿತ್ರೆ ಹಾಗೂ ಕೀರ್ತನೆಗಳು ಸಾಕ್ಷ್ಯ ಒದಗಿಸುತ್ತವೆ.

ಇವರಲ್ಲಿರುವ ವೈಚಾರಿಕ ಪ್ರಗತಿಪರ ನಿಲುವನ್ನು ಬೇರೆ ದಾಸರಲ್ಲಿ ಅಷ್ಟಾಗಿ ಕಾಣಲು ಸಾಧ್ಯವಿಲ್ಲ. ಅವರೇನಿದ್ದರೂ ಸನಾತನ ಕೊರಕಲು ಜಾಡಿನಲ್ಲಿ ಚರ್ವಿತ ಚರ್ವಣವನ್ನು ಕುರುಕುತ್ತಾ ಕೀರಲುದನಿಯಲ್ಲಿ ಕಂಠಶೋಷಣೆ ಮಾಡಿಕೊಂಡು ಕೊರಗಿ ಸೊರಗಿದ್ದಾರೆಯೇ ವಿನಾ, ಕೊರಕಲು ಜಾಡನ್ನು ಬಿಟ್ಟು ರಾಜ ಮಾರ್ಗವನ್ನು ಹಿಡಿದು ಬಾಡದ ಧೀರನಂತೆ ಪ್ರತಿಗಾಮಿ ಧೋರಣೆಯನ್ನು ಅಪ್ಪಳಿಸುವ, ಪ್ರಗತಿಗಾಮಿ ಧೋರಣೆಯನ್ನು ಅಪ್ಪಿಕೊಳ್ಳುವ ಏರುದನಿಯ ಯಕ್ಷಗಾನ ದಾಟದಲ್ಲಿ ಕುಣಿದು ಕುಪ್ಪಳಿಸಿ ಮಿರುಗಿ ಮಿಂಚಿದವರಲ್ಲ; ಜನರ ನರನಾಡಿಗಳಲ್ಲಿ ಮಿಂಚು ಸಂಚರಿಸುವಂತೆ ಮಾಡಿ ಹೊಸ ಬಾನಂಚನ್ನು ಕಾಣುವಂತೆ ಮಾಡಿದವರಲ್ಲ.

'ಸರ್ವರಿಗೆ ಸಮಪಾಲು, ಸರ್ವರಿಗೆ ಸಮಬಾಳು' ಎಂಬುದೇ ಕನಕದಾಸರ ನಿಲುವು. ತಾರತಮ್ಯ, ಭೇದಭಾವ ಮಾನವತೆಗೆ ಮಾರಕ ಎಂಬುದು ಅವರ ಬಾಳಿನ ಮಂತ್ರ. ಸಮಾಜದಲ್ಲಿ ಬೇರುಬಿಟ್ಟಿರುವ ಮೇಲು–ಕೀಳು, ಬಡವ–ಬಲ್ಲಿದ ಎಂಬ ವರ್ಗವರ್ಣ ತಾರತಮ್ಯ ಹೋಗಬೇಕು ಎಂಬುದೇ ಅವರ ಹೋರಾಟದ ಗುರಿ. ಅವರ ರಾಮಧಾನ್ಯ ಚರಿತ್ರೆ ಆ ನಿಲುವನ್ನೇ ಪ್ರತಿಪಾದಿಸುತ್ತದೆ. 'ಕುಲಕುಲವೆನ್ನುತಿಹರು, ಕುಲವ್ಯಾವುದು ಸತ್ಯಸುಖವುಳ್ಳ ಜನರಿಗೆ' 'ಹೊಲೆಯ ಹೊರಗಿಹನೆ ಊರೊಳಗಿಲ್ಲವೆ' ಮೊದಲಾದ ಕೀರ್ತನೆಗಳಲ್ಲೂ ಆ ನಿಲುವನ್ನು ಕಾಣುತ್ತೇವೆ.

ಅಧ್ಯಾತ್ಮವನ್ನು ಒತ್ತಿ ಹೇಳುವಾಗ ಸಮಾಜ ಚಿಂತನೆಯನ್ನು ಬಿಡುವುದಿಲ್ಲ. ಸಮಾಜ ಚಿಂತನೆಗೆ ಒತ್ತುಕೊಟ್ಟಾಗ ಅಧ್ಯಾತ್ಮವನ್ನು ಕೈಬಿಡುವುದಿಲ್ಲ. ಗಂಡಭೇರುಂಡ ಪಕ್ಷಿಗೆ ಎರಡು ತಲೆಗಳಿರುವಂತೆ ಕನಕದಾಸರ ಕೀರ್ತನೆಗಳಲ್ಲಿ ಆ ಎರಡೂ

ಎಳೆಗಳು ಇರುವುದನ್ನು ಕಾಣುತ್ತೇವೆ. ಉದಾಹರಣೆಗೆ 'ಎಲ್ಲಾರು ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ' ಎಂಬ ಕೀರ್ತನೆಯಲ್ಲಿ ಯಾವ ವೃತ್ತಿಯನ್ನೂ ಮೇಲು ಅಥವಾ ಕೀಳು ಎಂದು ತಾರತಮ್ಯದಿಂದ ಕಾಣುವುದಿಲ್ಲ. ಮೇಲು ವೃತ್ತಿಗೆ ಕೊಟ್ಟಷ್ಟೇ ಪ್ರಾಧಾನ್ಯವನ್ನು ಕೀಳುವೃತ್ತಿಗೆ ಕೊಟ್ಟು ಗೌರವದಿಂದ ಕಾಣುತ್ತಾರೆ. ಏಕೆಂದರೆ, ಸಮಾಜ ಬೆಳೆದು ಬಂದದ್ದರ ಬಗ್ಗೆ, ಅದರ ಪರಿವರ್ತನೆ ಪಲ್ಲಟಗಳ ಬಗ್ಗೆ ಅರಿವಿದೆ. ಒಬ್ಬ ಕಳ್ಳತನದ ವೃತ್ತಿಗಿಳಿಯಬೇಕಾದರೆ ಅವನೊಬ್ಬನೇ ಕಾರಣನಲ್ಲ; ಅವನಿಗೆ ದುಡಿದು ತಿನ್ನಲು ಅವಕಾಶ ಕೊಡದ, ಅಗತ್ಯ ಸೌಲಭ್ಯ ಒದಗಿಸದ, ಅವನನ್ನು ಅನಾಮತ್ತು ಅಲಕ್ಷಿಸಿದ ಸಮಾಜವೂ ಕಾರಣ ಎಂಬ ತಲಸ್ಪರ್ಶಿ ಪರಿಜ್ಞಾನ ಕನಕದಾಸರಿಗಿದೆ. ಜನಪದ ಗರಡಿಯಲ್ಲಿ ಪಳಗಿದ ಅವರಿಗೆ 'ಕೈಲಿಲ್ಲದೋನು ಕಳ್ಳ' ಎಂಬ ಜನಪದ ಗಾದೆ ಗೊತ್ತಿಲ್ಲದೆ ಇಲ್ಲ. ಆದ್ದರಿಂದ ಹೊಟ್ಟೆಬಟ್ಟೆಯ ಸಮಸ್ಯಾ ನಿವಾರಣೆಯೇ ಎಲ್ಲ ವೃತ್ತಿಗಳ ಪರಮಧ್ಯೇಯ; ಎಲ್ಲ ಸಮತಾವಾದ, ಸಮಾಜವಾದ ತತ್ತ್ವಗಳ ಪರಮಗುರಿ ಎಂಬುದನ್ನು ಸಮಭಾವದಿಂದ ಸ್ಥಿತಪ್ರಜ್ಞರಾಗಿ ವರ್ಣಿಸುವ ಕನಕದಾಸರು ಕೊನೆಯಲ್ಲಿ ಹೊಟ್ಟೆಬಟ್ಟೆಯ ಜೊತೆಗೆ ಕೊಟ್ಟೆ (ಹಣ್ಣುಕಾಯಿಗಳ ಒಳಗಿರುವ ಬೀಜ, ಇಲ್ಲಿ ದೇಹದೊಳಗಿರುವ ಆತ್ಮ ಎಂಬುದು ಗೃಹೀತಾರ್ಥ)ಯನ್ನು ಮರೆಯಬೇಡಿ ಎಂದು ಕಿವಿಮಾತು ಹೇಳಿದ್ದಾರೆ– "ಉನ್ನತ ಕಾಗಿನೆಲೆಯಾದಿಕೇಶವನ ಧ್ಯಾನವನ್ನು ಮನಮುಟ್ಟಿ ಮಾಡುವುದು ಮುಕ್ತಿಗಾಗಿ ಆನಂದಕಾಗಿ" ಎಂದು. ಅಂದರೆ ಉಚ್ಛ್ವಾಸ ಒಂದರಿಂದಲೇ ಅಥವಾ ನಿಶ್ವಾಸ ಒಂದರಿಂದಲೇ ಉಸಿರಾಡಿ ಜೀವಿಸಲು ಹೇಗೆ ಸಾಧ್ಯವಿಲ್ಲವೋ, ಸುಗಮ ಉಸಿರಾಟಕ್ಕೆ ಎರಡೂ ಹೇಗೆ ಅನಿವಾರ್ಯ ಕ್ರಿಯೆಗಳೋ ಹಾಗೆಯೇ ಸುಗಮ ಜೀವನಕ್ಕೆ ಭೌತ ಅಧ್ಯಾತ್ಮಗಳೆರಡೂ ಅನಿವಾರ್ಯ ಕ್ರಿಯೆಗಳು ಎಂಬುದನ್ನು ಮನಗಾಣಿಸಿದ್ದಾರೆ. ಕನಕದಾಸರು ಅಧ್ಯಾತ್ಮದ ಪ್ರಭಾವಳಿಯಿಲ್ಲದೆ ಭೌತ ವಿಗ್ರಹ ಶೋಭಿಸುವುದಿಲ್ಲ ಎಂದು ನಂಬಿದವರು; ಭೌತ ಚಿತ್ರಕ್ಕೆ ಅಧ್ಯಾತ್ಮದ ಚೌಕಟ್ಟು (Frame) ಅಗತ್ಯ, ಇಲ್ಲದಿದ್ದರೆ ಅದು ಹಾಳಾಗುತ್ತದೆ ಎಂಬುದು ಅವರು ಜೀವನದಲ್ಲಿ ಕಂಡುಕೊಂಡ ಸತ್ಯ; ಜೀವನದರ್ಶನ. ಇದು "ಡೊಂಕು ಬಾಲದ ನಾಯಕರೆ ನೀವೇನೂಟವ ಮಾಡಿದಿರಿ" ಎಂಬ ಕೀರ್ತನೆಯಲ್ಲು ಕಂಡು ಬರುತ್ತದೆ. ನಡೆನುಡಿಯ ಮೇಳ ಸಿದ್ಧಿಸುವುದು ಅಧ್ಯಾತ್ಮದಾಸರೆಯಿಂದ; ಆ ಆಸರೆಯಿಲ್ಲದಿದ್ದರೆ ರಾಜಮಾರ್ಗದಲ್ಲಿ ಓಡಾಟ, ಕೀಳು ಮಾರ್ಗದಲ್ಲಿ ಒದ್ದಾಟ (ಹಿರಿಯ ಹಾದಿಲಿ ಓಡುವಿರಿ, ಕರಿಯ ಬೂದಿಲಿ ಹೊರಳುವಿರಿ) ಸತತವಾಗಿ



ಸಾಗುತ್ತದೆ ಎಂಬುದು 'ಸಿರಿಯಾದಿಕೇಶವನ ಸ್ಮರಿಸಿದವರ ಗತಿ ತೋರುವಿರಿ' ಎಂಬ ಮಾತಿನಲ್ಲಿ ಕಂಡರಣೆಗೊಂಡಿದೆ.

ಐಹಿಕವಾಗಲಿ ಅಧ್ಯಾತ್ಮವಾಗಲಿ ಜನಸಾಮಾನ್ಯರಿಗೆ ಮುಟ್ಟಬೇಕಾದರೆ ಜನದನಿಯಲ್ಲಿ, ಅವರವರ ವೃತ್ತಿ ಪರಿಭಾಷೆಯಲ್ಲಿ ವ್ಯಕ್ತ ಮಾಡಬೇಕಾದದ್ದು ಅನಿವಾರ್ಯ. 'ನಾರಾಯಣ ಎಂಬ ನಾಮದ ಬೀಜವನು ನಾಲಗೆಯ ಕೂರಿಗೆಯ ಮಾಡಿ ಬಿತ್ತಿರಯ್ಯ' ಎಂಬ ಕೀರ್ತನೆ ಇದಕ್ಕೆ ಸಾಕ್ಷಿ. ಹೃದಯವೆಂಬ ಹೊಲದಲ್ಲಿ ನಾರಾಯಣ ಎಂಬ ಬೀಜವನ್ನು ನಾಲಗೆಯೆಂಬ ಕೂರಿಗೆಯ ಮೂಲಕ ಬಿತ್ತಿ ದೈವಭಕ್ತಿಯ ಫಸಲು ತೆಗೆದು ಶಾಂತಸಂತೃಪ್ತ ಜೀವನ ಸಾಗಿಸಿ ಎಂದು ಬೋಧಿಸುವ ಹಾಡಿದು. ವ್ಯವಸಾಯದ ರೂಪಕದಲ್ಲಿ ರೈತಾಪಿ ಜನರಿಗೆ ಸುಲಭವಾಗಿ ಮುಟ್ಟುವಂತೆ, ತೃಣಮೂಲ (Grass root) ಸ್ತರದಲ್ಲಿ ಸ್ಪಂದನ ಸುಳಿದಿರುಗುವಂತೆ ಮಾಡುವ ಗುರಿಯಿರುವುದನ್ನು ಮರೆಯುವಂತಿಲ್ಲ.

ಡಾಂಭಿಕ ಭಕ್ತರ ಆಚಾರವಿಚಾರಗಳ ನಿಷ್ಪ್ರಯೋಜಕತೆಯನ್ನು ಚಿತ್ರಿಸಿರುವ "ಎಳ್ಳುಕಾಳಿನಷ್ಟು ಭಕ್ತಿ ಎನ್ನೊಳಿಗಿಲ್ಲ। ಕಳ್ಳರಿಗೆ ಕಳ್ಳನಂತೆ ಬೆಳ್ಳಕ್ಕಿಯಂದದಲಿ ಡಂಭ" ಎಂಬ ಅವರ ಕೀರ್ತನೆಯಲ್ಲಿ ಭಕ್ತಿಯಿಲ್ಲದೆ ಗುಡಿಯನ್ನು ಸುತ್ತು ಹಾಕುವ ಪ್ರದರ್ಶನಪ್ರಿಯ ಭಕ್ತರನ್ನು ಗಾಣದೆತ್ತಿನ ರೂಪಕದಲ್ಲೂ, ಜಪಮಣಿ ಸರವನ್ನು ಹಿಡಿದು ಜಪ ಮಾಡುವ ಯಾಂತ್ರಿಕತೆಯನ್ನು ಮಾಣಿಕ್ಯಪರೀಕ್ಷೆಗೆ ಕುಳಿತ ಕುರುಡರು ಮುತ್ತನ್ನು ಕೈಯಲ್ಲಿ ಹಿಡಿದು ಹಿಡಿದು ಬಿಡುವ ರೂಪಕದಲ್ಲೂ, ನೀರು ಮುಳುಗಿ ಸೂರ್ಯನಮಸ್ಕಾರ ಮಾಡುವ ಭಕ್ತರ ನಿಷ್ಫಲ ಆಚಾರವನ್ನು ಗುಂಡುಮುಳುಗನ ಹಕ್ಕಿಯ ರೂಪಕದಲ್ಲೂ, ನೀರಿನ ತಡಿಯಲ್ಲಿ ತಲೆಯ ಮೇಲೆ ಮುಸುಕು ಹಾಕಿಕೊಂಡು ಮೂಗು ಹಿಡಿದು ಕುಳಿತ ಡಾಂಭಿಕ ಭಕ್ತರನ್ನು ಮಂಡೂಕದ ರೂಪಕದಲ್ಲೂ ಅಭಿವ್ಯಕ್ತಿಸಿರುವ ರೀತಿ ಅವರ ಪ್ರಗತಿಪರ ಚಿಂತನೆಗೆ ತೋರ್ಬೆರಳಾಗಿದೆ.

ನೇಮನಿಷ್ಠೆ ಇಲ್ಲದವರ ಕೃತ್ಯಗಳೆಲ್ಲವೂ 'ಜನ ಮೆಚ್ಚಲಿ, ಕುಣಿ ಮಗಳೆ' ಎಂಬ ಗಾದೆಯ ಧೋರಣೆಯಂಥವು. ಅದಕ್ಕೋಸ್ಕರವೇ ಕನಕದಾಸರು ತಮ್ಮ 'ನೇಮವಿಲ್ಲದ ಹೋಮವೇತಕೆ' ಎಂಬ ಕೀರ್ತನೆಯಲ್ಲಿ ಖಂಡತುಂಡವಾಗಿ ಖಂಡಿಸಿದ್ದಾರೆ. ಹಾಗೆಯೇ ಹೃದಯ ಶುದ್ಧಿಯಿರದ ಕಪಟಿಗಳ ಜಪತಪಗಳಿಂದ ಯಾವ ಫಲವೂ ದೊರಕುವುದಿಲ್ಲ ಎಂಬುದನ್ನು 'ಜಪವ ಮಾಡಿದರೇನು, ತಪವ ಮಾಡಿದರೇನು। ವಿಪರೀತ ಕಪಟಗುಣ ಕಲುಷವಿದ್ದವರು' ಎಂಬ ಕೀರ್ತನೆಯಲ್ಲಿ

ಕಡ್ಡಿ ಮುರಿದಂತೆ ಖಂಡಿಸಿದ್ದಾರೆ. ಸಾಧನೆಯಲ್ಲಿ ಹೃದಯ ಶುದ್ಧಿ ಮತ್ತು ಶ್ರದ್ಧೆ ಇರದಿದ್ದರೆ ಸಿದ್ಧಿ ಲಭಿಸದು ಎಂಬುದು ಅವರ ಮತ.

'ಸತ್ಯವಂತರ ಸಂಗವಿರಲು ತೀರ್ಥವ್ಯಾತಕೆ' ಎಂಬ ಕೀರ್ತನೆಯ ಮೂಲಕ ಸತ್ಯವಂತರ ಸಂಗ ತೀರ್ಥಕ್ಕೆ, ತೀರ್ಥಯಾತ್ರೆಯ ಸಮಾನ ಎಂಬುದನ್ನು ಜನರಿಗೆ ಮನವರಿಕೆ ಮಾಡಿಕೊಡುತ್ತಾರೆ. ಇದರಲ್ಲಿ ಬಂದಿರುವ ಒಂದೊಂದು ಮಾತೂ ಕೂಡ ಅಪಾರ ಲೋಕಾನುಭವದಿಂದ, ಮಾಗಿದ ಜೀವನಾನುಭವದಿಂದ ಮೂಡಿದ ಆಣಿಮುತ್ತುಗಳು ಎನ್ನಬಹುದು. ಐಶ್ವರ್ಯ ಒಂದು ಕಡೆ ಶೇಖರಣೆ ಯಾಗದೆ ವಿತರಣೆಯಾಗಬೇಕು ಎಂಬ ಆಶಯದ 'ತಾನು ಉಣ್ಣದ ಪರರಿಗಿಕ್ಕದ ಧನವಿದ್ಯಾತಕೆ' ಎಂಬ ಮಾತಾಗಲೀ, 'ದೇಹಕ್ಕಿಂತ ಪ್ರಾಣ ದೊಡ್ಡದು, ಏಕೆಂದರೆ ಪ್ರಾಣ ಹೋದ ಮೇಲೆ ದೇಹವಿದ್ದೂ ವ್ಯರ್ಥ; ಪ್ರಾಣಕ್ಕಿಂತ ಮಾನ ದೊಡ್ಡದು, ಏಕೆಂದರೆ ಮಾನ ಹೋದ ಮೇಲೆ ಪ್ರಾಣ ಇದ್ದೂ ವ್ಯರ್ಥ' ಎಂಬ ಆಶಯದ 'ಮಾನಹೀನನಾಗಿ ಬಾಳ್ವ ಮನುಜನ್ಯಾತಕೆ' ಎಂಬ ಮಾತಾಗಲೀ, ಮನಸೋತ ಹೆಣ್ಣಿನೊಡನೆ ಪ್ರೀತಿಯಿಂದ ನಡೆದುಕೊಳ್ಳುವುದು ಪುರುಷನ ಧರ್ಮ ಎಂಬ ಆಶಯದ 'ಸೋತ ಹೆಣ್ಣಿಗೆ ಓತು ನಡೆಯದ ಪುರುಷನ್ಯಾತಕೆ' ಎಂಬ ಮಾತಾಗಲೀ, ಪ್ರೀತಿಯಿರದ ಅಮೃತವೂ ವಿಷಕ್ಕೆ ಸಮಾನ ಎಂಬ ಆಶಯದ 'ಪ್ರೀತಿಯಿಲ್ಲದೆ ಎಡೆಯಲಿಕ್ಕಿದ ಅನ್ನವ್ಯಾತಕೆ' ಎಂಬ ಮಾತಾಗಲೀ ಸಮಾಜದಲ್ಲಿ ಉತ್ತಮ ಸಂಸ್ಕೃತಿಯ ಬೀಜವನ್ನು ಬಿತ್ತುವ, ಸಾಂಸ್ಕೃತಿಕ ಬದುಕನ್ನು ರೂಢಿಸುವ ನಿಟ್ಟಿನಲ್ಲಿ ಸನ್ನೆಗೋಲಾಗಿ ಕೆಲಸ ಮಾಡುವಂತವು; ಆಮಿಷಕ್ಕೊಳಗಾದ, ಸಣ್ಣತನಕ್ಕೀಡಾದ ಜನರನ್ನು ಮತ್ತೆ ಸಂಸ್ಕೃತಿಯ ಹಳಿಯತ್ತ ಸೆಳೆಯುವ ಚುಂಬಕ ಶಕ್ತಿಯುಳ್ಳಂಥವು.

ಮುಗ್ಧರಿಗೆ, ಅಜ್ಞರಿಗೆ ಜೀವನ ಸತ್ಯವನ್ನು ಹೇಳಿ ಎಚ್ಚರಿಸುವ ಕನಕದಾಸರ ಕಾರ್ಯ ಮಹತ್ವದ ಸಮಾಜಸೇವೆಯೇ. ಉದಾಹರಣೆಗೆ 'ವರಕವಿಗಳ ಮುಂದೆ ನರಕವಿಗಳ ವಿದ್ಯೆ ತೋರಬಾರದು' ಎಂಬ ಕೀರ್ತನೆಯಲ್ಲಿ ಬರುವ 'ಪಾಪಿಗಳಿದ್ದಲ್ಲಿ ರೂಪುಳ್ಳ ವಸ್ತುವ ತೋರಬಾರದು', 'ಬಹು ಬಡತನ ಬಂದಾಗ ನೆಂಟರ ಬಾಗಿಲ ಸೇರಬಾರದು', 'ಬಾಯ್ಬಡಿಕರು ಇದ್ದಲ್ಲಿ ವಸ್ತಿಬಿಡಾರದ ಮಾಡಬಾರದು', 'ಮುಂದೆ ಭಲಾ ಎಂದು ಹಿಂದೆ ನಿಂದಿಪರನ್ನು ಕೂಡಬಾರದು' ಎಂಬ ಮಾತುಗಳು ಇದಕ್ಕೆ ಸಾಕ್ಷಿ.

ಕನಕದಾಸರು ಸ್ವಾರ್ಥಕ್ಕಿಂತ ಪರಹಿತಾರ್ಥಕ್ಕೆ ಒತ್ತು ಕೊಟ್ಟವರು. ಆದ್ದರಿಂದಲೇ 'ಸಜ್ಜನರ ಸಂಗದೊಳಗಿರಿಸೆನ್ನ ರಂಗ' ಎಂಬ ಕೀರ್ತನೆಯಲ್ಲಿ 'ಪರಹಿತಾರ್ಥದ



ಧರ್ಮವರಿಯದವನ ಸಂಗ ಬಲು ಭಂಗ' ಎಂದು ಹೇಳುತ್ತಾರೆ. ತನ್ನ ಹಿತದಂತೆಯೇ ಅನ್ಯರ ಹಿತಕ್ಕಾಗಿ ದುಡಿಯದಿದ್ದರೆ ಸಮಾಜದಲ್ಲಿ ಅಸಮಾಧಾನ ಧಗಿಧಗಿಸುತ್ತದೆ ಎಂದು ಸ್ವಾರ್ಥಿಗಳನ್ನು ಎಚ್ಚರಿಸಿದ್ದಾರೆ. ಅಷ್ಟೇ ಅಲ್ಲದೆ 'ನಿರ್ಮಲಿಲ್ಲದ ಮನಸು ಅದು ಕಜ್ಜಿ ತಿನಿಸು' ಎಂದು ಹೇಳುವುದರ ಮುಖಾಂತರ ಕಲುಷಿತ ಮನಸ್ಸಿನ ಜನರಿಂದ ಸಮಾಜದ ಗತಿ ಏನಾಗುತ್ತದೆ ಎಂಬುದರತ್ತ ಗಮನ ಸೆಳೆದಿದ್ದಾರೆ. ಉತ್ತರ ಕರ್ನಾಟಕದಲ್ಲಿ ನವೆ, ಕಡಿತ ಎನ್ನುವ ಅರ್ಥದಲ್ಲಿ 'ತಿನಿಸು' ಎಂಬ ಪದವನ್ನು ಬಳಸಲಾಗುತ್ತದೆ. ಪರಿಶುದ್ಧ ಮನಸ್ಸಿಲ್ಲದ ಜನ ತಾವೂ ಸುಖವಾಗಿರುವುದಿಲ್ಲ, ಅನ್ಯರನ್ನೂ ಸುಖವಾಗಿರಲು ಬಿಡುವುದಿಲ್ಲ. ಕಜ್ಜಿ ಕಡಿತದಿಂದ ಮೈಯನ್ನೆಲ್ಲ ಪರಪರನೆ ಕೆರೆದುಕೊಳ್ಳುವಂತೆ, ಪರಚಿಕೊಳ್ಳುವಂತೆ ಅನ್ಯರ ನೆಮ್ಮದಿಯನ್ನು ಪರಚುತ್ತಾರೆ, ಬಾಯಿಗೆ ಬಂದದ್ದನ್ನು ಅರಚುತ್ತಾರೆ. ಆದ್ದರಿಂದ ಸಮಾಜದಲ್ಲಿ ಸುಖಶಾಂತಿ ನೆಲಸಬೇಕಾದರೆ ವ್ಯಕ್ತಿಗಳ ಮನಸ್ಸು ನಿರ್ಮಲವಾಗಿರಬೇಕು ಎಂದು ಹೇಳುವ ಮುಖಾಂತರ ಸಮಾಜದ ಜನರನ್ನು ತಿದ್ದುವ ಕೆಲಸವನ್ನೂ ಮಾಡಿದ್ದಾರೆ. ಅಷ್ಟೇ ಅಲ್ಲ, ಕೌಟುಂಬಿಕ ಶಾಂತಿ ನೆಮ್ಮದಿ ಬಯಸುವುದಾದರೆ ಸಹನೆ ಇರಬೇಕಾಗುತ್ತದೆ. ಅದನ್ನು 'ಮಾನಿನಿ ಮನಸದು ನಿಧಾನವಿರದಿರೆ ಮಾನಾಭಿಮಾನಗಳುಳಿದೀತೆ' ಎಂದು ಹೇಳಿ ಎಚ್ಚರಿಸುತ್ತಾರೆ. ಆದ್ದರಿಂದ ಕನಕದಾಸರು ಮಾಡಿರುವ ಸಮಾಜಸೇವೆ ನಾನಾ ಮುಖಗಳುಳ್ಳದ್ದು. ಇಂಥ ಸಾಮಾಜಿಕ ಕಳಕಳಿಯಿಲ್ಲದ ಬಹುತೇಕ ದಾಸರು ಬರೀ ಮತನಿಷ್ಠೆಯ ಸಿದ್ಧಾಂತಗಳ ರಾದ್ಧಾಂತಗಳಲ್ಲೇ ದೇಹಾಂತವಾದರು ಎಂದರೆ ತಪ್ಪಾಗುವುದಿಲ್ಲ.

ಸಮಯಕ್ಕೊದಗದ, ಸದುಪಯೋಗವಾಗದ ದ್ರವ್ಯ ಇದ್ದೂ ವ್ಯರ್ಥ. ಶೇಖರಣೆಗೊಂಡ ಐಶ್ವರ್ಯ ವಿತರಣೆಯಾಗಬೇಕು. ಇದನ್ನೇ ವಚನಕಾರರು ಕಾಯಕ ಮತ್ತು ದಾಸೋಹ ಎಂಬ ಪರಿಭಾಷೆಯಲ್ಲಿ ಹೇಳಿದ್ದಾರೆ. ಕಾಯಕದಿಂದ ಶೇಖರಣೆಗೊಂಡದ್ದನ್ನು ದಾಸೋಹದಿಂದ ವಿತರಣೆ ಮಾಡಿದಾಗಲೇ ಸುಖೀ ಸಮಾಜ, ಸುಖೀ ಸಾಮ್ರಾಜ್ಯ ಸೃಷ್ಟಿಯಾಗಲು ಸಾಧ್ಯ ಎಂಬುದಕ್ಕೆ ಒತ್ತು ಕೊಡಲಾಗಿದೆ. ಕನಕದಾಸರ ನಿಲುವೂ ಸಹ ಅದೇ ರೀತಿಯದು:

**'ದಾರಿದ್ರ್ಯಕ್ಕೊದಗದ ದ್ರವ್ಯ ಪದಾರ್ಥದ**
**ಏರಿ ಇದ್ದರೇನು ಪರ್ವತವಿದ್ದರೇನು?'**
**'ಮಾಡು ದಾನ ಧರ್ಮ ಪರ ಉಪಕಾರವ ಮರೆಯದಿರೆಚ್ಚರಿಕೆ'**
**'ಭೋಗಿಸದೆ ಇಹಪರಕೆ ಗಳಿಸಿದರ್ಥ ಅಪಾರ್ಥ'**

ಕನಕದಾಸರು ಸಂಸಾರವನ್ನು ಬಿಟ್ಟು ವೈರಾಗ್ಯವನ್ನು ಹೊಂದಿ ದೈವಕೃಪೆಗೆ ಪಾತ್ರರಾಗಬೇಕೆಂದು ಹೇಳುವುದಿಲ್ಲ. ಸಂಸಾರದಲ್ಲಿದ್ದೂ ಅದನ್ನು ಸಾಧಿಸಲು ಸಾಧ್ಯ ಎಂಬುದನ್ನು ಕೆಳಗಿನ ಕೀರ್ತನೆಯಲ್ಲಿ ಹೇಳಿರುವುದನ್ನು ಮೆಲುಕು ಹಾಕಬಹುದು:

**ಸಂಸಾರ ಸಾಗರವನುತ್ತರಿಸುವಡೆ**
**ಕಂಸಾರಿ ನಾಮವೊಂದೇ ಸಾಕು ಮರುಳೆ ।ಪ।**

**ಯತಿಯಾಗಬೇಡ ನೀ ವೈರಾಗ್ಯವನೆ ಪಿಡಿದು**
**ಸತತ ವ್ರತವ ಮಾಡುವೆನೆಂಬ ಹಮ್ಮು ಬೇಡ**
**ಶೃತಿಸ್ಮೃತಿಯರಿತು ನಡೆವೆನೆಂಬ ಚೇಷ್ಟೆಯು ಬೇಡ**
**ರತಿಪತಿ ಪಿತನ ನಾಮವೊಂದೇ ಸಾಕು ಮರುಳೆ ।೧।**

**ತನುವ ದಂಡಿಸಿ ತುದಿಯ ಕೋಡುಗಲ್ಲಿನ ಮೇಲೆ**
**ವನಿತೆಯನು ಬಿಟ್ಟು ತಪವಿರಲು ಬೇಡ**
**ಅನುದಿನವು ನೀರೊಳಗೆ ಮುಳುಗಿ ನಡುಗಲು ಬೇಡ**
**ವನಜನಾಭನ ನಾಮ ನೆನೆಕಂಡ್ಯ ಮನವೆ ।೨।**

**ತೀರ್ಥಯಾತ್ರೆಯ ಮಾಡಿ ಬಹುವಿಧದಿ ಬಳಲಿ ಕೃ**
**ತಾರ್ಥನಾದೆನೆಂಬುವ ಹೆಮ್ಮೆ ಬೇಡ**
**ಪಾರ್ಥಸಾರಥಿ ಕಾಗಿನೆಲೆಯಾದಿಕೇಶವನ**
**ಕೀರ್ತನೆಯ ಮಾಡಿ ಮುಕುತಿಯ ಹೊಂದು ಮರುಳೆ ।೩।**

ತಮ್ಮ ಕೃತಿಗಳಲ್ಲಿ ಹಾಗೂ ಕೀರ್ತನೆಗಳಲ್ಲಿ ಸಾಂಸ್ಕೃತಿಕ ಬದುಕನ್ನು ಇವರು ಅಭಿವ್ಯಕ್ತಿಸಿರುವ ಹಾಗೆ ಬೇರೆಯವರು ಅಭಿವ್ಯಕ್ತಿಸಿಲ್ಲ ಎಂದರೆ ಅತಿಶಯೋಕ್ತಿಯಲ್ಲ. ಉದಾಹರಣೆಗೆ ಕೆಳಗಿನ ಕೀರ್ತನೆಯನ್ನು ಪರಿಶೀಲಿಸಬಹುದು:

**ಎನ್ನ ಕಂದ ಹಳ್ಳಿಯ ಹನುಮ ।ಪ।**
**ಚೆನ್ನಾಗೈದಾರ ಲಕ್ಷ್ಮಣದೇವರು ।ಅ।**



**ತುಪ್ಪ ಪಂಚಾಮೃತಗಳಂದು ಅಡವಿಗಡ್ಡೆಗಳಿಂದು**
**ಕರ್ಪೂರ ವೀಳ್ಯವಂದು ಕುರುಕು ಇಂದು**
**ಸುಪ್ಪತ್ತಿಗೆ ಮಂಚವಂದು ಹುಲ್ಲು ಹಾಸಿಗೆಯಿಂದು**
**ಶ್ರೀಪತಿ ರಾಘವ ಕ್ಷೇಮದಲೈದಾರೆ ।೧।**

**ನವ ವಸ್ತ್ರಗಳು ಅಂದು ನಾರಸೀರೆಗಳಿಂದು**
**ಹೂವಿನ ಗಂಟು ಅಂದು ಜಡೆಗಳಿಂದು**
**ಜವ್ವಾಜಿ ಕತ್ತುರಿಯಂದು ಭಸಿತಧೂಳಿಂದು**
**ಶ್ರೀವರ ರಾಘವ ಕ್ಷೇಮದಲೈದಾರೆ ।೨।**

**ಕನಕರಥಗಳಂದು ಕಾಲು ನಡಿಗೆಯಿಂದು**
**ಘನ ಛತ್ರಿ ಚಾಮರವಂದು ಬಿಸಿಲು ಇಂದು**
**ಸನಕಾದಿಗಳೋಲೈಪ ಆದಿಕೇಶವ ನಮ್ಮ**
**ಹನುಮೇಶ ರಾಘವ ಕ್ಷೇಮದಲೈದಾರೆ ।೩।**

–ಸೀತೆ ಹನುಮಂತರ ಮಧ್ಯೆ ಜರುಗಿದ ಸಂವಾದ ರೂಪದ ಕೀರ್ತನೆಯಿದು. ಪರದೇಸಿಯಾಗಿ ಅಶೋಕವನದಲ್ಲಿದ್ದ ಸೀತೆ ಈತ ರಾಮಭಕ್ತ ಎಂದು ಖಾತ್ರಿಯಾದ ಕೂಡಲೇ ತನ್ನ ಗಂಡನ ಯೋಗಕ್ಷೇಮದ ಬಗ್ಗೆ ಚಕಾರವೆತ್ತದೆ ಮೈದುನ ಲಕ್ಷ್ಮಣನ ಬಗ್ಗೆ ಕೇಳುತ್ತಾಳೆ. ಹನುಮಂತ ಲಕ್ಷ್ಮಣನ ಯೋಗಕ್ಷೇಮದ ಬಗ್ಗೆ ಚಕಾರವೆತ್ತದೆ ರಾಮನ ಯೋಗಕ್ಷೇಮವನ್ನೇ ಹೇಳುತ್ತಾನೆ. ಎಂಥ ವಿರೋಧಾಭಾಸ ಇಬ್ಬರ ಪ್ರಶ್ನೋತ್ತರಗಳಲ್ಲಿ ತುಂಬಿತುಳುಕುತ್ತಿದೆ ಎನ್ನಿಸದಿರದು! ಆದರೆ ಕನಕದಾಸರು ಸಂಸ್ಕೃತಿಯ ಸೂಕ್ಷ್ಮಗಳನ್ನು ಎಷ್ಟು ಸುಂದರವಾಗಿ ಸುಸಂಸ್ಕೃತ ರೀತಿಯಲ್ಲಿ ಕಂಡರಿಸಿದ್ದಾರೆ ಎಂಬುದು ಮನನೀಯ. ಹೆಣ್ಣು ಗಂಡನ ಹೆಸರನ್ನು ಹೇಳಬಾರದು ಎಂಬ ನಂಬಿಕೆ, ಪದ್ಧತಿ ಹಿಂದೆ ನಮ್ಮ ಸಮಾಜದಲ್ಲಿತ್ತು. ಈಗಲೂ ಕೆಲವು ಪಂಗಡಗಳಲ್ಲಿ ಅದನ್ನು ಅನುಸರಿಸುವುದುಂಟು. ಆದ್ದರಿಂದಲೇ ಸೀತೆ "ಎನ್ನ ಕಂದ ಹಳ್ಳಿಯ ಹನುಮ ಚೆನ್ನಾಗೈದಾರ ರಾಮದೇವರು" ಎಂದು ಕೇಳದೆ "ಚೆನ್ನಾಗೈದಾರ ಲಕ್ಷ್ಮಣದೇವರು" ಎಂದು ಕೇಳುತ್ತಾಳೆ. ಸೂಕ್ಷ್ಮಮತಿಯಾದ ಹನುಮಂತ– ಸುವ್ವಿ ಎನ್ನುವಾಗಲೇ ರಾಗ ಯಾವುದೆಂದು ಅರ್ಥ ಮಾಡಿಕೊಂಡು– ಲಕ್ಷ್ಮಣನ ಬಗ್ಗೆ ಚಕಾರವೆತ್ತದೆ ರಾಮನ ಯೋಗಕ್ಷೇಮವನ್ನೇ ಹೇಳುತ್ತಾ

ಹೋಗುತ್ತಾನೆ. ಒಂದು ಸಂಸ್ಕೃತಿಯ, ಒಂದು ಮನಸ್ಸಿನ ಸೂಕ್ಷ್ಮಾತಿಸೂಕ್ಷ್ಮ ಎಳೆಗಳನ್ನು ಅಷ್ಟೇ ಸೂಕ್ಷ್ಮಾತಿಸೂಕ್ಷ್ಮವಾಗಿ ಸ್ವಾರಸ್ಯವಾಗಿ ಚಾತುರ್ಯಪೂರ್ಣವಾಗಿ ದಾಖಲಿಸಬೇಕಾದರೆ ಕವಿಗೆ ಸೂಕ್ಷ್ಮ ಗ್ರಹಣಶಕ್ತಿ ಹಾಗೂ ಅಗಾಧ ಪ್ರತಿಭಾಶಕ್ತಿ ಇರಬೇಕಾಗುತ್ತದೆ. ಕನಕದಾಸರು ಅದನ್ನಿಲ್ಲಿ ಸಮರ್ಥವಾಗಿ ಕಲಾತ್ಮಕವಾಗಿ ನಿರ್ವಹಿಸಿರುವುದನ್ನು ಕಾಣಬಹುದು. 'ಎನ್ನ ಕಂದ ಹಳ್ಳಿಯ ಹನುಮ' ಎಂಬ ಸಂಬೋಧನೆ ಒಳಗೊಂದು ಹೊರಗೊಂದು ಇರದ ಜನಪದ ಸಂಸ್ಕೃತಿಯ ತುಂಬಿದೆದೆಯ ಪ್ರೀತಿವಿಶ್ವಾಸದ ಪಡಿಯಚ್ಚಿನಂತಿದ್ದರೆ, 'ಐದಾರ?' ಎಂಬ ಪ್ರಯೋಗ ಎದಾರು (ಎದೆ+ಹಾರು=ಭಯ) ಇಲ್ಲದ ಜನಪದ ಭಾಷೆಯ ವಿಚಿತ್ರ ಭಂಗಿಯಿಂದ ಮನಸೆಳೆಯುತ್ತದೆ.

೭

ಇಪ್ಪತ್ತನೆಯ ಶತಮಾನದಲ್ಲಿ ಕುವೆಂಪು ಅಧ್ಯಾತ್ಮವನ್ನು ಹಾಗೂ ವೈಚಾರಿಕತೆಯನ್ನು ಮೈಗೂಡಿಸಿಕೊಂಡಿದ್ದ ಹಾಗೆ ಹದಿನಾರನೆಯ ಶತಮಾನದಲ್ಲಿ ಕನಕದಾಸರು ಮೈಗೂಡಿಸಿಕೊಂಡು ಸಮರ್ಥವಾಗಿ ಅವೆರಡನ್ನೂ ತಮ್ಮ ಸಾಹಿತ್ಯದಲ್ಲಿ ಅಭಿವ್ಯಕ್ತಿಸಿದರು. ಇಬ್ಬರು ಕಣಿವೆಯಾಳದಿಂದ ಬಂದು ಶಿಖರವೇರಿದ್ದು ಯೋಗಾಯೋಗ ಎನ್ನಬಹುದು.

ಕನಕದಾಸರು ಕರ್ಮಠರ ಕಂದಾಚಾರಗಳನ್ನು, ಅರ್ಥವಿಲ್ಲದ ಆಚರಣೆಗಳನ್ನು ತಮ್ಮ ನಿರ್ಭೀತ ವಿಚಾರಧಾರೆಯಿಂದ ಖಂಡಿಸಿದ ಹಾಗೆ ಬೇರೆ ಯಾವ ದಾಸರೂ ಇಷ್ಟು ಪ್ರಖರ ರೀತಿಯಲ್ಲಿ ಖಂಡಿಸಿಲ್ಲ. ಸನಾತನ ಭದ್ರಕೋಟೆಯ ಭೇದವಾದಿಗಳಿಗೆ ತಮ್ಮ ವಿಚಾರಧಾರೆಯ ಜಾಪಾಳ ಮಾತ್ರೆಯಿಂದ ಸುಸ್ತು ಮಾಡಿದವರು. ಆದರೆ ಅವರ ಟೀಕೆಯ ಹಿಂದಿನ ಸದುದ್ದೇಶವನ್ನು ಗ್ರಹಿಸಿದ ಜನ 'ಇವನು ನಮ್ಮ ಗಂಟಲಿಗೆ ಗಾಳ, ಎದೆಗೆ ಶೂಲ'ವಾದನಲ್ಲ ಎಂದು ಎದೆಗುದಿಗೊಂಡರೇ ವಿನಾ ಡೊಂಕನ್ನು ತಿದ್ದಿಕೊಂಡು ನೆಟ್ಟಗಾಗಲು ಬಯಸಲಿಲ್ಲ. 'ಕದವನ್ನಿಕ್ಕಿದಳಿದಕೋ ಗಯ್ಯಾಳಿ ಮೂಳಿ' ಎಂದು ಕದವನ್ನಿಕ್ಕಿಕೊಂಡರು ಅಷ್ಟೆ. ಅವರು ಅರ್ಥವಿಲ್ಲದ ಕಂದಾಚಾರಗಳನ್ನು ಹೇಗೆ ಖಂಡಿಸಿದ್ದಾರೆ ಎಂಬುದಕ್ಕೆ ಕೆಲವು ಉದಾಹರಣೆಗಳನ್ನು ನೋಡಬಹುದು.

ಇವರು ಗಯಾ ಕ್ಷೇತ್ರಕ್ಕೆ ಹೋಗಿದ್ದಾಗ, ಅಲ್ಲಿ ಸತ್ತವರಿಗೆ ಪಿಂಡ ಹಾಕುವುದನ್ನು ನೋಡಿ ಕಟ್ಟಿದ ಕೀರ್ತನೆ 'ಆವ ಕರ್ಮವೊ ಇದು ಆವ ಧರ್ಮವೊ' ಎಂಬುದರಲ್ಲಿ "ಎಳ್ಳು ಮೀನು ನುಂಗಿ ಹೋಯಿತು, ದರ್ಭೆ ನೀರೊಳು ಹರಿದು



ಹೋಯಿತು" ಎಂದು ಲೇವಡಿ ಮಾಡಿರುವುದೇ ಅಲ್ಲದೆ "ಹೇಳುವವನು ಅವಿವೇಕಿ, ಕೇಳುವವನು ಅಜ್ಞಾನಿ, ಹೇಳುವ ಕೇಳುವ ಇಬ್ಬರ ಸೊಲ್ಲ ನಮ್ಮ ಆದಿಕೇಶವ ಬಲ್ಲ" ಎಂದು ಹೇಳುವಲ್ಲಿ ಕನಕದಾಸರ ನಿಶಿತಮತಿ, ನಿರ್ಭೀತ ಪ್ರವೃತ್ತಿ ಎದ್ದು ಕಾಣುತ್ತದೆ.

ಪುತ್ರನಿಲ್ಲದೆ ಪರಗತಿಯಿಲ್ಲ. (ಅಪುತ್ರಸ್ಯ ಗತಿರ್ನಾಸ್ತಿ) ಎಂಬ ಸಾಂಪ್ರದಾಯಕ ಸನಾತನ ನಂಬಿಕೆಯನ್ನು ಮೊದಲ ಬಾರಿಗೆ ಪ್ರಶ್ನಿಸಿ ಅದರಲ್ಲಿ ಹುರುಳಿಲ್ಲ ಎಂಬುದನ್ನು ಕನಕದಾಸರು "ಮಗನಿಂದ ಗತಿಯುಂಟೆ ಜಗದೊಳಗೆ। ನಿಗಮಾರ್ಥ ತತ್ತ್ವವಿಚಾರದಿಂದಲ್ಲದೆ" ಎಂಬ ಕೀರ್ತನೆಯಲ್ಲಿ ಮಂಥನ ಮಾಡಿದ್ದಾರೆ. ಬಹುಶಃ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಇಂತ ನಂಬಿಕೆಯ ಬೇರನ್ನು ಜಗ್ಗಿಸಿ ಅಲುಗಾಡಿಸಿ ಅಲ್ಲಗಳೆದವರಲ್ಲಿ ಇವರೇ ಮೊದಲಿಗರೆನ್ನಬಹುದು. ಅನುಕ್ತವಾದರೂ ಪರೋಕ್ಷವಾಗಿ ಸ್ತ್ರೀವಾದಿ ನಿಲುವು ಇಲ್ಲಿ ಕಂಡು ಬರುತ್ತದೆ. ಅಂದರೆ ಮಗನಿಲ್ಲದಿದ್ದರೂ, ಮಗಳಿದ್ದರೂ, ಸಿಗಬೇಕಾದ ಯೋಗ್ಯರಿಗೆ ಸದ್ಗತಿ ಸಿಕ್ಕಿಯೇ ಸಿಕ್ಕುತ್ತದೆ ಎಂಬ ಧ್ವನಿ ಇರುವುದನ್ನು ಕಾಣಬಹುದು.

ಯಾವುದೇ ಮತಧರ್ಮದ ಅಂತಃಸತ್ತ್ವವನ್ನು–ತತ್ತ್ವವನ್ನು ಆಮೂಲಾಗ್ರವಾಗಿ ಅರಿತುಕೊಳ್ಳದೆ, ಬರಿಯ ಸೋಗಲಾಡಿತನದ ಶುಷ್ಕ ಆಚಾರಗಳಲ್ಲಿ ನಿರತರಾದ ಡಂಭಾಚಾರದ ಕಪಟಿಗಳ ಜುಟ್ಟು ಹಿಡಿದು ನೀರೊಳಗೆ ಅದ್ದಿ ಅದ್ದಿ ಜಾಲಾಡಿರುವುದಕ್ಕೆ ಕೆಳಗಿನ ಕೀರ್ತನೆಯನ್ನು ನೋಡಬಹುದು:

**ತೀರ್ಥ ಪಿಡಿದವರೆಲ್ಲ ತಿರುನಾಮಧಾರಿಗಳೆ– ಜನ್ಮ ।ಪ।**
**ಸಾರ್ಥಕವಿಲ್ಲದವರೆಲ್ಲ ಭಾಗವತರೆ ।ಅ।**

**ಮೂಗ್ಹಿಡಿದು ನೀರೊಳಗೆ ಮುಳುಗಿ ಜನತಪ ಮಾಡಿ**
**ನಿಗಮಾಗಮ ಪುರಾಣಗಳನ್ನೋದಿ ತಿಳಿದು**
**ಬಾಗಿ ಪರಸ್ತ್ರೀಯರನು ಬಯಸಿ ಕಣ್ಣಿಡುವಂಥ**
**ಯೋಗಭ್ರಷ್ಟರೆಲ್ಲ ದೇವ ಬ್ರಾಹ್ಮಣರೆ?**

**ಪಟ್ಟೆ ನಾಮವ ಬಳಿದು ಪಾತ್ರೆ ಕೈಯಲಿ ಹಿಡಿದು**
**ಗುಟ್ಟಿನಲಿ ಜಪಿಸುವ ಗುರುತರಿಯದೆ**
**ಕೆಟ್ಟ ಕೂಗನು ಕೂಗಿ ಹೊಟ್ಟೆಯನು ಹೊರೆವಂಥ**
**ಪೊಟ್ಟೆಗುಡುಮಗಳೆಲ್ಲ ಪರಮ ವೈಷ್ಣವರೆ? ।೧।**

**ಲಿಂಗಾಂಗದೊಳಗಿರುವ ಚಿನ್ಮಯವ ತಿಳಿಯದೆ**
**ಅಂಗಲಿಂಗದ ನೆಲೆಯ ಕುರುಹರಿಯದೆ**
**ಜಂಗಮಸ್ಥಾವರದ ಹೊಲಬನರಿಯದ ಇಂಥ**
**ಭಂಗಿಮುಕ್ಕಳೆಲ್ಲ ನಿಜ ಲಿಂಗವಂತರೆ?** ।೩।

**ಅಲ್ಲ ಖುದಾ ಎಂಬ ಅರ್ಥವನು ತಿಳಿಯದೆ**
**ಮುಲ್ಲ ಶಾಸ್ತ್ರದ ನೆಲೆಯ ಮುನ್ನರಿಯದೆ**
**ಪೊಳ್ಳು ಕೂಗನು ಕೂಗಿ ಬಗುಳಿ ಬಾಯಾರುವಂಥ**
**ಕಳ್ಳ ಸುಳ್ಳರಿಗೆಲ್ಲ ವೀರ ಸ್ವರ್ಗವುಂಟೆ?** ।೪।

**ವೇಷಭಾಷೆಯ ಕಲಿತು ಗೋಸಾಯಿ ಉಡೆದೊಟ್ಟು**
**ಆಸೆಯನು ತೊರೆಯದೆಯೆ ತಪಕೆ ಕುಳಿತು**
**ವಾಸನೆಯ ಗುರುತಿನಾ ಹೊಲಬನರಿಯದ ಇಂಥ**
**ವೇಷಧಾರಿಗಳೆಲ್ಲ ಸಂನ್ಯಾಸಿಗಳೆ?** ।೫।

–ಕನಕದಾಸರು ಹೇಗೆ ಕಾಪಟ್ಯದ, ಮೌಢ್ಯದ, ಸೋಗಲಾಡಿತನದ, ಕಂದಾಚಾರಗಳ ಕಡುವಿರೋಧಿ ಎಂಬುದು ಇದರಿಂದ ತಿಳಿಯುತ್ತದೆ. ವೈಚಾರಿಕತೆಯ ಎದೆಗಾರಿಕೆಯುಳ್ಳ ಕನಕದಾಸರಂಥ ಮಾಸಾಳಿಗೆ ಮತಧರ್ಮಗಳ 'ತೊಳ್ಳೆ ನಡುಕ'ದ ಏಸಾಳು ಯಾವ ಲೆಕ್ಕ? ಎಂಬ ಭಾವ ಓದುಗರಲ್ಲಿ ತಟಕ್ಕನೆ ಮೂಡದಿರದು.

'ಕಣಿಯ ಹೇಳಬಂದೆ ನಾರಾಯಣನಲ್ಲದೆ ಇಲ್ಲವೆಂದು' ಎಂಬ ಕೀರ್ತನೆಯಲ್ಲಿ ಕಣಿ ಹೇಳುವ ಕೊರವಂಜಿಯ ತಂತ್ರವನ್ನು ಬಳಸಿಕೊಂಡು, ಆ ಕಾಲದಲ್ಲಿ ರೂಢಿಯಲ್ಲಿದ್ದ ತಾಮಸಾಚರಣೆಗಳನ್ನು, ಅಮಾನವೀಯ ಪದ್ಧತಿಗಳನ್ನು, ಮೇಲ್ವರ್ಗದವರ ಖುಷಿಗಾಗಿ ಹುಟ್ಟು ಹಾಕಿದ ಬೆತ್ತಲೆ ಸೇವೆಯನ್ನು ನೋಡಿ ಮನನೊಂದ ಕನಕದಾಸರು, ಅವಿದ್ಯೆ ಅಜ್ಞಾನ ಮೌಢ್ಯಗಳ ಕತ್ತಲ ಕೋಣೆಯಲ್ಲಿ ಕಾಲ ಹಾಕುತ್ತಿರುವ ಜನಸಾಮಾನ್ಯರಿಗೆ ತಿಳಿಯಹೇಳಲು ಯತ್ನಿಸಿದ್ದಾರೆ. ಹದಿನಾರನೆಯ ಶತಮಾನದಲ್ಲೇ ಬೆತ್ತಲೆ ಸೇವೆಯ ವಿರುದ್ಧ ದನಿಯೆತ್ತಿರುವ ಕನಕದಾಸರ ಸಾಮಾಜಿಕ ವೈಚಾರಿಕ ಕಳಕಳಿಯನ್ನು ಮೆಚ್ಚಲೇಬೇಕು. ಅಧ್ಯಾತ್ಮಕ್ಕೆ ಒತ್ತು ಕೊಟ್ಟಂತೆಯೇ ಸಮಾಜದ ಶುದ್ಧೀಕರಣಕ್ಕೂ ಪ್ರಖರ ರೀತಿಯಲ್ಲಿ ಒತ್ತು ಕೊಟ್ಟಿರುವುದನ್ನು ಈ ಪ್ರಮಾಣದಲ್ಲಿ ಬೇರೆ ದಾಸರಲ್ಲಿ ಕಾಣಲು ಸಾಧ್ಯವಿಲ್ಲ.



ಶೀಲರಹಿತ ಬ್ರಾಹ್ಮಣನಾಗಲೊಲ್ಲದೆ ಶೀಲವಂತ ಚಾಂಡಾಲನಾಗಲು ಬಯಸುವ ಕನಕದಾಸರ ನಿಲುವು ತುಂಬ ಪ್ರಗತಿಪರವಾದದ್ದು–

**ಕಾಲ ಕರ್ಮದೊಳುಪೇಕ್ಷೆಯ ಮಾಡಿ ಹರಿಭಕುತಿ**
**ಶೀಲ ರಹಿತ ಬ್ರಾಹ್ಮಣನಾಗಲೊಲ್ಲೆ**
**ಕೀಲನರಿತು ಹರಿಭಕುತಿ ಮಾಳ್ಪ ಪರ ಚಾಂ**
**ಡಾಲನ ಮನೆಬಾಗಿಲ ಕಾಯಿಸೆನ್ನ**

–ಶೀಲರಹಿತ ಬ್ರಾಹ್ಮಣನಿಗೆ ಬಹಿಷ್ಕಾರ ಹಾಕಿ, ಶೀಲ ಸಹಿತ ಚಾಂಡಾಲನಿಗೆ ಮಣೆ ಹಾಕಿ ಗೌರವ ನೀಡಿರುವುದು ಇವತ್ತಿನವರಿಗೆ ದೊಡ್ಡದಾಗಿ ಕಾಣದಿದ್ದರೂ, 'ಜಾತಿಯ ಹಲ್ಲು ಹಿಡಿದು ನೋಡಿಯೇ ವ್ಯಕ್ತಿಯ ಬೆಲೆ ಕಟ್ಟುತ್ತಿದ್ದ' ಹದಿನಾರನೆಯ ಶತಮಾನದ ಸಮಾಜ, ಜಾತಿಯ ಅಷ್ಟಪದಿಯ ಹಿಡಿತದಲ್ಲಿ ನರಳುತ್ತಿದ್ದಾಗ, ಬೊಗಳು ಸನ್ನಿಯ ಕುನ್ನಿಗಳೆದುರು ಇಂಥ ನನ್ನಿಯನ್ನು ಹೇಳಬೇಕಾದರೆ ಕನಕದಾಸರಂಥ ಆತ್ಮಬಲವಿದ್ದವರೇ ಆಗಬೇಕು ಎಂದು ಎಂಥವರಿಗಾದರೂ ಅನ್ನಿಸುತ್ತದೆ. ಇನ್ನು ಹೆಚ್ಚು ಉದಾಹರಣೆಗಳನ್ನು ಕೊಡಬೇಕಾದ ಅಗತ್ಯವಿಲ್ಲ. ಆದರೆ ಹಿಂದುಳಿದವರ, ದೀನದಲಿತರ ಉದ್ಧಾರದ ಬಗೆಗೆ ಹೇಳಿರುವ ಅರ್ಥಪೂರ್ಣ ವಿಚಾರಪೂರ್ಣ ನವನೀತಸಮ ಮಾತೊಂದನ್ನು ಇಲ್ಲಿ ಉದಾಹರಿಸಲೇಬೇಕು:

ಶ್ರೀರಂಗಪಟ್ಟಣದ ರಂಗನಾಥನನ್ನು ಕುರಿತು ರಚಿಸಿರುವ 'ಯಾಕೆ ನೀನಿಲ್ಲಿ ಪವಡಿಸಿದೆ ಹರಿಯೆ– ಜಗದೇಕ ವಿಖ್ಯಾತ ಪಶ್ಚಿಮ ರಂಗಧಾಮ' ಎಂಬ ಕೀರ್ತನೆಯಲ್ಲಿ ಸದಾ ಮಲಗಿರುವ ರಂಗನಾಥನನ್ನು ಕಂಡು ದಶಾವತಾರ ಲೀಲೆಗಳಲ್ಲಿ ಶತ್ರುಗಳೊಡನೆ ಹೋರಾಡಿ ಆಯಾಸಗೊಂಡು ಮಲಗಿದ್ದೀಯಾ ಎಂದು ಬಗೆಬಗೆಯಾಗಿ ಕೇಳಿದರೂ, ಕಮಕ್‌ಕಿಮಕ್ ಎನ್ನದ ರಂಗನಾಥನಿಗೆ ಕೀರ್ತನೆಯ ಅಂತ್ಯದಲ್ಲಿ ಒಂದು ಕಿವಿ ಮಾತು ಹೇಳಿದ್ದಾರೆ– "ಇನ್ನೆಷ್ಟು ಕಾಲ ನೀನಿಲ್ಲಿ ಮಲಗಿದ್ದರೂ। ನಿನ್ನನೆಬ್ಬಿಸುವವರನೊಬ್ಬರನೂ ಕಾಣೆ" ಎಂದು. ಮೂಲಾಧಾರದಿಂದ ಉನ್ಮುಖಿಗೊಂಡು ಹೊರಟ ಕುಂಡಲಿನೀ ಶಕ್ತಿ ಸಹಸ್ರಾರದ ಅಮೃತ ಕಲಶಕ್ಕೆ ಬಾಯಿ ಹಾಕಿ ಚಪ್ಪರಿಸುತ್ತಾ ಅಮೃತದ 'ಸವಿ'ಯನ್ನೂ ಸಂಗೀತದ 'ಧ್ವನಿ'ಯನ್ನೂ ಶ್ರೀಮನ್ ಮೌನಿಯಾಗಿ ಅನುಭವಿಸುತ್ತದೆ. ಒಳನೋಟವಿದ್ದವರಿಗೆ ಆ 'ಧ್ವನಿ'ಯ ಸೆಲೆ ಸನ್ನೆಗೋಲಾಗಿ ಕೆಲಸ ಮಾಡುತ್ತಿರುವುದು ಅರಿವಿಗೆ ಬರುತ್ತದೆ. ಆ ಮಾತು ನಿಡುನಿದ್ರೆಯಲ್ಲಿರುವ ದಲಿತ ಹಿಂದುಳಿದ ವರ್ಗದ ಅಸಂಖ್ಯಾತ ಶ್ರೀಸಾಮಾನ್ಯ ರಂಗನಾಥರಿಗೆ ಹೇಳಿದ ಕಿವಿಮಾತಾಗಿದೆ ಎನ್ನಿಸದಿರದು! ಇದುವರೆಗೆ

ದಲಿತ ಹಿಂದುಳಿದ ವರ್ಗದವರ ಎಲ್ಲ ಸುಖ ಸವಲತ್ತುಗಳನ್ನು ತಾವೇ ಲಪಟಾಯಿಸಿ ದೊರೆಜೀವನ ಸಾಗಿಸಿದ ಮುಂದುವರಿದ ವರ್ಗದವರು, ಅಜ್ಞಾನದ ನಿಡುನಿದ್ರೆಯಲ್ಲಿರುವ ಹಿಂದುಳಿದವರನ್ನು ಎಚ್ಚರಗೊಳಿಸಿದರೆ ಸುಖಸವಲತ್ತುಗಳಲ್ಲಿ ನಮಗೂ ಸಮಭಾಗ ಬರಬೇಕೆಂದು ಹಕ್ಕು ಚಲಾಯಿಸುತ್ತಾರೆ, ಆಗ ನಮ್ಮ ಕಾಲ ಮೇಲೆ ನಾವೇ ಕಲ್ಲು ಎತ್ತಿ ಹಾಕಿಕೊಂಡಂತಾಗುತ್ತದೆ ಎಂದು ಭಾವಿಸಿ ಎಚ್ಚರಗೊಳಿಸುವ ತಂಟೆಗೇ ಹೋಗದೆ 'ದಿಮ್ಮಲೆ ರಂಗ' (<ತಿರುಮಲೈರಂಗ) ಎಂದು ಸುಮ್ಮನಿದ್ದು ಬಿಡುತ್ತಾರೆ. ಆದ್ದರಿಂದ ನೀವಾಗಿಯೇ ಮೇಲೇಳಬೇಕು, ಕುಂಭಕರ್ಣ ನಿದ್ರೆ ಬಿಡಬೇಕು. ಕುಂಭಿನಿಯ ಕರ್ಣಕುಂಡಲ ಕಿರೀಟವಾಗಿ ಬೆಳಗಬೇಕು ತೊಳಗಬೇಕು ಎಂಬ ಸತ್ಯವನ್ನು ದ್ರಷ್ಟಾರರಂತೆ ಸಾರಿರುವುದು ಕನಕದಾಸರ 'ನತಜನಹಿತ'ದ ನಿಲುವನ್ನು ರುಜುವಾತುಗೊಳಿಸುತ್ತದೆ.

## ೮

ಸವಕಲಾದ ಸುಸಂಸ್ಕೃತ ಶಿಷ್ಟ ಭಾಷೆಯನ್ನು ಬದಿಗಿರಿಸಿ, ಗರಿ ಮುರಿಯದ ಆಡುಮಾತನ್ನು ಸಾಹಿತ್ಯದ ಗಾದಿಗೇರಿಸಿದಾಗ ಒಂದು ಹೊಸ ಹೊಗರು ಹೊಮ್ಮುತ್ತದೆ; ಜೀವಕಳೆಯ ಚಿಗುರು ನಳನಳಿಸುತ್ತದೆ; ಜನಪದ ಜೀವನದ ಸಮಷ್ಟಿ ಸತ್ತ್ವ ಅದಕ್ಕೆ ಗೋಡುಗೊಬ್ಬರವಾಗಿ ಜೀವದ್ರವ್ಯವನ್ನು ನೀಡಿ ಪೋಷಿಸುತ್ತದೆ. ಯಾವ ಸಾಹಿತ್ಯದಲ್ಲಿ ಜಾನಪದ ಸತ್ತ್ವದ ಜೀವದ್ರವ್ಯ ಇರುವುದಿಲ್ಲವೋ ಅದು ಕಾಗದದ ಹೂವಿನಂತೆ ನೀರಸವಾಗಿ ನಿರ್ಗಂಧವಾಗಿ ಇರುತ್ತದೆ. ಕನಕದಾಸರ ಬಹುತೇಕ ಕೀರ್ತನೆಗಳು ಜಾನಪದ ಸೊಗಡಿನ ಹೊಳೆಯಲ್ಲಿ ಮಿಂದು, ಮಿರಿ ಮಿರಿ ಮಿಂಚುತ್ತಾ, ಸಹೃದಯರ ಮನಸ್ಸನ್ನು ಸೆರೆಹಿಡಿಯುತ್ತವೆ. ಉದಾಹರಣೆಗೆ ಎಲ್ಲಾರು ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ, ಡೊಂಕುಬಾಲದ ನಾಯಕರೆ, ನಾವು ಕುರುಬರು, ದೇವಿ ನಮ್ಮ ದ್ಯಾವರು ಬಂದರು ಬನ್ನೀರೆ ಮೊದಲಾದ ಕೀರ್ತನೆಗಳನ್ನು ನೋಡಬಹುದು. ಡೊಳ್ಳಿನ ಹಾಡಿನ ಧಾಟಿಯ 'ದೇವಿ ನಮ್ಮ ದ್ಯಾವರು ಬಂದರು ಬನ್ನೀರೆ' ಎಂಬ ಕೀರ್ತನೆಯಲ್ಲಿ ವಿಷ್ಣುವಿನ ವಿವಿಧ ಅವತಾರಗಳನ್ನು, ಸಂಬಂಧಿಸಿದ ವಿವಿಧ ವ್ಯಕ್ತಿಗಳನ್ನು ನಮ್ಮ ಜನಪದ ಭಾಷೆಯಲ್ಲಿ ಹಿಡಿದುಕೊಟ್ಟಿರುವ ಮೋಡಿ ಅನನ್ಯವಾದದ್ದು; ಕನಕದಾಸರಂಥ ಜಾನಪದ ಸತ್ತ್ವಸಮನ್ವಿತರಿಗೆ ಮಾತ್ರ ಸಾಧ್ಯವಾಗುವಂಥದ್ದು. ಬ್ರಹ್ಮನನ್ನು ಬಂಗಾರದೊಡಲ ಎಂದು, ಹಿರಣ್ಯಾಕ್ಷನನ್ನು ಚಿನ್ನದ ಕಣ್ಣ ಎಂದು, ಕಾರ್ತವೀರ್ಯಾರ್ಜುನನನ್ನು ಸಾವಿರ ತೋಳಿನ ಆವಿನ ಕಳ್ಳ ಎಂದು, ರಾವಣನನ್ನು



ಹೆಂಗಸುಗಳ್ಳ ಎಂದು ಕನ್ನಡೀಕರಿಸಿ ಜನಸಾಮಾನ್ಯರಿಗೆ ನಿಲುಕುವಂತೆ ಮಾಡಿರುವುದು ಕನಕದಾಸರ ಶ್ರೀಸಾಮಾನ್ಯ ದೃಷ್ಟಿಯನ್ನು ಸಾಬೀತುಪಡಿಸುತ್ತದೆ. ಈ ಕೀರ್ತನೆಯಲ್ಲಿ ಬರುವ ಮ್ಯಾ ಎಂಬ ಶಬ್ದ ಜಾನಪದ ಸೊಗಡಿನ ಜಲದಕಣ್ಣಿನಂತಿದೆ. ಜನಪದ ಜೀವನದ ಗಾಢ ಪರಿಚಯವಿಲ್ಲದ, ಹಾಗಾಗಿ ಜನಪದ ಭಾಷೆಯ ತಿರುವು–ಮುರುವುಗಳ, ಬಾಗು–ಬಳುಕುಗಳ, ಹಿಗ್ಗು–ಕುಗ್ಗಳ ಗಂಧವೇ ಗೊತ್ತಿರದ, ಬಾರಿನಲ್ಲಿ ಕುಳಿತು ಇಹಲೋಕ ಮರೆತು ಪರಲೋಕ ಕಾಣುವ ಬಗಲು ಚೀಲದ ಗಡ್ಡಧಾರಿಗಳು ಕುರಿಗಳ ಅರಚುದನಿ 'ಮ್ಯಾ'ವನ್ನೇ ಇಲ್ಲಿ ಕನಕದಾಸರು ಬಳಸಿದ್ದಾರೆ ಎಂದು ಬುದ್ಧಿಜೀವಿ ಭಂಗಿಯಲ್ಲಿ ಅರ್ಥೈಸಿದ್ದುಂಟು. ಆದರೆ ಅದು ನಿಜವಾಗಿ ಅಮ್ಮಯ್ಯ ಎಂಬ ಶಬ್ದದ ಸವೆದ ರೂಪ, ಜನಪದ ರೂಪ. ಹಳೆಯ ಮೈಸೂರಿನ ಕಡೆ ಅಮ್ಮೋ (ಅಮ್ಮ+ಓ) ಎಂಬುದು ಹಳ್ಳಿಗಾಡಿನ ಜನರ ಬಾಯಲ್ಲಿ ಬರಿಯ 'ಮೋ' ಎಂಬ ರೂಪ ತಾಳಿರುವಂತೆ, ಅಮ್ಮಯ್ಯ ಎಂಬುದು ಅಮ್ಯಾ ಆಗಿ ಕೊನೆಗೆ 'ಮ್ಯಾ' ಆಗಿದೆ. ಆದ್ದರಿಂದ 'ಮ್ಯಾ' ಎಂಬುದು ಅಮ್ಮಯ್ಯ ಎಂಬ ಸ್ತ್ರೀ ಸಂಬೋಧನಾ ಶಬ್ದದ ಕೂಸು ಎಂಬುದು ಸುವಿದಿತ. ಪ್ರಹ್ಲಾದನನ್ನು 'ಪುಟ್ಟ' ಎಂಬ ಹೆಸರಿನ ಮೂಲಕ ಹೆಸರಿಸಿರುವುದೂ ಕೂಡ ಗಮನಾರ್ಹ.

ಅವರ ಕಾವ್ಯಗಳಲ್ಲಿಯೂ ಜಾನಪದ ಸೊಗಡಿನ ಶಬ್ದರೂಪಗಳು ಹೇರಳವಾಗಿ ಬಳಕೆಯಾಗಿವೆ. ಕಾಡಾರಂಬ=ಖುಷ್ಕಿ ಜಮೀನಿನ ಕೃಷಿ, ಗೊಂಗಡಿ=ಕಂಬಳಿ ಕೊಪ್ಪೆ, ಆಯಕಗೆ =ಆ ಅಕ್ಕನಿಗೆ, ಮಂದನ ಮಜ್ಜಿಗೆ= ಗಟ್ಟಿ ಮಜ್ಜಿಗೆ, ಈಪಾಟಿ=ಇಷ್ಟೊಂದು. ಈಸು=ಇಷ್ಟು, ಏಸು=ಎಷ್ಟು, ಓಡುಗೆಯ್ಯ=ಈಶ್ವರ (ಓಡು=ಬೋಕಿ, ಭಿಕ್ಷಾಪಾತ್ರೆ) ಹೆರೆದಲಗ=ಚಂದ್ರಶೇಖರ, ಜಲದ ದಾರಿ=ಯೋನಿ, ಮೈನೀರು=ಮೂತ್ರ, ಎಜ್ಜ=ರಂದ್ರ ಮುಂತಾದ ಶಬ್ದಗಳು ಗಿಡಿಕಿರಿದಿವೆ. ಹಾಗೆಯೇ ವಿಷ್ಣುವಿನ ದಶಾವತಾರ ಲೀಲೆ, ಕೃಷ್ಣಲೀಲೆಗಳನ್ನು ಕುರಿತ ಕೀರ್ತನೆಗಳಲ್ಲಿ ಜಾನಪದ ಸೊಗಡು ತುಂಬಿ ತುಳುಕುತ್ತದೆ. ಉದಾಹರಣೆಗೆ ಗುಮ್ಮ=ದೆವ್ವ, ಚಾಚಿ=ಎದೆ, ಸ್ತನ; ಪಾಚಿಕೊಳ್ಳು=ಮಲಗಿಕೊಳ್ಳು,, ಕಳ್ಳ=ಮೀನು (ಮತ್ಸ್ಯಾವತಾರವನ್ನು ಹೆಸರಿಸುವಾಗ 'ಕಳ್ಳರಲ್ಲಿ ಮಹಾಕಳ್ಳ' ಎಂದು ಬಳಸಲಾಗಿದೆ) ಮುಂತಾದ ತಾಜಾ ಶಬ್ದಗಳನ್ನು ನಾವು ಕಾಣುತ್ತೇವೆ.

ಜನಪದ ಸಂಗೀತ ಧಾಟಿಯನ್ನು ಬಳಸಿಕೊಂಡಿರುವುದಲ್ಲದೆ ಜನಪದ ಭಾಷೆಯ ಧ್ವನ್ಯರ್ಥವನ್ನು ಸೂಕ್ತ ಸಂದರ್ಭದಲ್ಲಿ ಸೂರೆ ಮಾಡಿರುವುದಕ್ಕೆ 'ಎಂಥ ಟವಳಿಗಾರನಮ್ಮ' ಎಂಬ ಕೀರ್ತನೆಯ ಒಂದು ಚರಣದ ಮೇಲೆ ಕಣ್ಣಾಡಿಸಬಹುದು.

**ಬಳೆಯ ಕೊಟ್ಟೇನೆಂದು**
**ಬಲು ಮಾತಾಡಿ ತಂದ**
**ಬಳೆಯ ಕೇಳಿದರಲ್ಲಿ– ಬಳೆಯೆ**?

**ಊರ ಮುಂದಿನ ಗಳೆಯೆ**?
**ಗದ್ದೆಯೊಳಗಿನ ಕಳೆಯೆ**?
**ಕೈಕಾಲು ಹಿಡಿಯ ಸೆಳೆಯೆ**?– **ಹೋಗೆನುತಾನೆ**.

–ಕೃಷ್ಣನ ಕಿತಾಪತಿ, ತಟವಟ, ದಗಲ್‌ಬಾಜಿತನವನ್ನು ಗೋಪಿಕಾ ಸ್ತ್ರೀಯೊಬ್ಬಳು ಯಶೋಧೆಯ ಬಳಿ ದೂರು ಹೇಳುವ ಧಾಟಿಯಲ್ಲಿದೆ ಈ ಕೀರ್ತನೆ. ಅದಕ್ಕನು ಗುಣವಾದ ಮಾತಿನ ವರಸೆ, ನಡಿಗೆಯ ಲಯ, ಲವಲವಿಕೆಯ ಭಾವ ಅಲಕ್ಕನೆ ಮನಸ್ಸನ್ನು ಸೆರೆ ಹಿಡಿಯುತ್ತವೆ. ಗೋಪಿಕಾ ಸ್ತ್ರೀ ಬಳೆ ಕೇಳಿದರೆ, ಆಶ್ವಾಸನೆ ಕೊಟ್ಟಿದ್ದ ಕೃಷ್ಣ ಪ್ರತಿಯಾಗಿ 'ಬಳೆಯೆ? ಊರ ಮುಂದಿನ ಗಳೆಯೆ?' ಎಂದು ಮುಂತಾಗಿ ಪ್ರಶ್ನೆ ಹಾಕಿ ಅವಳ ತಲೆ ತಿನ್ನುತ್ತಾನೆ. ಇಲ್ಲಿ ಮುಖ್ಯವಾದದ್ದು ಊರ ಮುಂದಿನ ಗಳೆಯೆ? ಎಂಬ ಪ್ರಶ್ನೆ. ಗಳೆ (<ಗಣೆ) ಎಂದರೆ ಬಿದಿರ ಬೊಂಬು ಅಥವಾ ನೆಲಕ್ಕೆ ನೆಟ್ಟ ಬಿದಿರ ಬೊಂಬು (ದೊಂಬರು ಬಿದಿರ ಬೊಂಬನ್ನು ನೆಲದೊಳಕ್ಕೆ ನೆಟ್ಟು, ಅದರ ತುದಿಗೆ ಹತ್ತಿ ಹೋಗಿ ಬಗೆಬಗೆಯ ಸಾಹಸಗಳನ್ನು ಮಾಡುತ್ತಾರೆ. ಅದಕ್ಕೆ ಗಣೆ (<ಗಳೆ) ಎಂದು ಕರೆಯುತ್ತಾರೆ) ಎಂದು ಅರ್ಥ. ಆದರೆ ಊರು ಎಂಬುದಕ್ಕೆ ಗ್ರಾಮ ಎಂಬ ಅರ್ಥದ ಜೊತೆಗೆ ತೊಡೆ ಎಂಬ ಅರ್ಥವಿರುವುದರಿಂದ ಆಗ ಗಳೆಯೆ ಎಂಬುದಕ್ಕೆ ಬೇರೊಂದು ಅರ್ಥ ಅಲಕ್ಕನೆ ಆವಾಹನೆಗೊಳ್ಳುತ್ತದೆ! ಪ್ರಸಕ್ತ ಶೃಂಗಾರ ಸಂದರ್ಭದಲ್ಲಿ ಅದು ಧ್ವನಿತವಾಗಿಬಿಡುತ್ತದೆ. ಹೀಗೆ ಜನಪದ ಭಾಷೆಯ ಸಾಧ್ಯತೆಯನ್ನು ಸೂರೆಗೊಂಡು ಹುಳಿ, ಉಪ್ಪು, ಖಾರವಿಲ್ಲದ ದಾಸ ಸಾಹಿತ್ಯದ ಸಪ್ಪೆ ಅಭಿವ್ಯಕ್ತಿಗೆ ರುಚಿವೈವಿಧ್ಯದ 'ಕಡಕ್' ತಂದುಕೊಟ್ಟವರು ಕನಕದಾಸರು ಎಂಬುದನ್ನು ಯಾರೂ ಅಲ್ಲಗಳೆಯಲು ಸಾಧ್ಯವಿಲ್ಲ.

೬

ದಾಸ ಸಾಹಿತ್ಯದಲ್ಲಿ ಮುಂಡಿಗೆ ಪ್ರಕಾರದ ಜನಕರು ಕನಕದಾಸರು. ಇವರ ಸಮಕಾಲೀನರಲ್ಲಿ ಯಾರೂ ಮುಂಡಿಗೆ ರಚಿಸಿದವರಿಲ್ಲ. ರಚಿಸಿದ್ದರೆ 'ಕನಕನನ್ನು



ಕೆಣಕಬೇಡ, ಕೆಣಕಿ ತಿಣಕಬೇಡ' ಎಂಬ ಗಾದೆಮಾತು ಅವರಿಗೆ ಮಾತ್ರ ಸೀಮಿತವಾಗಿ ಚಾಲ್ತಿಗೆ ಬರುತ್ತಿರಲಿಲ್ಲ. ಪ್ರಸಿದ್ಧ ಸಂಗೀತ ವಿದ್ವಾಂಸರಾದ ಡಾ॥ ಸತ್ಯನಾರಾಯಣ ಅವರ "ಮುಂಡಿಗೆ ಎಂಬ ಹೊಸ ಪ್ರಕಾರವನ್ನು ಇಡೀ ಭಾರತೀಯ ಸಂಗೀತದಲ್ಲಿ ಪ್ರವೇಶ ಮಾಡಿಸಿದ ಯಶಸ್ಸು ಕನಕದಾಸರಿಗೆ ಸಲ್ಲುತ್ತದೆ' ಎಂಬ ಮಾತು ಮೇಲಿನ ನನ್ನ ಅಭಿಪ್ರಾಯಕ್ಕೆ ಪೂರಕವಾಗಿದೆ. ಆದರೆ ಹದಿನೆಂಟನೆಯ ಶತಮಾನದ ವಿಜಯದಾಸರ ಕಾಲದಲ್ಲಿ ಹಾಗೂ ಅವರ ಶಿಷ್ಯ ಪ್ರತಿಷ್ಯರ ಅವಧಿಯಲ್ಲಿ ಕನಕದಾಸರ ನೂರಕ್ಕೂ ಮೇಲ್ಪಟ್ಟ ಕೀರ್ತನೆ, ಮುಂಡಿಗೆ, ಸುಳಾದಿ, ಉಗಾಭೋಗಗಳನ್ನು ಬಾಚಿಕೊಂಡು ದೋಚಿಕೊಂಡು ಅಂಕಿತ ಬದಲಾವಣೆ ಮಾಡಿ ಪುರಂದರರ ಹೆಸರಿಗೆ ಸೇರಿಸಿದ ಪ್ರಯುಕ್ತ ಪುರಂದರರ ಹೆಸರಲ್ಲಿ ಇಂದು ಮುಂಡಿಗೆಗಳಿವೆ. ಅವುಗಳಲ್ಲಿ ಕನಕದಾಸರ ಮುಂಡಿಗೆಗಳನ್ನು ಅನುಕರಿಸಿ ಬೇರೆಯವರು ತಿಣುಕಿ ಬರೆದು ಪುರಂದರ ಅಂಕಿತ ಹಾಕಿರುವ ಮುಂಡಿಗೆಗಳೂ ಇವೆ; ನೇರವಾಗಿ ಕನಕದಾಸರ ಮುಂಡಿಗೆಗಳನ್ನು ಕದ್ದು, ಆದಿಕೇಶವ ಅಂಕಿತ ತೆಗೆದು ಪುರಂದರವಿಠಲ ಅಂಕಿತ ಹಾಕಿರುವ ಮುಂಡಿಗೆಗಳೂ ಇವೆ. ಉದಾಹರಣೆಗೆ 'ಏನಾದರೂ ಒಂದಾಗಲಿ' 'ಮುಳ್ಳುಮೊನಿಯ ಮ್ಯಾಲೆ ಮೂರು ಕೆರೆಯ ಕಟ್ಟಿ' 'ಬಯಲಬಾವಿ ನೀರಿಗ್ಹೋಂಟಾಳೊಬ್ಬ ಬಾಲಿ'– ಇವು ನಿಜವಾಗಿ ಕನಕದಾಸರ ಮುಂಡಿಗೆಗಳು. ಆದರೆ ಪುರಂದರರ ಸಂಗ್ರಹಗಳಲ್ಲಿ ವಿರಾಜಮಾನವಾಗಿವೆ! ಕನಕದಾಸರ ಸಮಕಾಲೀನರು ಕಾಲವಶರಾದ ಮೇಲೆ, ಆ ಸಮಕಾಲೀನರ ಅನುಯಾಯಿಗಳು ಅವರನ್ನು ಆರಾಧಿಸುವ ಬಗೆ ಹೀಗೆ!

ಮುಂಡಿಗೆ ಎಂಬ ಶಬ್ದಕ್ಕೆ ಅರ್ಥ ತೊಲೆ, ಮರದ ದಿಮ್ಮಿ ಎಂದು. ಸಾಹಸ ಪ್ರದರ್ಶನಕ್ಕೆ ಸವಾಲು ರೂಪದಲ್ಲಿ ಇದನ್ನು ಎತ್ತಿ ಎಸೆಯುವ ಪದ್ಧತಿ ಇತ್ತೆಂದು ತೋರುತ್ತದೆ. ಜೇಡರ ದಾಸಿಮಯ್ಯನ ವಚನವೊಂದು ಇದನ್ನೇ ಸೂಚಿಸುತ್ತದೆ:

**"ಸರ್ಪನೂ ಕೂರ್ಮನೂ ದಿಕ್ಕರಿಗಳೆಂಟೂ**
**ಭೂಮಿಯ ಹೊತ್ತಿರ್ದಪರೆಂದು**
**ಅನಿಶಾ ಹೊತ್ತಿಪ್ಪವರಿಗೆ ಅತ್ತಲಾಧಾರ ಇತ್ತಲಾಧಾರ**
**ಉತ್ತರಗುಡುವವರಿಗೆ ಇಕ್ಕುವೆ ಮುಂಡಿಗೆಯ**
**ಎತ್ತುವರುಳ್ಳಡೆ ತೋರಿರೈ ರಾಮನಾಥ"**

ನಾನು ಹುಡುಗನಾಗಿದ್ದಾಗ ಪೈಲ್ವಾನರು (ಮಹಾರಾಷ್ಟ್ರದ ಕಡೆಯವರು) ಎಂಬ ಅಲೆಮಾರಿ ಜನ ಬಂದು ಹಲವು ಸಾಹಸ ಪ್ರದರ್ಶನಗಳನ್ನು ಮಾಡಿ

ಹಣ ದವಸ ಧಾನ್ಯ ಸಂಗ್ರಹಿಸಿಕೊಂಡು ಮುಂದಿನೂರಿಗೆ ಹೋಗುತ್ತಿದ್ದರು. ಅವರ ಸಾಹಸ ಪ್ರದರ್ಶನಗಳಲ್ಲಿ ಮರದ ತುಂಡನ್ನು (ದಿಮ್ಮಿಯನ್ನು) ಎತ್ತಿ ತಲೆಯ ಮೇಲಿಂದ ಹಿಂದಕ್ಕೆ ಬೀಳುವಂತೆ ಎಸೆಯುವಂಥದ್ದೂ ಒಂದು. ದಿಮ್ಮಿಯ ನಟ್ಟನಡುವಿಗೆ ಹಗ್ಗ ಹಾಕಿ ಕಟ್ಟಿ, ಕಟ್ಟಿದ ಗಂಟನ್ನು ಬಗ್ಗಿ ಹಲ್ಲಲ್ಲಿ ಕಚ್ಚಿಕೊಂಡು, ತನ್ನೆರಡು ಕೈಗಳನ್ನೂ ಮಂಡಿಯ ಮೇಲೆ ಊರಿಕೊಂಡು, ಉಸಿರು ಕಟ್ಟಿ, ಮೇಲಕ್ಕೆತ್ತುತ್ತಾ ಎತ್ತುತ್ತಾ ಕೊನೆಗೆ ತಲೆಯ ಮೇಲಿನಿಂದ ಹಿಂದಕ್ಕೆ ಬೀಳುವಂತೆ ಚಂಗಿಸಿ ಚಿಮ್ಮಿಬಿಡುತ್ತಿದ್ದ. ಜನರೆಲ್ಲ ಚಪ್ಪಾಳೆ ತಟ್ಟಿ ದುಡ್ಡನ್ನು ಅವನತ್ತ ಎಸೆಯುತ್ತಿದ್ದರು. ಅಂಥದನ್ನು ಕನಕದಾಸರು ನೋಡಿಯೇ 'ಸವಾಲು' ಎನ್ನುವ ಅರ್ಥದಲ್ಲಿ ಮುಂಡಿಗೆಗಳನ್ನು ರಚಿಸಿದರು ಎಂದು ಕಾಣುತ್ತದೆ.

ಜನಪದ ಸಾಹಿತ್ಯದ ಒಗಟು ಪ್ರಕಾರವನ್ನೇ ಹನ್ನೆರಡನೆಯ ಶತಮಾನದ ಅಲ್ಲಮಪ್ರಭು ಅಧ್ಯಾತ್ಮದ ಅಭಿವ್ಯಕ್ತಿಗೆ ಅನುವುಗೊಳಿಸಿ, ಬೆಳೆಸಿ, ಬೆಡಗಿನ ವಚನಗಳು ಎಂಬ ಪ್ರಕಾರವನ್ನು ಅಸ್ತಿತ್ವಕ್ಕೆ ತಂದರು. ಹದಿನಾರನೆಯ ಶತಮಾನದ ಕನಕದಾಸರೂ ಸಹ ಅದೇ ಒಗಟು ಪ್ರಕಾರವನ್ನೇ ಅಧ್ಯಾತ್ಮದ ಅಭಿವ್ಯಕ್ತಿಗೆ ಅನುವಾಗುವಂತೆ ಬೆಳೆಸಿ ಮುಂಡಿಗೆಗಳು ಎಂಬ ಪ್ರಕಾರವನ್ನು ಅಸ್ತಿತ್ವಕ್ಕೆ ತಂದರು. ಸಾಮಾನ್ಯವಾಗಿ ಜನಪದ ಒಗಟುಗಳ ವಸ್ತು ಪ್ರಾಪಂಚಿಕ; ಕ್ವಚಿತ್ತಾಗಿ ಪಾರಮಾರ್ಥಿಕ ವಸ್ತು ಇರುವಂಥವೂ ಇವೆ. ಆದರೆ ಬೆಡಗಿನ ವಚನಗಳ ಹಾಗೂ ಮುಂಡಿಗೆಗಳ ವಸ್ತು ಅಧ್ಯಾತ್ಮಿಕ ಅಥವಾ ಪಾರಮಾರ್ಥಿಕ ಎನ್ನ ಬಹುದು. ಕನಕದಾಸರು ಅಲ್ಲಮಪ್ರಭುವಿಗಿಂತ ಒಂದು ಹೆಜ್ಜೆ ಮುಂದೆ ಹೋಗಿ ಏಕಕಾಲದಲ್ಲಿ ಪ್ರಾಪಂಚಿಕ ಅರ್ಥ ಹಾಗೂ ಪಾರಮಾರ್ಥಿಕ ಅರ್ಥ ಎರಡೂ ಅನ್ವಯವಾಗುವಂತೆ ಪ್ರಯೊಗ ನಡೆಸಿರುವುದು ಕೆಲವಾರು ಮುಂಡಿಗೆಗಳಿಂದ ತಿಳಿದುಬರುತ್ತದೆ.

ಕನಕದಾಸರ ಮುಂಡಿಗೆಗಳನ್ನು ಪೌರಾಣಿಕ ವಾವೆ ವರಸೆಯ ಮುಂಡಿಗೆಗಳು ಹಾಗೂ ಅನುಭಾವದ ನಿಗೂಢ ಮುಂಡಿಗೆಗಳು ಎಂದು ಎರಡು ವಿಧವಾಗಿ ವಿಂಗಡಿಸಬಹುದು. ದಾಸರಲ್ಲಿ ಹನ್ನೆರಡನೆಯ ಶತಮಾನದ ವಚನಸಾಹಿತ್ಯವನ್ನು ಆಳವಾಗಿ ಅಭ್ಯಾಸ ಮಾಡಿದವರು ಕನಕದಾಸರು. ಅಲ್ಲಿ ಬರುವ 'ಶರಣಸತಿ ಲಿಂಗಪತಿ' ಧೋರಣೆಯ ವಚನಗಳಂತೆ, ದಾಸಸಾಹಿತ್ಯದಲ್ಲಿ ಆ ಬಗೆಯ ಕೀರ್ತನೆಗಳನ್ನು ಹಾಗೂ ಮುಂಡಿಗೆಗಳನ್ನು ರಚಿಸಿದರು. ಪೌರಾಣಿಕ ವಾವೆ ವರಸೆಯ ಮುಂಡಿಗೆಗಳು ಸತಿಪತಿಭಾವದ ಭಗವದನುಸಂಧಾನ ರೂಪ ದಲ್ಲಿರುವುವು.



ಪೌರಾಣಿಕ ವಾವೆವರಸೆಯ ಮುಂಡಿಗೆಗಳು ತಮ್ಮನ್ನು ಹೀಯಾಳಿಸಿ ನೋಯಿಸುತ್ತಿದ್ದ ಕರ್ಮಠ ಪಂಡಿತರನ್ನು ಗುದ್ದಿ ಗುದ್ದಿ ಸುಸ್ತು ಮಾಡುವ ಮೇಷಧರ್ಮ ಪ್ರಧಾನವಾಗಿದ್ದರೆ ಅನುಭಾವದ ನಿಗೂಢ ಮುಂಡಿಗೆಗಳು ಕಾವ್ಯಧರ್ಮ ಪ್ರಧಾನವಾಗಿವೆ. ಅಭಿವ್ಯಕ್ತಿ ಪೂರ್ತಿ ರೂಪಕಮೂಲವಾಗಿರುವುದರಿಂದ ಅಂತರಾರ್ಥವನ್ನು ಗ್ರಹಿಸುವುದಕ್ಕೆ ಮನನ ಮಾಡಬೇಕಾಗುತ್ತದೆ, ಶ್ರಮ ಪಡಬೇಕಾಗುತ್ತದೆ. ಅದರಲ್ಲೂ ಕೆಲವು ಕ್ಲಿಷ್ಟ, ವಿಚಿತ್ರ, ವಿರೋಧಾಭಾಸದ ರೂಪಕಗಳು ಬಂದಾಗ ಸಾವಧಾನದ ಚಿಂತನಮನನದಿಂದ ವಿರೋಧಾಭಾಸವನ್ನು ಪರಿಹರಿಸಿಕೊಂಡು ಅಂತರಾರ್ಥವನ್ನು ಗ್ರಹಿಸಬೇಕಾಗುತ್ತದೆ. ಕೆಳಗಿನ ಉದಾಹರಣೆಯನ್ನು ನೋಡಬಹುದು:

**ಸದರವಲ್ಲವೊ ನಿಜಯೋಗ– ಸಚ್ಚಿದಾನಂದ**
**ಸದಮಲ ಗುರುದಿಗಂಬರನ ಸಂಯೋಗ** ।ಪ।

**ಅಡಿಯನಂಬರ ಮಾಡದನಕ– ಅಗ್ನಿ**
**ಕಿಡಿಯೆದ್ದು ಮೇಲಣ ಕೊಡನುಕ್ಕದನಕ**
**ಒಡಲೆರಡೊಂದಾಗದನಕ– ಅಲ್ಲಿ**
**ಒಡಗೂಡಿ ಅಂಗನೆ ನುಡಿಗೇಳದನಕ** ।೧।

**ನಾಡಿ ಹಲವು ಕಟ್ಟದನಕ– ಬ್ರಹ್ಮ**
**ನಾಡಿಯೊಳು ಪೊಕ್ಕು ಮುಳುಗಾಡದನಕ**
**ಕಾಡುವ ಕಪಿ ಸಾಯದನಕ– ಸತ್ತ**
**ಓಡಿನೊಳು ರಸ ತೊಟ್ಟಿಕ್ಕದನಕ**

**ಆದಿಕುಂಭ ಕಾಣದನಕ– ಅಲ್ಲಿ**
**ಸಾಧಿಸಿ ಭೇದಿಸಿ ಸವಿಯುಣ್ಣದನಕ**
**ಭೇದವು ಲಯವಾಗದನಕ– ಬಡ**
**ದಾದಿಕೇಶವ ನಿಮ್ಮ ನೆಲೆಗಾಣದನಕ** ।೩।

ಪ್ರತಿಯೊಬ್ಬರ ಅಂತರಂಗದಲ್ಲಿ ಅಂತರ್ಗತವಾಗಿರುವ ಪರಮಾತ್ಮನನ್ನು ಯೌಗಿಕ ಮಾರ್ಗದಿಂದ ಕಾಣಬಹುದು. ಆದರೆ ಸತತ ಸಾಧನೆ

ಯಿಂದಲ್ಲದೆ ಅದು ಸುಲಭವಾಗಿ ದೊರಕುವಂಥದಲ್ಲ ಎಂಬುದು ಇದರ ಅಂತರಾರ್ಥ.

ಏಕಕಾಲದಲ್ಲಿ ಪ್ರಾಪಂಚಿಕ ಮತ್ತು ಪಾರಮಾರ್ಥಿಕ ಅರ್ಥಗಳೆರಡನ್ನೂ ಸ್ಫುರಿಸುವಂಥ ಮುಂಡಿಗೆಗೆ ಕೆಳಗಿನ ಉದಾಹರಣೆಯನ್ನು ಅವಲೋಕಿಸ ಬಹುದು:

ಮರವ ನುಂಗುವ ಪಕ್ಷಿ ಮನೆಯೊಳಗೆ ಬಂದಿದೆ– ಇದರ
**ಕುರುಹ ಪೇಳಿ ಕುಳಿತಿರುವ ಜನರು ।ಪ।**

**ಒಂಟಿಕೊಂಬಿನ ಪಕ್ಷಿ ಒಡಲೊಳಗೆ ಕರುಳಿಲ್ಲ**
**ಗಂಟಲು ಮೂರುಂಟು ಮೂಗು ಇಲ್ಲ**
**ಕುಂಟು ಮನುಜನ ತೆರದಿ ಕುಳಿತಿಹುದು ಮನೆಯೊಳಗೆ**
**ಎಂಟು ಹತ್ತರ ಭಕ್ಷ್ಯ ಭಕ್ಷಿಸುವುದು ।೧।**

**ನಡುವೆ ಕಲಿಯುಂಬುವುದು ನಡುನೆತ್ತಿಯಲಿ ಬಾಯಿ**
**ಕಡುಸ್ವರಗಳಿಂದ ಗಾನ ಮಾಡುವುದು**
**ಅಡವಿಯಲಿ ಹುಟ್ಟುವುದು ಅಂಗವೆರಡಾಗುವುದು**
**ಬಡತನ ಬಂದರೆ ಬಹಳ ರಕ್ಷಿಸುವುದು ।೨।**

**ಕಂಜವದನೆಯರ ಕರದಲ್ಲಿ ನಲಿದಾಡುವುದು**
**ಎಂಜಲನುಣಿಸುವುದು ಮೂಜಗಕೆ**
**ರಂಜಿಪ ಶಿಖಾಮಣಿ ಸಿಂಹಾಸನದ ಮೇಲಿರ್ಪ**
**ಸಂಜೀವಪಿತ ಆದಿಕೇಶವನೆ ಬಲ್ಲ ।೩।**

ಲೌಕಿಕ ಅಥವಾ ಭೌತ ಅರ್ಥದಲ್ಲಿ ಇದು ರಾಗಿಕಲ್ಲು (ಬೀಸುವ ಕಲ್ಲು); ಅಲೌಕಿಕ ಅಥವಾ ಅಧ್ಯಾತ್ಮದ ಅರ್ಥದಲ್ಲಿ ಬ್ರಹ್ಮಾಂಡ ಪಿಂಡಾಂಡಗಳ ಮನೆಯಲ್ಲಿ ವಾಸ ಮಾಡುತ್ತಿರುವ ಪ್ರಣವರೂಪಿ ಪರಮಾತ್ಮ. ಈ ಎರಡನ್ನೂ ಸಂಲಗ್ನಗೊಳಿಸಿ ರುವುದರಲ್ಲಿ ಕನಕದಾಸರ ಪ್ರತಿಭಾಪಕ್ಷಿ ನಿಶ್ಶಿಖರ ಏರಿದೆ ಎನ್ನಬಹುದು. ಅಡಿಕೆ ಮರವನ್ನು ಹತ್ತಿ ಅಡಿಕೆಕಾಯಿ ಕೀಳುವ ಕಾರ್ಮಿಕ, ಮತ್ತೆ ಆ ಮರದಿಂದ ಕೆಳಕ್ಕಿಳಿದು ಇನ್ನೊಂದು ಮರವನ್ನು ಹತ್ತುವುದಿಲ್ಲ. ಮೊದಲ ಮರವನ್ನು



ತೂಗುಯ್ಯಾಲೆಯಾಡಿಸಿ ಆಡಿಸಿ, ಪಕ್ಕದ ಇನ್ನೊಂದು ಮರವನ್ನು ತಬ್ಬಿಕೊಂಡು ಮೊದಲ ಮರವನ್ನು ಬಿಡುತ್ತಾನೆ. ಹಾಗೆ ಕನಕದಾಸರು ಲೌಕಿಕಾರ್ಥದ ಮರವನ್ನು ತೂಗುಯ್ಯಾಲೆ ಆಡಿಸುತ್ತಲೇ ಅಲೌಕಿಕಾರ್ಥದ ಮರವನ್ನು ತಾವಾಗಿಯೇ ತಬ್ಬಿಕೊಳ್ಳುವಂತೆ ಮಾಡಿದ್ದಾರೆ ಎನ್ನಬಹುದು. ಅಥವಾ ನಿಮ್ನಾರ್ಥವನ್ನು ಮೆಲುಕು ಹಾಕಿದಂತೆಲ್ಲ ರುಚಿ ಹತ್ತಿ, ಸೊರೆಬಿಟ್ಟು ನಿಂತ ಉನ್ನತಾರ್ಥದ ಕೆಚ್ಚಲಿಗೆ ತಾವಾಗಿಯೇ ಬಾಯಿ ಹಾಕಿ ಹಾಲು ಕುಡಿಯುವಂತೆ ಮಾಡಿ, ಜನಸಾಮಾನ್ಯರನ್ನು ಅರಿವಿನ ಮೇಲುಸ್ತರಕ್ಕೆತ್ತುವ ಕೆಲಸವನ್ನು ಮಾಡಿದ್ದಾರೆ ಎನ್ನಬಹುದು. ಇದು ಅವರ ಪ್ರಯೋಗಶೀಲತೆ ಹಾಗು ಜನಸಂಮುಖ ದೃಷ್ಟಿಯನ್ನು ಸೂಚಿಸುತ್ತದೆ.

## ೧೦

ಕನಕದಾಸರ ಸುಳಾದಿಗಳನ್ನು ಉಗಾಭೋಗಗಳನ್ನು ಇಲ್ಲಿ ಪ್ರಸ್ತಾಪ ಮಾಡಬೇಕು. ಆದರೆ ಬಹಳಷ್ಟು ಪುರಂದರರ ಹೆಸರಲ್ಲಿ ಇಂದು ವಿರಾಜಿಸುತ್ತಿವೆ. ಆದ್ದರಿಂದ ಪೂರ್ಣ ಆಧಾರಗಳನ್ನು ದೊರಕಿಸಿಕೊಂಡೇ ಮಾತಾಡುವುದು ಮೇಲು. ಏಕೆಂದರೆ ಅನುಭವಿಸಿ ಹಲ್ಲಿಗೆ ರುಚಿ ಹತ್ತಿದ ಮೇಲೆ, ಅದು ಬೇರೆಯವರದು ಎಂದು ಹೇಳಿದರೂ, ಇಲ್ಲ ಅದು ನನ್ನದೇ ಎಂದು ಹೇಳುವುದು ಮನುಷ್ಯ ಸ್ವಭಾವ. ಒಂದು ಉದಾಹರಣೆ: ಶ್ರೀ ಎಚ್.ಕೆ.ವೇದವ್ಯಾಸಾಚಾರ್ಯರು ತಮ್ಮ 'ಕರ್ನಾಟಕದ ಹರಿದಾಸರು' (ವಿಮರ್ಶಾತ್ಮಕ ಅಧ್ಯಯನ) ಗ್ರಂಥದಲ್ಲಿ ಕನಕದಾಸರದೆಂದು ಕೆಳಗಿನ ಉಗಾಭೋಗವನ್ನು ಉದಾಹರಿಸಿದ್ದಾರೆ:

**ನೀರಿಲ್ಲದ ಭಾವಿ ಊರಿಲ್ಲದ ಮಠವು**
**ನೆರಳಿಲ್ಲದ ಮರ ತಿರುಳಿಲ್ಲದ ಮಾತು**
**ಧನವಿಲ್ಲದ ದಾತ ದಯವಿಲ್ಲದ ನಾಥ**
**ಮನಸಿಲ್ಲದ ಶಕುತಿ ಭಯವಿಲ್ಲದ ಭಕುತಿ**
**ನರಹರಿ ಮುಕುಂದ ಶ್ರೀಕೃಷ್ಣ ಎನ್ನದ**
**ನರರಿದ್ದರೇನು ಇಲ್ಲದಿದ್ದರೇನು?**

ದಾಸ ಸಾಹಿತ್ಯ ವಿಭಾಗದಲ್ಲಿ ೧೫–೨೦ ವರ್ಷಗಳಿಂದ ಕೆಲಸ ಮಾಡುತ್ತಿರುವ ವಿದ್ವಾಂಸರೊಬ್ಬರು 'ಕನಕದಾಸರು ಸುಳಾದಿ ಉಗಾಭೋಗಗಳನ್ನು ರಚಿಸಿಯೇ ಇಲ್ಲ. ಇದು ವ್ಯಾಸರಾಯರದು. ಏಕೆಂದರೆ ಅವರ ಅಂಕಿತ ಶ್ರೀ ಕೃಷ್ಣ ಎಂಬುದು

ಈ ಉಗಾಭೋಗದಲ್ಲಿದೆ ಎಂದು ನನ್ನ ಬಳಿ ವಾದಿಸಿದಾಗ ನನಗೆ ಸೋಜಿಗವಾಯಿತು. ಇಲ್ಲಿ ಅಂಕಿತ ರೂಪದಲ್ಲಿ ಬಂದಿಲ್ಲ. ವಿಷ್ಣುವಿನ ಹಲವು ನಾಮಗಳ ಸ್ಮರಣೆಯ ರೂಪದಲ್ಲಿದೆ. ಆದ್ದರಿಂದ ಇವರು ಇಷ್ಟು ವರ್ಷಗಳು ನೆಲ್ಲು ಕುಟ್ಟಿ ಅಕ್ಕಿ ಪಡೆಯುವ ಕೆಲಸ ಮಾಡಿಲ್ಲ ಎಂದು ನನಗನ್ನಿಸಿತು. ಆದ್ದರಿಂದ ಈ ರೀತಿಯ ವಾದಮಾಡುವ ಮಂದಿ ಇರುವಾಗ ಆಧಾರಗಳನ್ನು ಒದಗಿಸಿ ಕೊಂಡು ಹತಾರ ಸಮೇತ ಅಖಾಡಕ್ಕಿಳಿಯುವುದು ಒಳ್ಳೆಯದೆಂದು, 'ಕಾಲಲಬ್ಧಿ'ಗಾಗಿ ಕಾಯುವುದು ಲೇಸೆಂದು ಇಲ್ಲಿ ಏನನ್ನೂ ಹೇಳುವುದಿಲ್ಲ. ಕನಕದಾಸರ ಎಷ್ಟು ಉಗಾಭೋಗಗಳು ಸುಳಾದಿಗಳು ಪುರಂದರ ದಾಸರಲ್ಲಿ ಸೇರಿಕೊಂಡಿವೆ ಎಂಬುದನ್ನು ಆಧಾರ ಸಮೇತ ಮುಂದಿಟ್ಟರೆ ಮೊಂಡು ವಾದಗಳಿಗೆ ಬಾಯಿ ಬೀಗ ತಾನಾಗಿಯೇ ಬೀಳುತ್ತದೆಯಲ್ಲವೆ?

೧೧

ಕೊನೆಯಲ್ಲಿ ಕನಕದಾಸರ ಕೀರ್ತನೆಗಳ ಕೃತಿಚೌರ್ಯದ ಬಗ್ಗೆ ಕೆಲವು ಮಾತುಗಳನ್ನು ಪ್ರಸ್ತಾಪಿಸಬೇಕು. 'ಬಿದ್ದಿದ್ದೋನ ಕಚ್ಚೇರವೇನ ಎದ್ದಿದ್ದೋನು ಕಟ್ಕೊಂಡ' ಎಂಬ ಜನಪದ ಗಾದೆ ಈ ಸಂದರ್ಭದಲ್ಲಿ ನೆನಪಾಗುತ್ತದೆ. ಎಚ್ಚರ ಗೊಂಡವನು ಎಚ್ಚರಗೊಳ್ಳದವನ ಒಡವೆಯನ್ನು ಅಪಹರಿಸಿದ ಅಥವಾ ಅರಿವುಗಾರ ಮರೆವುಗಾರನ ಆಸ್ತಿಯನ್ನು ಒತ್ತರಿಸಿಕೊಂಡ ಎಂಬ ಅರ್ಥವನ್ನು ಆಯಾ ಸಂದರ್ಭಕ್ಕನುಸಾರವಾಗಿ ಸೂಚಿಸುತ್ತದೆ. ಅದೇ ಗತಿ ಕನಕದಾಸರ ಕೀರ್ತನೆಗಳಿಗೂ ಒದಗಿ ಬಂದದ್ದು ಭ್ರಷ್ಟ ಆಚಾರವಂತರಿಗೆ ಬರವಿಲ್ಲ ಎಂಬುದನ್ನು ಡಾಣಾ ಡಂಗುರಗೊಳಿಸುತ್ತದೆ. "ಕನಕರಾಶಿಯನ್ನು ಕಣ್ಣಲ್ಲಿ ಕಣ್ಣಿಟ್ಟು ಕಾಯಬೇಕಾದವರು 'ಸೊಕ್ಕಸೊರಗ' ನಿದ್ದೆಯಲ್ಲಿದ್ದಾರೆ, ನಾವು ಕದ್ದಿದ್ದೇವೆ ಅನ್ನೋದು ಅವರ ತಲೆಗೆ ಹೊಳೆಯೋದೇ ಇಲ್ಲ; ನಮ್ಮ ರಾಶಿ ಇದ್ದದ್ದು ಇಷ್ಟೇ ಏನೋ ಎಂದು ಬೆಪ್ಪು ತಕ್ಕಡಿಗಳಾಗಿ ಅಪ್ಪುಗೈಯಲ್ಲಿ ನಿಂತಿರ್ತಾರೆ; ನಾವು ಬಡಕಲಾಗಿ ಕಾಣುವ ನಮ್ಮ ಆರಾಧ್ಯ ದೈವಕ್ಕೆ ತೊಡಿಸಿ ದುಂಡುದುಂಡಾಗಿಸಿ ಶ್ರೀಮಂತಗೊಳಿಸೋಣ"– ಎಂದು ಹಲಕೆಲ ಅನ್ಯಾಭರಣ ಅಪಹರಣ ನಿಪುಣರು ಮಾಡಿದ ನೀಚಕಾರ್ಯ ಇದು; ಮಾನಪಮಾನಗಳಿಗೆ ಭೇದವೇ ಇಲ್ಲ ಎಂದು ಭಾವಿಸುವ ಜಾಂಬವ ಗೋತ್ರದವರು ತಲೆತಗ್ಗಿಸದಿದ್ದರೂ ಮಾನಕ್ಕಂಜುವವರು ತಲೆತಗ್ಗಿಸುವಂಥದು.

ಇದು ಜರುಗಿದ್ದು ೧೮ನೆಯ ಶತಮಾನದಲ್ಲಿ ವಿಜಯದಾಸರು ಪುರಂದರ ಸಾಹಿತ್ಯ ಸಂಗ್ರಹಕ್ಕಾಗಿ ಮಹಾಜನರಿಗೆ ಕರೆ ಕೊಟ್ಟಾಗ, 'ಬದುಕಿದ ಮನೇಲಿ



ತಡಕಿದರೆ ಇರಲ್ವ?' ಎಂದು ಎಲ್ಲಿ ಕೈಹಾಕಿದರೂ ಕನಕ ಕೀರ್ತನೆಗಳೇ ಕಾಣ ತೊಡಗಿದಾಗ ಮಾಧ್ವಧರ್ಮ ಮರೆಯದಿದ್ದರೂ ಮಾನವಧರ್ಮ ಮರೆತ ಕೆಲ ಮಾಹಾಜನರು ಕಲಬೆರಕೆ ಕಾಯಕಕ್ಕಿಳಿದರು. ಕಳವು ಗೊತ್ತಾಗಬಾರದೆಂದು ಮೇಲಿನ ಚರಣವನ್ನು ಕೆಳಕ್ಕೆ ಕೆಳಗಿನ ಚರಣವನ್ನು ಮೇಲಕ್ಕೆ ಸ್ಥಳಾಂತರ ಮಾಡಿದರು. ಇದು ಅದಕ್ಕಿಂತ ಭಿನ್ನ ಎಂದು ಸಾಬೀತುಪಡಿಸಲು ಪಾಠಾಂತರದ ಪೈರನ್ನು ತಂದು ನಾಟಿ ಹಾಕಿದರು. ಆ ಮೇಲೆ ಕೇಳಬೇಕೆ? ಇದ್ದ ಆದಿಕೇಶವನ ಅಂಕಿತವನ್ನು ಕಿತ್ತು ಎಸೆದರು; ಇಲ್ಲದ ಪುರಂದರ ವಿಠಲ ಅಂಕಿತವನ್ನು ತಂದು ಬೆಸೆದರು. ಅಲ್ಲಿಗೇ ಸುಮ್ಮನಾಗಲಿಲ್ಲ. ಅಂಥ ಅಪ್ಪಂತ ಕಾರ್ಯಕ್ಕೆ ಅಧಿಕೃತತೆಯ ಮುದ್ರೆಯೊತ್ತಲು ಕಾಗದದ ಹಸ್ತಪ್ರತಿಗಳನ್ನೂ ಓಲೆಗರಿ ಪ್ರತಿಗಳನ್ನೂ ಸೃಷ್ಟಿ ಮಾಡಿದರು. ಕೃತಿಚೌರ್ಯದ ಸಮಗ್ರ ಕೀರ್ತನೆಗಳ ತೌಲನಿಕ ವಿಶ್ಲೇಷಣೆಗೆ ಇದು ಜಾಗವಲ್ಲವಾದ್ದರಿಂದ, ಜಾಗವೂ ಇಲ್ಲವಾದ್ದರಿಂದ ಸ್ಯಾಂಪಲ್‌ಗಾಗಿ ಎರಡು ಕೀರ್ತನೆಗಳನ್ನು ಓದುಗರ ಅವಗಾಹನೆಗೆ ತರುವುದು ಅತ್ಯವಶ್ಯ. ಒಂದು, ೧೯೬೫ರಲ್ಲಿ ಬೆಟಗೇರಿ ಕೃಷ್ಣಶರ್ಮರ ಸಂಪಾದಕತ್ವದಲ್ಲಿ ಹೊರ ಬಂದ 'ಪುರಂದರ ಸಾಹಿತ್ಯ–೫' ಎಂಬ ಸಂಗ್ರಹದಿಂದ; ಎರಡು, ೧೯೮೫ರಲ್ಲಿ ಪ್ರೊ. ಎಸ್.ಕೆ. ರಾಮಚಂದ್ರರಾಯರ ಸಂಪಾದಕತ್ವದಲ್ಲಿ ಹೊರಬಂದ 'ಪುರಂದರ ಸಾಹಿತ್ಯ ದರ್ಶನ–೩' ಸಂಪುಟದಿಂದ.

ವರಕವಿಗಳ ಮುಂದೆ ನರಕವಿಗಳ ವಿದ್ಯೆ ತೋರಬಾರದು–ಈ
ಧರಣಿಯ ಕಲ್ಲಿಗೆ ಶರಣೆಂದು ಪೂಜೆಯ ಮಾಡಬಾರದು ।ಪ।

ಪಾಪಿಗಳಿದ್ದಲ್ಲಿ ರೂಪುಳ್ಳ ವಸ್ತುವ ತೋರಬಾರದು– ಬಹು
ಕೋಪಿಗಳಿದ್ದಲ್ಲಿ ಅನುಭವ ಗೋಷ್ಠಿಯ ಮಾಡಬಾರದು ।೧।

ಅಡಿಸತ್ತ ಮಡಕೆಗೆ ಜೋಡಿಸಿ ಒಲೆಗುಂಡ ಹೂಡಬಾರದು– ಬಹು
ಬಡತನ ಬಂದಾಗ ನೆಂಟರ ಬಾಗಿಲ ಸೇರಬಾರದು ।೨।

ಹರಿಯ ನಿಂದಿಸಿ ಹರ ಘನನೆಂದು ನರಕಕ್ಕೆ ಬೀಳಬಾರದು– ತಾ
ಪರರನು ಬೈದು ಪಾತಕಕೆ ಮುನ್ನೊಳಗಾಗಬಾರದು ।೩।

ಮಡದಿಯ ನುಡಿ ಕೇಳಿ ಜಗಳಕೊಬ್ಬರ ಕೊಡೆ ಹೋಗಬಾರದು– ಬಾ
ಯ್ಬಡಿಕರು ಇದ್ದಲ್ಲಿ ವಸ್ತಿ ಬಿಡಾರವ ಮಾಡಬಾರದು ।೪।

ಮುಂದೆ ಭಲಾ ಎಂದು ಹಿಂದೆ ನಿಂದಿಪರನ್ನು ಕೂಡಬಾರದು– ನಮ್ಮ
ತಂದೆ ಬಾಡದಾದಿ ಕೇಶವನ ಸ್ಮರಣೆಯ ಬಿಡಬಾರದು ।೫।

–ಕನಕದಾಸರು

ವರಕವಿಗಳಿದ್ದಲ್ಲಿ ನರಕವಿಗಳ ಕೊಂಡಾಡಬಾರದು ಇಂಥ
ಧರಣಿಯ ಕಲ್ಲಿಗೆ ಸ್ಥಿರವೆಂದು ಪೂಜೆಯ ಮಾಡಬಾರದು ।ಪ।

ಅಡಿ ಹೋದ ಮಡಕೆಗೆ ಜೋಡಿಸಿ ಹೊಲೆಗುಂಡ ಹೂಡಬಾರದು
ಬಡತನ ಬಂದರೆ ನೆಂಟರ ಬಾಗಿಲ ಸೇರಬಾರದು ।೧।

ಮಡದಿಯ ನುಡಿಕೇಳಿ ಬಡವರ ಜಗಳಕೆ ಹೋಗಬಾರದು– ಬಹಳ
ಬಡತನ ಬಂದವಳ ಕೈಯಿಂದ ಅಡಿಗೆಯ ಉಣ್ಣಬಾರದು ।೨।

ಪಾಪಿಗಳಿದ್ದಲ್ಲಿ ರೂಪದ ಒಡವೆಯ ತೋರಬರದು– ಕಡು
ಕೋಪಿಗಳಿದ್ದಲ್ಲಿ ಅನುಕೂಲ ಗೋಷ್ಠಿ ಮಾತಾಡಬಾರದು ।೩।

ಪರರ ನಿಂದಿಸಿ ಪರಬ್ರಹ್ಮ ರೂಪೇಂದ್ರನ ಜರೆಯಬಾರದು
ವರದ ಶ್ರೀ ಪುರಂದರ ವಿಠಲನ ಸ್ಮರಣೆಯ ಮರೆಯಬಾರದು ।೪।

–ಪುರಂದರದಾಸರು

–ಬೆಟಗೇರಿ ಕೃಷ್ಣಶರ್ಮರಂಥ ಘನ ವಿದ್ವಾಂಸರು ಸಜ್ಜನರು ೧೭೫೦ನೇ ಇಸವಿಯ ಓಲೆಗರಿಯ ಪ್ರತಿಯೆಂದು ಅಧ್ವಾನದ ಭಾವ ಭಾಷೆಯ ಆ ಕೀರ್ತನೆಯನ್ನು ಪುರಂದರ ಸಾಹಿತ್ಯ ಸಂಗ್ರಹದಲ್ಲಿ ಸೇರಿಸಿರುವುದು ಸೋಜಿಗಗೊಳಿಸುತ್ತದೆ. ಕನಕದಾಸರ ಮೂಲ ಕೃತಿಯೊಡನೆ ಹೋಲಿಸಿ ನೋಡಿ, ಇದು ಬೆರಕೆತಳಿ ಎಂದು ಕಸದ ಬುಟ್ಟಿಗೆಸೆಯಬಹುದಿತ್ತು.



೧೯೬೫ರಲ್ಲಿ ಬೆಟಗೇರಿ ಕೃಷ್ಣಶರ್ಮರ ಸಂಪಾದಕತ್ವದಲ್ಲಿ ಹೊರಬಂದ ಪುರಂದರ ಸಾಹಿತ್ಯ ಸಂಪುಟವೊಂದರಲ್ಲಿ ಸೇರ್ಪಡೆಯಾಗಿರುವ ಕೃತಿಚೌರ್ಯದ ಕೀರ್ತನೆಯನ್ನು ಸ್ಯಾಂಪಲ್‌ಗಾಗಿ ನೋಡಿದ್ದಾಯಿತು. ಈಗ ೧೯೮೫ರಲ್ಲಿ ಪ್ರೊ. ಎಸ್.ಕೆ. ರಾಮಚಂದ್ರರಾಯರ ಸಂಪಾದಕತ್ವದಲ್ಲಿ ಪುರಂದರ ಸಾಹಿತ್ಯ ದರ್ಶನ ಸಂಪುಟವೊಂದರಲ್ಲಿ ಸೇರ್ಪಡೆಯಾಗಿರುವ ಕೃತಿಚೌರ್ಯದ ಕೀರ್ತನೆಯನ್ನು ಸ್ಯಾಂಪಲ್‌ಗಾಗಿ ನೋಡೋಣ:

ಪ್ರಾಚೀನ ಕರ್ಮವಿದು ಬಿಡಲರಿಯದು
ಯೋಚನೆ ಮಾಡಿ ಬಳಲುವುದೇಕೆ ಮನುಜ ।ಪ।

ಸೇತುವೆಯ ದಾಟಿ ಲಂಕೆಗೆ ಹೋಗಿ ಹನುಮಂತ
ಖ್ಯಾತಿಯಲಿ ರಾವಣನ ಪುರವನಳಿಸಿ
ಸೀತೆಯನು ಕಂಡು ಶ್ರೀರಾಮನಿಗರುಹಿದರೆ
ಪ್ರೀತಿಯಿಂದವನ ಕೌಪೀನ ಬಿಡಸಲಿಲ್ಲ ಹರಿಯು ।೧।

ಲೋಕಾದಿಲೋಕಗಳ ಚರಿಸುವ ರವಿರಥಕೆ
ಏಕಗಾಲಿಯು ಏಳು ಕುದುರೆಗಳ ಕಟ್ಟಿ
ಆಕಾಶ ಮಾರ್ಗದಲಿ ಚರಿಸುವ ಅರುಣನಿಗೆ
ಬೇಕೆಂದು ಚರಣಗಳ ಕೊಡಲಿಲ್ಲ ಹರಿಯು ।೨।

ಸಾಸಿರ ನಾಮದೊಡೆಯ ಬಾಡದಾದಿಕೇಶವನ
ಬೇಸರಿಸದೆ ಹೆಗಲ ಮೇಲೇರಿಸಿಕೊಂಡು
ದೇಶಾದಿದೇಶಗಳ ತಿರುಗುವ ಗರುಡನಿಗೆ
ನಾಸಿಕದ ಕೊನೆ ಡೊಂಕ ತಿದ್ದಲಿಲ್ಲ ಹರಿಯು ।೩।

–ಕನಕದಾಸರು

ಪ್ರಾಚೀನ ಕರ್ಮವಿದು ಬಿಡಲರಿಯದು
ಯೋಚನೆಯ ಮಾಡಿ ನೀ ಬಳಲಬೇಡ ।ಪ।

**ಮುನ್ನ ಮಾಡಿದ ಕರ್ಮ ಬೆನ್ನಟ್ಟಿ ಬರುತಿರಲು**
**ತನ್ನಿಂದ ತಾನೇ ತಿಳಿಯಲರಿಯದೆ**
**ಇನ್ನು ದೇಹವನು ಆಶ್ರಯಿಸಿ ಫಲವೇನು**
**ಉನ್ನತ ಹರುಷದಲಿ ಮನದಿ ಯೋಚಿಸುವ** ।೧।

**ಲೋಕಾದಿಲೋಕಗಳ ತಿರುಗುವ ರವಿರಥಕೆ**
**ಏಕಗಾಲಿಗೆ ಏಳು ಕುದುರೆಯ ಕಟ್ಟಿ**
**ಆಕಾಶ ಮಾರ್ಗದಲಿ ತಿರುಗುವ ಅರುಣನಿಗೆ**
**ಬೇಕಾದ ಚರಣಗಳ ಕೊಡಲಿಲ್ಲ ಹರಿಯು** ।೨।

**ಸೇತುವೆ ಕಟ್ಟಿ ಲಂಕೆಗೆ ಹಾರಿ ಹನುಮಂತ**
**ಖ್ಯಾತಿಯನೆ ಮಾಡಿ ರಾವಣನ ಗೆದ್ದು**
**ಸೀತೆಯನು ತಂದು ಶ್ರೀರಾಮನಿಗೆ ಕೊಡಲಾಗಿ**
**ಪ್ರೀತಿಯಿಂ ಕೌಪೀನವ ಬಿಡಿಸಲಿಲ್ಲ ಹರಿಯು** ।೩।

**ನಿತ್ಯದಲಿ ಗರುಡ ಸೇವೆಯ ಮಾಡಿ ವಿಷ್ಣುವನು**
**ಹೊತ್ತುಕೊಂಡು ಇದ್ದ ಜಗವರಿಯಲು**
**ಅತ್ಯಂತ ಸೇವಕನೆಂದು ಮೂಗಿನ ಡೊಂಕು**
**ಎತ್ತಿ ನೆಟ್ಟಗೆ ಮಾಡಲಿಲ್ಲ ಶ್ರೀ ಕೃಷ್ಣ** ।೪।

**ಇಂತೆಂದು ಈ ಪರಿ ತಮ್ಮೊಳಗೆ ತಾವು ತಿಳಿದು**
**ಭ್ರಾಂತನಾಗದೆ ಬಯಕೆಗಳನು ಜರಿದು**
**ಶಾಂತ ಮೂರುತಿ ಸಿರಿ ಪುರಂದರ ವಿಠಲನ**
**ಸಂತಸದಿ ಬಿಡದೆ ಭಜಿಸೆಲೋ ಮನುಜ** ।೫।

**–ಪುರಂದರದಾಸರು**

ಕನಕದಾಸರ ಕೀರ್ತನೆಯ ಮೊದಲ ಚರಣವನ್ನು ಎರಡನೆಯ ಸ್ಥಾನಕ್ಕಿಳಿಸಿ, ಎರಡನೆಯ ಚರಣವನ್ನು ಮೊದಲ ಸ್ಥಾನಕ್ಕೇರಿಸಿ, ಮೂರನೆಯ ಚರಣವನ್ನು ಅಸಂಬದ್ಧ ಭಾವ ಭಾಷೆಯಿಂದ ವಿರೂಪಗೊಳಿಸಿ ತೃಪ್ತಿಗೊಳ್ಳದೆ, ಕನಕದಾಸರದ್ದ



ಕ್ಕಿಂತ ಇದು ಭಿನ್ನ ಎಂದು ತೋರಿಸಲು ಕೀರ್ತನೆಯ ಮೊದಲಿಗೊಂದು ಕೊನೆಗೊಂದು ಸ್ವಂತಸೃಷ್ಟಿಯ ಅಧ್ವಾನದ ಎರಡು ಚರಣಗಳನ್ನು ಸೇರಿಸಿ, ಪುರಂದರತ್ವದ ಮುದ್ರೆಯೊತ್ತಿರುವುದು ಮೇಲುನೋಟಕ್ಕೇ ಕಂಡು ಬರುತ್ತದೆ. ಆದರೆ ಪಲ್ಲವಿಯ ಆಶಯಕ್ಕೂ ಮೊದಲ ಹಾಗೂ ಕೊನೆಯ ಹೆಚ್ಚುವರಿ ಚರಣಗಳಿಗೂ ಸೂಜಿ ಮೊನೆಯಷ್ಟಾದರೂ ಕಿತ್ತರೆ ಬರದಂಥ ಸಾವಯವ ಸಂಬಂಧ ಇದೆಯೇ? ಭಾವ ಒಂದು ಕಡೆ ಎಳೆದರೆ ಭಾಷೆ ಮತ್ತೊಂದು ಕಡೆಗೆ ಎಳೆಯುತ್ತದೆ. ಗುರಿ ಎರಡಕ್ಕೂ ಇಲ್ಲ. ಆದರೆ ಕಲಬೆರಕೆ ಕಾಯಕಸ್ಥರು "ಗುರಿ ಎರಡಕ್ಕಿಲ್ಲ ಎಂದವರಾರು?' ಎಂದು ಜಗಳಕ್ಕೆ ಬಂದರೂ ಆಶ್ಚರ್ಯ ಪಡಬೇಕಾಗಿಲ್ಲ!

ಕನಕದಾಸರ ಕೀರ್ತನೆಯಲ್ಲಿ ಹನುಮಂತ ಸಮುದ್ರವನ್ನು ಹಾರಿ, ಲಂಕೆಗೆ ಬೆಂಕಿ ಇಟ್ಟು, ಸೀತಾನ್ವೇಷಣೆಯ ಸುದ್ದಿಯನ್ನು ರಾಮನಿಗೆ ತಿಳಿಸಿದ ವಿವರವಿದ್ದರೆ, ಪ್ರಕ್ಷಿಪ್ತ ಕೀರ್ತನೆಯಲ್ಲಿ ಹನುಮಂತ ತಾನೇ ರಾವಣನನ್ನು ಗೆದ್ದು ಸೀತೆಯನ್ನು ತಂದು ರಾಮನಿಗೆ ಕೊಟ್ಟ ಎಂಬ ವಿವರವಿದೆ. ರಾಮಾಯಣದ ಕಿಂಚಿತ್ ಗಂಧವಿದ್ದವರೂ ಸಹ ಇಂಥ ವಿಕೃತಿಯನ್ನು ವಮನ ಮಾಡುತ್ತಿರಲಿಲ್ಲ! ಇನ್ನು ಮೂರನೆಯ ಚರಣದಲ್ಲಿ ಕನಕದಾಸರು 'ಬಾಡದಾದಿಕೇಶವನ ಹೆಗಲ ಮೇಲೇರಿಸಿಕೊಂಡು ದೇಶಾದಿದೇಶಗಳ ತಿರುಗುವ ಗರುಡನ' ಚಿತ್ರವನ್ನು ಕೊಟ್ಟಿದ್ದರೆ, ಕಲಬೆರಕೆ ಕೀರ್ತನೆಯಲ್ಲಿ 'ಚರಿಸದೆ ಬರೀ ಹೊತ್ತುಕೊಂಡು ಸ್ಥಾಣುವಿನಂತೆ ನಿಂತಿರುವ ಗರುಡನ' ಚಿತ್ರವನ್ನು ಕೊಡಲಾಗಿದೆ. ಸಂಪಾದನೆಯ ಹೊಣೆಹೊತ್ತ ಬಹುಶ್ರುತರಾದ ವಿದ್ಯಾಲಂಕಾರ ಪ್ರೊ. ಎಸ್.ಕೆ. ರಾಮಚಂದ್ರರಾಯರು ಇಂಥ ಆಭಾಸಗಳ ಮೇಲೆ ಕಣ್ಣಾಡಿಸಿದ್ದರೆ, ಇದು ಪುರಂದರಕೃತವಲ್ಲ ಎಂದು ಕಸದ ಬುಟ್ಟಿಗೆ ಎಸೆಯಬಹುದಿತ್ತು. ಕಸಕಡ್ಡಿ ಸೊಪ್ಪುಸೆದೆ ಮಣ್ಣುಮಸಿ ಎಲ್ಲವನ್ನೂ ಗುಡಿಸಿ ತಿಪ್ಪೆಗೆಸೆದು ಪುರಂದರ ಗೃಹವನ್ನು ಅಚ್ಚುಕಟ್ಟು ಮಾಡಿದ್ದರೆ ಚೆನ್ನಾಗಿತ್ತು ಎಂದು ಸಾಹಿತ್ಯ ಮೌಲ್ಯಮಾಪಕರಿಗೆ ಅನ್ನಿಸಿಯೇ ಅನ್ನಿಸುತ್ತದೆ. ಕೃತಿಚೌರ್ಯದ ಕೀರ್ತನೆಗಳ ಜೊತೆಗೆ ಅನುಯಾಯಿಗಳು ಆರಾಧಕರು ತಾವೇ ಸೃಷ್ಟಿಸಿ ಪುರಂದರಾಂಕಿತ ಹಾಕಿರುವ ಕೀರ್ತನೆಗಳ ಕಳೆ 'ಹೆಬ್ರಾಕ್ಸ'ದಂತೆ ಬೆಳೆದು, ಪುರಂದರರ ನಿಜವಾದ ಬೆಳೆ ಯಾವುದು ಎಂದು ಹುಡುಕಾಡುವಂತಾಗಿರುವುದು ದುರ್ದೈವ. ಇಂಥ ಕಳೆಯನ್ನೆಲ್ಲ ಕಿತ್ತೊಗೆದು, ಪುರಂದರ ಬೆಳೆಯನ್ನು ಮಾತ್ರ ಕೊಯ್ದು ಮೆದೆ ಹಾಕುವ 'ಮಾನವಧರ್ಮ'ದ ಪ್ರಾಮಾಣಿಕರೊಬ್ಬರು ಹುಟ್ಟಿ ಬರುವರೆ ಎಂದು ಕಾದು ನೋಡಬೇಕಿದೆ.

೧೨

ಸಮಾಜದಲ್ಲಿ ಮೇಲು ಕೀಳು ಎಂಬುದು ಇಲ್ಲದಂತಾಗಿ ಸರ್ವಸಮಾನತೆ ಬರಬೇಕು ಎಂಬ ತುಡಿತ ಕನಕದಾಸರಿಗೆ ತುಂಬ ಇದೆ ಎಂಬುದು ಅವರ ಕೃತಿಗಳ ಮುಖೇನ ಕೀರ್ತನೆಗಳ ಮುಖೇನ ಮನದಟ್ಟಾಗುತ್ತದೆ. ಎಲ್ಲ ಮಾಹಪುರುಷರೂ ಈ ನಿಟ್ಟಿನಲ್ಲಿ ಕೆಲಸ ಮಾಡಿದ್ದಾರೆ. ಕನಕದಾಸರು ಅಂಥ ಮಹಾತ್ಮರಲ್ಲಿ ಒಬ್ಬರು.

ನತ ಜನರನ್ನು ಉನ್ನತದತ್ತ ಕೊಂಡೊಯ್ಯಲು ಇನ್ನಿಲ್ಲದ ಪ್ರಯತ್ನ ಮಾಡಿದ್ದಾರೆ. ಉದಾಹರಣೆಗೆ ಮೋಹನ ತರಂಗಿಣಿಯಲ್ಲಿ ಉಷಾ ತಾನು ಕನಸಿನಲ್ಲಿ ಕಂಡ ಅನಿರುದ್ಧನ ಸಮಾಗಮಕ್ಕಾಗಿ ವಿರಹ ಯಾತನೆಯನ್ನು ಅನುಭವಿಸುವಾಗ ಅವಳ ಗೆಳತಿ ಚಿತ್ರಲೇಖೆ ಇಂದು ಸಂಜೆಯೊಳಗಾಗಿ ಆತನನ್ನು ಹುಡುಕಿ ಕರೆತಂದೇ ತರುತ್ತೇನೆ ಎಂದು ಆಶ್ವಾಸನೆ ಕೊಟ್ಟು ಹೋಗಿರುತ್ತಾಳೆ. ಉಷೆ ಗಳಿಗೆಗಳಿಗೆಯನ್ನೂ ಯುಗಯುಗದಂತೆ ಕಳೆಯುತ್ತಾ ಕುಳಿತಿರುವಾಗ ಸೂರ್ಯ ಏಕೆ ಪಶ್ಚಿಮದತ್ತ ದಾಪುಗಾಲಲ್ಲಿ ಹೋಗುತ್ತಿಲ್ಲ? ಎನ್ನಿಸುತ್ತದೆ. ಸೂರ್ಯನ ರಥ ಬಾಂದೊರೆಯಲ್ಲಿ ಹೂತುಕೊಂಡಿತೊ? ಅಥವಾ ರಥದ ಚಕ್ರಕ್ಕೆ 'ಎರೆಯೆಣ್ಣೆ' ಇಲ್ಲವೊ? ಎಂದು ಚಿಂತಿತಳಾಗುತ್ತಾಳೆ. ಇಲ್ಲಿ ಮುಖ್ಯವಾದದದ್ದು ಭೂಲೋಕದ ಗಾಡಿ ಅಥವಾ ಚಕ್ಕಡಿಯ ಚಕ್ರದ ಗುಂಭಕ್ಕೆ ಬಿದಿರದೆಬ್ಬೆಯಿಂದ ಎರೆಹಂಡೆ ಅಥವಾ ಎರೆಕೊಂಬಿನಲ್ಲಿರುವ ಎರೆಯೆಣ್ಣೆಯನ್ನು ತೆಗೆದು ಹಚ್ಚುವ ಪ್ರಕ್ರಿಯೆಯನ್ನು ಸೂರ್ಯನ ರಥಕ್ಕೂ ಅಳವಡಿಸಿದ್ದಾರೆ. ಅಂದರೆ ತೀರ ಕೆಳಮಟ್ಟದ್ದು ಎನ್ನಿಸುವ ಎರೆಯೆಣ್ಣೆಯನ್ನು ತೀರ ಮೇಲ್ಮಟ್ಟದ್ದು ಎನ್ನಿಸುವ ರಥದ ಚಕ್ರಕ್ಕೆ ಅನ್ವಯಿಸಿರುವುದನ್ನು ನಾವು ಮುಖ್ಯವಾಗಿ ಗಮನಿಸಬೇಕು. ಕೆಳಮಟ್ಟದವರು ಮೇಲುಮಟ್ಟದವರ ಸರೀಕರಾಗಿ ಬಾಳುವಂತಾಗಬೇಕು ಎಂಬ ಆಶಯ ಇದರಲ್ಲಿದೆ. 'ಚಿನ್ನದ ಹರಿವಾಣಕ್ಕೆ ಬದುಕಿದರೂ ಮಣ್ಣಿನ ಗೋಡೆ ಒರಗಬೇಕು' ಎಂಬ ಜನಪದ ಗಾದೆ ಇದೇ ಆಶಯವನ್ನೊಳಗೊಂಡಿದೆ. ಅಂದರೆ 'ನತಜನಹಿತ'ವನ್ನೇ ಅವಿರತ ಹಂಬಲಿಸುತ್ತಾ ಬಂದವರು; ಬೆಂಬಲಿಸುತ್ತಾ ಬಂದವರು. ವಿಶ್ವಮಾನವ ನಿಲುವಿನಿಂದ ವಿಶ್ವಕುಟುಂಬಿ ಯಾದವರು. ಆದ್ದರಿಂದ ಕನಕದಾಸರನ್ನು ಕುರಿತು ಹೀಗೆ ಹೇಳಬಹುದು– "ಜಗನ್ನಾಥ ಕಾಮಿ, ಸರ್ವಭೂತ ಪ್ರೇಮಿ"

* * * *



# ದೇವತಾಸ್ತುತಿ

**Blank**



೧

## ಮೋಹನ-ಅಟತಾಳ

**ನಮ್ಮಮ್ಮ ಶಾರದೆ ಉಮಾ ಮಹೇಶ್ವರಿ।**
**ನಿಮ್ಮೊಳಗಿಹನ್ಯಾರಮ್ಮ ॥ಪ॥**

**ಕಮ್ಮಗೋಲನ ವೈರಿಸುತನಾದ ಸೊಂಡಿಲ।**
**ಹೆಮ್ಮೈಯ್ಯ ಗಣನಾಥನೆ ಅಮ್ಮಯ್ಯ ॥ಅ॥**

**ಮೋರೆ ಕಪ್ಪಿನ ಭಾವ ಮೊರದಗಲ ಕಿವಿಯುಳ್ಳ**
**ಕೋರೆ ದಾಡೆಯವನ್ಯಾರಮ್ಮ॥**
**ಮೂರು ಕಣ್ಣಿನ ಸುತ ಮುರಿದಿಟ್ಟ ಚಂದ್ರನ**
**ಧೀರ ತಾ ಗಣನಾಥನೆ ಅಮ್ಮಯ್ಯ ॥೧॥**

**ಉಟ್ಟ ದಟ್ಟಿಯು ಮತ್ತೆ ಬಿಗಿದುಟ್ಟ ಚಲ್ಲಣದ।**
**ದಿಟ್ಟ ತಾನಿವನ್ಯಾರಮ್ಮ॥**
**ಪಟ್ಟದ ರಾಣಿ ಪಾರ್ವತಿಯ ಕುಮಾರ**
**ಹೊಟ್ಟೆಯ ಗಣನಾಥನೆ ಅಮ್ಮಯ್ಯ ॥೨॥**

**ರಾಶಿ ವಿದ್ಯೆಯ ಬಲ್ಲ ರಮಣಿ ಹಂಬಲನೊಲ್ಲ।**
**ಭಾಷಿಗನಿವನ್ಯಾರಮ್ಮ॥**
**ಲೇಸಾಗಿ ಸುಜನರ ಸಲಹುವ ನೆಲೆಯಾದಿ।**
**ಕೇಶವನ ದಾಸ ಕಾಣೆ ಅಮ್ಮಯ್ಯ ॥೩॥**

ಭಾವ- ಇದು ಗಣಪತಿಯ ಸ್ತೋತ್ರ. ದೇವತಾ ಪ್ರಾರ್ಥನಾ ಪದ್ಧತಿಯಲ್ಲಿ ತಮ್ಮ ಸಹವರ್ತಿ ಪುರಂದರದಾಸರು ದ್ವೈತತಾರತಮ್ಯವನ್ನು ಅನುಸರಿಸಿದಂತೆ ಕನಕದಾಸರು ಅನುಸರಿಸಿಲ್ಲ. ಅಹಿತವೆನ್ನಿಸಿದ್ದನ್ನು

ಅವರೆಂದೂ ಅನುಸರಿಸುವುದಿಲ್ಲ. ಇಲ್ಲಿ ಗಣಪತಿಯನ್ನು ಪರಿಚಯಿಸಿ ಪ್ರಾರ್ಥಿಸಿರುವ ರೀತಿ ವಿಶಿಷ್ಟ; ಅನನ್ಯ. ಯಕ್ಷಗಾನ ಬಯಲಾಟಗಳಲ್ಲಿ ಭಾಗವತರೋ ಅಥವಾ ಕೋಡಂಗಿಯೋ ರಂಗಸ್ಥಳಕ್ಕೆ ಬಂದ ಪಾತ್ರವನ್ನು ಪ್ರಶ್ನಿಸುತ್ತಾ ಪ್ರೇಕ್ಷಕರಿಗೆ ಪರಿಚಯಿಸುವ ತಂತ್ರವನ್ನಿಲ್ಲಿ ಅಳವಡಿಸಿಕೊಂಡಿದ್ದಾರೆ. ಶಾರದೆ ಮತ್ತು ಪಾರ್ವತಿಯರ ಮಧ್ಯೆ ಇರುವ, ಗುಜ್ಜಾನೆ ಮರಿಯಂತೆ ಮೈಕೈ ತುಂಬಿಕೊಂಡಿರುವ ಇವನು ಯಾರು ಎಂದು ಪ್ರಶ್ನಿಸುತ್ತಾ, ಇವನು ಗಣಪತಿಯೆ ಎಂದು ಅನುಮಾನಾಸ್ಪದ ನಿರ್ಣಯಕ್ಕೆ ಬರುತ್ತಾ, ಅವನ ಆಕೃತಿಯನ್ನೂ ಗುಣವಿಶೇಷವನ್ನೂ ಮುಷ್ಟಿಗ್ರಾಹ್ಯವನ್ನಾಗಿ ಮಾಡಿರುವ ಮೋಡಿ ಮೋಹಕವಾಗಿದೆ; ಸೃಜನಶೀಲ ಪ್ರತಿಭೆಯ ಕಲಾತ್ಮಕ ಅಭಿವ್ಯಕ್ತಿಯಾಗಿದೆ.

ಅರ್ಥ– ಉಮಾಮಹೇಶ್ವರಿ = ಪಾರ್ವತಿ
ಕಮ್ಮಗೋಲ = ಮನ್ಮಥ
ಕಮ್ಮಗೋಲವೈರಿ = ಶಿವ
ಕಮ್ಮಗೋಲವೈರಿಸುತ = ಶಿವನ ಮಗ
ಸೊಂಡಿಲ ಹೆಮ್ಮೈಯ (<ಹಿರಿಯ+ಮೈಯ್ಯ)= ಸೊಂಡಿಲುಳ್ಳ ಧಡೂತಿ ಶರೀರದ

೧. ಮೂರು ಕಣ್ಣ = ಶಿವ
ಮುರಿದಿಟ್ಟ ಚಂದ್ರನ = ಗಣಪತಿ ಚಂದ್ರನಿಗೆ ಶಾಪ ಕೊಟ್ಟು ಅವನ ಗರ್ವವನ್ನು ಮುರಿದ
೨. ಚಲ್ಲಣ = ಚಡ್ಡಿ
೩. ಭಾಷಿಗ = ವಿದ್ಯಾಧಿಪತಿ, ಭಾಷಾ ವಿಶಾರದ

* * * *



## ೨
## ಕಲ್ಯಾಣಿ–ರೂಪಕತಾಳ

**ವರವ ಕೊಡು ಎನಗೆ ವಾಗ್ದೇವಿ। ನಿಮ್ಮ**
**ಚರಣ ಕಮಲಂಗಳ ದಯಮಾಡು ದೇವಿ ॥ಪ॥**

**ಶಶಿ ಮುಖದ ನಸುನಗೆಯ ಬಾಲೆ**
**ಎಸೆವ ಕರ್ಣದ ಮುತ್ತಿನೋಲೆ**
**ನಸುನಗುವ ಸುಪಲ್ಲ ಗುಣಶೀಲೆ। ದೇವಿ**
**ಬಿಸಜಾಕ್ಷಿ ಎನ್ನ ಹೃದಯದೊಳು ನಿಂದವಳೆ ॥೧॥**

**ಇಂಪು ಸೊಂಪಿನ ಚಂದ್ರ ಬಿಂಬೆ**
**ಕೆಂಪು ತುಟಿಗಳ ನಾಸಿಕದ ರಂಭೆ**
**ಜೊಂಪು ಮದನನ ಪೂರ್ಣ ಶಕ್ತಿ ಬೊಂಬೆ। ಒಳ್ಳೆ**
**ಸಂಪಗೆ ಮುಡಿಗಿಟ್ಟು ರಾಜಿಪ ಶಾರದಾಂಬೆ ॥೨॥**

**ರವಿಕೋಟಿ ತೇಜಪ್ರಕಾಶೆ। ಮಹಾ**
**ಕವಿ ಜನರ ಹೃತ್ಕಮಲವಾಸೆ**
**ಅವಿರಳ ಪುರಿ ಕಾಗಿನೆಲೆಯಾದಿಕೇ**
**ಶವನ ಸುತನಿಗೆ ಸನ್ನುತ ರಾಣಿವಾಸೆ ॥೩॥**

ಭಾವ– ಇದು ವಿದ್ಯಾಧಿದೇವತೆಯಾದ ಸರಸ್ವತಿ ಸ್ತೋತ್ರ. ಇಲ್ಲಿ ಬಳಕೆಯಾಗಿರುವ ಭಾಷೆ ಹಾಗೂ ಶೈಲಿ ಕನಕದಾಸರು ಹುಟ್ಟು ಕವಿ, ವರಕವಿ ಎಂಬುದನ್ನು ಸಾಬೀತುಪಡಿಸುತ್ತದೆ. ಮುದ್ದು ಶಾರದೆಯ ವರ್ಣನೆ ಪ್ರತಿಯೊಬ್ಬ ಓದುಗನೂ ಮುದ್ದಾಮು ನೋಡಿದಂತೆ ಭಾಸವಾಗುವ ಕಲಾತ್ಮಕ ಕೌಶಲ್ಯ ಪ್ರದರ್ಶನದ ಪ್ರತೀಕವಾಗಿದೆ. ಶೃಂಗೇರಿಗೆ ಹೋದಾಗ ರಚಿತವಾದದ್ದು ಎಂದು ಪ್ರತೀತಿ.

ಅರ್ಥ– ವಾಗ್ದೇವಿ = ಸರಸ್ವತಿ

೧. ಶಶಿ = ಚಂದ್ರ
ಎಸೆವ = ಪ್ರಕಾಶಿಸುವ
ಕರ್ಣ = ಕಿವಿ
ಸುಪಲ್ಲ = ಚಂದವಾದ ಹಲ್ಲು, ಪಳಪಳನೆ ಹೊಳೆಯುವ ಹಲ್ಲು
ಬಿಸಜಾಕ್ಷಿ = ಕಮಲದಂತೆ ಕಣ್ಣುಳ್ಳವಳು.

೨. ಇಂಪು ಸೊಂಪಿನ = ಸವಿ ಸೊಗಸಿನ
ನಾಸಿಕ = ಮೂಗು
ರಂಭೆ = ಕಡೆದ ಕಲಾತ್ಮಕ ಬೊಂಬೆಯಂಥ ಸುಂದರಿ
ಜೊಂಪು = ಮತ್ತು, ಚಿತ್ತಾಪಹರಣ ಶಕ್ತಿ
ಮದನ = ಮನ್ಮಥ
ಜೊಂಪು ಮದನನ = ನೋಡಿದವರಿಗೆ ಮತ್ತೇರಿಸುವ ಸುಂದರ ಮನ್ಮಥನ
ಪೂರ್ಣಶಕ್ತಿ ಬೊಂಬೆ = ಮನ್ಮಥನ ಅಂಥ ಸಮ್ಮೋಹನ ಶಕ್ತಿಯ ಪೂರ್ಣರೂಪದ ಬೊಂಬೆಯಂತೆ ನೀನಿದ್ದೀಯೆ ಎಂಬ ಭಾವ.
ರಾಜಿಪ = ವಿರಾಜಿಸುವ, ಹೊಳೆಯುವ

೩. ಅವಿರಳ ಪುರಿ = ಶೃಂಗೇರಿ ಪುರ
ಸುತ = ಶಿಷ್ಯ (ಸುತ ಎಂಬುದಕ್ಕೆ ಮಗ ಎಂಬ ಅರ್ಥವಿರುವಂತೆಯೇ ಶಿಷ್ಯ ಎಂಬ ಅರ್ಥವೂ ಇದೆ.)

* * * *



೩

## ಅರಭಿ–ಆದಿ

ಶಿವ ಶಿವ ಶಿವ ಎನ್ನಿರೊ– ಮೂಜಗದವರೆಲ್ಲ
ಶಿವ ಶಿವ ಶಿವ ಎನ್ನಿರೊ ॥ಪ॥

ಆಗಮಸಿದ್ಧಾಂತ ಮೂಲದ ಜಪವಿದು ಶಿವಶಿವಶಿವ ಎನ್ನಿರೋ– ನಿಮ್ಮ
ರೋಗದ ಮೂಲವ ಕೆಡಿಪ ಔಷಧವಿದು ಶಿವಶಿವಶಿವ ಎನ್ನಿರೊ ॥೧॥

ಮನುಜ ಜನ್ಮದಿ ಹುಟ್ಟಿ ಮೈಮರೆದಿರಬೇಡಿ ಶಿವಶಿವಶಿವ ಎನ್ನಿರೊ– ನಿಮ್ಮ
ತನುಮನ ಪ್ರಾಣವ ವ್ಯರ್ಥವ ಮಾಡದೆ ಶಿವಶಿವಶಿವ ಎನ್ನಿರೋ ॥೨॥

ಅಪರಾಧ ಕೋಟಿ ತ್ಯಜಿಸಬೇಕಾದರೆ ಶಿವಶಿವಶಿವ ಎನ್ನಿರೋ– ಮುಂದೆ
ಉಪಮಿತರೋರ್ಮಿತರರಿಯದ ಜಪವಿದು ಶಿವಶಿವಶಿವ ಎನ್ನಿರೋ– ॥೩॥

ಜವನ ಬಾಧೆಯ ನೀವು ಜಯಿಸಬೇಕಾದರೆ ಶಿವಶಿವಶಿವ ಎನ್ನಿರೋ– ನಿಜ
ಸುವಿಮಲ ಮುಕ್ತಿಯ ಪಡೆಯಬೇಕಾದರೆ ಶಿವಶಿವಶಿವ ಎನ್ನಿರೊ ॥೪॥

ಭುವನಕೆ ಬಲ್ಲಿದರಾಗಬೇಕಾದರೆ ಶಿವಶಿವಶಿವ ಎನ್ನಿರೋ– ನೀವು
ಭವನ ಪದವಿಯನು ಪಡೆಯಬೇಕಾದರೆ ಶಿವಶಿವಶಿವ ಎನ್ನಿರೊ ॥೫॥

ಗುರುಲಿಂಗ ಜಂಗಮವ ಅರಿಯಬೇಕಾದರೆ ಶಿವಶಿವಶಿವ ಎನ್ನಿರೊ– ಮುಂದೆ
ಪರಮಾತ್ಮನ ನೀವು ತಿಳಿಯಬೇಕಾದರೆ ಶಿವಶಿವಶಿವ ಎನ್ನಿರೊ ॥೬॥

ಪೃಥ್ವಿಗೆ ಸದ್ಗುರು ಆಗಬೇಕಾದರೆ ಶಿವಶಿವಶಿವ ಎನ್ನಿರೊ– ನೀವು
ತತ್ತ್ವಪತಿ ಆದಿಕೇಶವನ ಕೂಡಬೇಕಾದರೆ ಶಿವಶಿವಶಿವ ಎನ್ನಿರೊ ॥೭॥

ಭಾವ– ಕನಕದಾಸರು ಎಲ್ಲ ಮತಗಳ ಸಾರವನ್ನು ಹೀರಿಕೊಂಡವರು; ಯಾವುದೇ ಒಂದು ಮತದ ಸಿದ್ಧಾಂತಕ್ಕೆ ಕುರುಡರಂತೆ ಕಟ್ಟು ಬಿದ್ದವರಲ್ಲ. ಪ್ರಸ್ತುತ ಶಿವನ ನಾಮಸ್ಮರಣೆಯ ಮಹಾತ್ಮ್ಯವನ್ನು ಮುಕ್ತ ಮನಸ್ಸಿನಿಂದ ಎತ್ತಿ ಹಿಡಿದಿದ್ದಾರೆ. ಅವರ ದೃಷ್ಟಿಯಲ್ಲಿ ಶಿವ ವಿಷ್ಣು ಬೇರೆಬೇರೆಯಲ್ಲ, ಏಕಸ್ಥರು.

ಅರ್ಥ– ಆಗಮ = ಶಾಸ್ತ್ರ
ರೋಗ = ಭವ ರೋಗ
ಉಪಮಿತರೋರ್ಮಿತರು (ಉಪಮಿತರು+ಊರ್ಮಿತರು?) =ವಿನೀತರು ಮತ್ತು ಗರ್ವಿತರು ಎಂದು ಅರ್ಥವಿರಬಹುದೆ?
ಜವ = ಯಮ
ಭುವನ = ಪ್ರಪಂಚ
ಭವನ = ಶಿವನ
ಗುರುಲಿಂಗ ಜಂಗಮ = ಅಷ್ಟಾವರಣಗಳಲ್ಲಿ ಮುಖ್ಯವಾದವು ಇವು. (ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ)
ಪೃಥ್ವಿ = ಭೂಮಿ

* * * *



## ೪
## ಕಲ್ಯಾಣಿ–ಅಟತಾಳ

**ದಾಸನಾಗಬೇಕು ಸದಾಶಿವನ ದಾಸನಾಗಬೇಕು ॥ಪ॥**

**ದಾಸನಾಗಬೇಕು ಕ್ಲೇಶಪಂಚಕವಳಿದು।**
**ಆಸೆಯಲ್ಲಿ ಮನ ಸೂಸದೆ ಸರ್ವದಾ ॥ಅ॥**

**ಮನದ ಕಲ್ಮಷ ಕಳೆದು– ಮಹಾದೇ**
**ವನ ಮಹಿಮೆಯ ತಿಳಿದು**
**ಇನಿತು ಈ ಜಗವೆಲ್ಲ ಈಶ್ವರಮಯವೆಂದು**
**ಘನವಾದ ಮೋಹದ ಗಡಿಯನು ದಾಟುತ ॥೧॥**

**ತನುವು ಅಸ್ಥಿರವೆನುತ– ತಿಳಿದು ಶಂಕ**
**ರನ ಹೃದಯವ ಕಾಣುತ**
**ಘನವಾದ ಇಂದ್ರಜಾಲವ ಮಾಯೆಯೆನುತ**
**ಬಿನುಗು ಸಂಸಾರದ ಮಮತೆಯ ಬಿಡುತ ॥೨॥**

**ಆರು ಚಕ್ರದಿ ಮೆರೆವ– ಅಖಂಡನ**
**ಮೂರು ಗುಣವ ತಿಳಿದು**
**ಆರು ಮೂರು ಹದಿನಾರು ತತ್ತ್ವವ ಮೀರಿ**
**ತೋರುವ ಕಾಗಿನೆಲೆಯಾದಿಕೇಶವನಡಿ ॥೩॥**

ಭಾವ– ಶಿವನ ದಾಸರು (ಶಿವಭಕ್ತರು) ಹೇಗಿರಬೇಕು, ಹೇಗಾಗಬೇಕು ಎಂಬ ಆಶಯವನ್ನು ಈ ಕೀರ್ತನೆ ಒಳಗೊಂಡಿದೆ. ಅಪರೋಕ್ಷ ಜ್ಞಾನಿಯಾದ ಕನಕದಾಸರಿಗೆ ಶಿವ ಬೇರೆಯಲ್ಲ ವಿಷ್ಣು ಬೇರೆಯಲ್ಲ; ಪರಬ್ರಹ್ಮ ಗಂಡಭೇರುಂಡ ಪಕ್ಷಿಯ ಎರಡು ತಲೆಗಳಿದ್ದ ಹಾಗೆ ಎಂದು

ಬಲವಾಗಿ ನಂಬಿದವರು; ತಮ್ಮ ನಡೆನುಡಿಯಲ್ಲಿ ಇಂಬುಗೊಟ್ಟು ಬಿಂಬಿಸಿದವರು.

ಅರ್ಥ– ಕ್ಲೇಶ ಪಂಚಕ = ಐದು ಬಗೆಯ ದುಃಖಗಳು [ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ, ಅಭಿನಿವೇಶ (ಮರಣಭಯ)]

೧. ಇನಿತು = ಇಷ್ಟು, ಹೀಗೆ
೨. ಇಂದ್ರಜಾಲ = ಕಣ್ಕಟ್ಟು
ಬಿನುಗು = ಕ್ಷುದ್ರ
೩. ಆರುಚಕ್ರ = ಮೂಲಾಧಾರ, ಸ್ವಾದಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧ, ಆಜ್ಞಾ
ಮೂರು ಗುಣ = ಸತ್ತ್ವ, ರಜಸ್ಸು, ತಮಸ್ಸು
ಆರು ಮೂರು ಹದಿನಾರು = ಪಂಚವಿಂಶತಿ (ಇಪ್ಪತ್ತೈದು) ತತ್ತ್ವಗಳು:

| | |
|---|---|
| ಪಂಚಭೂತಗಳು | = ೫ |
| ಪಂಚ ತನ್ಮಾತ್ರಗಳು | = ೫ |
| ಪಂಚ ಜ್ಞಾನೇಂದ್ರಿಯ | = ೫ |
| ಪಂಚ ಕರ್ಮೇಂದ್ರಿಯ | = ೫ |
| ಅಂತಃಕರಣ (ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ) | = ೪ |
| ಜೀವಾತ್ಮ | = ೧ |
| | ೨೫ |



೫

## ಹಿಂದುಸ್ಥಾನಿ ಕಾಪಿ – ಏಕತಾಳ

**ಭಜರೇ ಹನುಮಂತಂ। ಮಾನಸ**
**ಭಜರೇ ಹನುಮಂತಂ ॥ಪ॥**

**ಕೋಮಲ ಕಾಯಂ ನಾಮಸುದೇವಂ।**
**ಭಜ ಸಖಿಸಿಂಹಂ ಭೂಸುರ ಶ್ರೇಷ್ಠಂ ॥೧॥**

**ಮೂರ್ಖ ನಿಶಾಚರ ವನ ಸಂಹಾರಂ।**
**ಸೀತಾದುಃಖವಿನಾಶನಕಾರಂ ॥೨॥**

**ಪರಮಾನಂದ ಗುಣೋದಯ ಚರಿತಂ।**
**ಕರುಣಾರಸ ಸಂಪೂರ್ಣ ಸುಭರಿತಂ ॥೩॥**

**ರಣರಂಗ ಧೀರಂ ಗುಣಗಂಭೀರಂ।**
**ದಾನವ ದೈತ್ಯಾರಣ್ಯ ಕುಠಾರಂ ॥೪॥**

**ಗುರು ಚೆನ್ನಕೇಶವ ಕದಳೀ ರಂಗಂ।**
**ಸ್ಥಿರ ಸದ್ಭಕ್ತಂ ಮುಖ್ಯ ಪ್ರಾಣಂ ॥೫॥**

ಭಾವ– ಹನುಮಂತನ ಸ್ತೋತ್ರವಿದು. ಕನಕದಾಸರು ಕನ್ನಡದಲ್ಲಿ ಮಾತ್ರ ಪಾರಂಗತರಲ್ಲ, ಸಂಸ್ಕೃತದಲ್ಲೂ ಹೌದು ಎಂಬುದನ್ನು ರುಜುವಾತು ಪಡಿಸುವಂಥದು.

ಅರ್ಥ– ಭೂಸುರ = ಬ್ರಹ್ಮಜ್ಞಾನಿ
ನಿಶಾಚರ = ರಾಕ್ಷಸ

ಮೂರ್ಖ ನಿಶಾಚರ = ರಾವಣ
ದಾನವ = ರಾಕ್ಷಸ
ದೈತ್ಯಾರಣ್ಯ = ವಿಸ್ತೃತ ಸಾಂದ್ರ ಕಾಡು
ಕುಠಾರ = ಕೊಡಲಿ
ಕದಳೀ ರಂಗ = ? (ಯಾವ ಸ್ಥಳವೆಂಬುದು ಗೊತ್ತಿಲ್ಲ)
ಮುಖ್ಯಪ್ರಾಣ = ವಾಯುಪುತ್ರನಾದ ಹನುಮಂತ

* * * *



## ೬
## ಕಾಂಬೋದಿ – ಝಂಪೆತಾಳ

ಕದರ ಮಂಡಲಗಿಯ ಕರುಣಿ ಹನುಮರಾಯ।
ಸದುಗುಣವಂತನೆ ಹಣುವಂತನೆ ॥ಪ॥

ಅಂಜನೆಯ ವರಸೂನು ಆಶ್ರಿತ ಕಾಮಧೇನು।
ಮಂಜುಳ ಗಾನ ಗೀತ ಪರಮ ವಿಖ್ಯಾತ॥
ಸಂಜೀವನವ ತಂದ ವ್ಯೋಮ ಮಾರ್ಗದಿ ಬಂದ
ಅಂಜದ ಗುಣವಂತನೆ ಹಣುವಂತನೆ ॥೧॥

ಶಶಿಧರಾನ್ವಯ ದೂತ ಸೌಮಿತ್ರಿಯ ವರೂಥ।
ಅಸಮಾಸ್ತ್ರಧೃತವೇದ ಅಮಿತ ಪ್ರಖ್ಯಾತ॥
ಆ ಸುಗ್ರೀವ ಜಾಮಾತ ಮುಖ್ಯ ಪ್ರಾಣನಾಥ।
ವಿಶಾಲ ಗುಣವಂತನೆ ಹಣುವಂತನೆ ॥೨॥

ಕ್ಷೋಣಿಯೊಳು ಕನಕದಾಸನ ನೆರಳು ಅನಕ।
ಏನು ಬಲಿಸಿದೆಯೊ ಔಷಧಿಯ ಕುಣುಕ॥
ನೀನಿದ್ದರೆ ಕನಕ ಪ್ರಾಣ ತೆರಳುವ ತನಕ।
ಶ್ರೀನಿಧೇ ಆದಿಕೇಶವ ಎನ್ನ ಜನಕ ॥೩॥

ಭಾವ– ಕದಿರುಮಂಡಲಿಗೆಯ ಹನುಮಂತನ ಗುಣಗಾನದ ಕೀರ್ತನೆಯಿದು. ಕನಕದಾಸರು ತಮ್ಮ ಕೊನೆಗಾಲದಲ್ಲಿ ಕೆಲವು ದಿನ ಅಲ್ಲಿನ ದೇವಸ್ಥಾನದಲ್ಲೇ ವಾಸವಾಗಿದ್ದರು ಎಂದು ಪ್ರತೀತಿ. 'ಮೋಹನ ತರಂಗಿಣಿ' ಎಂಬ ಕಾವ್ಯ ಅಲ್ಲಿಯೇ ಆಯಿತು ಎಂಬ ಜನವದಂತಿಯೂ ಉಂಟು.

ಅರ್ಥ– ಹಣುವಂತ (<ಹನುಮಂತ)= ಆಂಜನೇಯ
೧. ವರಸೂನು = ಸುಪುತ್ರ

ಮಂಜುಳ = ಮಧುರ

೨. ಶಶಿಧರ = ಶಿವ

ಅನ್ವಯ = ವಂಶ, ಅನುಯಾಯಿ

ಸೌಮಿತ್ರಿ = ಲಕ್ಷ್ಮಣ

ವರೂಥ = ರಥದಲ್ಲಿ ಕೂತವರಿಗೆ ಏಟು ತಾಕದಿರಲೆಂದು ಹಾಕಿದ ಕಟಾಂಜನ, ಕಟಕಟೆ

ಧೃತ = ಧರಿಸಿದ

ಅಸಮಾಸ್ತ್ರ = ಅಸದೃಶ, ಅಸಮಾನ್ಯ ಅಸ್ತ್ರ

ಜಾಮಾತ = ಅಳಿಯ

೩. ಕ್ಷೋಣಿ = ಭೂಮಂಡಲ

ಅನಕ = ಅಂತೂ

ಕುಣುಕ = ಔಷಧಿಯ ಗಿಡಮೂಲಿಕೆ, ಮದ್ದಿನ ಚೂರ್ಣ

ಶ್ರೀನಿಧೇ (<ಶ್ರೀನಿಧಿ)= ಲಕ್ಷ್ಮಿಗೆ ತನ್ನೆದೆಯಲ್ಲಿ ಆಶ್ರಯ ನೀಡಿದವನು, ವಿಷ್ಣು

* * * *



## ೭
## ಕೇದಾರಗೌಳ – ಆಟತಾಳ

**ಅರಸಿನಂತೆ ಬಂಟನೋ ಹನುಮರಾಯ ॥ಪ॥**

**ಅರಸಿನಂತೆ ಬಂಟನೆಂಬುದ ನೀನು**
**ಕುರುಹು ತೋರಿದೆ ಮೂರು ಲೋಕಕೆ ಹನುಮ ॥ಅ॥**

**ಒಡೆಯನಂಬುಧಿಯೊಳು ಪೊಕ್ಕು ದೈತ್ಯನ ಕೊಂದು**
**ತಡೆಯದೆ ಶ್ರುತಿಯನಜಗಿತ್ತನೆಂದು**
**ಸಡಗರದಿಂದ ಶರಧಿಯ ದಾಂಟಿ ಮಹಿಜೆ ಪೆ**
**ರ್ಮುಡಿಯ ಮಾಣಿಕವ ರಾಘವಗಿತ್ತೆ ಹನುಮ ॥೧॥**

**ಮಂದರಧರ ಗೋವರ್ಧನ ಗಿರಿಯನು ಲೀಲೆ**
**ಯಿಂದಲಿ ನಿಂದು ನೆಗಹಿದನೆಂದು**
**ಸಿಂಧು ಬಂಧನಕೆ ಸಮಸ್ತ ಪರ್ವತಗಳ**
**ತಂದು ನಳನ ಕೈಯೊಳಗಿತ್ತೆ ಹನುಮ ॥೨॥**

**ಸಿರಿಧರ ವರ ಕಾಗಿನೆಲೆಯಾದಿಕೇಶವ**
**ಸುರರಿಗಮೃತವನು ಎರೆದನೆಂದು**
**ವರ ಸಂಜೀವನವ ತಂದು ಸೌಮಿತ್ರಿಗಂದು**
**ಎರೆದು ಶ್ರೀರಾಮನ ನಿಜದೂತನೆನಿಸಿದೆ ಹನುಮ ॥೩॥**

ಭಾವ– ಯಥಾ ರಾಜಾ ತಥಾ ಪ್ರಜಾ ಎಂಬ ಉಕ್ತಿಯಂತೆ ರಾಮ ಸೇವಕನಾದ ಹನುಮಂತ ಒಡೆಯನ ಪಡಿಯಚ್ಚಾಗಿ ನಡೆದುಕೊಂಡದ್ದನ್ನು ಮೂರು ನಿದರ್ಶನಗಳ ಮುಖೇನ– ಇಬ್ಬರ ಸದೃಶಕಾರ್ಯಗಳನ್ನು ಥಳಕು ಹಾಕಿ–

ಬೆಸೆದು ಸಮತೋಲನದ ತೌಲನಿಕ ಪ್ರಜ್ಞೆಯನ್ನು ಮೆರೆದಿದ್ದಾರೆ ಕನಕದಾಸರು.

ಅರ್ಥ– ಕುರುಹು = ಗುರುತು

೧. ಶ್ರುತಿ = ವೇದ
ಅಜ = ಬ್ರಹ್ಮ
ಶರಧಿ = ಸಮುದ್ರ
ಮಹಿಜೆ = ಸೀತೆ
ರಾಘವ = ರಾಮ

೨. ಮಂದರಧರ = ಮಂದರ ಪರ್ವತವನ್ನು ಹೊತ್ತವನು (ವಿಷ್ಣು)
ನೆಗಹಿದ = ಎತ್ತಿದ
ಸಿಂಧು = ಸಮುದ್ರ
ಸಿಂಧು ಬಂಧನಕೆ = ಸಮುದ್ರಕ್ಕೆ ಸೇತುವೆ ಕಟ್ಟಲು

೩. ಸಿರಿಧರ = ಲಕ್ಷ್ಮಿಯೊಡೆಯ ವಿಷ್ಣು

* * * *



## ೮
## ಸೌರಾಷ್ಟ್ರ – ಆಟ

**ಭೀಮನೆಂಬುವರಿಗೆ ಯಾತರ ಭಯವಿಲ್ಲ ಭೀಮರಾಯ ॥ಪ॥**
**ಕಾಮಿತ ಫಲಗಳ ಕೊಟ್ಟು ನೀ ಸಲಹಯ್ಯ ಭೀಮರಾಯ ॥ಅ॥**

**ಅಂಜನೆಯಾತ್ಮಜ ಅಗಣಿತ ಬಲವಂತ ಭೀಮರಾಯ**
**ಕಂಜನಾಭನ ದೂತ ಕರುಣಿಸೊ ಬಲವಂತ ಭೀಮರಾಯ ॥೧॥**

**ಕಟ್ಟಿದ ಪೂಮಾಲೆ ಕಸ್ತೂರಿ ನಾಮದ ಭೀಮರಾಯ– ಪೊಂ**
**ಬಟ್ಟೆ ಪೀತಾಂಬರವನುಟ್ಟು ಮೆರೆವಂಥ ಭೀಮರಾಯ ॥೨॥**

**ವಾರಿಧಿಯನು ದಾಟಿ ಸೀತೆಗುಂಗುರವಿತ್ತ ಭೀಮರಾಯ**
**ಸೂರಿವೆಗ್ಗಳತನ ಕಿತ್ತು ಈಡಾಡಿದ ಭೀಮರಾಯ ॥೩॥**

**ರಾಮರಾಯರಿಗೆ ನೀ ಪ್ರೇಮದ ಬಂಟನು ಭೀಮರಾಯ**
**ಕಾಮಿತ ಫಲವಿತ್ತು ಕರುಣದಿ ಸಲಹಯ್ಯ ಭೀಮರಾಯ ॥೪॥**

**ಛಪ್ಪನ್ನ ದೇಶಕ್ಕೆ ಒಪ್ಪುವ ಕಾಗಿನೆಲೆಯ ಭೀಮರಾಯ**
**ತಪ್ಪದೆ ಕನಕಗೆ ವರಗಳ ಕೊಡುವಂಥ ಭೀಮರಾಯ ॥೫॥**

ಭಾವ– ಆಂಜನೇಯನನ್ನು ಕುರಿತ ಸ್ತುತಿರೂಪದ ಕೀರ್ತನೆಯಿದು. ಆಂಜನೇಯನನ್ನು ಜನಸಮೂಹ ಹುಚ್ಚುರಾಯ, ಭೀಮರಾಯ ಎಂದು ಕರೆಯುವುದು, ಆರಾಧಿಸುವುದು ಉಂಟು. ಉದಾಹರಣೆಗೆ ಶಿಕಾರಿಪುರದಲ್ಲಿರುವ ಹುಚ್ಚುರಾಯನ ದೇವಸ್ಥಾನ ಎಂಬುದನ್ನು ರಾಯಚೂರು ಜಿಲ್ಲೆಯ ಭೀಮರಾಯನ ಗುಡಿ ಎಂಬುದನ್ನೂ ಸ್ಮರಿಸಿಕೊಳ್ಳಬಹುದು.

ಅರ್ಥ– ಆತ್ಮಜ = ಮಗ
ಕಂಜನಾಭ = ಹೊಕ್ಕಳಲ್ಲಿ ಕಮಲವುಳ್ಳ ವಿಷ್ಣು (ರಾಮ)
ಪೊಂಬಟ್ಟೆ (<ಪೊನ್+ಬಟ್ಟೆ ಅಥವಾ ಪಟ್ಟೆ) = ಚಿನ್ನದ (ಬಣ್ಣದ) ಬಟ್ಟೆ ಅಥವಾ ಆ ಬಣ್ಣದ ಪಟ್ಟೆ (ಸೀಳು, ಗೀರು) ಇರುವಂಥದು.
ವಾರಿಧಿ = ಸಮುದ್ರ
ಸೂರಿ = ವಿದ್ವಾಂಸ
ವೆಗ್ಗಳತನ = ಶ್ರೇಷ್ಠತೆ, ಆಧಿಕ್ಯ
ಛಪ್ಪನ್ನ = ಐವತ್ತಾರು.

* * * *



## ೯
## ತೋಡಿ – ಛಾಪು

**ಸೇವಕತನದ ರುಚಿಯನೇನರಿದೆಯೊ**
**ದೇವ ಹನುಮರಾಯ ವೈರಾಗ್ಯ ಬೇಡಿ ॥ಪ॥**

**ಉದಧಿಯನು ದಾಟಿ ಸೀತೆಯ ಕಂಡು ಬಂದಾಗ**
**ಮದುವೆಯನು ಮಾಡೆನ್ನಬಾರದಿತ್ತೆ**
**ಪದದಿಂದ ಪಾಷಾಣ ಪೆಣ್ಣ ಮಾಡಿದಾತಗೆ**
**ಇದೇನಸಾಧ್ಯವೊ ನೀ ಬಯಸಲೊಲ್ಲದೆ ॥೧॥**

**ಕ್ಷಣದಲ್ಲಿ ಸಂಜೀವನ ಪರ್ವತ ತಂದಾಗ**
**ಹಣ ಹೊನ್ನುಗಳ ಬೇಡಬಾರದಿತ್ತೆ**
**ವಿನಯದ ವಿಭೀಷಣಗೆ ರಾಜ್ಯವನಿತ್ತಂಥ**
**ಧಣಿಗೆ ಏನಸಾಧ್ಯವೊ ಹನುಮ ನೀನೊಲ್ಲದೆ ॥೨॥**

**ಸಾರ್ವಭೌಮನು ತಾನೆ ಮೆಚ್ಚಿ ಬಳಿಗೈದಾಗ**
**ಉರ್ವಿಯನು ಬೇಡಿದಡೆ ಕೊಡದಿಹನೆ**
**ಸರ್ವವನು ತೊರೆದು ಶ್ರೀ ನೆಲೆಯಾದಿ ಕೇಶವನ**
**ನಿರ್ವ್ಯಾಜ ಭಕುತಿಯನು ಬೇಡಿಕೊಂಡೆಯೊ ॥೩॥**

ಭಾವ– ಬ್ರಹ್ಮಚಾರಿಯಾದ ಹನುಮಂತ ಸರ್ವವನ್ನೂ ತೊರೆದು ಸರ್ವೋತ್ತಮನನ್ನು ಬಯಸಿ ಭಕ್ತನಾದುದದರ ಬಗೆಗೆ ಮೆಚ್ಚುಗೆ ಇದರ ಆಶಯ.

ಅರ್ಥ– ೧. ಉದಧಿ = ಸಮುದ್ರ
ಪದ = ಪಾದ
ಪಾಷಾಣ = ಕಲ್ಲು

೨. ಹೊನ್ನು = ಚಿನ್ನ
೩. ಉರ್ವಿ = ರಾಜ್ಯ

* * * *



## ೧೦
## ಪಂತುವರಾಳಿ – ತ್ರಿಪುಟ

**ಎನ್ನ ಕಂದ ಹಳ್ಳಿಯ ಹನುಮ ॥ಪ॥**
**ಚೆನ್ನಾಗೈದಾರ ಲಕ್ಷ್ಮಣ ದೇವರು ॥ಅ॥**

**ತುಪ್ಪ ಪಂಚಾಮೃತವಂದು ಅಡವಿಗಡ್ಡೆಗಳಿಂದು**
**ಕರ್ಪೂರ ವೀಳ್ಯವಂದು ಕುರುಕು ಇಂದು**
**ಸುಪ್ಪತ್ತಿಗೆ ಮಂಚವಂದು ಹುಲ್ಲು ಹಾಸಿಗೆಯಿಂದು**
**ಶ್ರೀಪತಿ ರಾಘವ ಕ್ಷೇಮದಲೈದಾರೆ ॥೧॥**

**ನವ ವಸ್ತ್ರಗಳು ಅಂದು ನಾರಸೀರೆಗಳಿಂದು**
**ಹೂವಿನ ಗಂಟು ಅಂದು ಜಡೆಗಳಿಂದು**
**ಜವ್ವಾಜಿ ಕತ್ತುರಿಯಂದು ಭಸಿತ ಧೂಳಿಂದು**
**ಶ್ರೀವರ ರಾಘವ ಕ್ಷೇಮದಲೈದಾರೆ ॥೨॥**

**ಕನಕ ರಥಗಳಂದು ಕಾಲುನಡಿಗೆಯಿಂದು**
**ಘನ ಛತ್ರ ಚಾಮರವಂದು ಬಿಸಿಲು ಇಂದು**
**ಸನಕಾದಿಗಳೋಲೈಪ ಆದಿಕೇಶವ ನಮ್ಮ**
**ಹನುಮೇಶ ರಾಘವ ಕ್ಷೇಮದಲೈದಾರೆ ॥೩॥**

ಭಾವ– ಸೀತೆ ಹನುಮಂತರ ಮಧ್ಯೆ ಜರುಗಿದ ಸಂವಾದರೂಪದ ಕೀರ್ತನೆಯಿದು. ಪರದೇಸಿಯಾಗಿ ಅಶೋಕವನದಲ್ಲಿದ್ದ ಸೀತಾದೇವಿ ಹನುಮಂತನನ್ನು ಕಂಡೊಡನೆ ನೇರವಾಗಿ ಗಂಡನ ಯೋಗಕ್ಷೇಮವನ್ನು ವಿಚಾರಿಸಲು ನಾಚಿಕೆಯಾಗಿ– ಅದು ಸುಸಂಸ್ಕೃತ ಲಕ್ಷಣವೆಂಬುದನ್ನು ಅನುಕ್ತವಾಗಿ ಸೂಚಿಸಿ– ಲಕ್ಷ್ಮಣದೇವರು ಚೆನ್ನಾಗಿದ್ದಾರೆಯೆ? ಎಂದು ಪ್ರಶ್ನಿಸುತ್ತಾಳೆ– ಮೂಗನ್ನು ಪಟ್ಟಾಗಿ ಹಿಡಿದರೆ ಬಾಯಿ ಬಿಡಲೇ

ಬೇಕಾಗುತ್ತದೆ ಎಂದು ನಂಬಿ. ಸೂಕ್ಷ್ಮಮತಿಯಾದ ಹನುಮಂತ–ಸುವ್ವಿ ಎನ್ನುವಾಗಲೇ ರಾಗ ಯಾವುದೆಂದು ಅರ್ಥ ಮಾಡಿಕೊಂಡು–ಲಕ್ಷ್ಮಣನ ಬಗ್ಗೆ ಚಕಾರವೆತ್ತದೆ ರಾಮನ ಯೋಗಕ್ಷೇಮವನ್ನೇ ಹೇಳುತ್ತಾನೆ. ರಾಮನ ಪೂರ್ವಾಪರ ಸ್ಥಿತಿ ಗತಿಯ ಜೊತೆಗೇ ಕನಕರ ಪೂರ್ವಾಪರ ಸ್ಥಿತಿಗತಿಯೂ ಸಂಲಗ್ನಗೊಂಡಿದೆ ಎಂಬುದನ್ನು ಮರೆಯಬಾರದು. ಮನಸ್ಸಿನ ಸೂಕ್ಷ್ಮಾತಿ ಸೂಕ್ಷ್ಮ ಎಳೆಗಳನ್ನು ಅಷ್ಟೇ ಸೂಕ್ಷ್ಮಾತಿಸೂಕ್ಷ್ಮವಾಗಿ, ಸ್ವಾರಸ್ಯವಾಗಿ, ಚಾತುರ್ಯಪೂರ್ಣವಾಗಿ ದಾಖಲಿಸಬೇಕಾದರೆ ಕವಿಗೆ ಸೂಕ್ಷ್ಮಗ್ರಹಣಶಕ್ತಿ ಹಾಗೂ ಅಗಾಧ ಪ್ರತಿಭಾಶಕ್ತಿ ಇರಬೇಕಾಗುತ್ತದೆ. ಕನಕದಾಸರು ಅದನ್ನಿಲ್ಲಿ ಸಮರ್ಥವಾಗಿ ನಿರ್ವಹಿಸಿದ್ದಾರೆ. ಮೇಲಾಗಿ 'ಎನ್ನಕಂದ' 'ಹಳ್ಳಿಯ ಹನುಮ' ಎಂಬ ಸಂಬೋಧನೆಯಲ್ಲಿನ ಜನಸಂಮುಖ ದೃಷ್ಟಿ ಮನನೀಯ.

ಅರ್ಥ– ಹಳ್ಳಿಯ ಹನುಮ = ಶ್ರೀಸಾಮಾನ್ಯ ಹನುಮಂತ. (ದೊಡ್ಡವರು–ಚಿಕ್ಕವರು, ಧನಿಕರು–ನಿರ್ಗತಿಕರು ಎಂಬ ಅಂತಸ್ತುಗಳನ್ನು, ಶ್ರೇಣೀಕೃತ ವ್ಯವಸ್ಥೆಯನ್ನು ಹೇಗೆ ಸದ್ದಿಲ್ಲದೆ ಅಲ್ಲಗಳೆದು ಸರ್ವಸಮಾನ ಸಾಮಾನ್ಯ ನೆಲೆಗಟ್ಟಿಗೆ ಗುದ್ದಲಿಪೂಜೆ ನಡೆಸಿದ್ದಾರೆ ಎಂಬುದನ್ನು ಅರ್ಥ ಮಾಡಿಕೊಳ್ಳಬೇಕು. ಇದಕ್ಕೆ ಅವರ ಸಾಹಿತ್ಯಕೃತಿಗಳಲ್ಲಿ ಬೇಕಾದಷ್ಟು ನಿದರ್ಶನ ಸಿಕ್ಕುತ್ತವೆ)

೧. ಪಂಚಾಮೃತ = ಹಾಲು, ಮೊಸರು, ತುಪ್ಪ, ಬಾಳೆಹಣ್ಣು, ಸಕ್ಕರೆ ಅಥವಾ ಜೇನುತುಪ್ಪ ಸೇರಿಸಿ ಮಾಡಿದ ಪದಾರ್ಥ.

೨. ಸೀರೆ (<ಚೀರ) = ಬಟ್ಟೆ

ಭಸಿತ ಧೂಳು = ವಿಭೂತಿಯ ಧೂಳು ಅಥವಾ ಮಣ್ಣಿನ ಧೂಳು

೩. ಹನುಮೇಶ = ಹನುಮನ ಒಡೆಯ (ರಾಮ)

ರಾಘವ = ರಾಮ

ಸನಕಾದಿ = ಸನಕನೇ ಮೊದಲಾದವರು. ಬ್ರಹ್ಮನ ಮಾನಸ ಪುತ್ರರಲ್ಲಿ ಒಬ್ಬ (ಸನಕ, ಸನಂದನ, ಸನತ್ಸುಜಾತ, ಸನತ್ಕುಮಾರ)

* * * *



## ೧೧
## ಕಲ್ಯಾಣಿ – ಅಟ

**ಏನೆಂದಳೇನೆಂದಳೋ ॥ಪ॥**
**ನಿನ್ನೊಳು ಸೀತೆ ಹನುಮಯ್ಯ ॥ಅ॥**

**ಜನಕನರಮನೆಯಲ್ಲಿ ಜನಿಸಿ ಸುಖದಲ್ಲಿರಲು**
**ಧನು ಮುರಿದು ಕೈಹಿಡಿದು ತನ್ನ**
**ಘನ ಪದವಿಯನು ಬಿಟ್ಟು ವನವ ಸೇರಿದನೆಂದು**
**ವನಿತೆ ತಪಿಸುತೆ ಮನದಿ ನೊಂದು ॥೧॥**

**ಕುರುಹಿನುಂಗುರವನು ತರಳಾಕ್ಷಿಗಿತ್ತಾಗ**
**ತಿರುಳಿಗಿಂತಧಿಕವೇ ಕರಟವೆಂದು**
**ಬೆರಳಿಂದ ಚಿಮ್ಮಿದಳೆ ಅಶೋಕವನದಾಚೆಗೆ**
**ನಿರುತ ಸಂತಾಪದಲಿ ಮನದಿ ನೊಂದು ॥೨॥**

**ಸೇತುವೆಯ ಕಟ್ಟಿ ಸಿಂಧುಗೆ ವಿಭೀಷಣಾಗ್ರ**
**ಜಾತ ಲಂಕಾಧಿಪನ ವಧಿಸಿ**
**ಸೀತೆಯನು ಸೆರೆಯಿಂದ ಬಿಡಿಸಿದ್ದೆ ಆದರೆ**
**ನಾಥಾದಿಕೇಶವಗೆ ಬಲು ಬಿರುದು ಎಂದು ॥೩॥**

ಭಾವ– ಸೀತೆಯ ಮೇಲೆ ರಾಮನಿಗಿರುವ ಪ್ರೇಮದ ತುಡಿತವಿಲ್ಲಿ ಚಿತ್ರಿತವಾಗಿದೆ. ಸೀತಾನ್ವೇಷಣೆಯ ಘನ ಕಾರ್ಯದಿಂದ ಹಿಂದಿರುಗಿದ ಹನುಮಂತನನ್ನು ಪ್ರಶ್ನಿಸಿ ಸೀತೆಯ ಆತಂಕದ ಮನಃಸ್ಥಿತಿಯನ್ನು ತಾನೇ ಊಹಿಸಿ ಹೇಳುವ ಈ ತಂತ್ರ ರಾಮನ ಪ್ರೇಮಾಧಿಕ್ಯವನ್ನು ಪರೋಕ್ಷವಾಗಿ ಪ್ರತಿಬಿಂಬಿಸುತ್ತದೆ. ಮೇಲಾಗಿ ಕನಕದಾಸರು ಉನ್ನತವೆಂಬುದನ್ನೂ ಸಹ ಜನಸಾಮಾನ್ಯ ನೆಲೆಗೆಳೆತಂದು ಸಂವಾದಿಸುವ ರೀತಿಯಂತೂ

ಅವರ ಜನಸಂಮುಖ ದೃಷ್ಟಿಯನ್ನು ಸಾಬೀತುಪಡಿಸುತ್ತದೆ. ಹನುಮಂತನನ್ನು ಸಾಮಾನ್ಯರಿಗೆ ನಿಲುಕುವಂತೆ, ದೈನಂದಿನ ಒಡನಾಡಿಯಂತೆ 'ಹನುಮಯ್ಯ' ಎಂದು ಸಂಬೋಧಿಸಿರುವ ನಿಲುವು ಮೇಲಿನ ಅಭಿಪ್ರಾಯಕ್ಕೆ ಸಾಕ್ಷಿಯಾಗಿ ನಿಂತಿದೆ.

ಅರ್ಥ– ಧನು = ಬಿಲ್ಲು
ತಪಿಸುತೆ = ಬೇಯುತ್ತ

೧. ಕುರುಹು = ಗುರುತು
ತರಳಾಕ್ಷಿ = ಸೀತೆ
ಕರಟ ಹಿರಿದೇನು = ತಿರುಳಿಗಿಂತ ಮೇಲಿನ ಚಿಪ್ಪು ಹಿರಿದಲ್ಲ. ಅದರಂತೆ ಗಂಡ ರಾಮನಿಗಿಂತ ಈ ಉಂಗುರ ದೊಡ್ಡದೇನು ಎಂದು ಎಸೆದಳೆ? ಎಂಬ ಭಾವ.

೨. ಸಿಂಧುಗೆ = ಸಮುದ್ರಕ್ಕೆ
ಅಗ್ರಜಾತ = ಅಣ್ಣ
ಲಂಕಾಧಿಪ = ರಾವಣ

* * * *



## ೧೨
## ಮಧ್ಯಮಾವತಿ –ಛಾಪುತಾಳ

ಎಷ್ಟು ಪೊಗಳಲಿ ನಾನು ಎನ್ನೊಡೆಯ ನಿಮ್ಮ ವಿ।
ಶಿಷ್ಟ ಮಹಿಮೆಗಳನು ಸುಜನರಿಗೆ ಬಂದ ।
ಕಷ್ಟವಳಿಯಲ್ಕೆ ನೀ ಸುರಕಾಮಧೇನು ॥ಪ॥

ವಿಷ್ಣುವೆ ಪರಮದೈವವೆಂದು ದುಷ್ಟ ರಾಕ್ಷಸರ ಕೊಂದೆ।
ಸೃಷ್ಟಿಸಿ ಪಾಲಿಪ ಶ್ರೀರಾಮರ।
ಇಷ್ಟ ಭಕ್ತರೊಳು ಶ್ರೇಷ್ಠನೆಂದೆನಿಸಿದೆ ॥ಅ॥

ತಾಯಿಯಪ್ಪಣೆಗೊಂಡು ಸೇವೆಗೆ ರಘುಪತಿ।
ರಾಯನಲ್ಲಿ ನಿಂದು ತನ್ನಾತ್ಮ ಸುಖ।
ಬಯಸೆನೆಂದು ಶ್ರೀ ಹರಿಗೆ ನುಡಿದು।
ಕಾಯಬೇಕು ಸುಗ್ರೀವನನೆನುತಲಿ।
ತೋಯಜಾಕ್ಷಗೆ ಪೇಳಿ ವಾಲಿಯನು।
ಪಾಯದಿಂದಲಿ ಕೊಲ್ಲಿಸಿ ರವಿಜಗೆ ಸ।
ಹಾಯ ಮಾಡಿ ವಾಯುತನಯ ॥೧॥

ಕಡಲ ಬೇಗನೆ ಹಾರಿ ಶ್ರೀರಾಮರ।
ಮಡದಿಗುಂಗುರವ ಕೊಟ್ಟು ಅಲ್ಲಿದ್ದ ದನುಜರ।
ಹೊಡೆದು ಬಲು ಹಂತಕಾರಿ ಮಾಡಿದೆ ಶೌರಿ।
ಒಡೆಯಗೆ ವಾರ್ತೆಯ ಪೇಳಿ ಶೀಘ್ರದಿ
ನಡೆಸಿ ಸೈನ್ಯವ ದಶಮುಖನ ಶಿರವ।
ನೊಡಿಸಿದಾಕ್ಷಣ ಲೋಕಮಾತೆಯ।
ನೊಡಗೂಡಿಸಿದೆ ಶ್ರೀವಾಸುದೇವರಿಗೆ ॥೨॥

**ಮೂರು ರೂಪವ ತಾಳಿ ಮಹಾಯೋಗ್ಯರುಗಳಿಗೆ।**
**ಸಾರ ತತ್ತ್ವದ ಪೇಳ್ದೆ।**
**ಶರಣು ಹೊಕ್ಕ ಮನುಜರ।**
**ಘೋರ ದುರಿತವ ಸೀಳ್ದೆ।**
**ಧೀರ ತನು ಧುರದುಂಡಿ ಹನುಮಯ್ಯರಿಂ ಸೇವಿಸಿದ ನಿಮ್ಮಂಘ್ರಿ ಕಮಲವ॥**
**ದೂರ ಮಾಡದೆ ಎನ್ನ ಸಲಹಯ್ಯ।**
**ಕರುಣಾವಾರಿಧಿ ಕಾಗಿನೆಲೆಯಾದಿಕೇಶವ ಮುತ್ತತ್ತಿ ದೊರೆಯೆ** ॥೩॥

ಭಾವ– ಮುತ್ತತ್ತಿಯ ಆಂಜನೇಯನನ್ನು– ಕ್ಷೇತ್ರ ಸಂದರ್ಶನ ಕಾಲದಲ್ಲಿ– ಕುರಿತು ಹಾಡಿದ ಕೀರ್ತನೆ ಇದು.

ಅರ್ಥ– ತೋಯಜಾಕ್ಷ = ಕಮಲಾಕ್ಷನಾದ ವಿಷ್ಣು
ರವಿಜ = ಸೂರ್ಯವಂಶದ ರಾಮ
ದಶಮುಖನ = ರಾವಣನ
ವಾಸುದೇವ = ವಿಷ್ಣು (ರಾಮ)
ಮೂರು... ಪೇಳ್ದೆ = ಮಧ್ವಾಚಾರ್ಯರಾಗಿ ಹುಟ್ಟಿ ಮಾಧ್ವ ತತ್ತ್ವವನ್ನು ಹರಡಿದೆ.
ದುರಿತ = ಪಾಪ
ಧುರದುಂಡಿ = ಧೀರ
ಅಂಘ್ರಿ = ಪಾದ
ವಾರಿಧಿ = ಸಮುದ್ರ

* * * *



## ೧೩
## ಸೌರಾಷ್ಟ್ರ – ಛಾಪುತಾಳ

**ಬಲ್ಲೆ ಬಲ್ಲೆನು ನಿನ್ನ ಛಾಳ ಪ್ರತಾಪವ**
**ಎಲ್ಲಾ ಲೋಕ ಲೋಕದಿ** ॥ಪ॥
**ಬಲ್ಲಿದವರ ಭಂಗಪಡಿಸಿದೆ ನಿನಗೆಣೆ।**
**ಯಿಲ್ಲ ಶನೈಶ್ಚರನೆ** ॥ಅ॥

**ಹರಿಹರ ಬ್ರಹ್ಮಾದಿಗಳ ಭಂಗಪಡಿಸಿದೆ ಕರುಣವಿಲ್ಲದೆ ನಿನಗೆ।**
**ಹರಿಶ್ಚಂದ್ರ ನಳಚಕ್ರವರ್ತಿ ಷೋಡಶ ಮಹಾರಾಯ ಪಾಂಡ್ಯರ ದಣಿಸಿ॥**
**ತೋರಿಸಿದೆ ಮನೆ ಮನೆ ವಾರ್ತೆಗಳೆಲ್ಲವ ತಿರಿದುಂಡು ಮರುಳುಗೊಂಡು।**
**ಪರರ ಪೀಡಿಸಿ ಭ್ರಮೆಪಟ್ಟು ಲಜ್ಜೆಗೆಟ್ಟು ತಿರುಗುವಂದದಿ ಮಾಡಿದೆ** ॥೧॥

**ಕಟ್ಟಿದ ಪಶು ಕರೆಯದು ತಾನಾಡಿದ ಮಾತು ಕಟ್ಟದು ಸಭೆಯೊಳಗೆ।**
**ಮೆಟ್ಟಿದ ನೆಲ ಮುನಿವುದು ಹೊನ್ನ ಹಿಡಿದರೆ ಬಕ್ಕಟ್ಟೆ ಬಯಲಹುದು॥**
**ಉಟ್ಟದ್ದು ಹಾವಾಗಿ ಹರಿವುದು ಸಾಲಿಗರಟ್ಟುಳಿ ಘನವಹುದು।**
**ಮುಟ್ಟ ಹೇಸುವರು ಕುರುಹ ನಾರಿಯರು ನೆಂಟರಿಷ್ಟರೆ ಕಾಣರು** ॥೨॥

**ವಿದ್ಯೆ ಬುದ್ಧಿಗಳೇನು ಫಲವು ನೆನೆದ ಕಾರ್ಯ ಸಿದ್ಧಿಯಾಗದೆನಗೆ।**
**ಮುದ್ದು ಮುಖದಿ ಮಾರುತ್ತರವ ಕೊಡುವ ಸತಿ ಬದ್ಧದ್ವೇಷದಿ ಬೈವಳು॥**
**ಇದ್ದ ಮನುಜರ ಪಾಡೇನು ನೀ ಬಂದು ಹೊದ್ದಿದ ಮಾತ್ರದಲಿ।**
**ನಿದ್ದೆ ಹಸಿವು ಬಳಲಿಕೆ ದಟ್ಟದಾರಿದ್ರ್ಯವು ಕೈಗೊಂಬುದು** ॥೩॥

**ಒಳ್ಳೆಯದಾಗಿದ್ದ ಸಂಗಾತಿಯ ಸ್ನೇಹವೆಲ್ಲವನು ಬಿಡಿಸಿ।**
**ಅಲ್ಲಲ್ಲಿ ಕೊಡುವ ದಾನಿಗಳ ಮನದಿ ಪೊಕ್ಕು ಇಲ್ಲಿಲ್ಲ ಹೋಗೆನಿಸಿ॥**
**ಇಲ್ಲದ ಅಪವಾದ ಛಾಳ ಕಂಟಕರೋಗದಲ್ಲಿ ನೋಯಿಸಿ।**
**ಒಲ್ಲೆನೀ ಜನ್ಮವೆಂದೆನಿಸಿ ಸಾಧಿಸಿ ಕಡೆಯಲ್ಲಿ ಗುಣ ತೋರಿಸಿ** ॥೪॥

**ದೇಶದೇಶದ ರಾಯರ್ಗಳನೆಲ್ಲವನು ಪರದೇಶಿಗಳನು ಮಾಡಿದೆ।**
**ವಾಸವನೆ ಬಿಡಿಸಿ ತಿರುಗಿಸಿ ಗಾಸಿಯಿಂದಲೆ ನೋಯಿಸಿ ॥**
**ಶೇಷಶಯನ ಸರ್ವೇಶ ದೇವೇಶನೆ ಲೇಸು ಪಾಲಿಸೊ ಎನಗೆ।**
**ದೇಶದಂತರ್ಯಾಮಿ ನೆಲೆಯಾದಿಕೇಶವ ತೋಷದಿ ಸಲಹೊ ಎನ್ನ ॥೫॥**

ಭಾವ– ಶನಿಯನ್ನು ಕುರಿತ ದೇವತಾಸ್ತುತಿ ಇದು. ಜನರಿಗೆ ಕಾಟ ಕೊಟ್ಟು ಹಣ್ಣು ಹಣ್ಣು ಮಾಡಿ ಮಣ್ಣುಮಣ್ಣು ತಿನ್ನಿಸುವ ಶನಿಯ ಪ್ರತಾಪವನ್ನು ಹೊಗಳುತ್ತಲೇ, ಸೂತ್ರಧಾರನ ಕೈವಾಡವನ್ನು ಕಡೆಗಣಿಸದೆ ಪರದೆ ಹಿಂದಿನ ಪಕ್ಕಾ ಆಸಾಮಿಯನ್ನು ಪ್ರಸ್ತಾಪಿಸಿದ್ದಾರೆ ಕನಕದಾಸರು– ಕೀರ್ತನೆಯ ಅಂತ್ಯದಲ್ಲಿ.

ಅರ್ಥ– ಬಕ್ಕಟ್ಟೆ ಬಯಲು = ಬಟ್ಟ ಬಯಲು, ಶೂನ್ಯ
ಸಾಲಿಗರಟ್ಟುಳಿ (<ಸಾಲಿಗರ + ಅಟ್ಟುಳಿ)= ಸಾಲ ಕೊಟ್ಟವರ ಕಿರುಕುಳ
ಕುರುಹು ನಾರಿಯರು = ಗುರುತಿನ ಹೆಂಗಸರು
ಹೊದ್ದಿದ = ಆವರಿಸಿದ, ವಕ್ಕರಿಸಿದ
ಲೇಸು = ಒಳ್ಳೆಯದು
ತೋಷದಿ = ಹರ್ಷದಿಂದ

* * * *



# ಗುರುಸ್ತುತಿ

**Blank**



## ೧೪
## ಪಂತುವರಾಳಿ – ಆದಿ

ರಾಮಾನುಜರೇ ನಮೋ ನಮೋ
ಸ್ವಾಮಿ ಲಕ್ಷ್ಮಣ ರೂಪ ನಮೊ ನಮೋ ॥ಪ॥

ಪಿಡಿದಿರೆ ದಂಡಿಕಾ ವೇಷ್ಟಿ ಮೃದಿಕಾ
ನಿಡುಶಿಖಿ ಯಜ್ಞೋಪವೀತದಿಂದ
ತೊಡೆದ ದ್ವಾದಶನಾಮ ಶ್ರೀ ಚೂರ್ಣದಿ ಒಪ್ಪುವ
ಒಡೆಯ ರಾಮಾನುಜರೆ ನಮೋ ನಮೋ ॥೧॥

ಪಂಕಜನಾಭನ ಪಾವನ ಮೂರುತಿ
ಶಂಕೆಯಿಲ್ಲದೆ ನೆನೆವರ ಪಾಲಿಪನೆ
ಮುಂಕೊಂಡು ಶ್ರುತಿಮತ ಚಾರ್ವಾಕರ ಗೆದ್ದ
ಓಂಕಾರ ಮೂರುತಿ ನಮೋನಮೋ ॥೨॥

ಕೇಶವ ಪಾದಾಂಬುಜ ಮಧುಕರಾ
ಪಾಷಂಡ ಗರ್ವಹರ ಗುರುತಿಲಕ
ಶೇಷಾವತಾರಿ ಮುನೀಶವಂದಿತ ಆದಿ
ಕೇಶವ ಮೂರುತಿ ನಮೋ ನಮೋ ॥೩॥

ಭಾವ– ಕನಕದಾಸರು ತಮ್ಮ ಪ್ರಾರಂಭದ ಮತಗುರುಗಳಾದ ರಾಮಾನುಜಾಚಾರ್ಯರನ್ನು ಸ್ತುತಿಸಿರುವ ಕೀರ್ತನೆ ಇದು. ಮಾಧ್ವಮದತ್ತ ವಾಲಿದ್ದು ತದನಂತರ ಎಂಬುದು ವೇದ್ಯವಾಗುತ್ತದೆ.

ಅರ್ಥ– ರಾಮಾನುಜ = ರಾಮನ ತಮ್ಮ (ಲಕ್ಷ್ಮಣ) ಎಂಬ ಅರ್ಥ. ರಾಮಾನುಜಾಚಾರ್ಯರೂ ಶೇಷಾವತಾರಿ, ಲಕ್ಷ್ಮಣನೂ ಶೇಷಾವತಾರಿ ಎಂದು ನಂಬಿಕೆ.

೧. ದಂಡಿಕಾ = ದಂಡಕಾಷ್ಠ
ವೇಷ್ಟಿಮೃದಿಕಾ = ?
ನಿಡುಶಿಖಿ = ಉದ್ದ ಚಂಡಿಕೆ
ಶ್ರೀ ಚೂರ್ಣ = ಎರಡು ಬಿಳಿ ನಾಮಗಳ ಮಧ್ಯೆ ಹಾಕುವ ಕೆಂಪುನಾಮ
೨. ಪಂಕಜನಾಭ = ಹೊಕ್ಕುಳಲ್ಲಿ ಕಮಲವುಳ್ಳವನು (ವಿಷ್ಣು)
ಮುಂಕೊಂಡು = ಸಮರ್ಥಿಸಿ
ಚಾರ್ವಾಕ = ನಾಸ್ತಿಕ ಮತಸ್ಥಾಪಕ
೩. ಪಾದಾಂಬುಜ = ಪಾದಕಮಲ
ಮಧುಕರ = ದುಂಬಿ
ಪಾಷಂಡ = ಪಾಖಂಡಿ, ಸಂಪ್ರದಾಯ ವಿರೋಧಿ
ಗರ್ವಹರ = ಗರ್ವವನ್ನು ನಾಶ ಮಾಡಿದವನು

* * * *



## ೧೫
## ರಾಗಮಾಲಿಕೆ – ಜಂಝೂಟಿ

**ಕೂಸನು ಕಂಡೀರ್‍ಯಾ ಸುಪ್ರ**
**ಹ್ಲಾದನ ಕಂಡೀರ್‍ಯಾ ನಮ್ಮ**
**ಕೂಸನು ಕಂಡೀರ್‍ಯಾ** ॥ಪ॥

**ರಾಕ್ಷಸ ಕುಲದಲಿ ಜನಿಸಿತು ಕೂಸು**
**ರಾಧಾಕೃಷ್ಣನ ಭಜಿಸಿತು ಕೂಸು**
**ರಾಗ ದ್ವೇಷಗಳ ಬಿಟ್ಟಿತು ಕೂಸು**
**ರಾಮ ಪಾದವ ನೆನೆಯುವ ಕೂಸು** ॥೧॥

**ಘನ ಹರಿ ಕಂಬದಿ ತೋರಿತು ಕೂಸು**
**ಗಳಿಸಿತು ಕೃಷ್ಣನ ಪ್ರೇಮವ ಕೂಸು**
**ಘನ ಪಂಪಾಲಯದಿ ವಾಸಿಪ ಕೂಸು**
**ಗಣೆ ಗೋಪಾಲನ ಪ್ರೀತಿಯ ಕೂಸು** ॥೨॥

**ಪ್ರಸಿದ್ಧ ವ್ಯಾಸರಾಯರೆಂಬ ಕೂಸು**
**ಪ್ರವೀಣ ವಿದ್ಯೆಯೊಳೆನಿಸಿದ ಕೂಸು**
**ಪ್ರಹ್ಲಾದನೆಂಬುವ ಆಹ್ಲಾದ ಕೂಸು**
**ಪ್ರಸನ್ನ ಕಾಗಿನೆಲೆಯಾದಿಕೇಶವನ ಕೂಸು** ॥೩॥

ಭಾವ– ತಮ್ಮ ಗುರುವಾದ ವ್ಯಾಸರಾಯರನ್ನು ಸ್ತುತಿಸುವ ಈ ಹಾಡಿನ ಅಭಿವ್ಯಕ್ತಿಯೂ ವಿಶಿಷ್ಟ. ತಮ್ಮ ಕೂಸನ್ನು ಕಂಡಿದ್ದೀರಾ ಎಂದು ಪ್ರಶ್ನಿಸುತ್ತಲೇ ಸುತ್ತಮುತ್ತಲ ಜನಸಮುದಾಯಕ್ಕೆ ಪರಿಚಯಿಸಿರುವ ಪರಿ ನುರಿತ ಕಲೆಗಾರನ ಕುಸುರಿ. ವ್ಯಾಸರಾಯರು ಪ್ರಹ್ಲಾದ ಅಂಶ ಸಂಭೂತರು ಎಂಬುದಿಲ್ಲಿ ಚಿತ್ರಿತವಾಗಿದೆ. ಇಲ್ಲಿ ದ್ವಿತೀಯಾಕ್ಷರ ಪ್ರಾಸವನ್ನು

ಕೈಬಿಟ್ಟು, ಆದಿಪ್ರಾಸ ಮತ್ತು ಅಂತ್ಯಪ್ರಾಸವನ್ನು ಅನುಸರಿಸಲಾಗಿದೆ. ಎರಡನೇ ಚರಣದ ಎರಡನೆಯ ಸಾಲು ಕೃಷ್ಣರಾಯನ ಪ್ರೇಮಾದರ ಮನ್ನಣೆಗೆ ಪಾತ್ರವಾದುದನ್ನೂ, ನಾಲ್ಕನೆಯ ಸಾಲು ಶ್ರೀಕೃಷ್ಣನ ಆರಾಧಕ ನಾದುದನ್ನೂ ಸೂಚಿಸುತ್ತದೆ.

ಅರ್ಥ– ಕಂಡೀರ‍್ಯ = ಕಂಡಿರಾ, ಕಂಡಿದ್ದೀರಾ

೧. ರಾಕ್ಷಸ... ಕೂಸು = ರಾಕ್ಷಸನಾದ ಹಿರಣ್ಯಕಶ್ಯಪನ ಮಗ (ಪ್ರಹ್ಲಾದ)

೨. ಪಂಪಾಲಯದಿ = ಪಂಪಾಪತಿ ಇರುವ ಹಂಪೆಯಲ್ಲಿ; ಅರ್ಥಾತ್ ವಿಜಯನಗರದಲ್ಲಿ ಕೃಷ್ಣದೇವರಾಯನಿಗೆ ರಾಜಗುರುವಾಗಿ ಇದ್ದವರು.

೩. ಆಹ್ಲಾದ = ಮನೋಹರ, ಸಂತೋಷದಾಯಕ

* * * *



## ೧೬
## ನಾಟಿ – ಝಂಪೆ

**ಪರಮ ಪದವಿಯನೀವ ಗುರುಮುಖ್ಯ ಪ್ರಾಣನ**
**ಧರೆಯೊಳಗುಳ್ಳ ಮಾನವರೆಲ್ಲ ಭಜಿಸಿರೊ ॥ಪ॥**

**ಅಂದು ತ್ರೇತಾಯುಗದಿ ಹನುಮನಾಗವತರಿಸಿ**
**ಬಂದು ದಾಶರಥಿಯ ಪಾದಕೆರಗಿ**
**ಸಿಂಧುವನು ದಾಂಟಿ ಮುದ್ರಿಕೆಯಿತ್ತು ದಾನವರ**
**ವೃಂದಪುರ ದಹಿಸಿ ಚೂಡಾಮಣಿಯ ತಂದವನ ॥೧॥**

**ದ್ವಾಪರಯುಗದಲಿ ಭೀಮಸೇನನೆನಿಸಿ**
**ಶ್ರೀಪತಿಯ ಪಾದ ಕಂಡು ಭಜಕನಾಗಿ**
**ಕೋಪಾವೇಶದಲಿ ದುಶ್ಶಾಸನನನು ಸೀಳಿ**
**ಭೂಪನ ಜಲದೊಳಗೆ ಕರೆಕರೆದು ಜರೆದವನ ॥೨॥**

**ಕಲಿಯುಗದಲಿ ತುರೀಯಾಶ್ರಮವನೆ ಧರಿಸಿ**
**ಕಲುಷದ ಮಾಯಿಗಳನೆ ಸೋಲಿಸಿ**
**ಖಿಲವಾದ ಮಧ್ವಮತವನು ಬಲಿದೆನಿಸಿ ಕಾಗಿ**
**ನೆಲೆಯಾದಿಕೇಶವನೆ ಪರದೈವನೆಂಬವನ ॥೩॥**

ಭಾವ– ಮೂರು ಅವತಾರಗಳನ್ನು ಪ್ರಸ್ತಾಪಿಸಿ ಮುಖ್ಯಪ್ರಾಣವನ್ನು ಸ್ತುತಿಸ ಲಾಗಿದೆ.

ಅರ್ಥ– ಪರಮ ಪದವಿಯನೀವ = ಮೋಕ್ಷ ನೀಡುವ
ಮುಖ್ಯ ಪ್ರಾಣ = ವಾಯು

೧. ದಾಶರಥಿ = ದಶರಥನ ಮಗ ರಾಮ
ಸಿಂಧು = ಸಮುದ್ರ
ಮುದ್ರಿಕೆ = ಉಂಗುರ
ದಾನವರ ವೃಂದಪುರ = ರಾಕ್ಷಸರ ಲಂಕಾಪಟ್ಟಣ
ಚೂಡಾಮಣಿ = ಹೆಂಗಸರು ತಲೆಯಲ್ಲಿ ಧರಿಸುವ ರತ್ನದ ಆಭರಣ
೨. ಶ್ರೀಪತಿ = ವಿಷ್ಣು
ಕಡು = ಅಧಿಕ
ಭೂಪನ = ರಾಜನಾದ ದುರ್ಯೋಧನನನ್ನು
ಜರೆದವನ = ಹೀಯಾಳಿಸಿದವನ
೩. ತುರೀಯಾಶ್ರಮ = ಸಂನ್ಯಾಸಾಶ್ರಮ
ಕಲುಷದ ಮಾಯಿಗಳು = ಅದ್ವೈತ ಮುಂತಾದ ಮತಸ್ಥಾಪಕರು
ಖಿಲವಾದ = ಜೀರ್ಣವಾದ, ಕಿಲುಬು ಹಿಡಿದ
ಮಧ್ವಮತ = ದ್ವೈತ ಮತ
ಬಲಿದೆನಿಸಿ = ಸಮರ್ಥವೆನಿಸಿ, ಅಧಿಕವೆನಿಸಿ

* * * *



## ೧೭
## ನಾಟಿ – ಝಂಪೆ

**ಶರಣು ಶರಣು**
**ಶರಣು ದಶರಥ ರಾಮ ದೂತಗೆ ॥ಪ॥**

**ಶರಣು ಕುರು ಕುಲಾಧೀಶಗೆ**
**ಶರಣು ವೈಷ್ಣವ ಮತ ವಿಲಾಸಗೆ**
**ಶರಣು ಮುಖ್ಯಪ್ರಾಣಗೆ ॥ಅ॥**

**ವಾರಿಧಿಯನು ವೇಗದಿ ದಾಟಿ ವನವ ಕಿತ್ತಿದಾತಗೆ**
**ಮೇರೆಯಿಲ್ಲದ ಅಸುರರ ಸಂಹರಿಸಿದ ರಣಶೂರಗೆ**
**ವಾರಿಜಾಕ್ಷಿ ಸೀತಾದೇವಿಗೆ ವರದ ಮುದ್ರಿಕೆಯನಿತ್ತಗೆ**
**ಧೀರತನದಲಿ ಅಕ್ಷಕುಮಾರನ ಪ್ರಾಣವನು ಕೊಂಡಗೆ ॥೧॥**

**ರಾಜಸೂಯವ ರಚಿಸಬೇಕೆಂದು ರಾಜರ ಸೀಳಿದಾತಗೆ**
**ರಾಜ ಮುಖಿಯಳ ರಕ್ಷಿಸಿ ಮೃಗರಾಜಗೆ ಒಲಿದಾತಗೆ**
**ತ್ರಿಜಗ ವಂದಿತ ದೇವಗೆ ಸಜ್ಜನ ಪ್ರಿಯ ಎನಿಪಗೆ**
**ರಾಜ ಧರ್ಮಗೆ ಅನುಜನಾದಗೆ ರಾಜಪೂಜಿತ ರಾಜಗೆ ॥೨॥**

**ಧಾರಿಣಿಯೊಳು ದುರ್ವಾದಿ ದೈತ್ಯರ ಗಂಟಲಗಾಳವಾದಗೆ**
**ಮೂರೇಳು ಮತವನೆಲ್ಲ ಮುರಿದ ಧೀರ ಮಧ್ವರಾಯಗೆ**
**ಸಾರ ತತ್ತ್ವಗಳನೆಲ್ಲ ಶೋಧಿಸಿ ಸೂರೆ ಮಾಡಿದಾತಗೆ**
**ಊರ್ವಿಯೊಳು ವರ ದೇವತಾದಿಕೇಶವ ದೊರೆ ದಾಸಗೆ ॥೩॥**

ಭಾವ– ಮುಖ್ಯ ಪ್ರಾಣನ (ವಾಯುವಿನ) ಮೂರು ಅವತಾರಗಳ (ಆಂಜನೇಯ, ಭೀಮ, ಮಧ್ವಾಚಾರ್ಯ) ಗುಣಗಾನವಿಲ್ಲಿದೆ.

ಅರ್ಥ– ದಶರಥ ರಾಮ ದೂತ = ಆಂಜನೇಯ
ಕುರುಕುಲಾಧೀಶ = ಭೀಮಸೇನ
ವೈಷ್ಣವ ಮತ ವಿಲಾಸ = ಮಧ್ವಾಚಾರ್ಯ
ಮುಖ್ಯಪ್ರಾಣ = ವಾಯು, ಹನುಮಂತ

೧. ವಾರಿಧಿ = ಸಮುದ್ರ
ವಾರಿಜಾಕ್ಷಿ = ಕಮಲದಂತಹ ಕಣ್ಣುಳ್ಳವಳು
ವರದ = ಶ್ರೇಷ್ಠವಾದ
ಮುದ್ರಿಕೆ = ಉಂಗುರ

೨. ರಾಜಮುಖಿ = ಚಂದ್ರಮುಖಿ (ದ್ರೌಪದಿ)
ಮೃಗರಾಜ = ಸಿಂಹ (ನರಸಿಂಹ, ವಿಷ್ಣು)
ರಾಜಧರ್ಮಗೆ = ಧರ್ಮರಾಜನಿಗೆ
ಅನುಜ = ತಮ್ಮ

೩. ಧಾರಿಣಿ = ಭೂಮಂಡಲ
ಮೂರೇಳು ಮತ = ಇಪ್ಪತ್ತೊಂದು ಮತ
ಊರ್ವಿ = ಭೂಮಿ, ಪ್ರಪಂಚ

* * * *



## ೧೮
## ಶ್ರೀ – ಝಂಪೆ

**ಜಯಮಂಗಲಂ ನಿತ್ಯ ಶುಭಮಂಗಲಂ ॥ಪ॥**

**ವಾತಜಾತನು ಆಗಿ ಖ್ಯಾತಿಯಲಿ ಮೆರೆದಗೆ**
**ಸೇತುವೆಯ ಭರದಿಂದ ಲಂಘಿಸಿದಗೆ**
**ಸೀತೆಯನು ವಂದಿಸುತೆ ಉಂಗುರವನಿತ್ತವಗೆ**
**ದೈತ್ಯಪುರವನು ಭರದಲುರಿಸಿದವಗೆ ॥೧॥**

**ವಸುಧೆಯಲಿ ಕುಂತಿನಂದನನಾಗಿ ಉದಿಸಿದಗೆ**
**ಕುಸುಮವನು ತಂದು ದ್ರೌಪದಿಗಿತ್ತಗೆ**
**ಕುಶಲತನದಲಿ ಕೌರವಾದಿಗಳ ಸಂಹರಿಸಿ–**
**ದಸಹಾಯ ವೀರ ಶ್ರೀ ಭೀಮಸೇನಗೆ ॥೨॥**

**ಮಧ್ಯಗೃಹದಾತನಾ ಸತಿಯಲ್ಲಿ ಉದಿಸಿದಗೆ**
**ಬೌದ್ಧ ಚಾರ್ವಾಕ ಮಾಯ್ಗಳ ಜರಿದಗೆ**
**ಮಧ್ವಶಾಸ್ತ್ರವನ್ನೆಲ್ಲ ಸಜ್ಜನರಿಗೊರೆದಗೆ**
**ಮುದ್ದು ಶ್ರೀ ಆದಿಕೇಶವನ ಭಜಕಗೆ ॥೩॥**

ಭಾವ– ಮುಖ್ಯ ಪ್ರಾಣನ (ವಾಯು) ಮೂರು ಅವತಾರಗಳ ಗುಣಗಾನದ ಮಂಗಳ ಪದವಿದು.

ಅರ್ಥ– ೧. ವಾತಜಾತ = ವಾಯುಪುತ್ರ (ಇಲ್ಲಿ ಆಂಜನೇಯ)
ದೈತ್ಯಪುರ = ರಾಕ್ಷಸನ ಪಟ್ಟಣ (ಲಂಕೆ)
ಭರದಲಿ = ವೇಗವಾಗಿ, ಕೂಡಲೆ

೨. ವಸುಧೆ = ಭೂಮಿ

ಕುಂತಿನಂದನ = ಕುಂತಿಯ ಮಗ (ಇಲ್ಲಿ ಭೀಮ)

೩. ಮಧ್ಯಗೃಹ = ಮಧ್ಯಗೇಹ (ನಡ್ಯಂತಿಲ್ಲಾಯ = ಮಧ್ವಾಚಾರ್ಯರ ತಂದೆ ಹೆಸರು)

ಮಾಯಿಗಳು = ಜಗತ್ತು ಮಾಯೆ ಎಂದು ಹೇಳುವರ (ಅದ್ವೈತ ಮತ)

ಒರೆದಗೆ = ಹೇಳಿದವನಿಗೆ

# ಆತ್ಮ ಚರಿತ್ರೆ

**Blank**



೧೯

## ಕಾಂಬೋದಿ – ಅಟತಾಳ

ಹರಿ ನಿಮ್ಮ ಪದಕಮಲ ನಿರುತ ಧ್ಯಾನದಿ ಎನಗೆ
ದೊರಕಿತೀ ಗುರುಸೇವೆ ಹರಿಯೆ ॥ಪ॥

ಗುರುಮಂತ್ರ ಮೂಲ ಸದ್ಗುರು ಮೂರ್ತಿ ನೀನಾಗಿ
ಕರೆಯ ಸೇರಿಸಿದೆ ಶ್ರೀ ಹರಿಯೆ ॥ಅ॥

ಮೊದಲು ನಿಮ್ಮುಪದೇಶ ನದರು ಮಾಡದೆ ಇರಲು
ಅದನೆಲ್ಲ ಮನ್ನಿಸಿದೆ ಹರಿಯೆ
ಮುದದಿಂದ ನೀ ಬಂದು ಭವ ಬಂಧನವ ಬಿಡಿಸಿ
ಹದನಕ್ಕೆ ನಿಲ್ಲಿಸಿದೆ ಹರಿಯೆ ॥೧॥

ದೊರೆತನವ ಬಿಡಿಸಿ ಸುಸ್ಥಿರ ಮಾರ್ಗ ತೋರಿಸಿದೆ
ನರಮಾತ್ರದವನೆನದೆ ಹರಿಯೆ
ಗರುವದೊಳಗಿಹನೆಂದು ಅರಿತು ತವದಾಸರಿಗೆ
ಇರದೆ ಅಡಿಯಾಗಿಸಿದೆ ಹರಿಯೆ ॥೨॥

ಕನಕ ದಳದಲಿ ಬಂದು ಕಲೆತನೆಂದರೆ ಫೌಜು
ಕನುಕುಮನುಕಾಗುವುದು ಹರಿಯೆ
ಮೊನೆಗಾರತನವೆಂಬ ಶನಿ ಬಿಡಿಸಿ ತವಪಾದ
ವನಜವನು ಸೇರಿಸಿದೆ ಹರಿಯೆ

ಮನದೊಳಗೆ ಎರಡಿಲ್ಲ ಮದದಾನೆ ಮೇಲ್ಕಡಿವ
ಮನವ ಹಿಮ್ಮೆಟ್ಟಿಸಿದೆ ಹರಿಯೆ

**ಘನವು ತಾಮಸಾಹಂಕಾರ ದುರ್ಮತಿ ದುರಿತ**
**ಕನಜವನು ಕಿತ್ತೆಸೆದೆ ಹರಿಯೆ ॥೪॥**

**ಮದರೂಪು ಬಿಡಿಸಿ ಸನ್ಮುದ ರೂಪು ಧರಿಸೆಂದು**
**ಹೃದಯದೊಳು ನೀ ನಿಂತೆ ಹರಿಯೆ**
**ಇದು ರಹಸ್ಯವು ಎಂದು ಹಿತವ ಬೋಧಿಸಿ ಎನಗೆ**
**ಬದುಕಿಸಿದೆ ಬದುಕಿದೆನು ಹರಿಯೆ ॥೫॥**

**ದುರದಲ್ಲಿ ನಾಲ್ಕು ದಿಕ್ಕಲಿ ಹೊಕ್ಕು ಹೊಳೆವಂಥ**
**ಬಿರುದು ಬಿಂಕವ ಕಳೆದೆ ಹರಿಯೆ**
**ಪರಬಲವ ಕಂಡರೆ ಉರಿದು ಬೆಂಕಿಯಹ ಮನವ**
**ಸೆರೆ ಹಾಕಿ ನಿಲ್ಲಿಸಿದೆ ಹರಿಯೆ ॥೬॥**

**ಪರಮ ಮೂರ್ಖನು ನಾನು ವರ ವೀರ ವೈಷ್ಣವರ**
**ಚರಣವನು ಸೇರಿಸಿದೆ ಹರಿಯೆ**
**ಕರೆ ಕಳಿಸಿ ಎನ್ನಲ್ಲಿ ಅಳವಿಲ್ಲದಿಹ ನಾಮ**
**ಸ್ಮರಣೆ ಜಿಹ್ವೆಗೆ ಬರೆದೆ ಹರಿಯೆ ॥೭॥**

**ಸ್ವಾರಿ ಹೊರಡಲು ಛತ್ರ ಭೇರಿ ನಿಸ್ಸಾಳಗಳು**
**ಭೋರೆಂಬ ಭೋಂಕಾಳೆ ಹರಿಯೆ**
**ಧೀರ ರಾಹುತರಾಣ್ಯ ಭಾರಿ ಪರಿವಾರದಹಂ–**
**ಕಾರ ಭಾರವ ತೊರೆದೆ ಹರಿಯೆ ॥೮॥**

**ನೀರ ಸಂಗವ ಬಿಟ್ಟು ಆಣಿ ಮುತ್ತಾದಂತೆ**
**ಸೇರಿಸಿದೆ ತವ ಪಾದ ಹರಿಯೆ**
**ಆರಿಗಂಜೆನು ನಾನು ಅಧಿಕಪುರಿ ಕಾಗಿನೆಲೆ**
**ಸಿರಿಯಾದಿಕೇಶವ ದೊರೆಯೆ ॥೯॥**



ಭಾವ– ಈ ಕೀರ್ತನೆ ಕನಕದಾಸರ ಸಂಕ್ಷಿಪ್ತ ಚರಿತ್ರೆಯಂತಿದೆ ಎನ್ನಬಹುದು. ಪೂರ್ವಾಶ್ರಮದ ಎಲ್ಲ ವಿವರಗಳು ಇಲ್ಲದಿದ್ದರೂ– ಸಾಧು ಸಂತರಾದವರಿಂದ ಅದನ್ನು ನಿರೀಕ್ಷಿಸುವುದೂ ಸರಿಯಲ್ಲ– ಅವರ ಜೀವನದ ಮಹತ್ತರ ತಿರುವಿಗೆ ಹಿನ್ನೆಲೆಯಾದ ವಿವರವಿದೆ. ಮಾಂಡಲಿಕ ದೊರೆತನ, ಯುದ್ಧರಂಗದಲ್ಲಿನ ಶೌರ್ಯಪ್ರತಾಪ, ಇವರ ದರ್ಶನ ಮಾತ್ರದಿಂದಲೆ ಪರರಾಜರು ನಡುಗುತ್ತಿದ್ದುದು– ತಾಜಾ ಮಾಹಿತಿ. ಇಷ್ಟೇ ಅಲ್ಲದೆ ಅನುಪಲ್ಲವಿಯ "ಗುರುಮಂತ್ರ ಮೂಲ ಸದ್ಗುರು ಮೂರ್ತಿ ನೀನಾಗಿ। ಕರೆಯ ಸೇರಿಸಿದೆ ಶ್ರೀ ಹರಿಯೆ" ಎಂಬ ಮಾತು, ಏಳನೆಯ ಚರಣದ "ಕರೆಕಳಿಸಿ ಎನ್ನಲ್ಲಿ ಅಳವಿಲ್ಲದಿಹ ನಾಮ। ಸ್ಮರಣೆ ಜಿಹ್ವೆಗೆ ಬರೆದೆ ಹರಿಯೆ" ಎಂಬ ಮಾತು ಕನಕದಾಸರಿಗೆ ಗುರೂಪದೇಶ ಸಾಕ್ಷಾತ್ ಶ್ರೀಹರಿಯಿಂದಲೇ ಆಯಿತು ಎಂಬುದಕ್ಕೆ ದಿಕ್ಸೂಚಿಯಾಗಿವೆ. ಇದಕ್ಕೆ ಬಲವಾದ ಆಧಾರವೆಂದರೆ ಐದನೆಯ ಚರಣದ "ಇದು ರಹಸ್ಯವು ಎಂದು ಹಿತವ ಬೋಧಿಸಿ ಎನಗೆ। ಬದುಕಿಸಿದೆ ಬದುಕಿದೆನು ಹರಿಯೆ" ಎಂಬ ಮಾತು. ಸಾಕ್ಷಾತ್ ಶ್ರೀ ಹರಿಯ ಪ್ರತ್ಯಕ್ಷ ಉಪದೇಶಾನುಗ್ರಹ ಒದಗಿ ಬಂದ ಆ ಅಮೃತಗಳಿಗೆಯಲ್ಲೇ "ಬದುಕಿದೆನು ಬದುಕಿದೆನು ಭವ ಎನಗೆ ಹಿಂಗಿತು। ಪದುಮನಾಭನ ಪಾದದೊಲುಮೆ ಎನಗಾಯಿತು" ಎಂಬ ಕೀರ್ತನೆ ಅವರ ಹೃದಯಾಂತರಾಳದ ಅದಮ್ಯ ಹರುಷದ ಪ್ರತೀಕವಾಗಿ ಉಕ್ಕಿ ಹರಿದದ್ದು ಎಂಬುದು ವಿದಿತವಾಗುತ್ತದೆ. ಮೊನೆಗಾರ ಕನಕನನ್ನು ಆದಿಕೇಶವನು ತನ್ನ ಮಣೆಗಾರನನ್ನಾಗಿ ಮಾಡಿಕೊಂಡದ್ದರ ಸಂಗತಿ ಇದೆ. ಹೀಗೆ ಮೊನೆಗಾರನಾದ ಕನಕ ಕೇಶವನ ಮಣೆಗಾರನಾಗಿ, ಗುರಿ ಸಾಧಿಸುವ ಹೊಣೆಗಾರನಾಗಿ, ದಾಸಕೂಟದ ದಳವಾಯಿಯಾಗಿ ಮತ್ತೆ ದಾಸಸಾಹಿತ್ಯ ರಂಗದ ಅದ್ವಿತೀಯ ಮೊನೆಗಾರನಾಗಿ ಬೆಳೆದದ್ದು, ಎಲ್ಲರ ಕಣ್ಮನ ಕಿವಿಗಳನ್ನು ಸೆಳೆದದ್ದು, ಸೆಳೆಯುತ್ತಿರುವುದು, ಸೆಳೆಯುವುದು ಮನೆ ಮಾತಾಗಿತ್ತು, ಮನೆ ಮಾತಾಗಿದೆ. ಮನೆ ಮಾತಾಗುವುದು– ಹಿಂದೂ, ಇಂದೂ, ಮುಂದೂ– ಎಂದೆಂದೂ.

ಅರ್ಥ– ಕರೆಯ = ದಡವನ್ನು

೧. ನದರು = ಲಕ್ಷ್ಯ
೨. ಅಡಿಯಾಗಿಸು= ದಾಸನಾಗಿಸು
೩. ಕನಕು ಮನಕು = ತಬ್ಬಿಬ್ಬು, ಕಕ್ಕಾವಿಕ್ಕಿ
ವನಜ = ಕಮಲ
೪. ದುರಿತ ಕನಜ = ಪಾಪವೆಂಬ ಕಣಜ
೫. ಮದರೂಪು = ಅಹಂಕಾರದ ಅವತಾರ
ಸನ್ಮುದ ರೂಪು = ಸಂತೋಷದ ಮೂರ್ತಿ
೬. ದುರ = ರಣರಂಗ
೭. ಜಿಹ್ವೆ = ನಾಲಗೆ
೮. ಸ್ವಾರಿ = ಸವಾರಿ
ಭೊಂಕಾಳೆ = ರಣಗಹಳೆ
ರಾಣ್ಯ<ರಾಣುವೆ = ಸೈನ್ಯ, ಪಡೆ
೯. ಆಣಿ = ಶ್ರೇಷ್ಠ

* * * *



## ೨೦
## ಮುಖಾರಿ – ಝಂಪೆ ತಾಳ

ಬದುಕಿದೆನು ಬದುಕಿದೆನು ಭವ ಎನಗೆ ಹಿಂಗಿತು ॥ಪ॥
ಪದುಮನಾಭನ ಪಾದದೊಲುಮೆ ಎನಗಾಯಿತು ॥ಅ॥

ಹರಿತೀರ್ಥ ಪ್ರಸಾದ ಎನ್ನ ಜಿಹ್ವೆಗೊದಗಿತು
ಹರಿಯ ನಾಮಾಮೃತ ಕಿವಿಗೊದಗಿತು
ಹರಿಯ ದಾಸರು ಎನ್ನ ಬಂಧುಬಳಗವಾದರು
ಹರಿಯ ಶ್ರೀಮುದ್ರೆ ಆಭರಣವಾಯ್ತು ॥೧॥

ಮುಕುತರಾದರು ಎನ್ನ ನೂರೊಂದು ಕುಲದವರು
ಮುಕುತಿ ಮಾರ್ಗಕೆ ಯೋಗ್ಯ ನಾನಾದೆನೊ
ಅಕಳಂಕ ಶ್ರೀ ಹರಿ ಭಕುತಿಗೆನ್ನ ಮನ ಬೆಳೆದು
ರುಕುಮಿಣಿಯರಸ ಕೈವಶನಾದನೆನಗೆ ॥೨॥

ಇಂದೆನ್ನ ಜೀವಕ್ಕು ಸಕಲ ಸಂಪದವಾಯ್ತು
ಮುಂದೆನ್ನ ಜನ್ಮ ಸಫಲವಾಯಿತು
ತಂದೆ ಶ್ರೀ ಕಾಗಿನೆಲೆಯಾದಿಕೇಶವರಾಯ
ಬಂದೆನ್ನ ಹೃದಯದಲಿ ನೆಲೆಯಾಗಿ ನಿಂತ

ಭಾವ– ಗುರೂಪದೇಶ ಅಥವಾ ದೈವ ಸಾಕ್ಷಾತ್ಕಾರವಾದಾಗ ಕನಕದಾಸರಿಗುಂಟಾದ ಕೃತಕೃತ್ಯ ಭಾವ ಈ ಕೀರ್ತನೆಯಲ್ಲಿ ಮಡುಗಟ್ಟಿದೆ. "ಬದುಕಿದೆನು ಬದುಕಿದೆನು" ಎಂಬ ಪುನರುಕ್ತಿ ಆನಂದಾತಿಶಯವನ್ನು ಸಾಭಿನಯಗೊಳಿಸುತ್ತದೆ. ಕೊನೆಯ ಸಾಲು ದೈವಸಾಕ್ಷಾತ್ಕಾರಕ್ಕೆ ಒತ್ತು ಕೊಡುತ್ತದೆ.

ಅರ್ಥ– ಭವ = ಹುಟ್ಟು, ಪದಮನಾಭ = ಹೊಕ್ಕುಳಲ್ಲಿ ಕಮಲವುಳ್ಳವನು
(ವಿಷ್ಣು)
ಜಿಹ್ವೆ = ನಾಲಗೆ, ರುಕುಮಿಣಿಯರಸ = ಕೃಷ್ಣ.

* * * *



## ೨೧
## ಭೂಪಾಳಿ – ಝಂಪೆತಾಳ

ಸಾಲದೆ ನಿನ್ನದೊಂದು ದಿವ್ಯನಾಮ– ಅ
ಕಾಲ ಮೃತ್ಯುವಿನ ಗಂಟಲಗಾಣ ಹರಿಯೆ ॥ಪ॥

ರಣದೊಳಗೆ ಅಂಗಾಂಗ ಖಂಡತುಂಡಾಗಿ ಪ್ರತಿ
ರಣವನುತ್ತರಿಸಿ ಮರಣವ ತಾಳಿರೆ
ಪ್ರಣವ ಗೋಚರ ನೀನು ಗೋಚರಿಸಿ ಬಂದೆನ್ನ
ಹೆಣಕೆ ಪ್ರಾಣವ ಪ್ರಯೋಗಿಸಿದಂತರಾತ್ಮ ॥೧॥

ಕುಂತದಿಂ ತೂಂತುಗೊಂಡೆನ್ನ ಬೆನ್ನಿಂದಿಳಿವ
ಸಂತತ ನೆತ್ತರನೊರಸಿ ಬಿಸುಟೆ
ತಿಂತ್ರಿಣಿಯ ಮರದಡಿಯೆ ಹಾವು ಕಡಿದೊರಗಿರಲು
ಮಂತ್ರಿಸಿ ಮನೆಗೆ ಕಳುಹಿದೆ ಗರುಡಗಮನ ॥೨॥

ಕ್ಷೀಣ ದೇಹವ ಬಿಡುವೆನೆಂದು ಪಾಡಂಬಟ್ಟು
ತ್ರಾಣದಲಿ ಗರಳ ತೈಲವ ಸೇವಿಸೆ
ವೇಣುನಾದದಲಿ ಹಣೆಯನೇವರಿಸಿ ಪಂಚ
ಪ್ರಾಣ ಪ್ರತಿಷ್ಠೆಯ ಮಾಡಿದೆ ಮಹಾತ್ಮ ॥೩॥

ತಮ್ಮ ಹವಣನರಿಯದೆ ಕೊಬ್ಬಿದ ಪಿಶಾಚಿಗಳು
ತಮ್ಮ ಮನೆಗೊಂದೆ ಸಮ ಕಲ್ಲಲಿಟ್ಟು
ಹೆಮ್ಮಕ್ಕಳ ಬಾಧಿಸುವುದನು ಕಂಡು
ಬೊಮ್ಮಜಟ್ಟಿಗರ ಶಿರವರಿದೆ ನರಹರಿಯೆ ॥೪॥

**ಓದಿ ಹೇಳಿದರೊಂದು ಕಥೆಯಾಗುತಿದೆ ಮಹಾಂ**
**ಬೋಧಿಶಯನನೆ ವೇದಶಾಸ್ತ್ರ ಮುಖದಿ**
**ಬಾಧಿಸುವ ದುರಿತಾಗ್ನಿಗಂಬು ಶ್ರೀ ಕಾಗಿನೆಲೆ**
**ಯಾದಿಕೇಶವ ನಾಮ ಸಂಕೀರ್ತನ** ॥೫॥

ಭಾವ– ಕನಕದಾಸರ ಜೀವನದ ತಿರುವಿಗೆ ಕಾರಣವೆನ್ನಬಹುದಾದ ಪವಾಡ ಸದೃಶ ಘಟನೆಗಳ ಸಂಕ್ಷಿಪ್ತ ಚಿತ್ರಣ ಈ ಕೀರ್ತನೆಯಲ್ಲಿದೆ. ಮರಿಗೆ ಇಷ್ಟವಿಲ್ಲದಿದ್ದರೂ ತಾಯಿಬೆಕ್ಕು ಬಾಯಿಂದ ಕಚ್ಚಿಕೊಂಡು ಹೋಗಿ ಕಾಯುವಂತೆ, ಭಗವಂತ ಕನಕನ ಕನಸುಮನಸಿನಲ್ಲಿ ಹಾಗೂ ನನಸಿನಲ್ಲಿ ಕಾಣಿಸಿಕೊಂಡು ತನ್ನ ಭಕ್ತನನ್ನಾಗಿಸಿದ್ದು, ಬಾಯಲ್ಲಿ ಕಚ್ಚಿಕೊಂಡೇ ಸಾಕಿ ಸಲಹಿ ದೊಡ್ಡವನನ್ನಾಗಿ ಮಾಡಿದ್ದು ಉದ್ದೇಶಪೂರ್ಣ ಹಾಗೂ ಅರ್ಥಪೂರ್ಣ ಘಟನೆ ಎನ್ನಿಸುತ್ತದೆ. "ಓದಿ ಹೇಳಿದರೊಂದು ಕಥೆಯಾಗುತಿದೆ ಮಹಾಂಬೋಧಿ ಶಯನನೆ" ಎಂಬ ಅಭಿವ್ಯಕ್ತಿಯಲ್ಲಿ ಕನಕ ಅನುಭವಿಸಿದ ಧಾರುಣ ವ್ಯಥೆ, ಮಾನಸಿಕ ಹಿಂಸೆ, ಸಹವರ್ತಿಗಳ ಪ್ರಸಾದ ಎಂಬುದನ್ನು 'ಬಾಧಿಸುವ' ಎಂಬ ಶಬ್ದ ಗರ್ಭೀಕರಿಸಿಕೊಂಡಿದೆ ಎಂಬುದನ್ನು ಕಡೆಗಣಿಸುವಂತಿಲ್ಲ.

ಅರ್ಥ– ಗಾಣ = ಗಾಳ

೧. ಪ್ರಣವ ಗೋಚರ = ಓಂಕಾರರೂಪಿ ವಿಷ್ಣು
೨. ಕುಂತ = ಭರ್ಜಿ
ತೂಂತು = ತೂತು, ರಂಧ್ರ
ಸಂತತ = ಅವಿಶ್ರಾಂತ
ನೆತ್ತರು = ರಕ್ತ
ತಿಂತ್ರಿಣಿಯ ಮರ = ಹುಣಿಸೆ ಮರ
ಗರುಡಗಮನ = ವಿಷ್ಣು
೨. ಪಾಡಂಬಟ್ಟು = ಕಷ್ಟಪಟ್ಟು



ತ್ರಾಣ = ಶಕ್ತಿ
ಗರಳತೈಲ = ವಿಷದ ಎಣ್ಣೆ
ವೇಣುನಾದ = ಕೊಳಲ ದನಿ
ಪಂಚಪ್ರಾಣ = ಐದುವಾಯುಗಳು
೩. ಹವಣು = ಸಾಮರ್ಥ್ಯ
ಹೆಮ್ಮಕ್ಕಳ = ಹೆಣ್ಣು ಮಕ್ಕಳನ್ನು (ಹೆಂಗಸರನ್ನು)
ಬೊಮ್ಮಜಟ್ಟಿಗ = ಬ್ರಹ್ಮರಾಕ್ಷಸ
೫. ಅಂಬೋಧಿ = ಸಮುದ್ರ
ಅಂಬೋಧಿಶಯನ = ವಿಷ್ಣು
ದುರಿತಾಗ್ನಿ = ಪಾಪವೆಂಬ ಬೆಂಕಿ
ಅಂಬು = ಬಾಣ; ನೀರು

* * * *

## ೨೨
## ಪೂರ್ವಿ – ಅಟತಾಳ

ಯಾತರವನೆಂದುಸರಲಿ– ಜಗ
ನ್ನಾಥ ಮಾಡಿದ ಒಂದು ನರರೂಪವಯ್ಯ ॥ಪ॥

ಮುಟ್ಟು ಹುಟ್ಟಿನೊಳು ನೆಟ್ಟನೆ ನಾ ಬಂದೆ
ತೊಟ್ಟಿದ್ದೆನಾಗ ತೊಗಲಬಕ್ಕಣ
ಇಷ್ಟರೊಳಗೆ ಒಂದು ವಿವರವರಿಯದಿಂಥ
ಭ್ರಷ್ಟಗೆ ನನಗಿನ್ಯಾತರ ಕುಲವಯ್ಯ ॥೧॥

ಇಂದ್ರಿಯ ಸೂತಕ ದುರ್ಗಂಧವ ಮಲಮೂತ್ರ
ನಿಂದ ಠಾವಲಿ ತನ್ನ ನಿಜವರಿಯದೆ
ಬಂದದ್ದು ಬಚ್ಚಲಗುಣಿ ತಿಂದದ್ದು ಮೊಲೆ ಮಾಂಸ– ಇಂಥ
ಅಂಧಕಗೆ ನನಗಿನ್ಯಾತರ ಕುಲವಯ್ಯ ॥೨॥

ಒಂಬತ್ತು ಎಜ್ಜದೊಳೊಸರುವ ಹೊಲಸದು
ತುಂಬಿ ತುಳುಕುವ ಕೊಡವಾಗಿರಲು
ಇಂಬಿಲ್ಲದೆ ಹೊಲೆಗೊಂಡ ಠಾವಿನಲಿ ಬಂದಂಥ
ಡಂಬಕ ನನಗಿನ್ಯಾತರ ಕುಲವಯ್ಯ ॥೩॥

ಕರುಳು ಖಂಡ ನಾರುವ ಚರ್ಮರೋಹಿತ
ನರಪಂಜರದೀ ಹುರುಳಿಲ್ಲದ
ನರದೇಹ ಹೊತ್ತು ತಿರುಗವಂಥ
ತಿರುಕ ನನಗಿನ್ಯಾತರ ಕುಲವಯ್ಯ ॥೪॥



ಹಚ್ಚಡದ ಮೇಲೆ ಲಚ್ಚಿಕೆಯಿಟ್ಟಂತೆ
ಹೆಚ್ಚು ಕಡಮೆ ಎಂದು ಹೆಣಗಾಡುತ
ನಿಚ್ಚ ಕಾಗಿನೆಲೆಯಾದಿಕೇಶವನ ಭಜಿಪ
ಹುಚ್ಚಗೆ ನನಗಿನ್ಯಾತರ ಕುಲವಯ್ಯ ॥೫॥

ಭಾವ– ವ್ಯಾಸರಾಯರ ಶಿಷ್ಯರಾದ ಮೇಲೆ ಕೆಲ ಮಡಿವಂತ ಕರ್ಮಠ ಪಂಡಿತೋತ್ತಮ ಶಿಷ್ಯರು ಕನಕ ಕುರುಬರವನು ಎಂದು ಗೊತ್ತಿದ್ದರೂ 'ನೀನು ಯಾತರವನು (ಯಾವ ಜಾತಿ?)' ಎಂದು ಚುಚ್ಚಿಚುಚ್ಚಿ ಕೇಳಿ ಮನನೋಯಿಸುತ್ತಿದ್ದಾಗ 'ನಿಮ್ಮ ಹಾಗೆಯೇ ನನ್ನದೂ ಮನುಷ್ಯ ಜಾತಿ' ಎಂದು ಉತ್ತರ ಕೊಡುವ ಸಂದರ್ಭದಲ್ಲಿ ಹೊರಹೊಮ್ಮಿದ ಕೀರ್ತನೆಯಿದು. ಸಾಧನೆಯ ಛಲವಿದ್ದವನಿಗೆ ಚಿಕ್ಕಾಸಿನ ಕಿಮ್ಮತ್ತಿಲ್ಲದ ಕುಲ ಕಟ್ಟಿಕೊಂಡೇನು ಎಂಬ ಧೋರಣೆ ಕೀರ್ತನೆಯ ಅಂತ್ಯದ ನುಡಿಯಿಂದ ಧ್ವನಿತವಾಗುತ್ತದೆ.

ಅರ್ಥ– ತೊಗಲ ಬಕ್ಕಣ = ಚರ್ಮದ ಚೀಲ
ಠಾವು = ತಾವು, ಸ್ಥಳ
ಬಂದದ್ದು ಬಚ್ಚಲ ಗುಣಿ = ಯೋನಿ ಮಾರ್ಗದಿಂದ ಬಂದದ್ದು
ತಿಂದದ್ದು ಮೊಲೆ ಮಾಂಸ = ಮೊಲೆಹಾಲು ಕುಡಿದು ಬೆಳೆದದ್ದು
ಅಂಧಕ = ಕುರುಡ
ಒಂಬತ್ತು ಎಜ್ಜ = ಒಂಬತ್ತು ರಂದ್ರಗಳು (ಕಣ್ಣೆರಡು, ಕಿವಿಯೆರಡು, ಮೂಗಿನ ಹೊಳ್ಳೆಗಳೆರಡು, ಬಾಯೊಂದು, ಮೂತ್ರದ್ವಾರವೊಂದು, ಗುದದ್ವಾರದೊಂದು)
ಇಂಬಿಲ್ಲದೆ = ಆಶ್ರಯವಿಲ್ಲದೆ, ಸ್ಥಳವಿಲ್ಲದೆ
ಡಂಭಕ = ಆಡಂಬರದವನು
ರೋಹಿತ = ರಕ್ತ
ನರಪಂಜರ = ನರಗಳ ಹೆಣಿಗೆಯ ಚಪ್ಪರ
ಹಚ್ಚಡ = ಬಿಳಿ ವಸ್ತ್ರ, ದುಪ್ಪಟಿ
ಲಚ್ಚಿಕೆ = ಚುಕ್ಕೆ, ಕಪ್ಪು ಮಚ್ಚೆ

* * * *

## ೨೩
## ಮುಖಾರಿ – ಝಂಪೆತಾಳ

**ನಾವು ಕುರುಬರು, ನಮ್ಮ ದೇವರು ಬೀರಯ್ಯ**
**ಕಾವ ನಮ್ಮಜ್ಜ ನರಕುರಿಯ ಹಿಂಡುಗಳ ॥ಪ॥**

**ಅಷ್ಟಮದ ಮತ್ಸರಗಳೆಂತೆಂಬ ಟಗರುಗಳು**
**ದೃಷ್ಟಿ ಜೀವಾತ್ಮನೆಂತೆಂಬ ಆಡು**
**ಸೃಷ್ಟಿ ಸಿದ್ಧ ಪ್ರಸಿದ್ಧವೆಂತೆಂಬ ಹೋತಗಳು**
**ಕಟ್ಟಿ ಕೋಲಿನಲಿ ಇರಿಯುತಿಹ ನಮ್ಮಜ್ಜ ॥೧॥**

**ವೇದ ಶಾಸ್ತ್ರ ಪುರಾಣವೆಂತೆಂಬ ಶ್ವಾನಗಳು**
**ಕಾದಿದ್ದು ನಮ್ಮಜ್ಜನ ಹಿಂಡೊಳಗೆ**
**ಹಾದಿಗಾಣದೆ ಕೂಗಿ ಬಾಯಾರಿ ಕಾಲ್ಗೆಡಲು**
**ಆದರಿಸಿ ಅಂಬಲಿಯನೆರೆವ ನಮ್ಮಜ್ಜ ॥೨॥**

**ಅರಿವೆಂಬ ಮರಿಗಳು ಹಿಂಡಿನೊಳಗಡೆ ಬರಲು**
**ಮರೆವೆಂಬ ವ್ಯಾಘ್ರ ಕಿರುಬ ತೋಳಗಳು ಹೊಕ್ಕು**
**ತರುಬಿ ಹಿಂಜಾವದಲಿ ಕುರಿಯ ಮುರಿವುದ ಕಂಡು**
**ಅರಿತು ಅರಿಯದ ಹಾಗೆ ಇರುವ ನಮ್ಮಜ್ಜ ॥೩॥**

**ಹುಟ್ಟುದಕೆ ಮೊದಲಿಲ್ಲ ಸಾವುದಕೆ ಕೊನೆಯಿಲ್ಲ**
**ಹುಟ್ಟುಸಾವಿನ ಹೊಲಬ ಬಲ್ಲ ನಮ್ಮಜ್ಜ**
**ಅಷ್ಟು ಪ್ರಾಣಿಗಳಿಗೆ ಇಷ್ಟು ಅಂಬಲಿ ಮಾಡಿ**
**ಹೊಟ್ಟೆ ತುಂಬುವ ಹಾಗೆ ಎರೆವ ನಮ್ಮಜ್ಜ ॥೪॥**



**ಕಲಿಯುಗಕೆ ಗೌಡನಿವ ಸಂಗಾತಿ ಮಂತ್ರಿಸುತ**
**ಕಲಿಯುಗಂಗಳನೆಲ್ಲ ಪೊರೆವಾತನೀತ**
**ಜಲಜಾಕ್ಷ ಕಾಗಿನೆಲೆಯಾದಿಕೇಶವನ ಮನ**
**ವೊಲಿಸಿ ಭಜಿಸದ ಮನುಜ ಹುಚ್ಚು ಕುರುಬ ॥೫॥**

ಭಾವ– ಶ್ರೇಷ್ಠತೆಯ ಗರಬಡಿದ ಮಡಿವಂತರು ಕನಕದಾಸರನ್ನು "ನೀನು ಯಾತರವನು?" (ಯಾವ ಜಾತಿಯವನು) ಎಂದು ಪೀಡಿಸಿದಾಗ ಅವರು ಗಂಭೀರವಾಗಿ "ಯಾತರವನೆಂದುಸರಲಿ ಜಗನ್ನಾಥ ಮಾಡಿದ ಒಂದು ನರರೂಪವಯ್ಯ" ಎಂದು ಜಾತಿಯನ್ನು ಹೆಸರಿಸದೆ "ನಿಮ್ಮ ಹಾಗೆಯೇ ನಾನೂ ಒಬ್ಬ ಮನುಷ್ಯ" ಎಂದು ಉತ್ತರಿಸಿದರೂ ತೃಪ್ತಿಗೊಳ್ಳದ "ಮೇಲು" ಗೀಳಿನ "ಕೀಳು"ಗಳು ಮತ್ತೆ ಮತ್ತೆ "ನೀನು ಯಾತರವನು?" ಎಂದು ಊಳಿಡತೊಡಗಿದಾಗ ರೋಸಿ ಹೋದ ಕನಕದಾಸರ ಹೃದಯದಿಂದ ಹೊರಹೊಮ್ಮಿದ, ಚಿಲುಮೆಯಂತೆ ಚಿಮ್ಮಿದ ಹಾಡಿದು. ಆದರೆ ಈ ವೈಯಕ್ತಿಕ ಜೀವನದ ಒರತೆಯನ್ನು– ನೇರವಾಗಿ ಹೇಳಿ– ನೀರಸ ಮರಳುಗಾಡಿನಲ್ಲಿ ಇಂಗಿ ಹೋಗುವಂತೆ ಮಾಡದೆ, ಸೃಷ್ಟಿ ವೈಚಿತ್ರ್ಯದ ಸಾರ್ವತ್ರಿಕ ಸತ್ಯದ ರೂಪಕನಿಷ್ಠ ಕೆರೆ ಕಟ್ಟಿ ಅದರಲ್ಲಿ ಶೇಖರಣೆಗೊಳ್ಳುವಂತೆ ಮಾಡಿರುವುದರಲ್ಲಿ ಕವಿ ಪ್ರತಿಭೆಯ ಕಲಾತ್ಮಕತೆ ಕಂಡು ಬರುತ್ತದೆ. ಆದ್ದರಿಂದ ರೂಪಕಾರ್ಥದ "ಸಾರ್ವತ್ರಿಕ ಸತ್ಯ– ಶಾಬಕ್ಕೆ" ಜನ್ಮಕೊಟ್ಟು ಅದು ಕುಳಿತುಕೊಳ್ಳಲು ತನ್ನ ಹೊಟ್ಟೆಯಲ್ಲೇ ಜಾಗ ಮಾಡಿಕೊಟ್ಟಿರುವ ಕನಕದಾಸರ ವೈಯಕ್ತಿಕ ಜೀವನದೆಳೆಯ "ಕಾಂಗರು ಮಾತೃಮೂಲ"ವನ್ನು ಮರೆಯುವ ಹಾಗಿಲ್ಲ; ವೈಯಕ್ತಿಕ ಜೀವನ ಸತ್ಯ ಮತ್ತು ಸಾರ್ವತ್ರಿಕ ಲೋಕ ಸತ್ಯಗಳು ಸಂಲಗ್ನಗೊಂಡಿರುವ "ಅರ್ಧನಾರೀಶ್ವರಾಕೃತಿ" ಈ ಕೀರ್ತನೆ. ಇಲ್ಲದಿದ್ದರೆ ಕೀರ್ತನೆಯ ಅಂತ್ಯ ವಾಕ್ಯ ಹಾಗೆ ತಿರುಗೇಟಿನಂತೆ ಇರುತ್ತಿರಲಿಲ್ಲ!

ಅರ್ಥ– ಅಷ್ಟಮದ = ಎಂಟು ಮದಗಳು (ಧನ, ರೂಪ, ಯೌವನ, ಕುಲ, ಬಲ, ರಾಜ್ಯ, ತಪ)
ಶ್ವಾನ= ನಾಯಿ
ಅರಿವು = ಜ್ಞಾನ

ಮರೆವು = ಅಜ್ಞಾನ
ವ್ಯಾಘ್ರ = ಹುಲಿ
ತರುಬಿ =ದೂಡಿ
ಹಿಂಜಾವ =ರಾತ್ರಿಯ ಕೊನೆಯಭಾಗ ಅಥವಾ ಪ್ರಾತಃಕಾಲಕ್ಕೆ ಮುನ್ನಿನ ಜಾವ
ಹೊಲಬು = ಮಾರ್ಗ
ಸಂಗಾತಿ = ಸ್ನೇಹಿತ
ಸುತ = ಮಗ (ಶಿಷ್ಯ ಎನ್ನುವ ಅರ್ಥವೂ ಇದೆ)
ಜಲಜಾಕ್ಷ = ಕಮಲದಂತೆ ಕಣ್ಣುಳ್ಳವನು (ವಿಷ್ಣು)

* * * *



## ೨೪
## ಕಾಂಬೋದಿ – ಝಂಪೆತಾಳ

**ದಾಸದಾಸರ ಮನೆಯ ದಾಸಿಯರ ಮಗ ನಾನು**
**ಸಾಸಿರ ನಾಮದೊಡೆಯ ರಂಗಯ್ಯನ ಮನೆಯ ॥ಪ॥**

**ಶಂಕುದಾಸರ ಮನೆಯ ಮಂಕುದಾಸನು ನಾನು**
**ಮಂಕುದಾಸನು ನಾನು ಮರುಳದಾಸ**
**ಸಂಕೀರ್ತನೆಯ ಮಾಡಿ ನೆನೆವ ಭಕ್ತರ ಮನೆಯ**
**ಬಿಂಕದಿ ಬಾಗಿಲ ಕಾಯ್ವ ಬಡ ದಾಸ ನಾನಯ್ಯ ॥೧॥**

**ಕಾಳಿದಾಸರ ಮನೆಯ ಕೀಳುದಾಸನು ನಾನು**
**ಆಳುದಾಸನು ನಾನು ಮೂಳದಾಸ**
**ಫಾಲಾಕ್ಷಸಖ ನಿನ್ನ ಭಜಿಪ ಭಕ್ತರ ಮನೆಯ**
**ಆಳಿನಾಳಿನ ದಾಸ ಅಡಿದಾಸ ನಾನಯ್ಯ ॥೨॥**

**ಹಲವು ದಾಸರ ಮನೆಯ ಹೊಲೆಯ ದಾಸನು ನಾನು**
**ಕುಲವಿಲ್ಲದ ದಾಸ ಕುರುಬ ದಾಸ**
**ಛಲದಿ ನಿನ್ನ ಭಜಿಪರ ಮನೆಯ ಮಾದಿಗ ದಾಸ**
**ಸಲೆ ಮುಕ್ತಿ ಪಾಲಿಸೆನ್ನೊಡೆಯ ಕೇಶವನೆ ॥೩॥**

ಭಾವ– 'ನನಗಿಂತ ಕಿರಿಯರಿಲ್ಲ ಶಿವಶರಣರಿಗಿಂತ ಹಿರಿಯರಿಲ್ಲ' ಎಂಬ ಬಸವಣ್ಣನವರ ಮಾತಿನ ಅಹಂಕಾರರಾಹಿತ್ಯ ವಿನಯಶೀಲತೆಯನ್ನು ಕನಕದಾಸರ ಈ ಕೀರ್ತನೆಯಲ್ಲೂ ಕಾಣುತ್ತೇವೆ. ಇಲ್ಲಿ ಕಾಣುವ ಒಂದು ವಿಶೇಷ ಸಂಗತಿ ಎಂದರೆ 'ನಾನು ಕುರುಬ ಜಾತಿಯ ದಾಸನಾದರೂ ಕುಲವಿಲ್ಲದ ದಾಸ ಅಥವಾ ಕುಲಾತೀತ ದಾಸ' ಎಂಬ ಅವರ ಆರೋಗ್ಯಕರವಾದ ನಿಲವು.

ಅರ್ಥ– ಸಂಕೀರ್ತನೆ = ಸ್ತುತಿ,
ಬಿಂಕ = ಬಿನ್ನಾಣ, ಠೀವಿ
ಫಾಲಾಕ್ಷ = ಹಣೆಯಲ್ಲಿ ಕಣ್ಣುಳ್ಳವನು (ಶಿವ)
ಫಾಲಾಕ್ಷಸಖ =ಶಿವನ ಸ್ನೇಹಿತ (ವಿಷ್ಣು)
ಅಡಿದಾಸ = ಕೆಳಮಟ್ಟದ ದಾಸ
ಸಲೆ = ಲೇಸಾಗಿ, ಚೆನ್ನಾಗಿ;

* * * *



## ೨೫
## ನಾಟಿ – ಝುಂಪೆ

**ಮತವೆ ಒಳ್ಳೆಯದು ಭಾಗವತವು– ನಮ್ಮ**
**ಯತಿ ರಾಮಾನುಜಯೆಂಬ ಬೇರೆ ಮನಸಿನ ಮತವೆ ಒಳ್ಳೆಯದು ॥ಪ॥**

**ಹರಿದಾಸ ಸರ್ವೇಶತೆಗೆ ನಿಮ್ಮ ವೇಷ**
**ತೊರೆಯಿರಿ ನಿಮ್ಮ ದೋಷ**
**ವರತೀರ್ಥ ಪ್ರಸಾದವೇ**
**ಪರಗತಿ ಎಂಬ ದಾಸ ॥೧॥**

**ಕಣೆಯೇ ಶಿಕ್ಷ ರ**
**ಮಣಿಯೇ ಮೋಕ್ಷದರ**
**ಗಿಣೆಯೇ ನಿಮ್ಮ ಶ್ರೀ**
**ಮಣಿ ತಿರುಮಂತ್ರವೆ ಗತಿ ಎಂಬ ದಾಸ ॥೨॥**

**ಹರಿದಾರಿ ತಿರುಕಾವಳೂರಿನ**
**ಪರಮ ಪದವಿಯೆಂಬ ಪಟ್ಟಣ**
**ಸೇರಿ ನಮ್ಮ ನೆಲೆಯಾದಿಕೇಶವ**
**ಸಿರಿ ರಂಗ ಪರರುಪಕಾರಿ**
**॥೩॥**

ಭಾವ– ರಾಮಾನುಜರ ಭಾಗವತ ಮತವೇ ಒಳ್ಳೆಯದು ಎಂಬ ಭಾವವಿದೆ. ವ್ಯಾಸರಾಯರ ಸಂಪರ್ಕಕ್ಕಿಂತ ಮುನ್ನಿನ ಅವಧಿಯ ಸೃಷ್ಟಿ ಇದು ಎನ್ನಬಹುದು.

ಅರ್ಥ– ತಿರುಮಂತ್ರ = ಶ್ರೀಮಂತ್ರ (ಓಂ ನಮಃ ನಾರಾಯಣಾಯ)
ತಿರುಕಾವಳೂರು = ತಿರುಕೋವಲೂರು (ತಮಿಳುನಾಡಿನಲ್ಲಿದೆ)

## ೨೬
## ಮುಖಾರಿ – ಝಂಪೆತಾಳ

**ಪೂರ್ವ ಜನ್ಮದಲಿ ನಾ ಮಾಡಿದ ಕರ್ಮದಿಂ**
**ಉರ್ವಿಯೊಳು ಜನಿಸಿದೆನೊ ಕೃಷ್ಣ ॥ಪ॥**
**ಕಾರುಣ್ಯನಿಧಿ ಎನ್ನ ಕಾಯಬೇಕಯ್ಯ ಹರಿ**
**ವಾರಿಜನಾಭನೆ ಮುದ್ದು ಕೃಷ್ಣ ॥ಅ॥**

**ಪುಟ್ಟಿದಂದಿನಾರಭ್ಯ ಸುಖವೆಂಬುವುದನರಿಯೆ**
**ಕಷ್ಟ ಪಟ್ಟೆನು ಕೇಳೋ ಕೃಷ್ಣ**
**ತೊಟ್ಟಿಲ ಶಿಶು ತಾಯ್ಗೆ ಬಾಯ್ಬಿಟ್ಟ ತೆರದಿ ಕಂ–**
**ಗೆಟ್ಟು ಶೋಕಿಪೆನೋ ಕೃಷ್ಣ**
**ಮುಟ್ಟಲಮ್ಮರು ಎನ್ನ ಬಂಧುಗಳು ಕಂಡರೆ**
**ಅಟ್ಟಿ ಬಡಿವುತಲಿಹರೊ ಕೃಷ್ಣ**
**ದಟ್ಟ ದಾರಿದ್ರ್ಯವನು ಪರಿಹರಿಸದಿದ್ದರೆ**
**ಮುಟ್ಟುವುದು ದೂರು ನಿನಗೆ ಕೃಷ್ಣ ॥೧॥**

**ಕಾಶಿಯಾ ವಾಸವನು ಬಯಸಿ ಬಹು ದಿನದಿಂದ**
**ಘಾಸಿ ಪಟ್ಟೆನು ನಾನು ಕೃಷ್ಣ**
**ಈ ಶರೀರವನಾಂತು ಹೀನಾಯಗೊಂಡೆನು**
**ನೀ ಸಲಹಬೇಕಯ್ಯ ಕೃಷ್ಣ**
**ಹೇಸಿಗೆಯ ಸಂಸಾರದಿ ನೀನಿಂತು ಮಾಯಾ**
**ಪಾಶದೊಳು ಬಿಗಿವರೇ ಕೃಷ್ಣ**
**ಘಾಸಿ ಮಾಡದೆ ಎನ್ನ ಪಾಪವನು ಪರಿಹರಿಸೊ**
**ಸಾಸಿರನಾಮದ ಮುದ್ದು ಕೃಷ್ಣ ॥೨॥**



**ಲೋಕದೊಳು ಎನ್ನಂಥ ಪಾಪಿಗಳು ಉಂಟೆಂದು**
**ನೀ ಕೇಳಿ ಬಲ್ಲೆಯಾ ಕೃಷ್ಣ**
**ಸಾಕೇಳು ಎನಗೊಂದು ಗತಿಯ ತೋರಿಸಿ ಸದ್ವಿ**
**ವೇಕಿಯನು ಮಾಡಯ್ಯ ಕೃಷ್ಣ**
**ರಾಕೇಂದು ಮುಖಿ ದ್ರೌಪದಿಯ ಮಾನವನು ಕಾಯ್ದು**
**ಆಕೆಗಕ್ಷಯವಿತ್ತೆ ಕೃಷ್ಣ**
**ನಾ ಕಾಣುವಂದದಲಿ ಉಡುಪಿಯಾದಿಕೇಶವ**
**ಏಕೆ ದರುಶನವೀಯೆ ಕೃಷ್ಣ ॥೩॥**

ಭಾವ– ಉಡುಪಿಯ ಕೃಷ್ಣದರ್ಶನಕ್ಕೆಂದು ಬಂದ ಕನಕದಾಸರನ್ನು ಮಡಿವಂತರು ಮುಟ್ಟಿಸಿಕೊಳ್ಳುವುದಿರಲಿ ಒಳಕ್ಕೆ ಬಿಡದಂತೆ ನಾಯಿಯನ್ನು ಹೇಗೋ ಹಾಗೆ ಅಟ್ಟಿ ಬಡಿದಾಗ, ನೊಂದ ಎದೆಯ ಜೀರ್ಕೊಳವೆಯಿಂದ ಚಿಮ್ಮಿದ ಕರುಣರಸದ ತುಂತುರು ಹನಿ ಸಾಲುಗಳುಳ್ಳ ಮಧುರ ಯಾತನೆಯ ಕೀರ್ತನೆ ಇದು; ಓದುಗರ ಕೇಳುಗರ ಮೈಮನಸ್ಸುಗಳನ್ನು ಒದ್ದೆ ಬಟ್ಟೆಯಂತೆ ಹಿಂಡುವ, ಕಣ್ಣನ್ನು ಒದ್ದೆಯ ಗದ್ದೆಯನ್ನಾಗಿ ಮಾಡುವ ಸಂಗತಿಯೆಂದರೆ ಆ ನಿರ್ದಯ ಪ್ರಸಂಗದಲ್ಲಿ ಬರುವ 'ದಟ್ಟದಾರಿದ್ರ್ಯವನು ಪರಿಹರಿಸದಿದ್ದರೆ' ಎಂಬ ಮಾತು. ಮಾನವೀಯತೆಯ ಹೃದಯಶ್ರೀಮಂತಿಕೆ ಲವಲೇಶವು ಇರದ ಮಡಿವಂತರ 'ಆತ್ಮದ ದಟ್ಟದಾರಿದ್ರ್ಯ'ವನ್ನು ಧ್ವನಿಪೂರ್ಣವಾಗಿ ಪ್ರಸ್ತಾಪಿಸುವಲ್ಲಿ ಪರಿಪಕ್ವತೆ ಪ್ರಬುದ್ಧತೆ ಎದ್ದು ಕಾಣುವುದನ್ನು ಮರೆಯುವಂತಿಲ್ಲ.

ಅರ್ಥ– ಉರ್ವಿ = ಭೂಮಿ
ವಾರಿಜನಾಭ = ವಿಷ್ಣು
ರಾಕೇಂದು = ಪೂರ್ಣಚಂದ್ರ

* * * *

## ೨೭
## ಅಠಾಣ – ಅಟತಾಳ

**ಬಾಗಿಲನು ತೆರೆದು ಸೇವೆಯನು ಕೊಡು ಹರಿಯೆ**
**ಕೂಗಿದರು ಧ್ವನಿ ಕೇಳಲಿಲ್ಲವೇ ನರಹರಿಯೇ ॥ಪ॥**

**ಪರಮಪದದೊಳಗೆ ವಿಷಧರನ ತಲ್ಪದಲಿ ನೀ**
**ಸಿರಿಸಹಿತ ಕ್ಷೀರವಾರಿಧಿಯೊಳಿರಲು**
**ಕರಿರಾಜ ಕಷ್ಟದಲಿ ಆದಿಮೂಲಾ ಎಂದು**
**ಕರೆಯಲಾಕ್ಷಣ ಬಂದು ಒದಗಿದೆಯೊ ನರಹರಿಯೆ ॥೧॥**

**ಕಡುಕೋಪದಿಂದ ಖಳನು ಖಡುಗವನು ಪಿಡಿದು ನಿ**
**ನ್ನೊಡೆಯನೆಲ್ಲಿಹನೆಂದು ಜಡಿದು ನುಡಿಯೆ**
**ದೃಢ ಭಕುತಿಯಲಿ ಶಿಶುವು ಬಿಡದೆ ನಿನ್ನನು ಭಜಿಸೆ**
**ಸಡಗರದಿ ಕಂಬದಿಂದೊಡೆದೆ ನರಹರಿಯೆ ॥೨॥**

**ಯಮಸುತನ ರಾಣಿಗಕ್ಷಯ ವಸನವನ್ನಿತ್ತೆ**
**ಸಮಯದಲಿ ಅಜಮಿಳನ ಪೊರೆದೆ**
**ಸಮಯಾಸಮಯವುಂಟೆ ಭಕ್ತವತ್ಸಲ ನಿನಗೆ**
**ಕಮಲಾಕ್ಷ ಕಾಗಿನೆಲೆಯಾದಿಕೇಶವನೆ ॥೩॥**

ಭಾವ– ಉಡುಪಿಯ ಕೃಷ್ಣನ ದರ್ಶನಕ್ಕೆ ಮಡಿವಂತರು ಅವಕಾಶವನ್ನು ನೀಡದೆ ಬಾಗಿಲು ಮುಚ್ಚಿದಾಗ, ಕನಕದಾಸರು ಮತಿವಂತರಲ್ಲದ ಮಡಿವಂತರೊಡನೆ ವಾದ ಮಾಡುವುದು ಮೂರ್ಖತನವೆಂದು ಭಾವಿಸಿಯೋ ಏನೋ ದೇವರೊಡನೆ ವಾದ ಮಾಡುತ್ತಾರೆ– ನೀನೇ ಬಾಗಿಲು ತೆರೆದು ಸೇವೆಗೆ ಅವಕಾಶ ಮಾಡಿಕೊಂಡು ಎಂದು, ಹಲವು ದೃಷ್ಟಾಂತಗಳನ್ನು ಅವನಿಗೇ ನೀಡಿ.



ಅರ್ಥ– ವಿಷಧರ = ಸರ್ಪ
ತಲ್ಪ = ಹಾಸಿಗೆ
ಸಿರಿ ಸಹಿತ = ಲಕ್ಷ್ಮೀಸಮೇತ
ಕ್ಷೀರವಾರಿಧಿ = ಹಾಲ್ಗಡಲು
ಆದಿಮೂಲ = ಪರಾತ್ಪರ ವಸ್ತು
ಕರಿರಾಜ... ನರಹರಿಯೆ = ಮಹಾವಿಷ್ಣು ಭಕ್ತನಾದ ಇಂದ್ರದ್ಯುಮ್ನ ಎಂಬ ರಾಜ ಅಗಸ್ತ್ಯ ಮಹರ್ಷಿಯಿಂದ ಶಾಪ ಹೊಂದಿ ಗಜಜನ್ಮ ಹೊಂದುತ್ತಾನೆ. ಅದು ಒಂದು ದಿವಸ ಮೊಸಳೆಗೆ ಸಿಕ್ಕಿದಾಗ, ಪೂರ್ವಜನ್ಮದ ವಾಸನೆಯಿಂದ ವಿಷ್ಣುವನ್ನು ಸ್ಮರಿಸಿದಾಗ ಮೊಸಳೆ ಬಾಯಿಂದ ದೇವರು ರಕ್ಷಿಸಿದ ಎಂಬ ಕಥೆ.
ಜಡಿದು ನುಡಿಯೆ = ಜಗ್ಗಿಸಿ ಕೇಳಲು
ಯಮಸುತ = ಧರ್ಮರಾಯ
ಅಕ್ಷಯ ವಸನ = ಅಕ್ಷಯ ವಸ್ತ್ರ
ಸಮಯದಲಿ ಅಜಮಿಳನ ಪೊರೆದೆ = ಅಜಮಿಳ ತನ್ನ ದುರ್ವರ್ತನೆ ಮತ್ತು ದುರಾಚಾರಗಳಿಂದ ಪಾಪಿಯಾಗಿದ್ದರೂ, ಸಾಯುವ ವೇಳೆಯಲ್ಲಿ ತನ್ನ ಮಗನನ್ನು ನಾರಗಾ (ಅವನ ಹೆಸರು ನಾರಾಯಣ) ಎಂದು ಆಕಸ್ಮಿಕವಾಗಿ ಅಂದರೂ, ತನ್ನ ನಾಮಸ್ಮರಣೆಯನ್ನು ಮಾಡಿದನಲ್ಲ ಎಂದು ದೇವರು ಅವನನ್ನು ರಕ್ಷಿಸಿದ ಕಥೆ–
ಕಮಲಾಕ್ಷ = ಕಮಲದಂತೆ ಕಣ್ಣುಳ್ಳವನು (ವಿಷ್ಣು)

* * * *

## ೨೮
## ಶಂಕರಾಭರಣ – ಆದಿತಾಳ

**ನಮಗೆಲ್ಲಿ ಮನೆಗಳಯ್ಯ ನಾರಾಯಣ ॥ಪ॥**
**ಕಮಲ ಬ್ರಹ್ಮಾಂಡ ಕೋಟಿ ಒಡಲೊಳು ತಾಳ್ದಂಥ**
**ರಮಾಧವ ನಿಮಗೆ ನೀರೊಳಗೆ ವಾಸವಾಯಿತು ॥ಅ॥**

**ಜಲನಿಧಿಯನುತ್ತರಿಸಿ ಲಂಕೆಯನೈವುದಕೆ**
**ಕುಲಗಿರಿಯ ಕಿತ್ತು ತಂದು ಸೇತುವೆ ಕಟ್ಟಿ**
**ಸಲೆ ದೈತ್ಯನ ಕೊಂದು ಸೀತೆಯ ತಂದವನಿಗೆ ಗಿರಿ**
**ತಲೆಯ ಮೇಲೆ ಇಹ ಪ್ರಾಪ್ತಿಯಾಯಿತು ॥೧॥**

**ಪೃಥ್ವಿಯ ತಲೆಯನು ಪರೆಮಾಡಿ ತಾಳಿದ**
**ಉತ್ತಾನಮಮ್ಮನ ತಂದೆಯ ಮೆಲುವನ**
**ಮೃತ್ಯನಾಶಕನೆಂದು ಸುತ್ತಿದ್ದಾನೆ**
**ಹುತ್ತಿನೊಳಗೆ ಇಹ ಪ್ರಾಪ್ತಿಯಾಯಿತು ॥೨॥**

**ನಾಡದೇವತೆಗಳ ಸೆರೆಗಳ ಬಿಡಿಸಿ**
**ಕ್ರೀಡೆಯಾಯಿತು ನಿಮ್ಮ ದಯದಿಂದಲಿ**
**ರೂಢಿಯೊಳತಿ ಸೇವಕನಾದ ಗರುಡನಿಗೆ**
**ಬೋಡು ಮರದ ಮೇಲೆ ಇಹ ಪ್ರಾಪ್ತಿಯಾಯಿತು ॥೩॥**

**ಜಲನಿಧಿ ಸುತನ ಮೊಮ್ಮಗನ ಕೊಂದ ಶೂರ ನ**
**ಕುಲ ಸಹದೇವ ಪಾಂಡವರೈವರು**
**ಲಲನೆ ದ್ರೌಪದಿಯೊಂದಿಗೆ ವನವಾಸ ಹೋಗಿ**
**ಹೊಲದೊಳಗೆ ಇಹ ಪ್ರಾಪ್ತಿಯಾಯಿತು ॥೪॥**



**ಇಂತಿಂಥವರಿಗೆಲ್ಲ ಮನೆಯಿಲ್ಲದಿರಲು ನ**
**ನ್ನಂಥವರಿಗಿನ್ನೆಲ್ಲಿ ಇರಲು ಸಾಧ್ಯ**
**ಕಂತುಪಿತ ಕಾಗಿನೆಲೆಯಾದಿಕೇಶವನೆ ನಿ**
**ಶ್ಚಿಂತನಾಗಿ ನಿಮ್ಮ ಗುಡಿಯಲಿಪ್ಪೆನು ॥೫॥**

ಭಾವ– ಕನಕದಾಸರು ಎಲ್ಲವನ್ನು ತೊರೆದು ಕಾಗಿನೆಲೆಯ ಆದಿಕೇಶವನ ಗುಡಿಯಲ್ಲೇ ವಾಸವಾಗಿದ್ದು ಆತ್ಮೋದ್ಧಾರದ ಅಧ್ಯಾತ್ಮ ಹಾಗೂ ಸಮಾಜೋದ್ಧಾರದ ಸಾಹಿತ್ಯ– ಎರಡನ್ನೂ ಸಾಧಿಸಿದರು ಎಂಬುದು ಕೀರ್ತನೆಯ ಅಂತ್ಯದ ನುಡಿ (ನಿಮ್ಮ ಗುಡಿಯಲಿಪ್ಪೆನು) ರುಜುವಾತು ಪಡಿಸುತ್ತದೆ.

ಅರ್ಥ– ರಮಾಧವ = ರಮೆಯ ಗಂಡ, ವಿಷ್ಣು

೧. ಜಲನಿಧಿ = ಸಮುದ್ರ
ಉತ್ತರಿಸಿ = ದಾಟಿ
೨. ಪೃಥ್ವಿ = ಭೂಮಿ
ಪರೆ = ಹರೆ, ಸಿಂಬೆ
ಉತ್ತಾನಮಮ್ಮ (<ಉತ್ತಾಲ+ಅಮ್ಮ= ವೇಗವಾಗಿ ನಡೆವ ವ್ಯಕ್ತಿ?)= ವೇಗದ ನಡೆಯ ಆಂಜನೇಯ
ತಂದೆಯ = ವಾಯುವನ್ನು
೩. ರೂಢಿ = ಪ್ರಪಂಚ, ಭೂಮಿ
೪. ಜಲನಿಧಿ ಸುತ = ಚಂದ್ರ
೫. ಕಂತುಪಿತ = ಮನ್ಮಥನ ತಂದೆ ವಿಷ್ಣು

* * * *

## ೨೯
## ಕಾಂಬೋದಿ – ಝಂಪೆ

**ಆರಿಗಾರಿಲ್ಲ ಆಪತ್ಕಾಲದೊಳಗೆ ॥ಪ॥**
**ವಾರಿಜಾಕ್ಷನ ನಾಮ ನೆನೆ ಕಂಡ್ಯ ಮನವೆ ॥ಅ॥**

**ಹಸಿದು ಬಳಲುವಾಗ ಹಗೆ ಕೈಗೆ ಸಿಲುಕಿದಾಗ**
**ದೆಸೆಗೆಟ್ಟು ಅಧಿಕ ವ್ಯಾಧಿಯಲಿ ಇರುವಾಗ**
**ಅಸಮಾನನಾದಾಗ ಅತಿ ಭೀತಿಗೊಂಡಾಗ**
**ಬಿಸಜನಾಭನ ನಾಮ ನೆನೆಕಂಡ್ಯ ಮನವೆ ॥೧॥**

**ಸಾಲದವರೆಳೆವಾಗ ಚಾಡಿ ಮಾತಿಗೆ ಭೂಪ**
**ಘಳುಘುಳಿಸುತ ಕೋಪವನು ತೋರಿದಾಗ**
**ಮೇಲು ತಾನರಿಯದೆಯೆ ನಿಂದೆ ಹೊಂದಿರುವಾಗ**
**ನೀಲಮೇಘಶ್ಯಾಮನ ನೆನೆಕಂಡ್ಯ ಮನವೆ ॥೨॥**

**ಪಂಥದಲಿರುವಾಗ ಪದವಿ ತಪ್ಪಿರುವಾಗ**
**ದಂತಿಮದವೇರಿ ಬೆನ್ನತ್ತಿದಾಗ**
**ಕಂತುಪಿತ ಕಾಗಿನೆಲೆಯಾದಿಕೇಶವನ ನಿ**
**ಶ್ಚಿಂತೆಯಿಂದಲಿ ನೀನು ನೆನೆಕಂಡ್ಯ ಮನವೆ ॥೩॥**

ಭಾವ– ಆಪತ್ಕಾಲದಲ್ಲಿ ಯಾರಿಗೆ ಯಾರೂ ಆಗುವುದಿಲ್ಲ– ಭಕ್ತವತ್ಸಲನಾದ ಪರಮಾತ್ಮನೊಬ್ಬನನ್ನು ಬಿಟ್ಟು ಎಂಬ ನಂಬಿಕೆ ಮೂಲದಿಂದ ಈ ಕೀರ್ತನೆ ಮೂಡಿದೆ.

ಅರ್ಥ– ವಾರಿಜಾಕ್ಷ = ಕಮಲದಂತೆ ಕಣ್ಣುಗಳನ್ನುಳ್ಳ ವಿಷ್ಣು



೧. ಬಿಸಜನಾಭ = ಹೊಕ್ಕುಳಲ್ಲಿ ಕಮಲವುಳ್ಳವನು (ವಿಷ್ಣು)

೨. ಚಾಡಿಮಾತಿಗೆ... ತೋರಿದಾಗ = ಕನಕದಾಸರಿಗೆ ಸಿಕ್ಕಿದ ನಿಧಿಯಿಂದ ಆದಿಕೇಶವನ ಗುಡಿ ಕಟ್ಟಿಸಿ, ಆದಿಕೇಶವನ ಪೂಜೆ, ಜಾತ್ರೆ ರಥೋತ್ಸವಗಳನ್ನು ತಪ್ಪದೆ ನಡೆಸುವುದನ್ನು ಕಂಡ ಅಸೂಯಾಪರರು ದಂಡನಾಯಕನಾಗಿದ್ದ ಕನಕನ ಮೇಲೆ ದೂರನ್ನು ಆನೆಗೊಂದಿಯ ರಾಜರಿಗೆ ಸಲ್ಲಿಸಿದಾಗ ಆತ ಸಿಟ್ಟುಗೊಂಡು ಅಧಿಕಾರದಿಂದ ಕನಕ ನಾಯಕನನ್ನು ತೆಗೆದುಹಾಕಿದ ಐತಿಹಾಸಿಕ ಸತ್ಯವನ್ನು ಒಳಗೊಂಡಿದೆ ಎನ್ನಿಸುತ್ತದೆ. ಇದಕ್ಕೆ ಪೂರಕವಾಗಿ 'ಚಾಡಿವಾತಿಗೆ ಭೂಪ ಘುಳುಘುಳಿಸುತ ಕೋಪವನು ತೋರಿದಾಗ' 'ನಿಂದೆ ಹೊಂದಿರುವಾಗ' 'ಪದವಿ ತಪ್ಪಿರುವಾಗ' ಎಂಬ ಮಾತುಗಳು ಪುಷ್ಟಿ ನೀಡುತ್ತವೆ.

೩. ದಂತಿ = ಆನೆ,
ಕಂತುಪಿತ = ಕಾಮನ ತಂದೆ (ವಿಷ್ಣು)

* * * *

## ೩೦
## ಕಾಂಬೋದಿ – ರೂಪತಾಳ

**ಮಾವನ ಮನೆಯೊಳಗೆ ಇರಬಹುದೆ ಕೋವಿದರು ||ಪ||**

**ಹಾವು ಹಿಡಿಯಲು ಬಹುದು ಹರಣ ನೀಡಲು ಬಹುದು**
**ಬೇವ ಕಿಚ್ಚನು ಹಿಡಿದು ನುಂಗಬಹುದು**
**ಭಾವೆಯಳ ತಂದೆ ಮನೆಯಲಿ ಜೀವಿಪುದಕಿಂತ**
**ಸಾವುದೇ ಲೇಸು ಅಭಿಮಾನಿಗಳಿಗೆ ||೧||**

**ಪರರ ಸೇರಲು ಬಹುದು ಪತಿತರಲ್ಲಿರಬಹುದು**
**ಕೊರಳ ಘಾತಕಂಗೆ ಶಿರ ಒಪ್ಪಿಸಬಹುದು**
**ತರುಣಿಯಳ ತೌರು ಮನೆಯಲಿ ಇರುವುದಕಿಂತ**
**ತರುಗಿರಿ ಗುಹೆಯಲ್ಲಿ ಇದ್ದು ಜೀವಿಸಬಹುದು ||೨||**

**ಮಾವ ಅತ್ತೆಯು ನೊಂದು ಅತ್ತಿಗೆಯು ತಾ ಜರಿದು**
**ಹೇವವನಿಕ್ಕಿ ಚೂರ್ಣವ ಮಾಡಲು**
**ಆವಾಗ ನೋಡಿದರು ಎನಗೆ ಹಿತರಿಲ್ಲೆಂದು**
**ಮಾವ ಹೊರಗಾಡುವನು ಚಿಕ್ಕ ನುಡಿಗಳನು ||೩||**

**ಬಂದೊಂದು ತಿಂಗಳೊಳು ಬಹುಮಾನ ನಡತೆಗಳು**
**ಬಂದೆರಡು ತಿಂಗಳೊಳಗೆ ಹಿತವಾದವು**
**ಒಂದೊಂದಭದ್ರ ನುಡಿ ಒಳಗೊಳಗೆ ಹುಟ್ಟುವುವು**
**ಸಂದೇಹವೇಕೆ ಸಂಸಾರಿಗಳಿಗೆ ||೪||**

**ಈ ಪರಿಯಲುಂಬಂಥ ಅಳಿಯ ಭೋಜನಕಿಂತ**
**ಗೋಪಾಳ ಲೇಸು ಅಭಿಮಾನಿಗಳಿಗೆ**



**ಶ್ರೀಪತಿ ನೆಲೆಯಾದಿಕೇಶವನ ಚರಣ ಸ**
**ಮೀಪದಲಿ ವಾಸಿಪುದೆ ವಾಸಿ ಮನವೆ ||೫||**

ಭಾವ– ಅಳಿಯ ಮಾವನ ಮನೆಯಲ್ಲಿ ದೀರ್ಘಕಾಲ ಉಳಿಯುವುದು– ಅದರಲ್ಲೂ ಎಲ್ಲ ಕಳೆದುಕೊಂಡು ಬರಿಗೈಯಾಗಿ ಬಂದುಳಿಯುವುದು– ತರವಲ್ಲ ಎಂಬುದು ಈ ಕೀರ್ತನೆಯ ಆಶಯ. ಬಹುಶಃ ಕನಕದಾಸರು ಅಧಿಕಾರ ಧನಕನಕ ಎಲ್ಲವನ್ನೂ ತ್ಯಜಿಸಿ ಕೆಲಕಾಲ ಮಾವನ ಮನೆಯಲ್ಲು ಳಿದಿರಬಹುದು. ಆಗಿನ ಕಹಿ ಅನುಭವ ಈ ಕೀರ್ತನೆಯ ಉಗಮಕ್ಕೆ ಕಾರಣವಾಗಿರಬಹುದು. ಅವರು ಆದಿಕೇಶವನ ಗುಡಿಯಲ್ಲೇ ವಾಸ ಮಾಡುತ್ತ ನೃಸಿಂಹಸ್ತವ, ಮೋಹನ ತರಂಗಿಣಿ ಕೃತಿಗಳನ್ನು ರಚಿಸಿದರೆಂಬ ಪರಂಪರಾಗತ ಪ್ರತೀತಿ ಇದೆ. ಕೊನೆಯ ಚರಣದಲ್ಲಿ ಬರುವ 'ಗೋಪಾಳ ಲೇಸು' ಎಂಬ ಮಾತು, 'ಕೇಶವನ ಚರಣ ಸಮೀಪದಿ ವಾಸಿಪುದೆ ವಾಸಿ' ಎಂಬ ಮಾತು ಅವರ ವೇಷವನ್ನು ಮತ್ತು ವಾಸವನ್ನು ತಿಳಿಸುತ್ತವೆ ಎನಿಸುತ್ತದೆ.

ಅರ್ಥ– ಕೋವಿದರು = ತಿಳಿದ ಜಾಣರು
ಹರಣ = ಪ್ರಾಣ
ಬೇವ = ಬೇಯುವ
ಕಿಚ್ಚು = ಬೆಂಕಿ
ಭಾವೆಯಳ (<ಭಾಮೆಯಳ)= ಹೆಂಡತಿಯ
ಹೇವ = ಮಾನ
ಚಿಕ್ಕನುಡಿಗಳು = ಸಣ್ಣಮಾತು, ಚುಚ್ಚುಮಾತು;
ಅಭದ್ರ = ಅಮಂಗಳ
ಗೋಪಾಳ = ಹರಿದಾಸರು ಹೆಗಲಿಗೆ ನೇತು ಹಾಕಿಕೊಳ್ಳುವ ಬಿದಿರು ಬುಟ್ಟಿ (ಭಿಕ್ಷಾಪಾತ್ರೆ)
ಶ್ರೀಪತಿ = ವಿಷ್ಣು
ವಾಸಿ = ಲೇಸು

* * * *

೩೧
## ಆನಂದ ಭೈರವಿ – ಅಟ

**ತಡೆಯುತಲಿದೆ ಪುಷ್ಪಮಾಲೆ ॥ಪ॥**
**ಒಡಲೊಳಗಾತ್ಮನ ವರಮಕುಟಾಗ್ರದಿ ॥ಅ॥**

**ನವರತ್ನಖಚಿತ ಕಿರೀಟ ದೊಡ್ಡಿತು ದಿವ್ಯ**
**ನವತರ ಕುಸುಮದಾಮವು ಕಿರಿದು**
**ವಿವರ ಬಲ್ಲ ಸದ್ಗುರು ತಮ್ಮ ಉದ್ದೇಶದ**
**ನವ ವೈಜಯಂತಿಯ ಹಿರಿದಾಗಿ ಭಾವಿಸಿ ॥೧॥**

**ಸ್ಥಿರ ಮತಿಯೆಂಬ ಆಸನವನು ಅಳವಡಿಸಿ– ತ್ರಿ**
**ಕರಣವೆಂಬ ತಾಂಬೂಲವನ್ನೊಪ್ಪಿಸುತ– ಮಾಯ**
**ಮರವೆಯೆಂಬ ದಕ್ಷಿಣೆ ಕೊಟ್ಟು– ಮಮಭಾವ**
**ದಿರುವಿನ ತಮವನೋಡಿಸಿ ನಿಂದ ಗುರುದೇವ ॥೨॥**

**ಅಜ್ಞಾನವೆಂಬ ನಿರ್ಮಾಲ್ಯವನು ಮಾಡಿ**
**ಸುಜ್ಞಾನವೆಂಬಕ್ಷತೆಯ ಪಣೆಗೆ ಸೂಡಿ**
**ಪ್ರಜ್ಞಾನವೆಂಬ ದೀವಿಗೆ ಸ್ತಂಭ ಹೂಡಿ**
**ಪೂಜಿಸಿ ಪ್ರವಿಮಲ ಜ್ಯೋತಿಯ ದೇಶಿಕೋತ್ತಮ ॥೩॥**

ಭಾವ– ಕನಕದಾಸರ ಗುರುಗಳಾದ ವ್ಯಾಸರಾಯರು ಒಮ್ಮೆ ಮಾನಸ ಪೂಜೆಯ ವೇಳೆಯಲ್ಲಿ ಹಿರಿದಾದ ಕಿರೀಟಕ್ಕೆ ತಮ್ಮ ಕೈಲಿದ್ದ ಕಿರಿದಾದ ಪುಷ್ಪಮಾಲೆ ಹಿಡಿಸದೆ ಪರದಾಡುವುದನ್ನು ಪರೇಂಗಿತ ಪ್ರಜ್ಞೆಯಿಂದ ಗ್ರಹಿಸಿ, ಸ್ವಾಮಿಗಳಿಗೆ ಸುಲಭ ನಿವಾರಣೆಯನ್ನು ಸೂಚಿಸಿದ ಸಂದರ್ಭದಲ್ಲಿ ಹಾಡಿದ ಕೀರ್ತನೆಯಿದು. ಅಪರೋಕ್ಷಜ್ಞಾನಿ ಎಂಬುದನ್ನು ಸಾಬೀತು ಪಡಿಸುವ ಕೀರ್ತನೆ.



ಅರ್ಥ– ಮಕುಟ = ಕಿರೀಟ

೧. ದಾಮ = ಮಾಲೆ (ಹುರಿ, ಹಗ್ಗ ಡಾಬು ಎಂಬ ಅರ್ಥವೂ ಉಂಟು)
ವೈಜಯಂತಿ = ತುಳಸಿ ಮಾಲೆ
೨. ತ್ರಿಕರಣ = ಕಾಯ, ಮನ, ವಾಣಿ
ಇರುವು = ಇರುವಿಕೆ, ಅಸ್ತಿತ್ವ
ತಮ = ಕತ್ತಲು
೩. ನಿರ್ಮಾಲ್ಯ = ಪೂಜೆ ಮಾಡಿದ ನಂತರ ತೆಗೆದ ಹೂ
ಪಣೆಗೆ = ಹಣೆಗೆ
ಸೂಡಿ = ಧರಿಸಿ, ತೊಡಿಸಿ

* * * *

## ೩೨
## ನವರೋಜ್ – ಆದಿತಾಳ

**ಡೊಂಕು ಬಾಲದ ನಾಯಕರೆ ನೀವೇನೂಟವ ಮಾಡಿದಿರಿ ॥ಪ॥**

**ಕಣಕ ಕುಟ್ಟೋ ಅಲ್ಲಿಗೆ ಹೋಗಿ ಹಣಿಕಿ ಇಣಿಕಿ ನೋಡುವಿರಿ**
**ಕಣಕ ಕುಟ್ಟೋ ಒನಕಿಲಿ ಹೊಡೆದರೆ ಕುಯ್ ಕುಯ್ ರಾಗವ ಪಾಡುವಿರಿ ॥೧॥**

**ಹುಗ್ಗಿ ಮಾಡೋ ಅಲ್ಲಿಗೆ ಹೋಗಿ ತಗ್ಗಿ ಬಗ್ಗಿ ನೋಡುವಿರಿ**
**ಹುಗ್ಗಿ ಮಾಡೋ ಸೌಟಲಿ ಹೊಡೆದರೆ ಕುಯ್ ಕುಯ್ ರಾಗವ ಪಾಡುವಿರಿ ॥೨॥**

**ಹಿರಿಯ ಹಾದಿಲಿ ಓಡುವಿರಿ ಕರಿಯ ಬೂದಿಲಿ ಹೊರಳುವಿರಿ**
**ಸಿರಿ ಕಾಗಿನೆಲೆಯಾದಿಕೇಶವನ ಸ್ಮರಿಸದವರ ಗತಿ ತೋರುವಿರಿ ॥೩॥**

ಭಾವ– ನಾಯಿಯ ರೂಪಕದಲ್ಲಿ ಮನುಷ್ಯನ ಡೊಂಕುತನವನ್ನು ಈ ಕೀರ್ತನೆಯಲ್ಲಿ ಚಿತ್ರಿಸಲಾಗಿದೆ. 'ಚಿತ್ತ ಚಾಂಚಲ್ಯ ಜೊಲ್ಲುಸುರುಕುತನ (ಆಶೆ) ಭಗವಂತನ ಸ್ಮರಣ ರಾಹಿತ್ಯದ ಫಲ' ಎಂಬ ಆಶಯ ಮತ್ತು ಧ್ವನಿಯನ್ನು ಇದು ಒಳಗೊಂಡಿದೆ. (ದೇವರನ್ನು ತೋರಿಸು ಎಂದು ವ್ಯಾಸರಾಯರು ಕನಕನಿಗೆ ಹೇಳಿದಾಗ ದೇವರು ಜೂಲುನಾಯಿಯ ರೂಪದಲ್ಲಿ ಬಂದಾಗ, ಮಠದ ಕರ್ಮಠ ಮಡಿವಂತರು ಬಡಿಗೆಯಿಂದ ಅದನ್ನು ಬಡಿದು ಓಡಿಸಿದರೆಂದೂ, ಆ ಸಂದರ್ಭವನ್ನೇ ನೆಪ ಮಾಡಿಕೊಂಡು, ಈ ಕೀರ್ತನೆಯನ್ನು ಕಟ್ಟಿದರೆಂದೂ ಪರಂಪರೆಯ ನಂಬಿಕೆ, ಪ್ರತೀತಿ)

ಅರ್ಥ– ಕಣಕ = ಮಿದ್ದ ಗೋದಿ ಹಿಟ್ಟು



## ೩೩
## ಕಾಂಬೋದಿ

**ಕಾಯೊ ಎನ್ನನು ದೇವ ಕಡೆ ಹಾಯಿಸೊ ಕಡಲೊಡೆಯ ॥ಪ॥**
**ಕಾಯಯ್ಯ ನೀ ಎನ್ನ ಕಮಲದಳಾಕ್ಷ ॥ಅ॥**

**ಒಂದು ಕಾಯಲಿ ನಾನು ಒಲಿದು ದಂಡಿಗೆಯಾದೆ**
**ಎರಡು ಕಾಯಲಿ ನಾನು ವೀಣೆಯಾದೆ**
**ಮೂರು ಕಾಯಲಿ ನಾನು ಮುದ್ದು ಕಿನ್ನರಿಯಾದೆ**
**ನೀಟಾದ ಕಾಯಲಿ ನಾನು ನಾಗಸ್ವರವಾದೆ ॥೧॥**

**ದಪ್ಪ ದಪ್ಪ ಕಾಯಲಿ ದರವೇಶಿಗಳಿಗಾದೆ**
**ಮಿಕ್ಕ ಕಾಯಲಿ ನಾನು ಸನ್ಯೇಸಿಗಳಿಗಾದೆ**
**ಕೈತಪ್ಪಿ ಬಿದ್ದರೆ ಕದಿರಿಗೆ ಬಿಲ್ಲಾದೆ**
**ಮತ್ತೆ ದೇವರ ಗುಡಿಗೆ ದೀಪವೇ ನಾನಾದೆ ॥೨॥**

**ಚಿಕ್ಕಂದು ಮೊದಲು ನಾ ಸಾಸೂವೆ ಕಾಯಾದೆ**
**ಚಿಕ್ಕ ಚಿನ್ಮಯಗೆ ಬುರುಡೆಯಾದೆ**
**ಉಕ್ಕುವಾ ಹೊಳೆಯಲ್ಲಿ ತೆಪ್ಪವೇ ನಾನಾದೆ**
**ಚೊಕ್ಕ ಕನಕಪ್ಪನ ಹಿಂದೆ ನಾ ತಿರುಪತಿಗೆ ಬಂದೆ ॥೩॥**

ಭಾವ– ಕನಕದಾಸರು ತಿರುಪತಿಗೆ ಬಂದದ್ದನ್ನು ತುಂಬ ಸ್ವಾರಸ್ಯವಾಗಿ ಹೇಳಿದ್ದಾರೆ– ಮನುಷ್ಯನ ನಾನಾ ಅವಸ್ಥೆಯನ್ನು ಕಾಯ–ಕಾಯಿಯ ಮೂಲಕ, ಬಳಕೆಗೊಂಡ ರೀತಿಯ ಮೂಲಕ. ಕನಕ, ಕನಕಯ್ಯ, ಕನಕಪ್ಪ ಎಂಬ ಹೆಸರುಗಳೇ ಚಾಲ್ತಿಯಲ್ಲಿದ್ದು ಆಮೇಲೆ 'ದಾಸ' ಶಬ್ದ ಸೇರ್ಪಡೆಯಾಗಿರಬೇಕು.

ಅರ್ಥ– ಕಡಲೊಡೆಯ = ವಿಷ್ಣು

೧. ದಂಡಿಗೆ = ತಂಬೂರಿ
೨. ದರವೇಶಿ = ಮನೆಮನೆಯ ಬಾಗಿಲಿಗೆ ಬರುವ ಮುಸಲ್ಮಾನ ಭಿಕ್ಷುಕರು (ದರ<ದ್ವಾರ=ಬಾಗಿಲು),
ಸನ್ನೇಸಿ = ಸನ್ಯಾಸಿ
ಕದಿರು = ರಾಟೆಯಲ್ಲಿ ನೇಯ್ದ ನೂಲನ್ನು ಸುತ್ತುವ ದಬ್ಬಳದಂತಹ ಲೋಹದ ಕಡ್ಡಿ
ತೆಪ್ಪ = ಹರಿಗೋಲು, ದೋಣಿ; ಚೊಕ್ಕ = ನಿರ್ಮಲ

* * * *



೩೪
## ಕಾಂಬೋದಿ – ಝಂಪೆ

ಕನಕದಾಸನ ಮೇಲೆ ದಯ ಮಾಡಲು ವ್ಯಾಸ
ಮುನಿ ಮಠಿಕರೆಲ್ಲರು ದೂರುತಿಹರೊ ॥ಪ॥

ತೀರ್ಥವನು ಕೊಡುವಾಗ ಕನಕನ್ನ ಕರೆಯೆನಲು
ದೂರ್ತರಾಗಿದ್ದ ವಿದ್ವಾಂಸರೆಲ್ಲ
ಸಾರ್ಥಕವಾಯ್ತು ಇವರ ಸನ್ಯಾಸಿತನವೆಲ್ಲ
ಪೂರ್ತ್ಯಾಗಲೆಂದು ಯತಿ ನಗುತಲಿಹನು ॥೧॥

ಮರುದಿನ ಅವರವರ ಪರೀಕ್ಷಿಸಬೇಕೆಂದು
ಕರೆದು ವಿದ್ವಾಂಸರ ಕನಕಸಹಿತ
ತ್ವರಿತದಲಿ ಕರದಲ್ಲಿ ಕದಳಿ ಫಲವನೆ ಕೊಟ್ಟು
ಯಾರಿರದ ಸ್ಥಳದಲ್ಲಿ ಮೆದ್ದು ಬನ್ನಿರಿ ಎನಲು ॥೨॥

ಊರ ಹೊರಗೆ ಹೋಗಿ ಬ್ಯಾರೆ ಬ್ಯಾರೆ ಕುಳಿತು
ತ್ವರಿತದಿಂ ಮೆದ್ದು ವಿದ್ವಾಂಸರೆಲ್ಲ
ತೋರಲಿಲ್ಲವು ಎನಗೆ ಏಕಾಂತ ಸ್ಥಳವೆನುತ
ಸಾರಿ ಕದಳಿ ಫಲವ ತಂದು ಮುಂದಿಟ್ಟ ॥೩॥

ಡಿಂಬದೊಳು ಶಬ್ದ ವಾಗಾದಿ ಶ್ರೋತೃಗಳಲ್ಲಿ
ಇಂಬಾಗಿ ತತ್ತ್ವೇಶರೆಲ್ಲ ತುಂಬಿಹರು
ತಿಂಬುವುದು ಹ್ಯಾಂಗೆನುತ ವ್ಯಾಸರಾಯರ ಕೇಳೆ
ಕಂಬದಂತಾದರವರೆಲ್ಲ ಕುಳಿತವರು ॥೪॥

**ಮಾಣಿಕವು ಕೋಡಗನ ಕೈಯಲ್ಲಿ ಇದ್ದಂತೆ**
**ಕೋಣನಿದಿರಿಗೆ ಕಿನ್ನರಿಯ ಮೀಟಿದಂತೆ**
**ವೇಣುಧ್ವನಿ ಬಧಿರನ ಬಳಿ ಹೊರಡಿಸಿದಂತೆ ಕಣ್**
**ಕಾಣದವನಿಗೆ ಕನ್ನಡಿಯ ತೋರಿದಂತೆ ॥೫॥**

**ನೋಡಿದಿರ ಈ ಕನಕನಾಡುವ ಮಾತುಗಳ**
**ಮೂಢ ಜನರರಿಯಬಲ್ಲರೆ ಮಹಿಮೆಯ**
**ನಾಡಾಡಿಯಂತೆಯೆ ಮಾಡಿಬಿಟ್ಟರು ಇವಗೆ**
**ನಾಡೆಲ್ಲ ಹುಡುಕಿದರು ಈಡಾರ ಕಾಣೆ ॥೬॥**

**ಕರದಲಿ ಮೂರ್ತಿಯ ಪಿಡಿದು ಕೇಳುತ್ತಿರಲು**
**ಅರಿಯದಜ್ಞಾನದಲಿ ಪೇಳುತಿರಲು**
**ತ್ವರದಿ ಕನಕನು ಬಂದು ವಾಸುದೇವನ ರೂಪ**
**ಪರಬೊಮ್ಮ ಸಿರಿಯಾದಿಕೇಶವನೆಂದ ॥೭॥**

ಭಾವ– ಶ್ರೇಷ್ಠತೆಯ ಗರಬಡಿದ ಕೆಲ ಕರ್ಮಠ ಶಿಷ್ಯರು ಕನಕನನ್ನು ಕೀಳಾಗಿ ಕಂಡಾಗ ಗುರು ವ್ಯಾಸರಾಯರು ಅವರ ಮೌಢ್ಯವನ್ನು ಹೋಗಲಾಡಿಸಲು, ಕನಕದಾಸರ ಮಹಿಮೆಯನ್ನು ಸ್ಥಾಪಿಸಲು ನಡೆಸಿದ ಪರೀಕ್ಷಾ ಪ್ರಸಂಗವಿಲ್ಲಿ ಕಂಡರಣೆಗೊಂಡಿದೆ. 'ಇವಗೆ ನಾಡೆಲ್ಲ ಹುಡುಕಿದರು ಈಡಾರ ಕಾಣೆ' ಎಂಬ ಮುಕ್ತ ಪ್ರಶಂಸೆ ವ್ಯಾಸರಾಯರ ನಿಷ್ಕಲ್ಮಶ ವಿಶಾಲ ಹೃದಯವಂತಿಕೆಯ ಪ್ರತೀಕವಾಗಿದೆ.

ಅರ್ಥ– ಕದಳಿ ಫಲ = ಬಾಳೆಹಣ್ಣು
ಡಿಂಬ = ದೇಹ
ಶ್ರೋತೃ = ಕೇಳುಗ, ಆಲಿಸುವ ಕಿವಿ
ಇಂಬಾಗಿ = ವಿಶಾಲವಾಗಿ
ಕೋಡಗ = ಕೋತಿ
ವೇಣು = ಕೊಳಲು
ಬಧಿರ =ಕಿವುಡ



ನಾಡಾಡಿ = ಸಾಮಾನ್ಯ, ಪಾಮರ
ಈಡು = ಸಮಾನ
ತ್ವರದಿ =ಬೇಗ
ಪರಬೊಮ್ಮ = ಪರಬ್ರಹ್ಮ, ಪರಾತ್ಪರ ವಸ್ತು

* * * *

**Blank**



೩೫

## ಕಲ್ಯಾಣಿ – ಆದಿತಾಳ

ಈಶ ನಿನ್ನ ಚರಣ ಭಜನೆ ಆಶೆಯಿಂದ ಮಾಡುವೆನು
ದೋಷ ರಾಶಿ ನಾಶ ಮಾಡು ಶ್ರೀಶ ಕೇಶವ ॥ಪ॥

ಶರಣು ಹೊಕ್ಕೆನಯ್ಯ ಎನ್ನ ಮರಣ ಸಮಯದಲ್ಲಿ ನಿನ್ನ
ಚರಣ ಸ್ಮರಣೆ ಕರುಣಿಸಯ್ಯ ನಾರಾಯಣ ॥೧॥

ಶೋಧಿಸೆನ್ನ ಭವದ ಕಲುಷ ಬೋಧಿಸಯ್ಯ ಜ್ಞಾನವೆನಗೆ
ಬಾಧಿಸುವಾ ಯಮನ ಬಾಧೆ ಬಿಡಿಸು ಮಾಧವ ॥೨॥

ಹಿಂದನೇಕ ಯೋನಿಗಳಲಿ ಬಂದು ಬಂದು ನೊಂದೆ ನಾನು
ಇಂದು ಭವದ ಬಂಧ ಬಿಡಿಸು ತಂದೆ ಗೋವಿಂದನೆ ॥೩॥

ಭ್ರಷ್ಟನೆನಿಸ ಬೇಡ ಕೃಷ್ಣ ಇಷ್ಟು ಮಾತ್ರ ಬೇಡಿಕೊಂಬೆ
ಶಿಷ್ಟರೊಳಗೆ ಇಟ್ಟು ಕಷ್ಟ ಬಿಡಿಸು ವಿಷ್ಣುವೆ ॥೪॥

ಮೊದಲು ನಿನ್ನ ಪಾದ ಪೂಜೆ ಮುದದಿ ಗೈವೆನಯ್ಯ ನಾನು
ಹೃದಯದೊಳಗೆ ಒದಗಿಸಯ್ಯ ಮಧುಸೂದನ ॥೫॥

ಕವಿದುಕೊಂಡು ಇರುವ ಪಾಪ ಸವೆದು ಹೋಗುವಂತೆ ಮಾಡಿ
ಜವನ ಬಾಧೆಯನ್ನು ಬಿಡಿಸೊ ಘನ ತ್ರಿವಿಕ್ರಮ ॥೬॥

ಕಾಮಜನಕ ನಿನ್ನ ನಾಮ ಪ್ರೇಮದಿಂದ ಪಾಡುವಂಥ।
ನೇಮವೆನಗೆ ಪಾಲಿಸಯ್ಯ ಸ್ವಾಮಿ ವಾಮನ ॥೭॥

ಮದನನಯ್ಯ ನಿನ್ನ ಮಹಿಮೆ ವದನದಲ್ಲಿ ಇರುವ ಹಾಗೆ
ಹೃದಯದಲ್ಲಿ ಸದನ ಮಾಡು ಮುದದಿ ಶ್ರೀಧರ ॥೮॥

ಹುಸಿಯನಾಡಿ ಹೊಟ್ಟೆ ಹೊರೆವ ವಿಷಯದಲ್ಲಿ ರಸಿಕನೆಂದು
ಹುಸಿಗೆ ನನ್ನ ಹಾಕದಿರೋ ಹೃಷಿಕೇಶನೆ ॥೯॥

ಅಬ್ಧಿಯೊಳಗೆ ಬಿದ್ದು ನಾನು ಒದ್ದುಕೊಂಬೆನಯ್ಯ ಭವದಿ
ಗೆದ್ದು ಪೋಪ ಬುದ್ಧಿ ತೋರೊ ಪದ್ಮನಾಭನೆ ॥೧೦॥

ಕಾಮಕ್ರೋಧ ಬಿಡಿಸಿ ನಿನ್ನ ನಾಮ ಜಿಹ್ವೆಯೊಳಗೆ ನುಡಿಸು
ಶ್ರೀ ಮಹಾನುಭಾವನಾದ ದಾಮೋದರ ॥೧೧।

ಪಂಕಜಾಕ್ಷ ನೀನು ಎನ್ನ ಮಂಕುಬುದ್ಧಿ ಬಿಡಿಸಿ ನಿನ್ನ
ಕಿಂಕರನ್ನ ಮಾಡಿಕೊಳ್ಳೊ ಸಂಕರುಷಣ ॥೧೨॥

ಏಸು ಜನ್ಮ ಬಂದರೇನು ದಾಸನಲ್ಲವೇನೊ ನಿನ್ನ
ಘಾಸಿ ಮಾಡದಿರೋ ಎನ್ನ ವಾಸುದೇವನೆ ॥೧೩॥

ಬುದ್ಧಿ ಶೂನ್ಯನಾಗಿ ನಾನು ಕದ್ದ ಕಳ್ಳನಾದೆನಯ್ಯ
ತಿದ್ದಿ ಹೃದಯ ಶುದ್ಧಿ ಮಾಡೊ ಪ್ರದ್ಯುಮ್ನನೆ ॥೧೪॥

ಜನನಿ ಜನಕ ನೀನೆ ಎಂದು ಎನುವೆನಯ್ಯ ದೀನಬಂಧು
ಎನಗೆ ಮುಕ್ತಿ ಪಾಲಿಸಿಂದು ಅನಿರುದ್ಧನೆ ॥೧೫॥

ಹರುಷದಿಂದ ನಿನ್ನ ನಾಮ ಸ್ಮರಿಸುವಂತೆ ಮಾಡು ನೇಮ
ಇರಿಸು ಚರಣದಲ್ಲಿ ಕ್ಷೇಮ ಪುರುಷೋತ್ತಮ ॥೧೬॥

ಸಾಧು ಸಂಗ ಕೊಟ್ಟು ನಿನ್ನ ಪಾದಭಜಕನೆನಿಸು ಎನ್ನ
ಭೇದ ಮಾಡಿ ನೋಡದಿರೋ ಅಧೋಕ್ಷಜ ॥೧೭॥



ಚಾರುಚರಣ ತೋರಿ ಎನಗೆ ಪಾರುಗಾಣಿಸಯ್ಯ ಕೊನೆಗೆ
ಭಾರ ಹಾಕಿ ಇರುವೆ ನಿನಗೆ ನಾರಸಿಂಹನೆ ॥೧೮॥

ಸಂಚಿತಾರ್ಥ ಪಾಪಗಳನು ಕಿಂಚಿತಾದರುಳಿಯದಂತೆ
ಮುಂಚಿತಾಗಿ ಕಳೆದು ಪೊರೆಯೊ ಸ್ವಾಮಿ ಅಚ್ಯುತ ॥೧೯॥

ಜ್ಞಾನ ಭಕ್ತಿ ಕೊಟ್ಟು ನಿನ್ನ ಧ್ಯಾನದಲ್ಲಿ ಇಟ್ಟು ಎನ್ನ
ಹೀನ ಬುದ್ಧಿ ಬಿಡಿಸೊ ಮುನ್ನ ಜನಾರ್ದನ ॥೨೦॥

ಜಪತಪಾನುಷ್ಠಾನ ನೀನು ಒಪ್ಪುವಂತೆ ಮಾಡಲಿಲ್ಲ
ತಪ್ಪ ಕೋಟಿ ಕ್ಷಮಿಸಬೇಕು ಉಪೇಂದ್ರನೆ ॥೨೧॥

ಮೊರೆಯನಿಡುವೆನಯ್ಯ ನಿನಗೆ ಸೆರೆಯ ಬಿಡಿಸು ಭವದ ಎನಗೆ
ಇರಿಸು ಭಕ್ತರೊಳಗೆ ಪರಮ ಪುರುಷ ಶ್ರೀಹರೇ ॥೨೨॥

ಪುಟ್ಟಿಸಲೇ ಬೇಡವಿನ್ನು ಪುಟ್ಟಿಸಿದಕೆ ಪಾಲಿಸಿನ್ನು
ಇಷ್ಟು ಬೇಡಿಕೊಂಬೆ ನಾನು ಶ್ರೀ ಕೃಷ್ಣನೆ ॥೨೩॥

ಸತ್ಯವಾದ ನಾಮಗಳನು ನಿತ್ಯದಲ್ಲಿ ಪಠಿಸುವವರ
ಅರ್ತಿಯಿಂದ ಕಾಯದಿರನು ಕರ್ತೃ ಕೇಶವ ॥೨೪॥

ಮರೆತು ಬಿಡದೆ ಹರಿಯ ನಾಮ ಬರೆದು ಓದಿ ಕೇಳುವರಿಗೆ
ಕರೆದು ಮುಕ್ತಿ ಕೊಡುವ ಬಾಡದಾದಿಕೇಶವ ॥೨೫॥

ಭಾವ– ಶ್ರೀಹರಿಯ ಇಪ್ಪತ್ತನಾಲ್ಕು ನಾಮಗಳನ್ನು ಕುರಿತಂತೆ ರಚಿತವಾಗಿರುವ ಈ ಕೀರ್ತನೆ ತನ್ನ ಸರಳತೆಯಿಂದ ಸಹಜತೆಯಿಂದ ಓದುಗರ ಕೇಳುಗರ ಕಣ್ಣು ಕಿವಿ ಮನಗಳನ್ನು ಸೂಜಿಗಲ್ಲಂತೆ ಸೆಳೆದುಕೊಂಡುಬಿಡುತ್ತದೆ. ಕನಕದಾಸರ ಶುದ್ಧಾಂತಃಕರಣದಿಂದ ನಿರಾಭರಣ ಸುಂದರವಾಗಿ ಹೊರಹೊಮ್ಮಿರುವ, ಅನನ್ಯ ಆರ್ದ್ರ ಭಕ್ತಿ ಜಿನುಗುತ್ತಿರುವ ಈ ಪ್ರಾರ್ಥನಾ

ಕೀರ್ತನೆಯನ್ನು ನಿತ್ಯ ಪಾರಾಯಣ ಮಾಡುವ ಪಂಡಿತ ಪಾಮರರ ಹೃದಯಗಳಲ್ಲೂ ಆರ್ದ್ರ ಭಕ್ತಿ ಜಿನುಗದಿರದು; ತುಂಬಿ ತೊಟ್ಟಿಕ್ಕದಿರದು.

ಅರ್ಥ– ಭವ = ಜನ್ಮ
ಮದನ = ಮನ್ಮಥ
ಮುದ = ಸಂತೋಷ
ಅಬ್ಧಿ = ಸಮುದ್ರ
ಪಂಕಜಾಕ್ಷ = ಕಮಲದಂತಹ ಕಣ್ಣುಳ್ಳವನು (ವಿಷ್ಣು)
ಕಿಂಕರ = ಸೇವಕ
ಕಿಂಚಿತ್ =ಕೊಂಚ

* * * *



೩೬
## ಕಾಂಬೋದಿ – ಝಂಪೆ

ಚೆಲ್ವ ಕಂಗಳ ಚೆಲ್ವಕಾರ ನೋಡ ಬಂದೆ ನಿನ್ನ ಬಳಿ ಸಾರ ಬಂದೆ ॥ಪ॥
ಚಕ್ರಧರ ಧುರಧೀರ ನಾರಸಿಂಹ ನಾನು ಬಂದೆ ನಾನು ಬಂದೆ ॥ಅ॥

ಕಲ್ಲೊಳು ವಿಷಯ ಪುಟ್ಟಿಸಿದನಾ ಶುಭ
ವಲ್ಲದ ದಿವಸದೊಳಿರಾ ನೋಡಿ
ಇಲ್ಲದ ಬಯಲ ನಿಂದೆಯ ಪೊತ್ತು ಶುಕಾ
ಮಲ್ಲರೊಡನೆ ಕಾದಿ ಮಲೆತ ಸಾಲ್ವರ ಕೊಂದು
ಮಡದಿಗೆ ರತ್ನ ತಂದುದರಿಂದ ॥೧॥

ಮಡದಿಯ ಮನೆಯ ಅರ್ಭಕನಾಗಿ ಬಲು
ಗಡಿಯ ದಾನವನ ಕೊಂದನ ಸೂನು
ಬಡನಡುವಿನ ಠಾವಿಗೆ ಸಿಲ್ಕಿ ಸುಖ
ಪಡದಿರೆ ರಾಯನಾ ಹಿಡಿದು ತೋಳು ಕಟ್ಟಿದುದರಿಂದ ॥೨॥

ಮೂಲ ವೃಕ್ಷದಾಲಾರ ಮುಂದೆ ದಾನವರಿ
ರ್ದಾಲಯ ದಹಿಪನೆಂಬುದಯ್ಯನ
ಬಲಮಾಡಿ ಬಲಗೆ ಇಂದುರುಹಿದೆ ಕಾಗಿ
ನೆಲೆಯಾದಿ ಕೇಶವ ಖಳನ ಗರ್ಭವಿಚ್ಛನ್ನ
ಪ್ರಹ್ಲಾದಗೆ ಪ್ರಸನ್ನವಾದುದರಿಂದ ॥೩॥

* * * *

## ೩೭
## ಮುಖಾರಿ – ಅಟತಾಳ

ಬಾರೊ ಭಾಗ್ಯದ ನಿಧಿಯೆ, ದಯಾಂಬುಧಿಯೆ ॥ಪ॥
ಸಾರಿದವರ್ಗಿತ್ತೆ ಸುಧೆ
ವಾರಿಜಾರಿ ಕೌಮುದಿ
ವಾರಿಜಧರ ಮುದದಿ
ಸಾರಸ ಹೃದಯದಿ
ಕೇರಿಕೇರಿಯಲಿ ಶೃಂಗಾರದಿ ಮೆರೆವ ಅಪಾರ ದಯಾನಿಧಿ॥ಅ॥

ವಿಜಯ ನಿಮ್ಮಯ ಪಾದ ಭಜಕರಿಗೆ ಕೊಡಲಿ
ವಿಜಯ ದಶಮಿಯಲಿ ವಿಜಯ ರಥದಲ್ಲಿ ಕೂತು
ವಿಜಯಳ ಸಹಿತದಿ ವಿಜಯ ಮಾಡುತ ಬಾರೊ
ವಿಜಯ ಸಾರಥಿ ಆದಿ
ವಿಜಯ ರಥದ ಪರ ರವಿಜನ ನೀ ಸೋಲಿಸಿ
ತ್ರಿಜಗ ವಿಜಯ ವೇಷ ವಿಜಯಗಿತ್ತು ಮೆರೆದೆ
ವಿಜಯ ಮೂರುತಿಯೆ ॥೧॥

ದಶದಶನಂದ ಏಕಾದಶ ಚಂದ್ರಶೇಖರ ದ್ವಾ
ದಶಾದಿತ್ಯ ಮಾರುತರು ದಶ ವಿಶ್ವದೇವ ಯಾತ್ರಾ
ದಶನಾ ಏಕಾ ಸರ್ವದಾ
ದಶ ಋಷಿ ಮುನಿ ನೃಪ ದಶದಿಕ್ಕಿನ ಜನರು
ದಶಮಿ ಉತ್ಸವ ನೋಡಿ ದಶದಶದಲಿ ನಿಂದು
ದಶಮತಿ ವಂದಿತ ದಶಶಿರ ಸಂಹರ
ದಶರೂಪದಲಿ ಖಳ ದಶನ ಮೂರುತಿಯೆಂದು
ಹೆಸರು ಹೇಳುವರು ॥೨॥



ಪದುಮನಾಭ ಪದ್ಮೇಶ ಪದುಮಮಾಲಿ ಪದ್ಮಾಕ್ಷ
ಪದುಮ ಪಾಣಿ ಪದ್ಮಾಂಘ್ರಿ ಪದುಮಸಖ ತೇಜಿ
ಪದುಮಕಲ್ಪದಿ ನಾಭಿ ಪದುಮದಿ ಚತುರ್ಮುಖ
ಪದುಮಜನ ಪಡೆದು ಪದುಮಜಾಂಡವಡದಿ
ಪದುಮಪೀಠನ ಹೃತ್ಪದುಮದಿ ನಿನ್ನ
ಪದುಮ ತೋರುತ ಬಾರೊ ಕಾಗಿನೆಲೆಯಾದಿಕೇಶವ
ಹದುಳದಿಂದ ಬಾರೊ ಭಾಗ್ಯದ ನಿಧಿಯೆ ॥೩॥

ಭಾವ– ವಿಜಯ ದಶಮಿಯಂದು ಆದಿಕೇಶವನ ರಥಯಾತ್ರೆ ಅದ್ದೂರಿಯಾಗಿ ಕಾಗಿನೆಲೆಯಲ್ಲಿ ಜರುಗುತ್ತಿದ್ದುದರ ಹಿನ್ನೆಲೆಯಲ್ಲಿ ಈ ಕೀರ್ತನೆ ರಚನೆಯಾದಂತಿದೆ.

ಅರ್ಥ– ಅಂಬುಧಿ = ಸಮುದ್ರ
ವಾರಿಜಾರಿ = ಕಮಲದ ಶತ್ರು, ಚಂದ್ರ
ಕೌಮುದಿ = ಬೆಳುದಿಂಗಳು
ವಾರಿಜಧರ = ಕಮಲಧಾರಿ, ವಿಷ್ಣು
ಸಾರಸ = ಕಮಲ

೧. ವಿಜಯ ದಶಮಿ = ನವರಾತ್ರಿಯ ಕೊನೆಯ ದಿನ
ವಿಜಯಳ = ವಿಜಯ ಲಕ್ಷ್ಮಿಯ
ವಿಜಯ ಸಾರಥಿ = ಅರ್ಜುನನ ಬಂಡಿಬೋವ
ರವಿಜ = ಕರ್ಣ
ತ್ರಿಜಗ ವಿಜಯ ವೇಷ = ವಿಶ್ವರೂಪ ದರ್ಶನ
ವಿಜಯಗಿತ್ತು = ಅರ್ಜುನನಿಗೆ ದಯಪಾಲಿಸಿ

೨. ನಂದ = ಆನಂದ, ಸಂತೋಷ
ಏಕಾದಶ = ಹನ್ನೊಂದು, ಏಕಾದಶಿ
ಚಂದ್ರಶೇಖರ = ಶಿವ, ಚಂದ್ರಕ್ಕೆ ನವಿಲಗರಿಯ ಕಣ್ಣು ಎಂಬ ಅರ್ಥವಿರುವುದರಿಂದ ಕೃಷ್ಣ ಎಂದೂ ಆಗುತ್ತದೆ.

ದ್ವಾದಶಾದಿತ್ಯ = ಸೂರ್ಯನು ಚೈತ್ರಮಾಸದಲ್ಲಿ ಧಾತೃ ಎಂಬ, ವೈಶಾಖ ಮಾಸದಲ್ಲಿ ಆರ್ಯಮನೆಂಬ, ಜೇಷ್ಠ ಮಾಸದಲ್ಲಿ ಮಿತ್ರನೆಂಬ, ಆಷಾಢದಲ್ಲಿ ವರುಣನೆಂಬ, ಶ್ರಾವಣದಲ್ಲಿ ಇಂದ್ರನೆಂಬ, ಭಾದ್ರ ಪದದಲ್ಲಿ ವಿವಸ್ವಂತನೆಂಬ, ಆಶ್ವಯುಜದಲ್ಲಿ ತ್ವಷ್ಟನೆಂಬ, ಕಾರ್ತಿಕದಲ್ಲಿ ವಿಷ್ಣುವೆಂಬ, ಮಾರ್ಗಶೀರ್ಷದಲ್ಲಿ ಅಂಶುಮಂತನೆಂಬ ಪುಷ್ಯದಲ್ಲಿ ಭಗನೆಂಬ, ಮಾಘದಲ್ಲಿ ಪೂಷನೆಂಬ, ಫಾಲ್ಗುಣದಲ್ಲಿ ಪರ್ಜನ್ಯನೆಂಬ ಹೆಸರುಗಳಲ್ಲಿ ರುವನು.

ದಶನ = ಕಚ್ಚುವಿಕೆ, ಹಲ್ಲು.

ದಶಶಿರ = ರಾವಣ

೩. ಪದುಮ = ಕಮಲ

ಪದುಮನಾಭ = ಹೊಕ್ಕುಳಲ್ಲಿ ಪದ್ಮವುಳ್ಳ ವಿಷ್ಣು

ಪದ್ಮೇಶ = ಲಕ್ಷ್ಮಿಯ ಗಂಡ ವಿಷ್ಣು (ಪದ್ಮಾ = ಲಕ್ಷ್ಮಿ)

ಪದುಮಮಾಲಿ = ಪದ್ಮದ ಮಾಲೆಯನ್ನು ಧರಿಸಿದವನು (ವಿಷ್ಣು)

ಪದ್ಮಾಕ್ಷ = ಪದ್ಮದಂತೆ ಕಣ್ಣುಳ್ಳವನು

ಪದ್ಮಪಾಣಿ = ಕೈಯಲ್ಲಿ ಪದ್ಮ ಹಿಡಿದವನು

ಪದ್ಮಾಂಘ್ರಿ = ಪದ್ಮದಂತಹ ಪಾದವುಳ್ಳವನು

ಪದುಮಸಖ = ಸೂರ್ಯ

ತೇಜಿ = ಕುದುರೆ, ವೇಗ

ಪದುಮ ಕಲ್ಪದಿ = ಜಗತ್ತಿನ ಕೊನೆಗಾಲ, ಒಂದು ಕಾಲಾವಧಿ

ಪದುಮಜ = ಬ್ರಹ್ಮ

ಪದುಮಜಾಂಡ = ಬ್ರಹ್ಮಾಂಡ

ಹದುಳ = ಸಂತೋಷ

* * * *



## ೩೮
## ಶಂಕರಾಭರಣ – ಅಟತಾಳ

ಕೈಯ ತೋರಿದ ಬಗೆಯ, ಅಮ್ಮಮ್ಮ ಯಾದವಗಿರಿ ಕಲ್ಯಾಣಿ ನೀನು ॥ಪ॥

ಸಕಲ ಜನರು ಕಾಣುತಿರಲು
ವಿಕೃತಿ ವತ್ಸರ ಚೈತ್ರ ದ್ವಿತೀಯೇಕಾದಶಿಯೊಳು
ಪ್ರಕಟಿತಾ ಶುಕ್ರವಾರದೊಳು ತನ್ನ
ಭಕುತರಿಗುತ್ಸಾಹ ಸಂಧ್ಯಕಾಲದೊಳು ॥೧॥

ಕಡಗ ಕಂಕಣ ಗೀರುಗಂಧ ಮಿಗೆ
ಕಡು ಚೆಲುವಿನ ಬಣ್ಣ ಕುಪ್ಪುಸದಿಂದ
ನಡು ಬೆರಳುಂಗುರದಿಂದ ಕೈಯ
ಬೆಡಗ ನೋಡಿದ ಜನರಿಗೆ ಪುಟ್ಟಿತಾನಂದ ॥೨॥

ಜನರೆಲ್ಲ ಯದುಶೈಲೋತ್ಸವವ ಕೇಳಿ
ಘನ ಕಾಲದೇಶದಜಿತ ಭಯವ
ನಿಮಗೆ ಬಿನ್ನೈಪೆನು ನಯವ ಕೊಟ್ಟ
ಮನೋಹರುಷದಿ ನಮಗಿತ್ತ ವೈಭವವ ॥೩॥

ಚೆಲುವರಾಯನ ರಥೋತ್ಸವದೀ ತೀರ್ಥ
ಕೊಲಿದು ಗಂಗಾದೇವಿ ಬರುವ ಸಂಭ್ರಮವ
ನೆಲೆಯ ಸರ್ವರಿಗನುಭವವ ಕೋಟಿ
ಮನೋಹರುಷವನ್ನು ನಮಗಿತ್ತ ವೈಭವವ ॥೪॥

ನಿನ್ನ ಮೋಹದ ಕಂದ ನಾನೊ ಕೇಳೆ
ನಿನ್ನೊಮ್ಮೆ ದಿವ್ಯ ಹಸ್ತಂಜವನೀವ

**ಚೆನ್ನಿಗ ವರದ ವೆಂಕಟಾದಿಕೇಶವನು**
**ತನ್ನ ನಂಬಿದ ಭಕ್ತರಾಶ್ರಿತ ಕಾಮಧೇನು ॥೫॥**

ಭಾವ– ಯದುಗಿರಿಯ ಚೆಲುವರಾಯನ ಉತ್ಸವ ಕಣ್ಮನಗಳಿಗೆ ನೀಡಿದ ಹರುಷ ಕೀರ್ತನೆಯ ಭಾವ.

ಅರ್ಥ– ವಿಕೃತಿ... ಶುಕ್ರವಾರದೊಳು = ಮಾರ್ಚ್ ೨೫, ಶುಕ್ರವಾರ, ಕ್ರಿ.ಶ. ೧೫೩೦
ಜವ = ವೇಗ,
ಈವ = ಕೊಡುವ

* * * *



## ೩೯
## ರಾಗ? – ತಾಳ?

**ನಿನ್ನ ನಾಮ ವಾಲ್ಮೀಕಿಯನುದ್ಧರಿಸಿದೆ ದೇವ**
**ನಿನ್ನ ನಾಮ ಘಂಟಾಕರ್ಣನ ಸಲಹಿದೆ ದೇವ**
**ನನ್ನನೀಗ ಉದ್ಧರಿಸು ರಂಗಧಾಮ ॥ಪ॥**

**ತಂದೆಯ ಮುಂದೆ ಮಗನನು ಬೈದು ಭಂಜಿಸಲು**
**ತಂದೆಯ ಮುಂದೆ ಪತ್ನಿಯ ಪಿಡಿದೆಳೆದು ಅಂಜಿಸಲು**
**ಕುಂದು ಗಂಡಗಲ್ಲದೆ ಹೆಂಡತಿಗುಂಟೆ**
**ನಿಂದನೆ ಎಲೆ ದೇವ ॥೧॥**

**ದೊರೆ ನೋಡುತ್ತಿದ್ದಂತೆ ಬಂಟನನು**
**ಪರರು ಕೊಂಡೊಯ್ಯಲು ಕುಂದು**
**ಅರಸಗಲ್ಲದೆ ಆಳಿಗೇನು**
**ಅರಿಯಂತೆ ಬಂದೆನ್ನ ನಡವಳಿಯಲಿ ಸ್ವಾನ**
**ದುರಿತಂಗಳೆಲ್ಲ ಕಾಡುತಿವೆ**
**ಪರಿಹರಿಸು ಎಲೆ ದೇವ ॥೨॥**

**ಊದುವ ಕಾಳೆಯದನರ್ಥಕ**
**ವಾದಲ್ಲಿ ನುಡಿಸುವ ಬಿರುದು ಒಡೆಯಂಗಲ್ಲದೆ**
**ಮಾಧವನೆ ಎನ್ನ ನಡವಳಿಯಲ್ಲಿ ಹುರುಳಿಲ್ಲ**
**ಓದುವುದು ನಿನ್ನ ನಾಮಸ್ಮರಣೆಯೆ ಎಲೆ ದೇವ**
**ಆದರಿಸು ನಿನ್ನ ಲೆಂಕನ ಪ್ರತಿ ಲೆಂಕನ**
**ಭೇದವೇತಕೆ ನಿನ್ನ ದಾಸ ನಾನು ಬಾಡ**
**ದಾದಿ ಪ್ರಸನ್ನ ಕೇಶವನೆ ಎನ**
**ಗಾದ ದುರ್ಮತಿಯ ಪರಿಹರಿಸು ಎಲೆ ದೇವ ॥೩॥**

ಭಾವ– ಹರಿನಾಮ ಮಹಿಮೆ ಹಿಂದೆ ಅನೇಕರನ್ನು ಉದ್ಧರಿಸಿದ ಹಾಗೆ ಇಂದು ನನ್ನನ್ನೂ ಉದ್ಧರಿಸುವಂತಾಗಲಿ ಎಂಬ ಆಶಯವನ್ನು ಕನಕದಾಸರು ಈ ಕೀರ್ತನೆಯಲ್ಲಿ ಕಂಡರಿಸಿದ್ದಾರೆ.

ಅರ್ಥ– ೧. ಭಂಜಿಸಲು = ಅವಮಾನ ಮಾಡಲು, ಕಡೆಗಣಿಸಲು
ಅಂಜಿಸಲು = ಹೆದರಿಸಲು

೨. ಬಂಟ = ಸೇವಕ
ಅರಿಯಂತೆ = ಶತ್ರುವಿನಂತೆ
ಸ್ವಾನ (<ಶ್ವಾನ) = ನಾಯಿ
ದುರಿತ = ಪಾಪ

೩. ಕಾಳೆ = ಕಹಳೆ
ಅನರ್ಥಕ = ಅರ್ಥಹೀನ, ಅಪ್ರಯೋಜಕ
ಆದರಿಸು = ಪ್ರೀತಿಸು, ಸತ್ಕರಿಸು
ಲೆಂಕ = ಗುಮಾಸ್ತ, ಸೇವಕ

* * * *



## ೪೦
## ರಾಗ? – ತಾಳ?

ಬಂಧುಗಳದಾರಿಗಾರಿದ್ದರೇನು– ಇಷ್ಟ
ಬಂಧು ತ್ರೈಜಗಕೆ ಶ್ರೀ ಹರಿಯಲ್ಲದೆ– ಮಿಕ್ಕ
ಬಂಧುಗಳದಾರಿಗಾರಿದ್ದರೇನು ॥ಪ॥

ನೆಗಳ ಕೈಯಲ್ಲಿ ಮಾತಂಗವು ಸಿಕ್ಕಿ ಒದರಲಾಗಿ– ಆ
ನೆಗಳೇನ ಮಾಡುತಿರ್ದವಡವಿಯಲ್ಲಿ
ನಗಜೆಯಾಳ್ದನ ಬ್ರಹ್ಮೇತಿ ಬಂದು ಕಾಡಲಾಗಿ ರುದ್ರಾ
ದಿಗಳೇನ ಮಾಡುತಿರ್ದರಾ ಶೈಲದೊಳಗೆ ॥೧॥

ದಿಂಡೆಯ ಮಾರ್ಗದಿ ಮಲತಾಯಿ ಮಗನ ಹೊಡೆಯಲು
ಮಂಡಲ ಪತಿ ಏನ ಮಾಡುತಿರ್ದನು
ಮಿಂಡಿ ಪೆಣ್ಣನು ಸಭೆಯಲ್ಲಿ ಸೀರೆ ಸುಲಿಯಲು
ಗಂಡರೈವರು ನೋಡಿ ಏನ ಮಾಡುತಿರ್ದರಯ್ಯ ॥೨॥

ಮೃಗ ಚಕ್ರವರ್ತಿ ಬಹುವರನಾಗಿ ಪೋಗುತ್ತಿರೆ
ಮಿಗೆ ಸತಿಸುತರೇನ ಮಾಡುತಿರ್ದರು
ಮೃಗ ಮಾನವಾಕಾರ ಕಾಗಿನೆಲೆಯಾದಿಕೇಶವನಲ್ಲದೆ
ಮಿಗು ಬಂಧುಗಳದಾರಿಗಾರಿದ್ದರೇನು ॥೩॥

ಭಾವ– ಸರ್ವರಕ್ಷಕನಾದ ಭಗವಂತನೊಬ್ಬನನ್ನು ಬಿಟ್ಟು ಬೇರೆ ಬಂಧುಗಳು ಆಪತ್ಕಾಲದಲ್ಲಿ ಆಗುವುದಿಲ್ಲ ಎಂಬ ಆಶಯವನ್ನೊಳಗೊಂಡಿದೆ. ಈ ಕೀರ್ತನೆ.

ಅರ್ಥ– ೧. ನೆಗಳು = ಮೊಸಳೆ

ಮಾತಂಗ = ಆನೆ
ಒದರಲಾಗಿ = ಚೀರಿಕೊಳ್ಳಲಾಗಿ
ನಗಜೆ = ಪಾರ್ವತಿ
ನಗಜೆಯಾಳ್ದನ = ಶಿವನ
ಬ್ರಹ್ಮೇತಿ = ಬ್ರಹ್ಮಕಪಾಲ ಕೈಗಂಟಿಕೊಂಡು ಕಾಟ ಕೊಟ್ಟ ಕಥಾಸಂದರ್ಭ
ಶೈಲ = ಬೆಟ್ಟ

೨. ದಿಂಡೆ = ದುಷ್ಟೆ, ನೀಚಳು
ಮಂಡಲ ಪತಿ = ರಾಜ
ಮಿಂಡಿ = ಪ್ರಾಯದ ಹೆಣ್ಣು

೩. ಮೃಗ ಚಕ್ರವರ್ತಿ = ಸಿಂಹ
ಮೃಗ ಮಾನವಾಕಾರ = ನರಸಿಂಹ
ಮಿಗು (<ಮಿಕ್ಕ) = ಉಳಿದ

* * * *



## ೪೧
## ಧನ್ಯಾಸಿ – ಝಂಪೆ

ಛೀ ನಿನ್ನ ಮೋರೆ ಮೇಲೆ– ಠೊಣ್ಯ
ಛೀ ನಿನ್ನ ಮೋರೆ ಮೇಲೆ ॥ಪ॥

ಹೊತ್ತರೆದ್ದು ಮುಖ ತೊಳೆದು ಮನೆಮನೆ ಪೋಕರಿ ಅಲೆಯುತಿದ್ದೆ
ವಿತ್ತ ಮದದಿ ಪರಸ್ತ್ರೀಯರ ಕಂಡು ಅರ್ತಿಬಡುತಲಿದ್ದೆ
ಲೆತ್ತ ಪಗಡೆ ಚದುರಂಗ ಆಟದಲ್ಲೆ ಹೊತ್ತು ಕಳೆಯುತಿದ್ದೆ
ನಿತ್ಯನಿತ್ಯ ಈ ಪರಿ ಆಯುಷ್ಯವ ವ್ಯರ್ಥ ಕಳೆಯುತಿದ್ದೆ ಠೊಣ್ಯ ॥೧॥

ಕಂಡಕಂಡಲ್ಲಿಗೆ ಪೋಗಿ ಧನಂಗಳ ಕೊಂಡು ಬರುತ್ತಲಿದ್ದೆ
ಹೆಂಡಿರು ಮಕ್ಕಳು ಹಿತದವರೆಂದು ಕೊಂಡಾಡುತಲಿದ್ದೆ
ಖೋಡಿ ಮಾತುಗಳನು ಹೇಳಿ ಮಂದಿಯ ಕುಂಡೆ ಚಿವುಟುತಿದ್ದೆ
ಭಂಡ ಬಾಳು ಇದು ರಂಡೆ ಗಂಡ ಕಂಡ್ಯ ಯಮನ ಬಾಧೆ ಠೊಣ್ಯ ॥೨॥

ಮಾನವ ಜನ್ಮಕೆ ಬಂದು ಪುಣ್ಯ ಮತ್ತೇನೂ ಮಾಡದೆ ಹೋದೆ
ದಾನವಾಂತ ಸತ್ಪಾತ್ರರಿಗೆ ನೀ ದೀನತ್ವವ ಪಡೆದೆ
ಜ್ಞಾನಶೂನ್ಯ ಮದವೇರಿದ ಸೊಕ್ಕಿದ ಕೋಣಕೆ ಹುಟ್ಟಿದ್ದೆ
ದೀನ ರಕ್ಷಕಾದಿಕೇಶವ ವಿಠಲಂಗೆ ನೀನತಿ ದೂರಾದೆ ಠೊಣ್ಯ ॥೩॥

ಭಾವ– ಉಂಡಾಡಿಗುಂಡನೊಬ್ಬನ ವ್ಯರ್ಥ ಜೀವನವನ್ನು ರೋಡಾಡುವ ಭಾವವಿಲ್ಲಿ ಕಂಡು ಬರುತ್ತದೆ.

ಅರ್ಥ– ಠೊಣ್ಯ (<ಠೊಣೆಯ) = ಧಡಿಯ
೧. ಹೊತ್ತರೆ = ಬೆಳಗ್ಗೆ, ಪೋಕರಿ = ಪೋಲಿ

ವಿತ್ತ = ಐಶ್ವರ್ಯ,
ಅರ್ತಿ = ಆಸೆ
೨. ಖೋಡಿ = ಕೀಳು, ಕುಲ್ಲಕ
ಕುಂಡೆ = ಕುಂಡಿ, ನಿತಂಬ
೩. ದಾನವಾಂತ = ದಾನಪಡೆದ
ಸೊಕ್ಕಿದ = ಮದಿಸಿದ

* * * *



## ೪೨
## ಪಂತುವರಾಳಿ –

ನಾನೇನು ಬಲ್ಲೆ ನಿಮ್ಮ ನಾಮದ ಸ್ಮರಣೆಯನು
ಏನೆಂದು ಸ್ತುತಿ ಮಾಡಲರಿಯೆ ॥ಪ॥

ಹರಿಮುಕುಂದನು ನೀನು ನರಜನ್ಮ ಹುಳು ನಾನು
ಪರಮ ಪುರುಷನು ನೀನು ಪಾಪಿ ನಾನು
ಗರುಡ ಗಮನನು ನೀನು ದುರುಳ ಕರ್ಮಿಯು ನಾನು
ಪರಂಜ್ಯೋತಿಯು ನೀನು ಪಾಮರನು ನಾನು ॥೧॥

ಅಣುರೇಣು ತೃಣ ಕಾಷ್ಠ ಪರಿಪೂರ್ಣನು ನೀನು
ಕ್ಷಣಕ್ಷಣಕೆ ಅವಗುಣದ ಕರ್ಮಿ ನಾನು
ವನಜಸಂಭವನಯ್ಯ ವೈಕುಂಠಪತಿ ನೀನು
ತನುವು ಸ್ಥಿರವಲ್ಲದ ನರಬೊಂಬೆ ನಾನು ॥೨॥

ಕಂಬದಲಿ ಬಂದಂಥ ಆನಂದ ಪತಿ ನೀನು
ನಂಬಿಗಿಲ್ಲದ ನಿರ್ಜೀವಿ ನಾನು
ಅಂಬರೀಷಗೆ ಒಲಿದ ದುರಿತ ದೂರನು ನೀನು
ಡಂಬಕದ ಮಾಯಾ ಶರೀರಿ ನಾನು ॥೩॥

ವಾರಿಧಿಶಯನ ಭೂರಿ ಕಾರುಣ್ಯಪತಿ ನೀನು
ಘೋರತರ ಕಾಮ ಕ್ರೋಧಿಯು ನಾನು
ಈರೇಳು ಲೋಕವನು ಪೊಡೆಯಲಿಟ್ಟವ ನೀನು
ಸಾರಿ ಭಜಿಸದ ದುಷ್ಟ ಕರ್ಮಿ ನಾನು ॥೪॥

**ತಿರುಪತಿಯೊಳು ನೆಲಸಿದ ವೆಂಕಟೇಶನು ನೀನು**
**ಚರಣಕೆರಗುವ ಕನಕದಾಸನು ನಾನು**
**ಬಿರುದುಳ್ಳ ದೊರೆ ನೀನು ಮೊರೆಹೊಕ್ಕೆನಯ್ಯ ನಾನು**
**ಮರಣ ಕಾಲಕೆ ಬಂದು ಕಾಯೊ ಹರಿಯೆ ॥೫॥**

ಭಾವ– ತನ್ನ ಮಿತಿಯೊಂದಿಗೆ ಭಗವಂತನ ಮಹತಿಯನ್ನು ಸಂಲಗ್ನಗೊಳಿಸಿರುವ ಸುಂದರ ಕೀರ್ತನೆ ಇದು.

ಅರ್ಥ ೧. ಪಾಮರ = ಸಾಮಾನ್ಯ, ಅಜ್ಞ
೨. ವನಜಸಂಭವನಯ್ಯ = ಬ್ರಹ್ಮನ ತಂದೆ
೩. ದುರಿತ = ಪಾಪ
ಡಂಬಕದ = ಡಂಭಾಚಾರದ
೪. ವಾರಿಧಿ ಶಯನ = ನೀರ ಮೇಲೆ ಮಲಗುವವನು (ವಿಷ್ಣು)
ಭೂರಿ = ಅಧಿಕ
ಈರೇಳು = ಹದಿನಾಲ್ಕು
ಪೊಡೆ = ಹೊಟ್ಟೆ

* * * *



೪೩
# ಕಾಂಬೋದಿ – ಝಂಪೆ

**ಆರು ಹಿತವರು ಎಂದು ನಂಬಬೇಡ ॥ಪ॥**
**ಅರಿಗಾರಿಲ್ಲ ಆಪತ್ತು ಬಂದೊದಗಿದಡೆ ॥ಅ॥**

**ಜನಕ ಹಿತದವನೆಂದು ನಂಬಬಹುದೇ ಹಿಂದೆ**
**ತನಯ ಪ್ರಹ್ಲಾದನಿಗೆ ಪಿತ ಮುನಿದನು**
**ಜನನಿ ರಕ್ಷಿಪಳೆಂಬೆನೇ ತಿಳಿತಿಳಿದು ಕುಂತಿ**
**ತನಯ ರಾಧೇಯನಿಗೆ ಎರಡೆಣಿಸಿದ ಮೇಲೆ ॥೧॥**

**ಮಗನು ತೆತ್ತಿಗನೆನಲೆ ಕಂಸ ತನ್ನಯ ಪಿತನ**
**ನಿಗಳ ಬಂದನದಿಂದ ಬಂಧಿಸಿದನು**
**ಜಗವರಿಯೆ ಸೋದರನು ಮಮತೆಯುಳ್ಳವನೆನಲೆ**
**ಹಗೆವೆರಸಿ ವಾಲಿಯನು ಅನುಜ ಕೊಲಿಸಿದ ಮೇಲೆ ॥೨॥**

**ತನಗೆ ದೇಹಾನುಬಂಧಿಗಳೆ ಬಂಧುಗಳೆಂದು**
**ಮನದಿ ನಿಚ್ಚಳವಾಗಿ ನಂಬಬೇಡ**
**ಘನ ಕೃಪಾನಿಧಿ ಕಾಗಿನೆಲೆಯಾದಿಕೇಶವನ**
**ಅನುದಿನದಿ ನಂಬಿದವಗಿಹಪರದಿ ಸುಖವು ॥೩॥**

ಭಾವ– ಕಷ್ಟಕಾಲಕ್ಕಾಗುವವನು ಇಷ್ಟದೈವನೊಬ್ಬನೆ ಎಂಬ ಅಚಲನಂಬಿಕೆ ಈ ಕೀರ್ತನೆಯ ಆಶಯ

ಅರ್ಥ– ೧. ರಾಧೇಯ = ಕರ್ಣ
೨. ತೆತ್ತಿಗ = ಸೇವಕ

ನಿಗಳ = ಸಂಕೋಲೆ
ಹಗೆವೆರಸಿ = ಶತ್ರುವಿನೊಡನೆ
ಅನುಜ = ತಮ್ಮ (ಸುಗ್ರೀವ)
೩. ನಿಚ್ಚಳ = ಸ್ಪಷ್ಟ, ಖಚಿತ

* * * *



## ೪೪
## ಮುಖಾರಿ – ಝಂಪೆ

ಆರು ಸಂಗಡ ಬಾಹೋರಿಲ್ಲ ||ಪ||
ನಾರಾಯಣ ನಾಮ ನೆರೆ ಬಾಹೋದಲ್ಲದೆ ||ಅ||

ಹೊತ್ತು ನವಮಾಸ ಪರಿಯಂತ ಗರ್ಭದಲಿ
ಹೆತ್ತು ಅತ್ಯಂತ ನೋವು ಬೇನೆಗಳಿಂದಲಿ
ತುತ್ತು ವಸ್ತ್ರವನಿಕ್ಕಿ ಸಲಹಿದಾ ತಾಯ್ತಂದೆ
ಹೊತ್ತುಗಳೆವರಲ್ಲದೆ ಬೆನ್‌ಹತ್ತಿ ಬಹರೆ

ಗುರು ಬಂಧು ಬುಧ ಜನರು ನಿಂತಗ್ನಿ ಸಾಕ್ಷ್ಯಾಗಿ
ಕರವಿಡಿದು ಧಾರೆಯನೆರೆಸಿಕೊಂಡ
ತರುಣಿ ಇನಿಯನ ಹರಣ ಹೋಗಲು ತಾ ಕಂಡು
ಬರುವುದಕಂಜಿ ದಾರು ಗತಿಯೆಂದಳುವಳು ||೨||

ಮನೆ ಮಕ್ಕಳು ತಮ್ಮ ಧನಕೆ ಬಡಿದಾಡುವರು
ಧನಕಾಗಿ ನಿನ್ನನೆ ನಂಬಿದವರು
ಅನುಮಾನವೇಕೆ ಜೀವನು ತೊಲಗಿದಾಕ್ಷಣದಿ
ಇನ್ನೊಂದು ಅರಗಳಿಗೆ ನಿಲ್ಲಗೊಡರು ||೩||

ಸುತ್ತಲು ಕುಳ್ಳಿರ್ದ ಮಿತ್ರ ಬಾಂಧವರೆಲ್ಲ
ಹೊತ್ತು ಹೋದೀತು ಹೊರಗೆ ಹಾಕೆನುವರು
ಹಿತ್ತಲಾ ಕಸಕಿಂತ ಅತ್ತತ್ತ ಈ ದೇಹ
ಹೊತ್ತುಕೊಂಡೊಯ್ದು ಅಗ್ನಿಯಲಿ ಬಿಸುಡುವರು ||೪||

**ಹರಣ ಹಿಂಗದ ಮುನ್ನ ಹರಿಯ ಸೇವೆಯ ಮಾಡಿ**
**ಪರಗತಿಗೆ ಸಾಧನವ ಮಾಡಿಕೊಳ್ಳೊ**
**ಕರುಣನಿಧಿ ಕಾಗಿನೆಲೆಯಾದಿಕೇಶವರಾಯನ**
**ನಿರುತದಲಿ ನೆನೆನೆನೆದು ಸುಖಿಯಾಗೊ ಮನುಜ ॥೫॥**

ಭಾವ– ಭಗವನ್ನಾಮಸ್ಮರಣೆಯೊಂದೇ ಪರಗತಿಗೆ ಸಾಧನ ಎಂಬ ನಿಲುವಿದೆ ಈ ಕೀರ್ತನೆಯಲ್ಲಿ.

ಅರ್ಥ– ಬುಧ = ವಿದ್ವಾಂಸ
ಹರಣ = ಪ್ರಾಣ
ಅತ್ತತ್ತ = ಇನ್ನೂ ಕಡೆ, ಕೊನೆಯ ಕೊನೆ
ದಾರು (<ಅದಾರು<ಅದು+ಯಾರು) = ಅದು ಯಾರು

* * * *



## ೪೫
## ಮೋಹನ –

**ಸಾಕು ಸಾಕಿನ್ನು ಸಂಸಾರ ಸುಖವು ॥ಪ॥**
**ಶ್ರೀಕಾಂತ ನೀನೊಲಿದು ಕರುಣಿಸೈ ಹರಿಯೆ ॥ಅ॥**

**ಉದಿಸಿದುವು ಪಂಚಭೂತಗಳಿಂದ ಓಷದಿಗಳು**
**ಉದಿಸಿದುದು ಓಷದಿಗಳಿಂದನ್ನವು**
**ಉದಿಸಿದುವು ಅನ್ನದಿಂ ಶುಕ್ಲ ಶೋಣಿತವೆರಡು**
**ಉದಿಸಿದುವು ಸ್ತ್ರೀ ಪುರುಷರಲ್ಲಿ ಹರಿಯೆ ॥೧॥**

**ಸತಿಪುರುಷರೊಂದಾಗಿ ರತಿಕ್ರೀಡೆಗಳ ಮಾಡೆ**
**ಪತನವಾದಿಂದ್ರಿಯವು ಹೊಲೆರುಧಿರವು**
**ಸತಿಯ ಉದರದೊಳೆರಡು ಏಕತ್ರ ಸಂಧಿಸುತ**
**ಪುತಪುತನೆ ಮಾಸ ಪರಿಯಂತ ಹರಿಯೆ ॥೨॥**

**ಮಾಸವೆರಡರಲಿ ಶಿರ ಮಾಸ ಮೂರರಲಿ ಅಂಗ**
**ಮಾಸ ನಾಲ್ಕರಲಿ ಚರ್ಮದ ಹೊದಿಕೆ**
**ಮಾಸ ಐದಾರರಲಿ ನಖ ರೋಮ ನವರಂಧ್ರ**
**ಮಾಸ ಏಳರಲಿ ಧಾತು ಹಸಿವು ತೃಷೆಯು ॥೩॥**

**ತಿಂಗಳೆಂಟರಲಿ ಪೂರ್ವಾನುಭವ ಕರ್ಮಗಳ**
**ಗುಂಗಿನಲಿ ನಾನಿಂತು ಭವಭವದೊಳು**
**ಅಂಗನೆಯರುದರದಲಿ ಮತ್ತೆಮತ್ತೆ ಬಂದು**
**ಭಂಗಪಡೆನೆಂದು ಧ್ಯಾನಿಸುತ ದಿನಗಳೆದೆ ॥೪॥**

ಇನಿತು ಗರ್ಭದೊಳು ನವ ಮಾಸ ಪರಿಯಂತರದಿ
ತನು ಸಿಲುಕಿ ನರಕದಲಿ ಆಯಾಸಗೊಂಡು
ಘನ ಮರುತ ಯೋಗದಿಂ ನರಳುತಿಲ್ಲಿಗೆ ಬಂದು
ಜನಿಸುವಲ್ಲಿ ಮೃತಭಾವದಿಂದ ನೊಂದೆನೈ ಹರಿಯೆ ॥೫॥

ಧರೆಯ ಮೇಲುದಿಸಿ ಬಹು ವಿಷ್ಣು ಮಾಯಕೆ ಸಿಲುಕಿ
ಪರವಶದೊಳಿರಲು ನೀರಡಿಕೆಯಾಗಿ
ಹೊರಳಿ ಗೋಳಿಡುತ ಕಣ್ದೆರೆದು ಹರಿಯನು ಮರೆವ
ದುರಿತ ರೂಪದ ತನುವ ಧರಿಸಲಾರೆ ॥೬॥

ಶಿಶುತನದೊಳಗೆ ಸೊಳ್ಳೆ ನೊಣ ಮುಸುಕಿ ಅತ್ತಾಗ
ಹಸಿದನಿವನೆಂದೆ ಹಾಲನೆ ಎರೆವರು
ಹಸಿವು ತೃಷೆಯಿಂದಳಲು ಹಾಡಿ ತೂಗುವರಾಗ
ಪಶುತೆರದಿ ಶಿಶುತನದೊಳಿರಲಾರೆ ಹರಿಯೆ ॥೭॥

ನಡೆಯಲರಿಯದ ದುಃಖ ಮನಸಿನಲಿ ಬಯಸಿದುದ
ನುಡಿಯಲರಿಯದ ದುಃಖ ವಿಷಯದಿಂದ
ಅಡಿಯಡುತ ಮೆಲ್ಲನೇಳುತ ಬೀಳುತಲಿ ತೊದಲು
ನುಡಿವ ಬಾಲ್ಯದೊಳಿರಲಾರೆ ಹರಿಯೆ ॥೮॥

ಬಾಲ್ಯದೊಳು ಕೆಲವು ದಿನ ಬರಿದೆ ಹೋಯಿತು ಹೊತ್ತು
ಗೋಳಿಡುತ ವಿದ್ಯೆ ಕರ್ಮಗಳ ಕಲಿತು
ಮೇಲೆ ಯೌವನದ ಉಬ್ಬಿನೊಳು ಮದುವೆಯಾಗಿ
ಬಾಲೆಯರ ಬಯಸಿ ಮರುಳಾದೆ ಹರಿಯೆ ॥೯॥

ಜ್ವರದ ಮೇಲತಿಸಾರ ಬಂದವೊಲು ಯೌವನದಿ
ತರುಣಿಯೊಡನಾಟ ಕೂಟದ ವಿಷಯದಿ
ತರುಣಿ ಸುತರ್ಗನ್ನ ವಸ್ತ್ರಾಭರಣವೆನುತ
ಪರರ ಸೇವೆಯಲಿ ಘಾಡ ನೊಂದೆ ಹರಿಯೆ ॥೧೦॥



ನೆತ್ತರು ತೊಗಲು ಮೂಳೆ ಮಜ್ಜೆ ಮಾಂಸದ ಹುತ್ತು
ಜೊತೆಗಿಂದ್ರಿಯಗಳ ರೋಗ ರುಜಿನದಲಿ
ಮತ್ತೆ ಕಾಲನ ಬಾಯ ತುತ್ತಾಗುವ ಕರ್ಮದ
ಕತ್ತಲೆಯೊಳೀ ದೇಹ ಕರಡಾಯಿತು ॥೧೧॥

ದಿಟ್ಟತನದಲಿ ಗಳಿಸಿ ತರುವಾಗ ಸತಿಸುತರು
ಕಟ್ಟೆ ಕಾದಿಹರು, ಮುಪ್ಪಡಸಿದಾಗ
ತಟ್ಟನೆ ಬಲು ಕೆಟ್ಟ ನುಡಿಗಳಲಿ ಬೈಯುತ್ತ
ಕಟ್ಟಕಡೆಗೆ ಕಣ್ಣೆತ್ತಿ ನೋಡರೈ ಹರಿಯೆ ॥೧೨॥

ಕಟ್ಟುನಿಟ್ಟಿನ ಭಾರಿ ಮೂಗುಬ್ಬಸದಿ ನೊಂದು
ಕಟ್ಟಳೆಯ ದಿನತುಂಬಿ ಮೃತವಾಗಲು
ಕುಟ್ಟಿಕೊಂಡಳಲುತ್ತ ಹೋಯೆಂದು ಬಂಧುಗಳು
ಮುಟ್ಟರು ಹೆಣನೆಂದು ದೂರವಿಹರು ॥೧೩॥

ಸತ್ತ ಹೆಣಕಳಲೇಕೆ ಎಂದು ನಂಟರು ಸುಯ್ದು
ಹೊತ್ತು ಹೋಯಿತೆನ್ನುತ ಕಸಕೆ ಕಡೆಯಾಗಿ
ಹೊತ್ತುಕೊಂಡಗ್ನಿಯಲಿ ತನುವನಿದ ಬಿಸುಡುವರು
ಮತ್ತೆ ಬುವಿಯಲಿ ಜನಿಸಲಾರೆ ಹರಿಯೆ ॥೧೪॥

ಇನ್ನು ಈ ಪರಿಪರಿಯ ಯೋನಿ ಮುಖದಲಿ ಬಂದು
ಬನ್ನವನು ಪಡಲಾರೆ ಭವಭವದೊಳು
ಜನನ ಮರಣಾದಿ ಸರ್ವ ಕ್ಲೇಶಗಳ ಪರಿಹರಿಸಿ
ಸನ್ಮತಿಯೊಳಿರಿಸೆನ್ನ ಆದಿಕೇಶವರಾಯ ॥೧೫॥

ಭಾವ– ಜೀವನದ ಕ್ಲೇಶಕಾರ್ಪಣ್ಯಗಳ ಮುಖೇನ ವೈರಾಗ್ಯವನ್ನು ತಾಳುವ ಧೋರಣೆ ಕಂಡು ಬರುತ್ತದೆ.

ಅರ್ಥ– ೧. ಪಂಚಭೂತಗಳು = ನೆಲ, ನೀರು, ಬೆಂಕಿ, ಗಾಳಿ, ಬಾನು

ಓಷಧಿ = ಸಸ್ಯ ; ಶುಕ್ಲ = ವೀರ್ಯ; ಶೋಣಿತ = ರಕ್ತ
೨. ಇಂದ್ರಿಯ = ವೀರ್ಯ
ಮಾಸ ಪರಿಯಂತ = ಒಂದು ತಿಂಗಳವರೆಗೆ
೩. ಶಿರ = ತಲೆ
ನಖ = ಉಗುರು
ನವರಂಧ್ರ = ಶರೀರದ ಒಂಬತ್ತು ತೂತುಗಳು (ಎರಡು ಕಿವಿ, ಎರಡು ಕಣ್ಣು, ಎರಡು ಮೂಗಿನ ಹೊಳ್ಳೆಗಳು, ಬಾಯಿ, ಗುದ, ಶಿಷ್ನ)
ಧಾತು =ಶಕ್ತಿ
ತೃಷೆ = ಬಾಯಾರಿಕೆ
೪. ಗುಂಗು = ಗೀಳು, ಯೋಚನೆ
ಭವ = ಜನ್ಮ
೫. ಮರುತ = ವಾಯು
೬. ನೀರಡಿಕೆ = ಬಾಯಾರಿಕೆ
ದುರಿತ = ಪಾಪ
೭. ಪಶು = ಪ್ರಾಣಿ
೮. ಅಡಿ = ಹೆಜ್ಜೆ
೯. ಹೊತ್ತು = ಕಾಲ
೧೦. ನೆತ್ತರು = ರಕ್ತ
ತೊಗಲು = ಚರ್ಮ
ಮಜ್ಜೆ = ನಲ್ಲಿ ಮೂಳೆಯಲ್ಲಿರುವ ರಸ
ಕರಡಾಗು = ಒಣಗು, ಕಗ್ಗಾಗು
೧೨. ಮುಪ್ಪಡಸು = ಮುಪ್ಪು ಬರು
೧೩. ಕಟ್ಟಳೆ= ಸರದಿ
ದಿನತುಂಬಿ = ಆಯಸ್ಸು ತುಂಬಿ
೧೪. ಹೊತ್ತು ಹೋಯಿತು = ಕಾಲ ಮೀರಿತು, ತಡವಾಯಿತು
೧೫. ಬನ್ನ = ಭಂಗ

* * * *



## ೪೬
## ಕಾಂಬೋದಿ – ಝಂಪೆ

**ಗುರು ಹಿರಿಯರ ಸೇವಿಸಿ**
**ಹರಿಯ ಮನದೊಳಗಿರಿಸಿ**
**ಪರಗತಿಯ ಬೇಗ ಸಾಧಿಸಿಕೊಳ್ಳಿರೊ ॥ಪ॥**

**ಲೆಕ್ಕವಿಲ್ಲದ ದೇಹವೆಂಬ ಸೆರೆಮನೆಯೊಳಗೆ**
**ಸಿಕ್ಕಿ ಬಹುಕಾಲ ಬಳಲದೆ**
**ರಕ್ಕಸಾರಿಯ ಭಕ್ತರೊಳು ಸೇರಿ ನೀವು ಸೆರೆ**
**ಯಿಕ್ಕದಂಥವನ ಮೊರೆ ಹೋಗಿರೊ ॥೧॥**

**ಕಂಬಳಿಯ ಬುತ್ತಿಯಂತೀ ದೇಹದೊಳಗೆಲ್ಲ**
**ತುಂಬಿರುವ ಸುಖವೆಲ್ಲ ದುಃಖಭರಿತ**
**ಅಂಬುಜಾಕ್ಷನ ದಿವ್ಯ ಮಂಗಳ ಕಥಾಮೃತವ**
**ನುಂಬ ಭ್ರಮರಕೆ ಸರಿಗಾಣೆನೊ ॥೨॥**

**ಮಕ್ಕಳುಗಳಳುವಾಗ ಮಡದಿಯರು ಜರಿವಾಗ**
**ಬಿಕ್ಕುಗಳು ಬಂದು ಬೈವಾಗ**
**ಇಕ್ಕಿ ಪೊರೆವುದಕೆ ಗತಿಯಿಲ್ಲದಾ ದರಿದ್ರರಿಗೆ**
**ಸೌಖ್ಯವೆತ್ತಣದೊ ಮನುಜರಿಗೆ ॥೩॥**

**ತಾಯ ಮಾರಿ ತೊತ್ತನು ಕೊಂಬ ಪಾಮರರಂತೆ**
**ಹೇಯ ಕುಜನರಾ ಚರಣಕೆರಗಿ**
**ಮಾಯಾಪತಿಯಂಘ್ರಿಗಳ ನೆನೆಯಲೊಲ್ಲದ ನರನ**
**ಆಯುಷ್ಯ ಬರಿದೆ ಹೋಯಿತಲ್ಲ ॥೪॥**

ಅಯಿವರಿತ್ತೊಡವೆಯ ಅವರವರೊಯ್ಯುವರು ಮ
ತ್ತಯಿವರೆಂಬುವರು ತೊಲಗುವರು
ಮೈಯ ನೆತ್ತರು ಕೂಡ ಹರಿದು ಹೋಹುದು ನಿಮ್ಮ
ಕೈಯ ಪಿಡಿದೆತ್ತುವರ ನಾನು ಕಾಣೆ ॥೫॥

ಬಲಗುಂದಿ ನೆಲ ಹಿಡಿಯೆ ರೋಗರುಜಿನಗಳೆಂಬ
ಕಾಲನ ಭಟರು ಬಂದು ಕವಿದು
ಸಾಲಾಗಿ ನಿಂತಾಗ ಮುಖ ಗಂಟಲೊಳಗಣ
ನಾಲಗೆಯ ನಾದ ಎಲ್ಲಿಹುದೊ ॥೬॥

ಆಗಲೇ ಹರಿನಾಮ ನಾದದಿಂದೆಚ್ಚತ್ತು
ನಾಗಶಯನನ ಪುರದ ಪಥವ
ಆಗಮಜ್ಞರ ಕೇಳಿ ತಿಳಿದುಕೊಳ್ಳಿರೊ ನಿಮಗೆ
ಈ ಗಾಳಿ ದೀಪ ಸ್ಥಿರವಲ್ಲ ॥೭॥

ಜರೆಯೆಂದು ಕಡೆಯಲ್ಲಿ ಗೊರಗೊರನೆ ಉಸಿರಾಡೆ
ಶರೀರದ ಸಂಬಂಧಗಳಕಟಾ
ತರುಣಿಯರ ಮ್ಯಾಲಾಸೆ ತಮ್ಮ ಹಿತವನರಿಯದೆ
ಬರಿದೆ ಭವದಲ್ಲಿ ಬಳಲುವಿರಿ ॥೮॥

ವೇದ ಶಾಸ್ತ್ರವನೋದಲಿಲ್ಲ ಜಪ ಹೋಮಾದಿ
ಸಾಧು ಕರ್ಮಗಳ ಸರಕು ಇಲ್ಲ
ಮಾಧವನ ಪೂಜೆ ಒಮ್ಮೆಯೂ ಮಾಡಿಲ್ಲ ಹರಿ
ಪಾದ ತೀರ್ಥದಾ ವ್ರತಗಳಿಲ್ಲ ॥೯॥

ಊರ್ಧ್ವಪುಂಡ್ರಗಳಿಲ್ಲ ಹರಿಯ ಲಾಂಛನವಿಲ್ಲ
ಪದ್ಮ ತುಳಸಿಯಾ ಸರಗಳಿಲ್ಲ
ಸದ್ಧರ್ಮ ಪಥವೆತ್ತ ವಿಷಯಾಂಧ ಕೂಪದೊಳು
ಬಿದ್ದು ಪೊರಳುವ ಮರುಳಿದೆತ್ತ ॥೧೦॥



ಏಕಾದಶಿಯ ಮಾಡಿ ಯತಿಗಳೊಡನೆ ಆಡಿ
ಪೋಕ ವೃತ್ತಿಗಳನೀಡಾಡಿ
ಶ್ರೀಕಾಂತನನು ಬೇಡಿ ಸುಕೃತಿಗಳನೆ ಕೂಡಿ
ಆ ಕೃಷ್ಣನಂಘ್ರಿಗಳ ಪಾಡಿ ॥೧೧॥

ಸಕ್ತಿಯಿಂ ಹರಿಯ ಪೊಗಳಿ ಅಡಿಯಲುರುಳಿ ಶುಷ್ಕ
ಭುಕ್ತಿಗಳ ಮೇಲುಗುಳಿ ದೂರ ನಿಲ್ಲಿ
ಭಕ್ತಿ ಜ್ಞಾನಗಳಿರಲಿ ಮರ್ತ್ಯ ಪಥದಿಂ ಮರಳಿ
ಮುಕ್ತಿ ಮಾರ್ಗದಲಿನ್ನು ತೆರಳಿ ॥೧೨॥

ಕೊಳ್ಳೆನಾಯಕ ಬಂದು ಕೋಟೆ ಕೆಡಹುವ ಮುನ್ನ
ಕಳ್ಳರೈವರ ಕಾರಣದಿಂದ
ಉಳ್ಳ ಪುಣ್ಯಾರ್ಥಗಳು ಕೊಳ್ಳೆ ಹೋಗದ ಮುನ್ನ
ಪುಲ್ಲನಾಭನ ಅಡಿಗೆ ಮೊರೆ ಹೋಗಿರೊ ॥೧೩॥

ಮಲಮೂತ್ರ ರಕ್ತ ಮಾಂಸಗಳ ಬಂಬಲು ಮೆತ್ತಿ
ಎಲುಬಿನಾ ಬಲದಿಂದ ಗೂಡು ಮಾಡಿ
ಬೆಳೆಸಿದೀ ತನುವೆಂಬ ನರಕದಾಸೆಯ ಬಿಟ್ಟು
ನಳಿನನಾಭವ ಪಾದ ಸೇರಿರೋ ॥೧೪॥

ಒಂಬತ್ತು ರಂಧ್ರಗಳ ತನುವೆಂಬ ಮನೆಯಲ್ಲಿ
ತುಂಬಿರುವ ವಾಯು ಸ್ಥಿರವಲ್ಲ
ನಂಬಿದರ ಪೊರೆವ ನೆಲೆಯಾದಿಕೇಶವನ ಪಾ
ದಾಂಬುಜವನು ಸೇರಿ ಬದುಕಿರೊ ॥೧೫॥

ಭಾವ– ಅಶಾಶ್ವತ ದೈಹಿಕ – ಐಹಿಕ ಸುಖದಲ್ಲೇ ಮೈಮರೆಯದೆ ಶಾಶ್ವತ ಪಾರಮಾರ್ಥಿಕ ಸುಖದತ್ತ ಮುಖಮಾಡಿ ಎಂಬ ಆಶಯವನ್ನು ಈ ಕೀರ್ತನೆ ಒಳಗೊಂಡಿದೆ.

ಅರ್ಥ– ೧. ರಕ್ಕಸಾರಿ = ರಾಕ್ಷಸಸಂಹಾರಿ (ವಿಷ್ಣು)
೨. ಬುತ್ತಿ = ಪ್ರಯಾಣಿಕರು ಕಟ್ಟಿಕೊಂಡು ಹೋಗುವ ಅನ್ನ
ಅಂಬುಜಾಕ್ಷ = ಕಮಲದಂತೆ ಕಣ್ಣುಳ್ಳ ವಿಷ್ಣು
ಭ್ರಮರ = ದುಂಬಿ
೩. ಭಿಕ್ಕುಗಳು (<ಭಿಕ್ಷುಕರು) = ತಿರುಕರು
೪. ಪಾಮರ = ಮಂದಮತಿ, ಅಜ್ಞಾನಿ
ಕುಜನರು = ದುಷ್ಟರು
ಮಾಯಾಪತಿ = ಮಾಯೆಗೊಡೆಯ, ಲಕ್ಷ್ಮೀಪತಿಯಾದ ವಿಷ್ಣು
ಅಂಘ್ರಿ = ಪಾದ
೫. ಅಯಿವರು (<ಐವರು)= ಐದು ಜನ (ಪಂಚಭೂತಗಳು: ನೆಲ, ನೀರು, ಬೆಂಕಿ, ಗಾಳಿ, ಆಕಾಶ)
ನೆತ್ತರು = ರಕ್ತ
೬. ಕಾಲನ = ಯಮನ
ನಾಲಗೆಯ ನಾದ = ಸೊಲ್ಲು, ಮಾತು, ಶಬ್ದ
೭. ನಾಗಶಯನ = ಹಾವನ್ನು ಹಾಸಿಗೆಯಾಗುಳ್ಳ ವಿಷ್ಣು
ಪಥ = ದಾರಿ
ಆಗಮಜ್ಞರ = ಶಾಸ್ತ್ರಜ್ಞರನ್ನು, ಜ್ಞಾನಿಗಳನ್ನು
೮. ಜರೆ = ಮುಪ್ಪು
ಭವ = ಸಂಸಾರ, ಹುಟ್ಟು ಸಾವಿನ ಸುಳಿ
೯. ಮಾಧವ = ವಿಷ್ಣು
೧೦. ಊರ್ಧ್ವ ಪುಂಡ್ರ = ಮೇಲುಮುಖದ ಮೂರುನಾಮಗಳು
ಲಾಂಛನ = ಗುರುತು
ವಿಷಯಾಂಧ = ಕಾಮದಿಂದ ಕುರುಡಾದ
ಕೂಪದೊಳು = ಬಾವಿಯಲ್ಲಿ
ಮರುಳು = ಹುಚ್ಚು, ಭ್ರಮೆ
೧೧. ಆಡಿ = ಮಾತುಕತೆಯಾಡಿ, ಸಹವಾಸ ಸುಖದ ಪ್ರಯೋಜನ ಪಡೆದು
ಪೋಕ = ಪೋಕರಿ, ಕೆಟ್ಟ



ಈಡಾಡಿ = ಚೆಲ್ಲಾಡಿ, ಎರಚಾಡಿ
ಶ್ರೀಕಾಂತ = ಲಕ್ಷ್ಮಿಯ ಗಂಡ (ವಿಷ್ಣು)
೧೨. ಸಕ್ತಿಯಿಂ = ಆಸಕ್ತಿಯಿಂದ, ಶ್ರದ್ಧೆಯಿಂದ
ಭುಕ್ತಿಗಳ = ಸುಖಾನುಭವಗಳ, ಉಪಭೋಗಗಳ
೧೩. ಕೊಳ್ಳೆನಾಯಕ = ದರೋಡೆಕೋರ
ಕೋಟೆ = ದೇಹ
ಪುಲ್ಲನಾಭ = ಕಮಲನಾಭ (ವಿಷ್ಣು)
೧೪. ಬಂಬಲು = ನೀರಿನಿಂದ ಕಲಸಿದ ಪಾಯಸದಂತಿರುವ ಮಣ್ಣು
ತನು = ಶರೀರ
ನಳಿನನಾಭ = ಹೊಕ್ಕುಳಲ್ಲಿ ಕಮಲವುಳ್ಳವನು (ವಿಷ್ಣು)
೧೫. ಒಂಬತ್ತು ರಂಧ್ರಗಳು = ಕಣ್ಣುಗಳೆರಡು, ಕಿವಿಗಳೆರಡು, ಮೂಗಿನ ಹೊಳ್ಳೆಗಳೆರಡು, ಬಾಯೊಂದು, ಮೂತ್ರದ್ವಾರವೊಂದು, ಗುದದ್ವಾರವೊಂದು
ವಾಯು = ಪ್ರಾಣ
ಪಾದಾಂಬುಜ = ಪಾದಕಮಲ

* * * *

## ೪೭
## ರಾಗ?– ತಾಳ?

**ಭವತಿ ಭಿಕ್ಷಾಂದೇಹಿ ಪರಬ್ರಹ್ಮ**
**ಭವದೂರ ಮಾಂಪಾಹಿ**
**ಭುವನ ಪಾವನ ಪರಮಾನಂದ ವರಗುಣಾ**
**ಸುವಿಮಲ ಶಾಂತಿ ಸದ್ಭಕ್ತಿ ಜೀವನ್ಮುಕ್ತಿ ॥ಪ॥**

**ನಿತ್ಯನಿರ್ಮಲ ಜ್ಞಾನ ವಿಚಾರ ಪ್ರ**
**ವೃತ್ತಿ ವಿವೇಕದಾನ**
**ಸತ್ಯ ಸದ್ವಿನಿಯ ಸಶ್ರವಣ ಮಾನಸಯೋಗ**
**ಚಿತ್ತ ನಿಧಿಧ್ಯಾಸ ಜಪತಪವ್ರತ ಪೂಜಾ ॥೧॥**

**ದೋಷ ರಹಿತ ಭಾಷಾ ದುರಿತಗುಣ**
**ನಾಶ ಪರಮ ಸಂತೋಷ**
**ಕ್ಲೇಶ ವಿದೂರ ವಿಶೇಷ ವಿರಾಗ**
**ವಿಶ್ವಾಸ ವಿಹಿತ ಸದ್ಧರ್ಮ ವಿಚಾರ ॥೨॥**

**ಪಾವನ ಪರಿಪೂರ್ಣ ಹೃದಯ ಸದಾ**
**ದೇವ ನಾಮಸ್ಮರಣ**
**ಭಾವ ಭರಿತ ಧ್ಯಾನ ಧಾರಣಯೋಗ ಸ**
**ದ್ಭಾವ ಬ್ರಹ್ಮ ಆದಿಕೇಶವ ದಾಸತೆ ॥೩॥**

ಭಾವ– ಭಿಕ್ಷುಕನಾಗಿ ಭಗವಂತನಲ್ಲಿ ಭಿಕ್ಷೆ ಬೇಡುವ ಆಶಯವನ್ನೊಳಗೊಂಡಿದೆ. ಕನಕದಾಸರಿಗೆ ಸಂಸ್ಕೃತದಲ್ಲಿ ಪ್ರಭುತ್ವ ಇತ್ತು ಎಂಬುದಕ್ಕೆ ನಿದರ್ಶನವಿದು.



ಅರ್ಥ– ಭವದೂರ = ಜನನ ಮರಣಾತೀತ
ಮಾಂಪಾಹಿ = ನನ್ನನ್ನು ಕಾಪಾಡು
ಭುವನ = ಪ್ರಪಂಚ
ಪಾವನ= = ಪವಿತ್ರ
ದುರಿತ = ಪಾಪ

* * * *

## ೪೮
## ಆನಂದಭೈರವಿ – ರೂಪಕ

**ನಿನ್ನ ನೋಡಿ ಧನ್ಯನಾದೆನೊ ಹರಿ ಶ್ರೀನಿವಾಸ ॥ಪ॥**

**ನಿನ್ನ ನೋಡಿ ಧನ್ಯನಾದೆ**
**ಎನ್ನ ಮನಸು ನಯನ ಸುಪ್ರ**
**ಸನ್ನವಾಯಿತು ದಯವ ಮಾಡಿ**
**ಮುನ್ನ ಸಲಹಬೇಕು ಸ್ವಾಮಿ ॥ಅ॥**

**ಪಕ್ಷಿವಾಹನ ಲಕ್ಷ್ಮೀರಮಣ**
**ರಾಕ್ಷಸಾಂತಕ ಯದುಕುಲಾನ್ವಯ**
**ಕುಕ್ಷಿಯೊಳು ಬ್ರಹ್ಮಾಂಡ ತಂಡವ**
**ರಕ್ಷಿಸುತಲಿಹ ಸುಜನ ಪಕ್ಷಾ ॥೧॥**

**ದೇಶದೇಶ ತಿರುಗಿ ನಾನು**
**ಆಶೆಭರಿತನಾದೆ ಸ್ವಾಮಿ**
**ವಾಸಿ ನಿಮಗೆ ಸಲಹುವುದು ಜಗ**
**ದೀಶ ಕಾಯೊ ವಾಸುದೇವ ॥೨॥**

**ಕಂತು ಜನಕ ಎನ್ನ ಮೊರೆಯ–**
**ನಾಂತು ವಿಹಿತದಿಂದ ಸೇವೆ**
**ಅಂತರವಿಲ್ಲದೆ ದಯಪಾಲಿಸೊ**
**ಶಾಂತ ಮೂರ್ತಿಯಾದಿ ಕೇಶವ ಮುದ್ದು ವಿಠಲ ॥೩॥**

ಭಾವ– ಉಡುಪಿಯಲ್ಲಿ ಕನಕನ ಕಿಂಡಿಯಾಗಿ ವಿಶಾಲ ಹೃದಯದ ವಾದಿರಾಜರ ಪ್ರಯತ್ನದಿಂದಾಗಿ ಕೃಷ್ಣದರ್ಶನ ಲಭಿಸಿದಾಗ ಕೃತ್ಯಕೃತ್ಯ ಭಾವದಿಂದ



ಹಾಡಿದ ಕೀರ್ತನೆಯಿದು ಎಂದು ಹೇಳಲಾಗುತ್ತದೆ. ಮುದ್ದು ಕೃಷ್ಣನ ದರ್ಶನದಿಂದ ಕಣ್ಣು ಮನಸ್ಸು ಪ್ರಸನ್ನವಾದುದರ ಪ್ರಸ್ತಾಪವಿದೆ.

ಅರ್ಥ– ನಯನ = ಕಣ್ಣು
೧. ಕುಕ್ಷಿ = ಹೊಟ್ಟೆ
೨. ವಾಸಿ = ಲೇಸು
೩. ಕಂತುಜನಕ = ಮನ್ಮಥನ ತಂದೆ (ಕೃಷ್ಣ)

* * * *

## ೪೯
## ಕಲ್ಯಾಣಿ – ಅಟ

ನಾ ನಿಮ್ಮ ದಾಸರ ದಾಸ
ಈ ನರರ ಪಾಡೇನೆರಡು ದಿನದ ಸಂಸಾರ ॥ಪ॥

ಕರೆಸು ಕಂಬದಿ ಎಂದು ವಾದಿಸಿದವ ಕೆಟ್ಟ
ಪರಹೆಣ್ಣಿಗಾಸೆ ಪಟ್ಟು ಕೀಚಕ ಕೆಟ್ಟ
ಬರಿದೆ ದ್ರೌಪದಿಗಾಗಿ ದುರ್ಯೋಧನ ಕೆಟ್ಟ
ಉರಿ ಹಸ್ತವ ಬೇಡಿ ಭಸ್ಮಾಸುರ ಕೆಟ್ಟ ॥೧॥

ಆಡಿದ ಮಾತಿಗೆ ಬಲಿ ನೀಡಲಾಗಿ ಕೆಟ್ಟ
ಮಾಡುವ ದಾನ ತಡೆದು ಶುಕ್ರನು ಕೆಟ್ಟ
ಕೂಡಿದ ಶಿರವರಿದು ರೂಢಿಗೀಶ್ವರ ಕೆಟ್ಟ
ಬೇಡಲು ಗುಂಡಿಗೆ ಸೀಳಿ ಕರ್ಣನು ಕೆಟ್ಟ ॥೨॥

ಎರಡೆಂಟಾಡೆನೆಂದು ಹರಿಶ್ಚಂದ್ರ ಕೆಟ್ಟ
ನೆರೆ ಪಗಡೆಯನಾಡಿ ಧರ್ಮಜನು ಕೆಟ್ಟ
ಹರಿದು ಬಾಣವ ತೊಟ್ಟು ದಶರಥನು ಕೆಟ್ಟ
ಹರಿಯ ಮೊರೆ ಸೇರಿದರ್ಗೆ ಸ್ಥಿರ ಪಟ್ಟ ॥೩॥

ಹಮ್ಮನಾಡಿ ಮುನ್ನ ಬ್ರಹ್ಮ ತಾ ಕೆಟ್ಟ
ಅಮ್ಮನ ನುಡಿ ಕೇಳದೆ ಹನುಮಂತ ಕೆಟ್ಟ
ತಮ್ಮನ ನುಡಿ ಕೇಳದೆ ರಾವಣನು ಕೆಟ್ಟ
ನಿಮ್ಮ ನೋಯಿಸಿದ ಮೈರಾವಣನು ಕೆಟ್ಟ ॥೪॥



ಭಾಗೀರಥಿಯ ತಂದೆ ಬಹುದೈತ್ಯರ ಕೊಂದೆ
ಭೋಗಿಶಯನ ಶ್ರೀ ಲಕ್ಷ್ಮಿಕಾಂತನೆ
ಭಾಗವತ ಪ್ರಿಯ ಭವಭಯಹರ
ಕಾಗಿನೆಲೆಯಾದಿಕೇಶವಗೆ ನಮೊ ನಮೋ ॥೫॥

ಭಾವ– ಹರಿಯ ಮೊರೆ ಹೋದವರು ಕೆಡುವ ಸಂಭವ ಕಡಮೆ ಎಂಬ ಭಾವಗೋಪುರ ಹಲವಾರು ದೃಷ್ಟಾಂತಗಳ ಅಡಿಪಾಯದ ಮೇಲೆ ಮೂಡಿ ನಿಂತಿದೆ.

ಅರ್ಥ– ಪಾಡು = ಕಷ್ಟಸ್ಥಿತಿ

೧. ಕರೆಸು... ಕೆಟ್ಟ = ಹಿರಣ್ಯಕಶ್ಯಪ
೨. ಕೂಡಿದ ಶಿರವರಿದು = ಬ್ರಹ್ಮನಿಗೆ ಐದು ತಲೆಗಳಿದ್ದುವೆಂದೂ ಅದರಲ್ಲಿ ಒಂದನ್ನು ಈಶ್ವರ ಕತ್ತರಿಸಿ ಹಾಕಿದನೆಂದೂ, ಬ್ರಹ್ಮ ಕಪಾಲ ಅವನ ಕೈಗೆ ಅಂಟಿಕೊಂಡು ಕಷ್ಟಪಟ್ಟನೆಂದೂ ಕಥೆ.
೩. ಎರಡೆಂಟಾಡೆನು = ಸುಳ್ಳು ಹೇಳೆನು ಎಂದು ಸತ್ಯಕ್ಕೆ ಜೋತುಬಿದ್ದ ಹರಿಶ್ಚಂದ್ರ
೪. ಹಮ್ಮು = ಅಹಂಕಾರ
ಅಮ್ಮನ... ಕೆಟ್ಟ = ಸೂರ್ಯ ಹಣ್ಣೆಂದು ಭಾವಿಸಿ, ತಾಯಿ ನಿಜವನ್ನು ಹೇಳಿದರೂ ಕೇಳದೆ, ಕಿತ್ತು ತರಲು ಹೋದ ಆಂಜನೇಯ ಕಪ್ಪಾಳಸೇವೆ ಮಾಡಿಸಿಕೊಂಡು ಕೆಳಗೆ ಬಿದ್ದು ಮೂತಿ ಚಪ್ಪಟೆಯಾಯಿತು ಎಂಬ ಕಥೆ.
೫. ಭಾಗೀರತಿ = ಗಂಗೆ
ದೈತ್ಯ = ರಾಕ್ಷಸ
ಭೋಗಿಶಯನ = ಹಾವನ್ನು ಹಾಸಿಗೆಯಾಗುಳ್ಳವನು (ವಿಷ್ಣು)
ಭಾಗವತ = ಭಕ್ತ

* * * *

## ೫೦
## ಮುಖಾರಿ – ಝಂಪೆ

ಅರಿತು ನಡೆಯಲಿ ಬೇಕು ನರಕಾಯ ಎತ್ತಿದ ಮೇಲೆ
ಅರಿಯದಿದ್ದರೆ ನರಕವೇ ಪ್ರಾಪ್ತಿ ॥ಪ॥

ದುರ್ಜನರ ಮನೆಯ ಪಾಯಸಾನ್ನಕಿಂತ
ಸಜ್ಜನರ ಮನೆಯ ರಬ್ಬಳಿಗೆ ಲೇಸು
ಹೆಜ್ಜೆಗೆ ಸಾವಿರ ಹೊನ್ನನಿತ್ತರೂ ಬೇಡ – ಬಲು
ದುರ್ಜನರ ಸಂಗ ಬಲು ಭಂಗ ಹರಿಯೆ ॥೧॥

ಭಕ್ತಿಹೀನರ ಮನೆಯ ಪಟ್ಟು ಸುಪ್ಪತ್ತಿಗೆಗಿಂತ
ಭಕ್ತರ ಮನೆಯ ಕಡೆಬಾಗಿಲ ಕಾಯುವುದು ಲೇಸು
ಮುಕ್ತಿ ಮಾರ್ಗವ ತೋರ್ಪ ಮುರಹರನ ದಾಸರನು
ಸಕ್ತಿಯಿಂ ಸೇವಿಸುವುದು ಬಲು ಸೌಖ್ಯ ಹರಿಯೆ ॥೨॥

ಆಶೆಕಾರರ ಮನೆಯ ವಿಲಾಸ ಸುಖಕಿಂತ
ಆಶಾರಹಿತರ ಮನೆಯ ನಿರ್ಗತಿಕ ದೈನ್ಯ ಲೇಸು
ಭೂಸುರ ಪ್ರಿಯ ಕಾಗಿನೆಲೆಯಾದಿಕೇಶವನ
ಮೀಸಲಿನ ಪಾದಭಜನೆ ಕಡುಲೇಸು ಮನವೆ ॥೩॥

ಭಾವ– ಶ್ರೀ ಹರಿಯ ಪಾದಭಜನೆ ಹೆಚ್ಚು ಸುಖದಾಯಕ ಎಂಬುದು ಈ ಕೀರ್ತನೆಯ ಆಶಯ.

ಅರ್ಥ– ರಬ್ಬಳಿಗೆ = ಅಂಬಲಿ, ಗಂಜಿ; ಸಕ್ತಿ = ಆಸಕ್ತಿ, ಅನುರಾಗ
ಭೂಸುರ = ಬ್ರಹ್ಮಜ್ಞಾನಿ

* * * *



## ೫೧
## ಪಂತುವರಾಳಿ – ರೂಪಕತಾಳ

ನಂಬಬೇಡಿ ಸಿರಿಯು ತನ್ನದೆ? ॥ಪ॥

ನಂಬಬೇಡಿ ಸಿರಿಯು ತನ್ನ
ದೆಂದು ನಿಮಿಷದೊಳಗೇನಹುದೊ
ಡಂಬತನವಿದೇಕೆ ಹರಿಯ ಪಾ
ದಾಂಬುಜವನು ಭಜಿಸಿ ನರರು ॥ಅ॥

ಜಲಧಿಯನ್ನು ಪೀರ್ದ ಮುನಿಯ
ಜನನಿ ಪೆಸರ್ಗೆ ಕಿವಿಯನಾಂತ
ಖಳನ ಬಲವ ನಂಬಲಾತು
ತಲೆಯ ತವಿಸಿದವನ ಸಿರಿಯು
ಗಳಿಗೆಯೊಳಗೆ ಕೀಲು ಸಡಿಲದೆ– ಎಣಿಕೆ ಇಲ್ಲದ
ದಳವು ಯಮನನಗರಿಗೈದದೆ– ದೈವಕೃಪೆಯು
ತೊಲಗಲೊಡನೆ ದಾಳಿವರಿಯದೆ– ಕೇಳಿ ಜನರೆ ॥೧॥

ಅಂಧರಾಯನಾತ್ಮಜರು ಮ
ದಾಂಧರಾಗಿ ಮಲೆತು ಗೋತ್ರ
ಬಂಧುಗಳನು ಲೆಕ್ಕಿಸದೆ ಇಭ
ಪುರಿಯನಾಳಿದ ನೃಪತಿ ಕೌರ
ವೇಂದ್ರನರಸುತನವು ತೊಡೆಯದೆ– ಸಕಲ ಸೈನ್ಯ
ಬಂಧು ಬಳಗ ರಣದಿ ಮಡಿಯದೆ– ಶೌರಿ ಮುನಿಯ
ಲಂದು ಅವನ ಪದವು ಮುರಿಯದೆ– ಕೇಳಿ ಜನರೆ ॥೨॥

**ಧರಣಿಯ ಮುನ್ನಾಳ್ದ ನಹುಷ**
**ಸಗರರೆನಿಪ ಭೂಪತಿಗಳು**
**ಸಿರಿಯ ಜಯಿಸಲಿಲ್ಲ– ಮಿಕ್ಕ**
**ನರರ ಪಾಡಿದೇನು ನೀವು**
**ಬರಿದೆ ಭ್ರಾಂತರಾಗಬೇಡಿರೊ– ಎಂದಿಗಾದರು**
**ಸ್ಥಿರವಿದಲ್ಲವೆಂದು ತಿಳಿಯಿರೊ– ಶ್ರೀ ಕಾಗಿನೆಲೆಯ**
**ವರದ ಕೇಶವನನು ಭಜಿಸಿರೊ– ಕೇಳಿ ಜನರೆ** ॥೩॥

ಭಾವ– ಸಿರಿ ಸ್ಥಿರವಲ್ಲ ಎಂಬುದನ್ನು ಹಲವು ದೃಷ್ಟಾಂತಗಳ ಮೂಲಕ ಮನಗಾಣಿಸುವ ಆಶಯವಿದೆ ಈ ಕೀರ್ತನೆಯಲ್ಲಿ.

ಅರ್ಥ– ಪಾದಾಂಬುಜ = ಪಾದಕಮಲ

೧. ಜಲಧಿಯನು ಪೀರ್ದ ಮುನಿಯ = ಸಮುದ್ರವನ್ನು ಕುಡಿದ ಋಷಿಯ (ಅಗಸ್ತ್ಯ)
ಜನನಿ = ತಾಯಿಯಾದ ಕುಂಭ
ಪೆಸರ್ಗೆ ಕಿವಿಯನಾಂತ ಖಳ = ಕುಂಭ ಎಂಬ ಹೆಸರಿಗೆ ಕರ್ಣ (ಕಿವಿ)ವನ್ನು ಧರಿಸಿದ ದುಷ್ಟ (ಕುಂಭಕರ್ಣ)
ಬಲವ... ತವಿಸಿದವನ = ಕುಂಭಕರ್ಣನ ಬಲವನ್ನು ನಂಬಿ ತನ್ನ ತಲೆಯನ್ನು ಕೊಟ್ಟವನು (ರಾವಣ)
ದಾಳಿವರಿಯದೆ = ದಾಳಿ ಎರಗದೆ

೨. ಅಂಧರಾಯ = ಧೃತರಾಷ್ಟ್ರ
ಆತ್ಮಜರು = ಮಕ್ಕಳು
ಇಭಪುರಿ = ಹಸ್ತಿನಾವತಿ
ಶೌರಿ = ಯಾದವ ಕುಲದ ಶೂರನ ವಂಶದಲ್ಲಿ ಹುಟ್ಟಿದವನು (ಕೃಷ್ಣ)
ಪದವು = ಕಾಲು (ತೊಡೆ)

೩. ನಹುಷ = ಆಯುರಾಜ ಮತ್ತು ಸ್ವರ್ಭಾನು ದಂಪತಿಗಳ ಮಗ. ಇಂದ್ರನು ವೃತ್ರನನ್ನು ಕೊಂದು ಬ್ರಹ್ಮಹತ್ಯೆಗೆ ಗುರಿಯಾದಾಗ,



ಬರಿದಾದ ಇಂದ್ರ ಪದವಿಗೆ ಎಲ್ಲರೂ ಸೇರಿ ನಹುಷನನ್ನು ಆರಿಸಿದರು. ಆದರೆ ಇಂದ್ರಸಿಂಹಾಸನದಲ್ಲಿ ಕುಳಿತ ನಹುಷ ಮಾಡಬಾರದ ಅಪಚಾರಗಳನ್ನೆಸಗಿ ಅಗಸ್ತ್ಯನ ಶಾಪದಿಂದ ಸರ್ಪವಾದನು.

ಸಗರ = ಇಕ್ಷ್ವಾಕು ವಂಶದ ಅಸಿತನ ಮಗ. ಇವನ ಮರಿಮಗನ ಮಗನೇ ಭಗೀರಥ (ಸಗರ>ಅಸಮಂಜಸ>ಅಂಶುಮತ್> ದಿಲೀಪ> ಭಗೀರಥ)

ವರದ = ವರಗಳನ್ನು ಕೊಡುವವನು.

* * * *

## ೫೨
## ನಾದನಾಮಕ್ರಿಯೆ – ಅಟತಾಳ

**ಕಡಹಾಯಿಸೊ ಕಮಲಲೋಚನನೆ ಎನ್ನ**
**ತಡಿಯ ಸೇರಿಸೊ ತರಣಿಶತಕೋಟಿ ತೇಜ ॥ಪ॥**

**ಕಾಕು ಇಂದ್ರಿಯಗಳೆಂಬ ಕಟುಕರಿಗೆ ನಾ ಸಿಲುಕಿ**
**ಮೇಕೆಯಂದದಿ ಬಾಯಿ ಬಿಡುತಿಪ್ಪೆನು**
**ಸಾಕಾರ ರೂಪ ಸರ್ವೋತ್ತಮನೆ ನೀ ಕರು–**
**ಣಾಕರನೆಂಬ ಪೆಂಪುಂಟಾದಡೀಗೆನ್ನ ॥೧॥**

**ಹಲವು ಜನ್ಮದ ಪಾಪವೆನಿಪ ಸೊಕ್ಕಾನೆ ಸೊಂ**
**ಡಿಲು ಸುತ್ತಿ ಬಂದು ಸೀವರಿಸುತಿದೆಕೊ**
**ಮಲೆವ ದುಷ್ಕೃತವೆಂಬ ಗಜಕೆ ಕೇಸರಿ ಎಂಬ**
**ಛಲ ಬಿರುದು ತಾಳ್ದ ದೇವರ ದೇವ ನೀನೆನ್ನ ॥೨॥**

**ಹಾದಿಗಾಣದೆ ತೊಲಗಿ ಪೋಪೆನೆಂದರೆ ಭಾವ**
**ಬೂದಿಯೊಳಗಾಡಿ ಮುಳುಗಾಡುತಿಹೆನೊ**
**ಭೂಧರನ ತಾಳ್ದ ಕೂರ್ಮಾವತಾರನೆ ಬಾಡ**
**ದಾದಿಕೇಶವರಾಯ ಬೆನ್ನಲೆತ್ತಿಕೊಂಡು ॥೩॥**

ಭಾವ– ಐಹಿಕ ಎಳೆತಸೆಳೆತಕ್ಕೆ ಸಿಕ್ಕಿ ಕೊಳೆತು ಹೋಗುತ್ತಿರುವ ನನ್ನನ್ನು ಬೆಳೆಸಿ ಹೊಳೆಯುವಂತೆ ಮಾಡಲು ಮೇಲೆತ್ತು ಎಂದು ಭಗವಂತನನ್ನು ಕೋರುವ ಭಾವ ಈ ಕೀರ್ತನೆಯಲ್ಲಿದೆ.

ಅರ್ಥ– ಕಡ (<ಕಡಗು<ಕಡಂಗು) = ಕಂದಕ
ಕಮಲಲೋಚನ = ಕಮಲದಂತೆ ಕಣ್ಣುಳ್ಳವನು (ವಿಷ್ಣು)



ತಡಿ = ದಡ
ತರಣಿ = ಸೂರ್ಯ

೧. ಕಾಕು = ಕೆಟ್ಟ
ಮೇಕೆ = ಆಡು
ಪೆಂಪು = ಹಿರಿಮೆ
೨. ಸೀವರಿಸು = ಘೀಳಿಡು
ಗಜಕೆ = ಆನೆಗೆ
ಕೇಸರಿ =ಸಿಂಹ
೩. ಭಾವಬೂದಿ = ನಿಷ್ಫಲವಾದ ವ್ಯರ್ಥವಾದ ರಾಗದ್ವೇಷಗಳು
ಭೂಧರ = ಪರ್ವತ
ತಾಳ್ದ = ಧರಿಸಿದ, ಹೊತ್ತ
ಬೆನ್ನಲೆತ್ತಿಕೊಂಡು = ಬೆನ್ನಮೇಲೆ ಹೊತ್ತುಕೊಂಡು

* * * *

## ೫೩
## ಕಾನಡ – ಅಟತಾಳ

**ಆವ ಸಿರಿಯಲಿ ನೀನು ಎನ್ನ ಮರೆತೆ**
**ದೇವ ಜಾನಕೀರಮಣ ಪೇಳು ರಘುಪತಿಯೆ ||ಪ||**

**ಸುರರ ಸೆರೆಯನು ಬಿಡಿಸಿ ಬಂದೆನೆಂಬಾ ಸಿರಿಯೆ**
**ಕರಿ ಮೊರೆಯ ಲಾಲಿಸಿದೆನೆಂಬ ಸಿರಿಯೆ**
**ಶರಧಿಗೆ ಸೇತುವೆಗಟ್ಟಿದೆನೆನ್ನುವಾ ಸಿರಿಯೆ**
**ಸ್ಥಿರವಾಗಿ ಹೇಳೆನಗೆ ಹೇಳು ರಘುಪತಿಯೆ ||೧||**

**ಕಡಲೊಳಗೆ ಮನೆಮಾಡಿ ಮಲಗಿದೆನೆಂಬಾ ಸಿರಿಯೆ**
**ಮೃಢ ನಿನ್ನ ಸಖನಾದನೆಂಬ ಸಿರಿಯೆ**
**ಬಿಡದೆ ದ್ರೌಪದಿ ಮಾನ ಕಾಯ್ದೆನೆಂಬಾ ಸಿರಿಯೆ**
**ದೃಢವಾಗಿ ಹೇಳೆನಗೆ ದೇವಕೀ ಸುತನೆ ||೨||**

**ಭೂಮಿಯನು ಮೂರಡಿಯ ಮಾಡಿದೆನೆಂಬ ಸಿರಿಯೆ**
**ಕಾಮ ನಿನ್ನ ಸುತನಾದನೆಂಬ ಸಿರಿಯೆ**
**ಆ ಮಹಾಲಕುಮಿ ನಿನ್ನ ಸತಿಯಾದಳೆಂಬ ಸಿರಿಯೆ**
**ಪ್ರೇಮದಲಿ ಹೇಳೆನಗೆ ಸ್ವಾಮಿ ಅಚ್ಯುತನೆ ||೩||**

**ಮನುಜರೆಲ್ಲರು ನಿನ್ನ ಸ್ತುತಿಸುವರೆಂಬ ಸಿರಿಯೆ**
**ಹನುಮ ನಿನ್ನ ಬಂಟನಾದನೆಂಬ ಸಿರಿಯೆ**
**ಬಿನುಗು ದೈವಗಳು ನಿನಗೆಣೆಯಿಲ್ಲವೆಂಬ ಸಿರಿಯೆ**
**ಅನುಮಾನ ಮಾಡದೆ ಪೇಳೊ ನರಹರಿಯೆ ||೪||**



**ಇಂತು ಸಿರಿಯಲಿ ನೀನು ಎನ್ನ ಮರೆತರೆ ಸ್ವಾಮಿ**
**ಪಂಥವೇ ನಿನಗಿದು ಆವ ನಡತೆ**
**ಕಂತುಪಿತ ಕಾಗಿನೆಲೆಯಾದಿಕೇಶವ ರಂಗ**
**ಚಿಂತೆಯನು ಬಿಡಿಸಿ ಸಂತೋಷವನು ಪಡಿಸೊ ||೫||**

ಭಾವ– ಸಿರಿಯ ಮದದಲ್ಲಿ ಭಕ್ತನನ್ನು ಮರೆತೆಯಾ? ಎಂದು ಭಗವಂತನನ್ನು ಪ್ರಶ್ನಿಸುತ್ತಾ, ಪಂಥ ಮಾಡದೆ ನನ್ನನ್ನು ಸಂತವಿಸು ಎಂಬ ಭಕ್ತನ ಬೇಡಿಕೆ ಈ ಕೀರ್ತನೆಯ ಆಶಯ.

ಅರ್ಥ– ಜಾನಕೀ ರಮಣ = ಸೀತೆಯ ಗಂಡ (ರಾಮ)
೧. ಶರಧಿ = ಸಮುದ್ರ
ಕರಿ = ಆನೆ
೨. ಮೃಢ = ಈಶ್ವರ
ದೇವಕೀ ಸುತ = ಕೃಷ್ಣ
೩. ಕಾಮ = ಮನ್ಮಥ
ಮಹಾಲಕುಮಿ = ಮಹಾಲಕ್ಷ್ಮಿ
೪. ಬಂಟ = ಸೇವಕ
ಬಿನುಗು = ಕ್ಷುದ್ರ
ಎಣೆ = ಸಮಾನ
೫. ಪಂಥ = ಹಟ, ಜಿದ್ದು
ಕಂತುಪಿತ = ಮನ್ಮಥನ ತಂದೆ (ಕೃಷ್ಣ)

* * * *

## ೫೪
# ಪೂರ್ವಿ – ಝಂಪೆ

**ಆ ವೇಳೆಯಲಿ ಆರಾರ ಕಾಯ್ದಿಯೊ ದೇವ**
**ಈ ವೇಳೆಯಲಿ ಎನ್ನ ಕಾಯ್ದರದು ನಿಜವಹುದು ॥ಪ॥**

**ಕರೆಯೆ ಕಂಬದಿ ಬಂದು ಹಿರಣ್ಯಕಶಿಪುವ ಕೊಂದೆ**
**ಶರಣನನು ಪಾಲಿಸುತೆ ಕಾಯ್ದೆಯಂತೆ**
**ಕರಿರಾಜ ಹರಿಯೆಂದು ಕರೆಯಲಾಕ್ಷಣ ಬಂದು**
**ಕರುಣದಿಂದಲಿ ಕಾಯ್ದೆಯಂತೆ ಹರಿಯೆ ॥೧॥**

**ಧರೆಗಧಿಕನಾಥನಾ ತೊಡೆಯನೇರಲು ಕಂಡು**
**ಜರೆಯಲಾ ಧ್ರುವನ ನೀ ಕಾಯ್ದೆಯಂತೆ**
**ದುರುಳ ದುಃಶಾಸನ ದ್ರೌಪದಿಯ ಸೀರೆಯ ಸೆಳೆಯೆ**
**ತರುಣಿಗಕ್ಷಯವಿತ್ತು ಕಾಯ್ದೆಯಂತೆ ಹರಿಯೆ ॥೨॥**

**ಅಂದು ರಾವಣ ವಿಭೀಷಣನ ನೂಕಲು ಕಂಡು**
**ಇಂದಿರಾರಮಣ ನೀ ಕಾಯ್ದೆಯಂತೆ**
**ಮಂದರೋದ್ಧರ ಮಧುಸೂದನ ಮಾಧವ ಗೋ**
**ವಿಂದ ರಕ್ಷಿಸು ಬಾಡದಾದಿಕೇಶವರಾಯ ॥೩॥**

ಭಾವ– ಹಿಂದೆ ನೀನು ಯಾರನ್ನೇ ಕಾಪಾಡಿರು ಅದು ನನಗೆ ಮುಖ್ಯವಲ್ಲ, ಇಂದು ನನ್ನನ್ನು ಕಾಪಾಡು ಎಂದು ಭಕ್ತನೊಬ್ಬ ಭಗವಂತನಿಗೆ ತಗುಲಿಕೊಂಡ ಭಾವ ಈ ಕೀರ್ತನೆಯದು.



ಅರ್ಥ– ಪಾಲಿಸುತೆ = ಕರುಣಿಸುತ್ತ
ಧರೆಗಧಿಕನಾಥನು = ರಾಜ
ಇಂದಿರಾರಮಣ = ವಿಷ್ಣು
ಮಂದರೋದ್ಧರ = ಮಂದರ ಪರ್ವತವನ್ನು ಹೊತ್ತವನು (ಕೂರ್ಮಾವತಾರದ ವಿಷ್ಣು)

* * * *

## ೫೫
## ಸಾವೇರಿ – ಅಟತಾಳ

ಆವುದೊಳ್ಳೆಯದೊ ನಿನ್ನಂಗ – ಚೆಲುವ
ದೇವ ಬಂಕಾಪುರದ ಲಕುಮಿ ನರಸಿಂಗ ॥ಪ॥

ಜಗದೊಳಗೆ ತಾನು ತಂದೆಯ ಮಾತು ಕೇಳದಾ
ಮಗನು ಇಹ ಪರಕೆ ಸಲುವ ಪ್ರಾಜ್ಞನೆ?
ಬಗೆಗೊಳಿಸಿ ಪ್ರಹ್ಲಾದ ಪಿತನೊಡಲ ನಿನ್ನ ಕೂ
ರುಗುರಿನಿಂ ಬಗೆಸಿದಾತಂಗೆ ಮುಕುತಿಯನೀವೆ ॥೧॥

ಪೊಡವಿಯೊಳು ಅಣ್ಣನಾಜ್ಞೆಯ ಮೀರಿ ನಡೆಯುತಿಹ
ಒಡಹುಟ್ಟಿದವಗೆ ಕೈವಲ್ಯವುಂಟೆ?
ದೃಢದಲಿ ವಿಭೀಷಣಾಗ್ರಜನನ್ನು ಬಾಣದಲಿ
ಕೆಡಹಿಸಿದ ಬಳಿಕವಗೆ ಸ್ಥಿರಪಟ್ಟ ಕಟ್ಟಿದೆ ॥೨॥

ರೂಢಿಯಲಿ ಗುರುದ್ರೋಹವನು ಮಾಡಿದವನ ಮೊಗ
ನೋಡಿದಾಗಲೆ ಪ್ರಾಯಶ್ಚಿತ್ತವುಂಟು
ನೋಡಿದಾಗಲೆ ಬೃಹಸ್ಪತಿಸತಿಗೆ ಅಳುಪಿದನ
ಸೂಡಿದಾತನ ಸ್ನೇಹವನು ಮಾಡಿಕೊಂಡಿರ್ಪೆ ॥೩॥

ದೇಶದೊಳು ವಂಶಕಂಟಕರೆನಿಸಿದವರೊಳಗೆ
ಭಾಷಣವ ಮಾಡಬಪ್ಪುದೆ ಪ್ರಾಜ್ಞರು?
ಬೇಸರಿಸದೆ ಕೌರವರ ಕೊಂದ ಪಾಂಡವರ ಸಂ
ತೋಷದಲಿ ಪಕ್ಷಿಕರ ಮಾಡಿಕೊಂಡಿರ್ಪೆ ॥೪॥



ಪೊಡವಿಪತಿ ಕೇಳು ಶ್ರೀ ಆದಿಕೇಶವನೆ ಹಿಂ
ಗಡೆಯಲ್ಲಿ ಮನೆಯ ಕಟ್ಟಿಸಬಾರದೇ
ಬಿಡೆಯವಿಲ್ಲದೆ ಸಭಾಮಧ್ಯದಲಿ ಹೆಂಡತಿಯ
ತೊಡೆಯ ಮೇಲ್ಕುಳ್ಳಿರಿಸಿಕೊಂಡಿರ್ಪ ಹಿರಿಯತನ ॥೫॥

ಭಾವ– ಭಕ್ತನೇ ಭಗವಂತನನ್ನು ತರಾಟೆಗೆ ತೆಗೆದುಕೊಂಡಂತಿರುವ ಈ ಕೀರ್ತನೆ ನಿಂದಾಸ್ತುತಿಯ ಭಾವವನ್ನೊಳಗೊಂಡಿದೆ.

ಅರ್ಥ– ಲಕುಮಿ ನರಸಿಂಗ = ಲಕ್ಷ್ಮೀನರಸಿಂಹ
ಕೂರುಗುರು = ಹರಿತವಾದ ಉಗುರು
ಅಗ್ರಜ = ಅಣ್ಣ
ಬೃಹಸ್ಪತಿ..... ಅಳುಪಿದನ = ಚಂದ್ರನ
ಸೂಡಿದಾತನ = ಧರಿಸಿದವನನ್ನು (ಶಿವನನ್ನು)
ಬಿಡೆಯ = ನಾಚಿಕೆ, ಸಂಕೋಚ

* * * *

## ೫೬
## ಶಂಕರಾಭರಣ – ಅಟತಾಳ

ಆರಿಗಳವಲ್ಲಾತ್ಮ ಯೋಗಸಿದ್ಧಿ
ಸೇರಿ ಸುಜ್ಞಾನದಲಿ ಸವಿದುಂಬಗಲ್ಲದೆ ॥ಪ॥

ರಜಸು–ತಾಮಸವೆಂಬ ರಯವನೆಲ್ಲವ ಕಳೆದು
ಗಜಬಜಿಸುವ ಪಂಚಭೂತಗಳ
ರಜನಿಗೆ ಸಿಲ್ಕದೆ ಪರಬ್ರಹ್ಮನ ಬಲು
ನಿಜವ ತಿಳಿಯಬಲ್ಲ ನಿರ್ವಾಣಗಲ್ಲದೆ ॥೧॥

ಭಿನ್ನ ಭೇದಗಳೆಂಬ ಬಲು ಸಂಶಯ ಕಳೆದು
ತನ್ನೊಳಗೆ ತಾ ತಿಳಿದು ತಾರಕಬ್ರಹ್ಮವ
ಚೆನ್ನಾಗಿ ನೀ ನೋಡು ಚೆಲುವ ಕಂಗಳಿಂದ
ತನ್ನಗ್ನಿಯೊಳಗಿರುವ ಪ್ರೌಢರಿಗಲ್ಲದೆ ॥೨॥

ಅಕಾರ ಉಕಾರ ಮಕಾರ ಎಂತೆಂಬ
ಓಂಕಾರಕೆ ಕೂಡಿ ಎರಡಿಲ್ಲದ
ಸಾಕಾರ ಕಾಗಿನೆಲೆಯಾದಿಕೇಶವನ
ಆಕಾರದೊಡನಾಡುವರಿಗಲ್ಲದೆ

ಭಾವ– ಜ್ಞಾನವಿಲ್ಲದೆ ಆತ್ಮಯೋಗ ಸಿದ್ಧಿ ಎಲ್ಲರಿಗೂ ಸಾಧ್ಯವಾಗುವುದಿಲ್ಲ ಎಂಬ ಆಶಯವಿದೆ.

ಅರ್ಥ– ಅಳವು = ಶಕ್ತಿ; ರಯ = ಕೊಳೆ; ರಜನಿ = ರಾತ್ರಿ (ಕತ್ತಲು); ನಿರ್ವಾಣ = ಶಾಂತಾತ್ಮ, ಮೋಕ್ಷ; ತನ್ನಗ್ನಿ (<ತತ್+ಅಗ್ನಿ)=ಜ್ಞಾನವೆಂಬ ಬೆಂಕಿ

* * * *



## ೫೭
## ಕಲ್ಯಾಣಿ – ಆದಿತಾಳ

ನನ್ನವ್ವ ಕಲ್ಲುಬಿಡೆ ಈ ಧೋತ್ರವ
ಚೆನ್ನಾಗಿ ಒಗೆಯಬೇಕು ॥ಪ॥

ಮುನ್ನ ಮಾಡಿದ ಪಾಪ ಕರ್ಮ ಹೋಗುವ ಹಾಗೆ
ಚೆನ್ನಕೇಶವನ ಪ್ರಸಾದಕ್ಕೊದಗಬೇಕು ॥ಅ॥

ಉಟ್ಟ ಧೋತ್ರವು ಮಾಸಿತು– ಮನದೊಳಗಿರುವ
ದುಷ್ಟರೈವರುಗಳಿಂದ ಕಷ್ಟದುರಿತಗಳು
ಬಿಟ್ಟು ಹೋಗುವ ಹಾಗೆ ಮುಟ್ಟಿ ಜಲದೊಳು
ಗಟ್ಯಾಗಿ ಒಗೆಯಬೇಕು ॥೧॥

ವೇದವನೋದಬೇಕು ಮನದೊಳಗಿದ್ದ
ಭೇದವ ಕಳೆಯಬೇಕು
ಸಾದರಣೆಯಿಂದ ತಿಳಿದು ನಿಶ್ಚಯವಾಗಿ
ಕ್ರೋಧ ಕರ್ಮಗಳೆಲ್ಲ ಬಿಟ್ಟು ಹೋಗುವ ಹಾಗೆ ॥೨॥

ವೇಲಾಪುರದ ಚೆನ್ನಕೇಶವನ ಸೇವೆಗೆ
ಆಲಸ್ಯವನು ಮಾಡದೆ
ಕೋಲ ಹಿಡಿದು ದ್ವಾರಪಾಲಕನಾಗುವೆ
ನೀಲ ಕುಂತಳೆ ಕಲ್ಲ ಬಿಟ್ಟು ಆ ಕಡೆ ಸಾರೆ ॥೩॥

ಭಾವ– ದೇಹವೆಂಬ ಧೋತ್ರದ ಪಾಪಕರ್ಮವೆಂಬ ಕೊಳೆ ಹೋಗುವ ಹಾಗೆ ಒಗೆದು ಮಡಿಮಾಡಬೇಕು– ದೈವ ಸಾನ್ನಿಧ್ಯ ಸೇವೆಗೆ ಹೋಗುವ ಮುನ್ನ ಎಂಬುದು ಇದರ ಭಾವ.

ಅರ್ಥ– ಧೋತ್ರ = ಪಂಚೆ
ದುಷ್ಟರೈವರು = ಪಂಚೇಂದ್ರಿಯಗಳು (ಕಣ್ಣು, ಕಿವಿ, ನಾಲಗೆ, ಮೂಗು, ಚರ್ಮ)
ದುರಿತ = ಪಾಪ
ಗಟ್ಯಾಗಿ = ಗಟ್ಟಿಯಾಗಿ, ಬಲವಾಗಿ
ಸಾದರಣೆ = ಆದರಣೆ, ಪ್ರೀತಿ
ವೇಲಾಪುರ = ಬೇಲೂರು
ನೀಲಕುಂತಳೆ = ಕಪ್ಪಾದ ಕೂದಲು ಉಳ್ಳವಳು

* * * *



೫೮

## ರೇಗುಪ್ತಿ – ಝುಂಪೆತಾಳ

**ತಾನ್ಯಾರು ದೇಹವ್ಯಾರು – ದಿವ್ಯ**
**ಜ್ಞಾನದಲಿ ತಿಳಿದಾತ ಪರಮಯೋಗಿ ॥ಪ॥**

**ಸೂತಿಕಾವಸ್ಥೆಯಲಿ ನವಮಾಸ ನೆರೆದಾಗ**
**ಮಾತೆಯುದರದಿ ಬಂದು ಬೆಳೆದು ನಿಂದು**
**ಪಾತಕವದೊಂದು ಮೂರುತಿಯಾದ ತನುವೆಂದು**
**ನೀತಿಯಲಿ ತಿಳಿದಾತ ಪರಮಯೊಗಿ ॥೧॥**

**ಅಸ್ಥಿಪಂಜರದ ನರಗಳ ತೊಗಲಿನ ಹೊದಿಕೆಯ**
**ವಿಸ್ತರಿಸಿ ಬಿಗಿದ ಮಾಂಸದ ಬೊಂಬೆಯು**
**ರಕ್ತ ಮಲ ಮೂತ್ರ ಕೀವಿನ ಪ್ರಳಯದೊಡಲೆಂದು**
**ಸ್ವಸ್ಥದಿಂ ತಿಳಿದಾತ ಪರಮಯೋಗಿ ॥೨॥**

**ಘೋರ ನರಕದ ತನುವು ಎಂದು ಮನದಲಿ ತಿಳಿದು**
**ಗೇರು ಹಣ್ಣಿನ ಬೀಜದಂತೆ ಹೊರಗಿದ್ದು**
**ಮಾರಪಿತ ಕಾಗಿನೆಲೆಯಾದಿಕೇಶವನ ಪಾದ**
**ವಾರಿಜವ ನೆನೆದವನೆ ಪರಮಯೋಗಿ ॥೩॥**

ಭಾವ– ದೇಹ ವ್ಯಾಮೋಹ ಸುಖಕ್ಕಿಂತ ಆತ್ಮವ್ಯಾಮೋಹ ಸುಖವೇ ಪರಮಯೋಗಿಯ ಗುರಿ ಎಂಬ ಆಶಯವನ್ನೊಳಗೊಂಡಿದೆ ಕೀರ್ತನೆ.

ಅರ್ಥ– ಒಡಲು = ದೇಹ; ಮಾರಪಿತ = ಕಾಮನ ತಂದೆ (ವಿಷ್ಣು);
ವಾರಿಜ = ಕಮಲ

* * * *

## ೫೯
## ನಾದನಾಮ ಕ್ರಿಯೆ – ಆದಿತಾಳ

ಶ್ರೀರಾಮನ ಪೂಜಿಸಲಿಲ್ಲ– ಮೈಮರೆತೆನಲ್ಲ ॥ಪ॥

ಬಾಲತ್ವದಲಿ ಬಲು ಲೀಲೆಯಿಂದಲಿ ನಾನು
ಕಾಲವ ಕಳೆದೆನಲ್ಲ– ಮೈಮರೆತೆನಲ್ಲ ॥೧॥

ಸತಿಸುತರೆ ಎನಗೆ ಗತಿಯೆಂದು ತಿಳಿದು ನಾನು
ಮತಿಗೆಟ್ಟು ಭ್ರಾಂತನಾದೆನಲ್ಲ– ಮೈಮರೆತೆನಲ್ಲ

ಹೊನ್ನ ಗಳಿಸಿ ಪರರಿಗೆ ಅನ್ನವನಿಕ್ಕಲಿಲ್ಲ
ಚೆನ್ನಕೇಶವನ ನಂಬಲಿಲ್ಲ– ಮೈಮರೆತೆನಲ್ಲ ॥೨॥

ಭಾವ– ಐಹಿಕ ಲೋಕದತ್ತ ಮುಖಮಾಡಿ ಪಾರಮಾರ್ಥಿಕ ಲೋಕದತ್ತ ಬೆನ್ನು ತಿರುಗಿಸಿದೆನಲ್ಲ ಎಂಬ ಪಶ್ಚಾತ್ತಾಪ ಭಾವವಿದೆ.

ಅರ್ಥ– ಹೊನ್ನಗಳಿಸಿ = ಚಿನ್ನ ಸಂಪಾದಿಸಿ, ಐಶ್ವರ್ಯ ಗಳಿಸಿ.

* * * *



## ೬೦
## ಭೈರವಿ – ಆದಿತಾಳ

ಅಣು ಮಹತ್ತಾದ ದೇವ ॥ಪ॥

ಅಣುವಿಂಗೆ ಅಣುವು ಮಹತಿಂಗೆ ಮಹಿಮನು ಅಖಿಳ
ಗುಣಭರಿತ ಪರಮ ಪಾವನ ಚರಿತ ಎನ್ನ ನಿರ–
ಯಣ ಸಮಯದಲ್ಲಿ ಶ್ರೀಹರಿ ಹರಿಯೆ ಎಂದೆಂಬ
ನೆನಹನೊಲಿದಿತ್ತು ಸಲಹಯ್ಯ ॥ಅ॥

ನೋಡಿ ನಡೆಯದೆ ಹಿಂದನೇಕ ಜನ್ಮಗಳಲ್ಲಿ
ಮಾಡಿರುವ ಪಾತಕವು ವ್ಯಾಧಿರೂಪಗಳಿಂದ
ಪೀಡಿಸುತ ತನುವ ತೊತ್ತಳ ತುಳಿದು ನೆಲಕಿಕ್ಕಿ
ತೀಡಿ ಬಸವಳಿದ ಬಳಿಕ
ನಾಡಿಗಳು ಸ್ವಸ್ಥಾನದಾಸ್ಥಾನ ಭೇದಿಸಲು
ಓಡಿ ಕಂಠೋಪದಲಿ ಪ್ರಾಣ ನಿಲ್ಲದಲೆ ಒ
ದ್ದಾಡುತಿಹ ಸಮಯದಲಿ ನಾಲಗೆ ಹರಿ ನಾಮವ
ಪಾಡಿ ಪೊಗಳುವುದ ಕರುಣಿಸಯ್ಯ ॥೧॥

ಕಂದ ಬಾರೆಂತೆಂದು ಶೋಕಿಪ ಜನನಿ ಜನಕ
ನಿಂದಳುತ ಜೇಷ್ಠರು ಕನಿಷ್ಠ ಭ್ರಾತೃ ಪುತ್ರ
ಬಂಧು ಮಿತ್ರರು ಬಹು ಪ್ರಳಾಪಮಂ ಗೈವ ಸತಿ
ಅಂದವಾಗಿಹ ಮಂದಿರ
ಹೊಂದಿಪ್ಪ ಸಂಪತ್ತು ನೋಡಿ ಹಂಬಲಿಸುತಲಿ
ವೃಂದಾವನ ಪ್ರಿಯನೆ ನಿನ್ನ ಮರೆತಿದ್ದೆ ಗೋ
ವಿಂದ ವೈಕುಂಠ ವಿಭುವೇ ಎಂದು ತಾರಿಸಿ ಮು
ಕುಂದ ಮುಕುತಿಯನೊದಗಿಸಯ್ಯ ॥೨॥

**ಘಾತೀತಿಯನು ಹಿಡಿದು ಹೆಡಗಟ್ಟಿ ಪಂಚ ಮಹಾ**
**ಪಾತಕನ ತೊಗಲ ಸುಲಿದೆದೆಯ ಸೀಳೆಂಬ ಯಮ**
**ದೂತರುದ್ಧತ ಕಣ್ಗಳನು ಕಂಡು ಮನದಲಿ**
**ಭೀತಿಯಿಂ ನಡುನಡುಗಿ ಬಳಲಿ**
**ಚೇತನವು ಕುಂದಿ ನಾಲಗೆ ಬೀಳ್ವ ಸಮಯದಲಿ**
**ಯಾತರಾಸೆಯು ಬಾರದಂತಾದಿಕೇಶವ ಅ**
**ನಾಥ ಬಂಧುವೆ ಅಚ್ಯುತ ಮುರಾರಿ ಹರಿಯೆಂಬ**
**ಮಾತನಾಡಿಸಿ ಮುಕುತಿಯೊದಗಿಸಯ್ಯ ॥೩॥**

ಭಾವ– ಸರ್ವೋತ್ತಮನೂ ಸರ್ವಾಂತರ್ಯಾಮಿಯೂ ಆದ ಶ್ರೀ ಹರಿಯ ನಾಮಸ್ಮರಣೆ ಅನವರತ ನನ್ನ ನಾಲಿಗೆಯ ಮೇಲೆ ನಲಿಯುವಂತೆ ಮಾಡೆಂಬ ಮೊರೆ ಈ ಕೀರ್ತನೆಯ ಆಶಯ.

ಅರ್ಥ– ಅಣುವಿಂಗೆ... ಚರಿತ = ಅಣೋರಣಿಯಾನ್ ಮಹಿತೋ ಮಹಿಯಾನ್ ಎಂಬುದರ ಸರಳ ರೂಪ.
ಪಾವನ ಚರಿತ = ಪವಿತ್ರವಾದ ಗುಣಗಣಭರಿತ
ನಿರಯಣ (<ನಿರ್ಯಾಣ) = ಮರಣ

೧. ಕಂಠೋಪ = ಕೊರಳ ಬಳಿ
೨. ವೃಂದಾವನ ಪ್ರಿಯ = ಕೃಷ್ಣ (ವಿಷ್ಣು)
ತಾರಿಸಿ = ದಾಟಿಸಿ; ಸಾರುವಂತೆ ಮಾಡಿ
೩. ಘಾತೀತಿ = ಕೊಲೆಗಡುಕ (ಘಾತ+ಈತಿ<ಈಟಿ)
ತೊಗಲು = ಚರ್ಮ

* * * *



## ೬೧
## ಪರಜು – ಛಾಪು ತಾಳ

**ಹಿಂಗದೆ ಮನದಣಿಯ ರಂಗನ ಭಜಿಸೊ ॥ಪ॥**
**ರಂಗನ ಭಜಿಸೊ ಕೃಷ್ಣನ ಭಜಿಸೊ ॥ಅ॥**

**ಯಾತಕೆ ಸುಮ್ಮನಿರುವೆ**
**ಪಾತಕ ಹೆಚ್ಚಿ ಮೆರೆವೆ**
**ನೀತಿಯ ತಪ್ಪಿ ನೀನಿರುವೆ**
**ಭೂತಳ ಭೋಗ ಸ್ಥಿರವೆ ॥೧॥**

**ಗೆಜ್ಜೆಯ ಕಟ್ಟಿ ಆಡೊ**
**ಲಜ್ಜೆಯ ಬಿಟ್ಟು ಪಾಡೊ**
**ಮುಜ್ಜಗನ ಕೊಂಡಾಡೊ**
**ಸಜ್ಜನರ ಜೊತೆಗೂಡೊ ॥೨॥**

**ಪನ್ನಗರಾಜಶಯನನ**
**ಪನ್ನಗಭೂಷಣ ನುತನ**
**ಉನ್ನಂತ ಗುಣದವನ**
**ಚೆನ್ನಾದಿಕೇಶವನ ॥೩॥**

ಭಾವ– ಐಹಿಕ ಸುಖಾಪೇಕ್ಷಿಯಾಗಿ ಅನೀತಿಯ ಬದುಕನ್ನು ಸಾಗಿಸದೆ, ಮನಸ್ಸನ್ನು ದೈವದಲ್ಲಿ ತೊಡಗಿಸಿ ನೈತಿಕ ಬದುಕಿನ ಸಂತೃಪ್ತಿಯನ್ನು ಅನುಭವಿಸಿ ಎಂಬ ಹಿತೋಪದೇಶವಿದೆ ಇದರಲ್ಲಿ.

ಅರ್ಥ– ಮಜ್ಜಗನ = ಮೂರು ಜಗದೊಡೆಯನ; ಪನ್ನಗರಾಜ= ಆದಿಶೇಷ; ಪನ್ನಗಭೂಷಣ = ಈಶ್ವರ

* * * *

## ೬೨
## ಮುಖಾರಿ – ಝಂಪೆ ತಾಳ

**ಹೇಗಿದ್ದು ಹೇಗಾದೆಯೊ ಆತ್ಮ**
**ಯೋಗೀಶನಾನಂದಪುರದಲಿರುವುದ ಬಿಟ್ಟು ॥ಪ॥**

**ಬಸಿರ ಹಳ್ಳಿಗೆ ಬಂದು ಮಾಸನೂರಲಿ ನಿಂದು**
**ಕುಸುಕಾಡಿ ನುಡಿದು ನೆಲಬಟ್ಟೆವಿಡಿದು**
**ಕಿಸುಕದರಿವೆಯ ಪೊದ್ದು ಮಲಮೂತ್ರದಲಿ ಬಿದ್ದು**
**ವಸುಧೆಯಲಿ ದಿನಗಳೆದೆಯಲ್ಲ ಆತ್ಮ ॥೧॥**

**ಎಳೆಗೆರೆಯಲಿ ಆಡಿ ಯೌವನದೂರಿಗೆ ಬಂದು**
**ಥಳಥಳಿಪ ಅಸ್ತಾದ್ರಿ ನೆಳಲ ಸೇರಿ**
**ಅಳಲು ಸುತ ಬೆಳೆದು ದಾರಿದ್ರ್ಯ ಪೇಟೆಗೆ ಬಂದು**
**ಹಳೆಯ ಬೀಡಿಗೆ ಪಯಣವೇ ಆತ್ಮ ॥೨॥**

**ಗನ್ನಗತಕದ ಮಾತು ಇನ್ನು ನಿನಗೇತಕೋ**
**ಮುನ್ನ ಮಾಡಿದ ಕರ್ಮಭರದೊಡಲಿದೆ**
**ಉನ್ನತದ ಕಾಗಿನೆಲೆಯಾದಿಕೇಶವ ಸುಪ್ರ**
**ಸನ್ನ ಮೂರುತಿಯ ಭಜಿಸೆಲೊ ಆತ್ಮ ॥೩॥**

ಭಾವ– ಸಾಧನೆ ಮಾಡಿ ಪಡೆಯದ, ನಿರರ್ಥಕವಾಗಿ ಕಾಲ ಕಳೆದ ಮನುಷ್ಯ ಜೀವನದ ಬಗೆಗೆ ನಯವಾದ ವ್ಯಂಗ್ಯಧ್ವನಿಯನ್ನೊಳಗೊಂಡಿದೆ ಈ ಕೀರ್ತನೆ.

ಅರ್ಥ– ಆನಂದಪುರ = ಮೋಕ್ಷ
ಬಸಿರು = ಹೊಟ್ಟೆ



ಮಾಸು = ಸೆತ್ತೆ
ಕುಸುಕು = ಸಣ್ಣಗೆ ಶಬ್ದ ಮಾಡು
ನೆಲಬಟ್ಟೆ = ಭೂಮಿಯ ದಾರಿ
ಕಿಸುಕದರಿವೆ = ಕೆಂಪು ಬಟ್ಟೆ
ಅಸ್ತಾದ್ರಿ = ಹೊತ್ತು ಮುಳುಗುವ ಬೆಟ್ಟ, ಮುಪ್ಪಿನ ಬೆಟ್ಟ
ಹಳೆಯಬೀಡಿಗೆ = ಹಿಂದಿನ ಹಳೆಮನೆಗೆ
ಗನ್ನಗತಕ = ವಂಚನೆಯ

* * * *

೬೩
## ಪಂತುವರಾಳಿ – ಛಾಪುತಾಳ

ಯಾರಿಗಾರು ಬಹರು ಸಂಗಡ– ಮುಂದೆ
ಮೀರಿ ನಡೆದ ಸಂಚಿತ ಕರ್ಮವಂತೆ ಕಂತೆ ಮುಂಗಡ ॥ಪ॥

ಬರೆದ ಬರೆಹ ತೊಡೆದ ಮೇಲೆ ಕರೆದರಾಗ ಹೋಗಬೇಕು
ನೆರೆದು ಸುತ್ತಮುತ್ತ ಕುಳಿತ ಪರಮ ಬಂಧುವರ್ಗವೆಲ್ಲ
ಇರಿಸಬೇಡಿ ಸುಡುಸುಡೆಂಬರು ಸುಟ್ಟಬಳಿಕ
ಭರದಿ ಬಂದು ಮನೆಯೊಳೆಂಬರು ಪಾಪಿ ಸತ್ತ
ತರುಣಿ ಕೆಟ್ಟಳೆಂದುಕೊಂಬರು ಆತ್ಮ ॥೧॥

ಸತಿಯು ಸುತರು ಪುತ್ರಿ ಮಿತ್ರರತಿಶಯದೊಳು ತಂದೆ ತಾಯಿ
ಅತಿ ವಿನೋದಗೈವ ಭಾವ ಜತನವೆಂಬೊ ಅತ್ತೆ ಮಾವ
ಜೊತೆಗೆ ಹುಟ್ಟಿದಣ್ಣ ತಮ್ಮ ಈ ದೇಹ ತಾನು
ಸತ್ತ ಗಳಿಗೆ ಮುಟ್ಟಲಮ್ಮರು ಬರಿದೆ ನಾವು
ವ್ಯಥೆಗೆ ಸಿಕ್ಕಿದೆವೆಂಬರು ಆತ್ಮ ॥೨॥

ಕಟ್ಟಿದರ್ಥ ಕರೆವ ಎಮ್ಮೆ ಕೊಂಡುಕೊಂಡ ಸಾಲಕದನು
ಪೋಟು ಮಾಡಿ ಮಕ್ಕಳೊಡನೆ ಅಷ್ಟು ಹೇಳಿ ಸಾವತನಕ
ದುಷ್ಟ ಜನರು ಸುಮ್ಮನಿರುವರೆ ಕೈಯಲೊದಗಿ
ದಷ್ಟು ಧರ್ಮವನ್ನು ಮರೆವರೆ ಆದಿಕೇಶವನ್ನ
ಮುಟ್ಟಿ ಭಜಿಸಿ ಕಡೆಗೆ ಬಿಡುವರೆ ಆತ್ಮ ॥೩॥

ಭಾವ– ಬರುವುದೂ ಒಂಟಿಯಾಗಿ ಹೋಗುವುದೂ ಒಂಟಿಯಾಗಿ ಎಂಬ ಸರಳ ಭಾವದ ಕೀರ್ತನೆ.

ಅರ್ಥ– ಪೋಟು = ಸಂಬಂಧ ಕಲ್ಪಿಸು

* * * *



೬೪
## ಕಲ್ಯಾಣಿ – ಝಂಪೆ ತಾಳ

ಕೀರ್ತನೆಯ ಮಾಡಿ ಕೈವಲ್ಯ ಪಡೆವರು ಜನರು– ಹರಿ ॥ಪ॥
ಮೂರ್ತಿ ಶ್ರೀ ಚೆನ್ನಕೇಶವನ ಮನದೊಳಗಿಟ್ಟು ॥ಅ॥

ಹಲವು ಮಾಯಗಳಿಂದ ಹಂಬಲಿಸಿ ಕೆಡಬೇಡ
ಬಲವಂತರೊಡನೆ ಹಗೆ ಮಾಡಬೇಡ
ಕುಲದಲ್ಲಿ ಜನಿಸಿ ಕುಚೋದ್ಯ ಮಾಡಲುಬೇಡ
ನಲಿದು ಹರಿಯ ಪೊಗಳದ ನಾಲಗೆಯು ಬೇಡ ॥೧॥

ಮಂದಮತಿಗಳ ಕೂಡ ಮಹಕಥೆಯ ನುಡಿಬೇಡ
ಯತಿಯಾದ ಮೇಲೆ ಸತಿಸುತರಾಸೆ ಬೇಡ
........................................................
ಹಿತ ತಪ್ಪಿ ನಡೆವಂಥ ಹೆಂಡತಿಯು ಬೇಡ ॥೨॥

ಕೆಟ್ಟು ಹೋದವರನ್ನು ತಿರುಗಿ ಕರೆತರಬೇಡ
ಮುಟ್ಟಾದ ಮೇಲೆ ಮೋಹಿಸಿ ಕೂಡಬೇಡ
ಭ್ರಷ್ಟನಾಡಿದನೆಂದು ಸಿಟ್ಟಿನಲಿ ನುಡಿಬೇಡ
ಕಷ್ಟದೆಸೆಯೊಳು ಧೈರ್ಯ ಬಿಟ್ಟು ಕೆಡಬೇಡ ॥೩॥

ವಿಟಜನರ ಕೂಡಿ ವೇಶ್ಯಾವಾರ್ತೆಗಿಳಿಯಬೇಡ
ಸಟೆ ಹೇಳಿ ಸಂಸಾರ ಕೆಡಿಸಬೇಡ
ತುಟಿ ಮೀರ್ದ ಹಲ್ಲಂತೆ ದೂತ ಎಂದಿಗು ಬೇಡ
ನಿಟಿಲನೇತ್ರನು ನಾನೆನುವ ಜಂಭ ಬೇಡ ॥೪॥

**ತೀರ್ಥ ಯಾತ್ರೆಗೆ ಪೋಗಿ ತಿರುತಿರುಗಿ ಬಳಲಿ ಕೃ**
**ತಾರ್ಥನಾದೆನು ಎಂಬ ಘನತೆ ಬೇಡ**
**ಪಾರ್ಥಸಾರಥಿ ಕಾಗಿನೆಲೆಯಾದಿಕೇಶವನ**
**ಸಾರ್ಥಕದಿ ಭಜಿಸಿ ಸುಖಿಯಾಗು ಮನುಜ ॥೫॥**

ಭಾವ– ಹರಿಕೀರ್ತನೆಯಿಂದ ಮೋಕ್ಷ ಪಡೆಯುವುದನ್ನು ಬಿಟ್ಟು ದುಶ್ಚಟಗಳಿಂದ ದುರ್ಮಾರ್ಗಗಳಿಂದ ಕೆಡಬೇಡ ಎಂಬ ಹಿತೋಪದೇಶದ ಕೀರ್ತನೆ ಇದು.

ಅರ್ಥ– ಕೈವಲ್ಯ = ಮೋಕ್ಷ
ಮಂದಮತಿ = ಮೂರ್ಖ, ಅಜ್ಞಾನಿ
ವಿಟ = ಲಂಪಟ
ಸಟೆ = ಸುಳ್ಳು
ನಿಟಿಲನೇತ್ರ = ಹಣೆಗಣ್ಣುಳ್ಳ ಶಿವ
ಕೃತಾರ್ಥ = ಧನ್ಯ
ಪಾರ್ಥಸಾರಥಿ = ಅರ್ಜುನನ ಬಂಡಿಬೋವನಾದ ಕೃಷ್ಣ

* * * *



## ೬೫
## ಪಂತುವರಾಳಿ – ಆದಿತಾಳ

**ಎಷ್ಟು ಪ್ರೀತಿಯೊ ಮನಕೆ ಎಷ್ಟು ಪ್ರೀತಿಯೊ ॥ಪ॥**
**ಇಷ್ಟವೆಂದು ತಿಳಿದು ಈ ಕಷ್ಟ ಸಂಸಾರ ಹೊರುವುದು ॥ಅ॥**

**ಹಸಿವು ತೃಷೆಯು ಶೋಕ ಮೋಹ ಅಸುವಗೊಂಬ ಜನನ ಮರಣ**
**ವಿಷ ಸಮಾನವಾದ ಬಹಳ ವ್ಯಸನ ಮೆರವಣಿ**
**ಮುಸುಕಿ ಕವಿವ ವ್ಯಾಘ್ರದಂತೆ ಅಡಗಿ ಮುಪ್ಪುಗೊಂಬ ರೋಗ**
**ವಿಷಯದೊಳಗೆ ಕ್ಲೇಶಬಟ್ಟು ವಿಷಯದಿಚ್ಛೆ ಬಿಡದ ಮನಕೆ ॥೧॥**

**ನೀರಗುಳ್ಳೆ ಎನಿಪ ಕಣ್ಣ ನೀರಜಾಕ್ಷಿ ಎಂದು ಮತ್ತೆ**
**ಸೋರುವ ಜಘನ ಕರಿಯ ಕುಂಭ, ಸುರಿವ ಶ್ಲೇಷ್ಮದ**
**ಮೋರೆ ಚಂದ್ರಬಿಂಬ, ಮಾಂಸವಿಕಾರವಾದ ಕುಚವ ಕನಕಕಲಶ**
**ಸಾರವೆಂದು ನರಕರೂಪಿನ ನಾರಿಯರಿಗೆ ಭ್ರಮಿಸಿ ಬಾಳ್ವುದು ॥೨॥**

**ಅಸ್ತಿ ಚರ್ಮ ರಕ್ತ ಮಾಂಸ ವಿಸ್ತರವಾದ ಹೇಯ ಮಧ್ಯಮೆ**
**ವಸ್ತು ಏರುತಿಳಿಯುತುದಯ ಅಸ್ತಮಾನದಿ**
**ರಕ್ತಕುಸುಮಗಂಧಮಾಲೆ ಕಸ್ತೂರಿಯನು ಪೂಸಿಕೊಂಡು**
**ವಸ್ತ್ರ ಒಡೆವ ಇಟ್ಟು ಬಹಳ ಶಿಸ್ತು ನರಕಿಯೆನಿಸಿ ಮೆರೆವುದು ॥೩॥**

**ಬೇಯದಿರುವ ಹಸಿಯ ಬಿಂದಿಗೆ ತೋಯ ಹಿಂಗುವಂತೆ ಸಾಕ್ಷಿ**
**ಆಯುಷ್ಯವನರಿಯದಿರುವ ಕಾಯ ಸೌಖ್ಯದಿ**
**ಆಯಾಸಪಟ್ಟು ಗಳಿಸಿದರ್ಥ ಹೇಯವೆನದೆ ಭೋಗಿಸುತ್ತ**
**ಬಾಯ ಸವಿಯನುಂಡು ಕಡೆಗೆ ನಾಯ ಸಾವು ಸಾಯೊ ಬಾಳಿಗೆ ॥೪॥**

**ಮನ್ನಿಸಿ ಗುರುಹಿರಿಯರುಕ್ತಿಯನ್ನು ಕೇಳದೆ ಕಿವುಡುಗೆಟ್ಟು**
**ಜೊನ್ನೆಯ ತುಪ್ಪ ಅನ್ನ ಒಲ್ಲದೆ ಎಲುವು ಮಾಂಸವನ್ನು ತಿಂಬ**
**ಕುನ್ನಿಯಾದೆನಯ್ಯ ಕೃಷ್ಣ ನಿನ್ನ ಮಾಯದೊಳು ಸಿಲ್ಕಿದ**
**ಎನ್ನನುದ್ಧರಿಸೊ ಸುಪ್ರಸನ್ನ ಆದಿಕೇಶವ** ॥೫॥

ಭಾವ– ಬಿಡಬೇಕೆಂದರೂ ಬಿಡಲಾಗದ, ಐಹಿಕ ಸುಖಕ್ಕೇ ಅಂಟಿಕೊಂಡು ನರಳುವ ದುರ್ಬಲ ಮನಸ್ಸನ್ನು ವಿಡಂಬಿಸುತ್ತಾ ಆತ್ಮಶೋಧನೆ ಮಾಡಿಕೊಳ್ಳುವ ಆಶಯದಿಂದ ಕೂಡಿದೆ ಈ ಕೀರ್ತನೆ.

ಅರ್ಥ– ೧. ಅಸುವ = ಪ್ರಾಣವನ್ನು
ಮೆರವಣಿ = ಮೆರವಣಿಗೆ
ವ್ಯಾಘ್ರ = ಹುಲಿ
ವಿಷಯ = ಕಾಮ
೨. ನೀರಜಾಕ್ಷಿ = ಕಮಲದಂತಹ ಕಣ್ಣುಳ್ಳವಳು
ಸೋರುವ =ಜೋಲುವ
ಜಘನ = ನಿತಂಬ
ಕರಿ = ಆನೆ
ಮೋರೆ = ಮುಖ
ಕುಚ = ಮೊಲೆ
೩. ಅಸ್ತಿ = ಮೂಳೆ
ಮಧ್ಯಮೆ = ಮೈನೆರದ ಹೆಣ್ಣು
ಪೂಸಿಕೊಂಡು = ಲೇಪಿಸಿಕೊಂಡು
೪. ತೋಯ = ನೀರು
೫. ಜೊನ್ನೆ (<ದೊನ್ನೆ) = ಎಲೆಯ ಬಟ್ಟಲು
ಕುನ್ನಿ = ನಾಯಿ

* * * *



## ೬೬
## ಪಂತುವರಾಳಿ – ಏಕತಾಳ

**ಅಹಹ ಮೋಸ ಹೋದೆನಯ್ಯ ಹರಿಯೆ ನಿನ್ನ ನೆನೆಯದೆ** ॥ಪ॥
**ಇಹದ ಭೋಗ ನಿತ್ಯವೆಂದು ಮೆರೆದೆ ನಿನ್ನ ನೆನೆಯದೆ** ॥ಅ॥

**ಹೇಯವಾದ ದೇಹವನ್ನು ಶ್ಲಾಘನೀಯವೆಂದು ನಾಲ್ವರೊಡನು**
**ಪಾಯದಿಂದ ಹೇಮದಂತೆ ಬಣ್ಣಗಟ್ಟಿ**
**ಬಾಯ ಬಡಿದು ತಂದು ತಂದು**
**ಕಾಯ ಕಳೆದೆನಲ್ಲದೆ** ॥೧॥

**ಚಂಚಲತ್ವ ಬಲವು ಫಲವು ಜಾಲ ಕೋಪ ತಾಪದಿಂದ**
**ವಂಚನಾರ್ಥ ಹಲವು ಕೆಲವು ಮಿಂಚಿನಂತೆ ಸುಳಿಸುತ**
**ಸಂಚುಮಾಡಿ ಕಾಲನವರ ವಂಚನೆಗಳ ತಿಳಿಯದ್ಹೋದೆ**
**ಪಂಚಬಾಣನಯ್ಯ ಕಾಯೊ ಎನ್ನವಗುಣಗಳೆಣಿಸದೆ** ॥೨॥

**ದಿಕ್ಕುದೆಸೆಯದಾರೊ ಅಕ್ಕರದಿಂದಾರ ಕರೆವೆ**
**ಉಕ್ಕಿ ಸವಿದು ಮನುಜರೊಡನೆ**
**ಸೊಕ್ಕಿ ದಿನವ ಕಳೆದೆನೆನಗೆ**
**ತಕ್ಕುದಾಯಿತಯ್ಯ ಕೇಳು ಒಡೆಯ ಆದಿಕೇಶವ** ॥೩॥

ಭಾವ– ಅವಗುಣಗಳ ದೆಸೆಯಿಂದ ಕೆಟ್ಟೆ ಎಂಬ ಪಶ್ಚಾತ್ತಾಪ ಭಾವ ಈ ಕೀರ್ತನೆಯ ಆಶಯ.

ಅರ್ಥ– ಕಾಯ = ಶರೀರ; ಪಂಚಬಾಣ = ಮನ್ಮಥ
ಪಂಚಬಾಣನಯ್ಯ = ಕೃಷ್ಣ

* * * *

೬೭
## ಮುಖಾರಿ – ಝಂಪೆ ತಾಳ

ನೊಂದೆ ನಾ ಹರಿಯೆನ್ನದೆ ॥ಪ॥

ನೊಂದೆ ನಾ ಸತ್ತು ಹುಟ್ಟುವ ಕೋಟಲೆಗಳಿಂದ
ನೊಂದೆ ನಾ ಪಂಚೇಂದ್ರಿಯಗಳ ಬಾಧೆಗಳಿಂದ
ನೊಂದೆ ನಾ ವೈರಿ ಷಡ್ವರ್ಗದಾಟಗಳಿಂದ
ನೊಂದೆ ನಾ ಹರಿಯೆನ್ನದೆ ॥ಅ॥

ಒಂದು ಕ್ಷಣ ದುರ್ಗಂಧ ವಾಯು ಬರೆ ಹೇಸುವರು
ತಂದೆಯುದರದಿ ಮೂರು ಮಾಸ ತಾಯುದರದಲಿ
ಸಂದೇಹವಿಲ್ಲ ನವಮಾಸ ಮಲ ಮೂತ್ರದೊಳು
ಒಂದಾಗಿ ನಿಂದು ಕುದಿಕುದಿದು ಹುಟ್ಟಿ
ಬಂದೆ ಎಂಬತ್ತು ನಾಲುಕು ಲಕ್ಷ ಯೋನಿಯೊಳು
ನೊಂದೆ ಮುನ್ನೂರ ಅರವತ್ತು ಬೇನೆಗಳಿಂದ
ಒಂದು ಕ್ಷಣವೂ ಯಮನ ಬಾಧೆ ತಾಳಲಾರೆನು
ಹಿಂದೆಗೆಯದಿರು ಇಂಬಿತ್ತು ಕಾಯೊ ಮುರಾರಿ ॥೧॥

ಎಲವುಗಳ ಗಳ ಮಾಡಿ ಬಲು ನರಂಗಳ ಬಿಗಿದು
ಚೆಲುವ ತೊಗಲಂ ಪೊದಿಸಿ ಮಜ್ಜೆ ಮಾಂಸವ ತುಂಬಿ
ಹೊಲೆ ಗೂಡಿನೊಳು ಪುಗಿಸಿ ತಲೆ ಹುಳಕ ನಾಯಂತೆ
ಅಲೆದು ಮನೆಮನೆಯೆದುರು ಉಚ್ಚಿಷ್ಟವನು ತಿಂದು
ಕಳವು ಹಾದರ ಪಂಚಪಾತಕಂಗಳ ಮಾಡಿ
ನೆಲೆಯಿಲ್ಲದಧಿಕತರ ನರಕದೊಳಗಾಳ್ದೆನೈ
ಒಲಿದು ಬಂದು ರಕ್ಷಿಸು ನಾಗವೈರಿ ವಾಹನನೆ
ನಳಿನ ಲೋಚನನೆ ನೀ ಎನ್ನ ಕೈ ಬಿಡದೆ ॥೨॥



ಹುಟ್ಟುವಾಗಲೆ ಜಾತಕರ್ಮ ಷೋಡಶವೆಂಬ
ಕಟ್ಟಳೆಯ ದಿವಸದಲಿ ನಂಟರಿಷ್ಟರು ಕೂಡಿ
ಕಟ್ಟಿ ಮುಂಜಿಯ, ಹರುಷದಲಿ ಮದುವೆ ಮಾಡಿ ಉಂ
ಡುಟ್ಟು ಹಾಡಿ ಹರಸಿದರು ನೂರ್ಕಾಲ ಬದುಕೆಂದು
ಬಿಟ್ಟು ಪ್ರಾಣಂಪೋಗೆ ಪೆಣನೆಂದು ಮೂಲೆಯೊಳು
ಕಟ್ಟಿ ಕುಳ್ಳಿರಿಸಿ ಹೊಟ್ಟೆಯ ಹೊಯ್ದುಕೊಂಡಳುತ
ಸುಟ್ಟು ಸುಡುಗಾಡಿನಲಿ ಪಿಂಡಗಳನಿಕ್ಕಿ ಬಲು
ಕಟ್ಟಳೆಯ ಕಾಣಿಸಿದರಯ್ಯ ಹರಿಯೆ ॥೩॥

ಹಲವು ಜನುಮದಿ ತಾಯಿ ಎನಗಿತ್ತ ಮೊಲೆಹಾಲು
ನಲಿನಲಿದು ಉಂಬಾಗ ನೆಲಕೆ ಬಿದ್ದುದ ಕೂಡಿ
ಅಳೆದು ನೋಡಿದರೆ ಕ್ಷೀರಾಂಬುಧಿಗೆ ಎರಡು ಮಡಿ
ಹಲವಾರು ಸಲ ಅತ್ತ ಅಶ್ರುಜಲವನು ಕೂಡಿ
ಅಳೆದು ನೋಡಿದರೆ ಲವಣಾರ್ಣವಕೆ ಮೂರು ಮಡಿ
ಎಲವುಗಳ ಕೂಡಿದರೆ ಮೇರುವಿಗೆ ನಾಲ್ಕು ಮಡಿ
ಸುಲಿದು ಚರ್ಮವ ಹಾಸಿದರೆ ಧರೆಗೆ ಐದು ಮಡಿ
ನೆಲೆ ಯಾವುದೀ ದೇಹಕೆ ನರಹರಿಯೆ ॥೪॥

ತಂದೆತಾಯಿಗಳಾರು ಇದ್ದ ಊರಾವುದು
ಹೊಂದಿದ್ದ ಮನೆಯೆಲ್ಲಿ ಇದ್ದ ಸತಿ ಸುತರಾರು
ಹಿಂದಿದ್ದ ಕುಲಗೋತ್ರ ನಾಮಂಗಳೆನಗೆಷ್ಟು
ಬಂದಂಥ ಸುಖದುಃಖವೆಷ್ಟು
ಅಂದು ಕೊಂದವರಾರು ಇಂದು ಕಾಯ್ವರದಾರು
ದಂದುಗವನಿದನೆಲ್ಲ ನೀಬಲ್ಲೆ ನಾನರಿಯೆ
ತಂದೆ ನೆಲೆಯಾದಿಕೇಶವನೆ ನಿನ್ನಯ ಪಾದ
ದ್ವಂದ್ವವನು ಎಂದಿಗೂ ಬಿಡೆನು ಬಿಡೆನೊ ॥೫॥

ಭಾವ– ಹರಿ ನಾಮ ಸ್ಮರಣೆ ಮಾಡದೆ ಜನ್ಮಜನ್ಮಾಂತರಗಳ ಕಷ್ಟ ಕೋಟಲೆಗಳಿಗೆ ಈಡಾದೆ ಎಂಬ ನೋವೇ ಈ ಕೀರ್ತನೆಯ ಮೂಲಧಾತು.

ಅರ್ಥ– ಪಂಚೇಂದ್ರಿಯಗಳು = ಕಣ್ಣು, ಕಿವಿ, ಮುಗು, ನಾಲಗೆ, ಚರ್ಮ
ವೈರಿ ಷಡ್ವರ್ಗ = ಆರು ಹಗೆಗಳು (ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ)

೧. ತಂದೆಯುದರದಿ ಮೂರು ಮಾಸ = ಪ್ರತಿಯೊಂದು ಜೀವವೂ ಮೂರು ತಿಂಗಳು ತಂದೆಯ ಹೊಟ್ಟೆಯಲ್ಲಿದ್ದು ತದನಂತರ ತಾಯಿಯ ಹೊಟ್ಟೆಯಲ್ಲಿ ಒಂಬತ್ತು ತಿಂಗಳು ಇರುತ್ತದೆ ಎಂಬ ನಂಬಿಕೆ.
ಯೋನಿ = ಸ್ತ್ರೀ ಜನನೇಂದ್ರಿಯ; ಇಂಬಿತ್ತು = ಆಶ್ರಯಕೊಟ್ಟು

೨. ಗಳ = ಬಿದಿರ ಸಣ್ಣ ಬೊಂಬು; ಉಚ್ಚಿಷ್ಟ = ಎಂಜಲು
ಪಂಚಪಾತಕಗಳು = ಬ್ರಹ್ಮಜ್ಞಾನಿಯ ಕೊಲೆ, ಹೆಂಡ ಕುಡಿಯುವುದು, ಕದಿಯುವುದು, ಗುರುಪತ್ನಿಯೊಂದಿಗೆ ಕೂಡುವುದು.
ನಾಗವೈರಿ = ಸರ್ಪಶತ್ರು (ಗರುಡ)
ನಳಿನಲೋಚನ = ಕಮಲಾಕ್ಷ (ವಿಷ್ಣು)

೩. ಜಾತಕರ್ಮ = ಹುಟ್ಟಿದಾಗ ಮಾಡುವ ಸಂಸ್ಕಾರ
ಷೋಡಶ ಕಟ್ಟಳೆ = ಹದಿನಾರು ಸಂಸ್ಕಾರಗಳು (ಗರ್ಭಾದಾನ, ಪುಂಸವನ, ಸೀಮಂತ, ಜಾತಕರ್ಮ, ನಾಮಕರಣ, ಅನ್ನಪ್ರಾಶನ, ಚೌಲ, ಉಪನಯನ, ಪ್ರಾಜಾಪತ್ಯ, ಸಾಮ್ಯ, ಆಗ್ನೇಯ, ವೈಶ್ವದೇವ, ಗೋದಾನ, ಸಮಾವರ್ತನ, ವಿವಾಹ ಮತ್ತು ಅಂತ್ಯೇಷ್ಟಿ)
ಮುಂಜಿ = ನೆದೆ ಹುಲ್ಲಿನಿಂದ ಮಾಡಿದ ಉಡಿದಾರ

೪. ಕ್ಷೀರಾಂಬುಧಿ = ಹಾಲ್ಗಡಲು
ಎರಡುಮಡಿ = ಎರಡುಪಟ್ಟು
ಲವಣಾರ್ಣವ = ಉಪ್ಪಿನ ಸಮುದ್ರ
ಮೂರುಮಡಿ = ಮೂರುಪಟ್ಟು
ನಾಲ್ಕುಮಡಿ = ನಾಲ್ಕುಪಟ್ಟು
ಐದು ಮಡಿ = ಐದು ಪಟ್ಟು

೫. ದಂದುಗ = ಕಷ್ಟ; ದ್ವಂದ್ವ = ದ್ವಯ, ಎರಡು

* * * *



## ೬೮
## ಕಲ್ಯಾಣಿ –ಛಾಪುತಾಳ

**ನೆಚ್ಚದಿರು ಸಂಸಾರ ನೆಲೆಯಲ್ಲವೀ ಕಾಯ**
**ಅಚ್ಯುತನ ನಾಮವನು ನೆನೆದು ಸುಖಿಯಾಗೊ ॥ಪ॥**

**ಗಳಿಸದಿರು ಸೀಮೆಯನು ಗಳಿಸದಿರು ದ್ರವ್ಯವನು**
**ಗಳಿಸದಿರು ನೀ ದುರಿತರಾಶಿಗಳನು**
**ನಳಿನನಾಭನ ದಿವ್ಯ ನಾಮವನು ನೆನೆನೆನೆದು**
**ನೆಲೆಯಾದ ಪರಮ ಪದವಿಯ ಪಡೆಯೊ ಮನವೆ ॥೧॥**

**ನೋಡದಿರು ಪರಸತಿಯ ಕೂಡದಿರು ದುರ್ಜನರ**
**ಆಡದಿರು ಮಾತುಗಳ ಗರ್ವದಿಂದ**
**ಬೇಡದಿರು ಕೈಯ ಹಿಂದೆಗೆವ ಲೋಭಿಯನು, ಕೊಂ**
**ಡಾಡದಿರು ಬೀದಿಗೊಳುಂಬ ದೈವಗಳ ॥೨॥**

**ನಾನಾ ಜನ್ಮದಿ ಬಂದ ನಾಟಕದ ಬೊಂಬೆಯಿದು**
**ಮಾನಕ್ಕೆ ಮೆಚ್ಚಿ ನೀ ಮರುಳಾಗದೆ**
**ಜಾಣತನದಿಂ ಕಾಗಿನೆಲೆಯಾದಿಕೇಶವನ**
**ಮಾನಸದಲಿ ನೆನೆದು ಸುಖಿಯಾಗು ಮನುಜ ॥೩॥**

ಭಾವ– ಬಾಳು ಅನಿತ್ಯವಾದುದರಿಂದ ಸನ್ಮಾರ್ಗದಲ್ಲಿ ನಡೆದು ಸರ್ವೋತ್ತಮನ ಕೃಪೆಗೆ ಪಾತ್ರವಾಗುವುದು ಒಳ್ಳೆಯದು ಎಂಬ ಆಶಯವನ್ನೊಳಗೊಂಡಿದೆ ಈ ಕೀರ್ತನೆ. ರಾಜ್ಯ (ಸೀಮೆ) ದಾಹ, ದ್ರವ್ಯ ದಾಹ ದುರಂತದಲ್ಲಿ ಪರ್ಯವಸಾನವಾಗುತ್ತವೆ ಎಂಬುದನ್ನು ಬಹುಶಃ ವಿಜಯನಗರದ ದುರಂತದ ಹಿನ್ನೆಲೆಯಲ್ಲಿ ಹೇಳಿರಬೇಕೆನಿಸುತ್ತದೆ.

ಅರ್ಥ– ಕಾಯ = ಶರೀರ, ಅಚ್ಯುತ = ವಿಷ್ಣು

೧. ದುರಿತ – ಪಾಪ
ನಳಿನನಾಭ = ಹೊಕ್ಕುಳಲ್ಲಿ ಕಮಲವುಳ್ಳವನು (ವಿಷ್ಣು)
೨. ಕೊಂಡಾಡು = ಹೊಗಳು
ಕೂಳು = ಅನ್ನ
೩. ಮಾನಸ = ಮನಸ್ಸು

* * * *



೬೯

## ಶ್ರೀರಾಗ – ಅಟತಾಳ

ಧರ್ಮೇಂದ್ರಿಯಕ್ಕೆ ದಟ್ಟಡಿಯನಿಡಲೊಲ್ಲೆ ದು
ಷ್ಕರ್ಮೇಂದ್ರಿಯಕ್ಕೆ ಕಾಲ್ಗೆರಗುತ್ತಲಿಹೆ ಮರುಳೆ ॥ಪ॥

ಪುಸ್ತಕವ ಬಿಚ್ಚಿ ಪೌರಾಣ ಶಾಸ್ತ್ರಗಳಿಂ
ವಿಸ್ತರಿಸಿ ಹರಿಯ ಕಲ್ಯಾಣಗುಣ ಕಥೆಯನು
ಸ್ವಸ್ಥದಿಂ ಕುಳ್ಳಿರ್ದು ಕೇಳೆಂಬ ಠಾವಿನಲಿ
ಮಸ್ತಕಕೆ ವ್ಯಥೆಯೆಂದು ಮನೆಯತ್ತ ನೀ ನಡೆವೆ
ಹಸ್ತದಿಂ ಹಣ ಭತ್ತ ಹಚ್ಚಡಂಗಳ ಕೊಟ್ಟು
ಕುಸ್ತರಿಸಿ ಬಿನುಗು ಚಾರಿತ್ರ್ಯವಂ ಲಾಲಿಸುತ
ದುಸ್ತರದ ಲೆತ್ತ ಚದುರಂಗ ಪಗಡೆಯನು ಉದ
ಯಾಸ್ತದವರೆಗಾಡುತ ಮೇಲೇಳದಿಹೆ ಮರುಳೆ ॥೧॥

ಸುರಭಿ ಸೇವಂತಿ ಮಲ್ಲಿಗೆ ಮೊಲ್ಲೆ ಬಕುಳ ಪಾ
ದರಿ ಚಂಪಕಾ ಕಂಜ ಕಣಿಗಲು ಶ್ರೀ ತುಳಸಿ
ಪರಿಮಳದ ಪಚ್ಚೆತೆನೆ ಹರಿಪಾದಕರ್ಪಿಸುತೆ
ನಿರುಮಾಲ್ಯ ಪರಿಮಳವನಾಘ್ರಾಣಿಸೆನೆ ಒಲ್ಲೆ
ಬಿರಿದ ಕೆಂಜಾಜಿ ಪುಷ್ಪಂಗಳಂ ವನಿತೆಯರ
ಸಿರಿ ಮುಡಿಗೆ ಮುಡಿಸಿ ಕುಂತಳ ಸೌರಭವ ಕಂಡು
ಹರುಷದಿಂ ರೋಮ ಪುಳಕಿತನಾಗುತಡಿಗಡಿಗೆ
ಪರಮ ಸಂತೋಷಮಂ ನೀ ಪಡೆಯುತಿಹೆ ಮರುಳೆ ॥೨॥

ಶತಲಕ್ಷ ಕೋಟಿ ಪ್ರಣತೆಗಳಲ್ಲಿ ಬೆಳಗಿ ಗೋ
ಘೃತ ತೈಲ ದೀಪವಚ್ಯುತ ನಿಲಯದಲಿ ಭಾಗ
ವತನೃತ್ಯವಂ ನೋಡುತತಿಶಯದ ಹರಿದಿನ

ವ್ರತದಲ್ಲಿ ಜಾಗರವ ಮಾಡದಲೆ ನಿದ್ರೆಗೈವೆ
ಕೃತಕ ಪಣ್ಯಾಂಗನೆಯ ಚತುರ ನೃತ್ಯಕೆ ಮನೋ
ರಥ ಸಿದ್ಧಗೊಳಿಸಿ ಈಕ್ಷಿಪೆನೆಂದು ಕುಜನ ಸಂ
ಮತವೆರಸಿ ಬೆಳತನಕ ಕುಳ್ಳಿರುತ ನಿದ್ರಾ ವ
ರ್ಜಿತನಾಗಿ ಪರಮ ಸಂತಸ ಪಡೆಯುತಿಹೆ ಮರುಳೆ ॥೩॥

ಗಂಧ ಶಾಲ್ಯಾನ್ನ ನವಘೃತ ತೋಯ ಪಳಿದ್ಯ ನಲ
ವಿಂದ ಪರಮಾನ್ನ ಮಹಶಾಕ ಸೀಕರಣೆಯನು
ಒಂದೆರಡು ಪರುಠವಿಸಿ ದ್ವಾದಶಿ ದಿನದಂದು ಮು
ಕುಂದಾರ್ಪಣವ ಮಾಡಿ ಮನೆಯೊಳಗೆ ಉಣ್ಣದಿಹೆ
ಬಂದಾವನಾದೊಡಂ ಕರೆಯೆ ದೇಹದ ಪುಣ್ಯ
ವೆಂದವರ ಮನೆಗಳಿಗೆ ಹೋಗಿ ನೀ ಕುಳ್ಳಿರ್ದು
ಚೆಂದದಿಂ ಬಣ್ಣಿಸುತ ಮಿಂಚುಕೂಳುಗಳನ್ನು
ತಿಂದೊಡಲ ಪೊರೆದು ಕಾಲವ ಕಳೆಯುತಿಹೆ ಮರುಳೆ ॥೪॥

ತಿದ್ದುವ ವಿಮಲ ವೈಷ್ಣವರು ಬರುವುದನು ಕಂ
ಡೆದ್ದು ಪದಗಳಿಗೆ ನಮಸ್ಕಾರವನು ಮಾಡದಲೆ
ಉದ್ದು ಕನ್ನಡಿ ಮೇಲೆ ಉರುಳುವಂತಲ್ಲಿಂದ
ಎದ್ದು ದುಷ್ಟರ ಪದಕೆ ಬಿದ್ದು ನೀ ನರಳುತಿಹೆ
ಮದ್ದ ನಾ ಪೇಳುವೆನು ಬುದ್ಧಿಯಿಂ ತಿಳಿ ವಿಶ್ವ
ದುದ್ಧಾರಕನು ಕಾಗಿನೆಲೆಯಾದಿ ಕೇಶವನ
ಮುದ್ದು ನಾಮಸ್ಮರಣೆಯ ಮಾಡುತಲಿ ಜವನವರ
ಗೆದ್ದು ಸಿರಿ ವೈಕುಂಠ ಪದವಿಯನು ಪಡೆ ಮರುಳೆ ॥೫॥

ಭಾವ– ಧರ್ಮ ಮಾರ್ಗವನ್ನು ಬಿಟ್ಟು ಅಧರ್ಮಮಾರ್ಗಕ್ಕಿಳಿದ ವ್ಯಕ್ತಿಗಳನ್ನು ಈ ಕೀರ್ತನೆಯಲ್ಲಿ ವಿಡಂಬಿಸಲಾಗಿದೆ; ಸ್ವಚ್ಛ ನೀರನ್ನು ಬಿಟ್ಟು ಕೊಚ್ಚೆ ನೀರಲ್ಲಿ ಹೊರಳುವ ಪರಿಯನ್ನು ಗೇಲಿ ಮಾಡಿ ಕೊನೆಗೆ ಮದ್ದನ್ನು ಸೂಚಿಸಲಾಗಿದೆ.



ಅರ್ಥ– ದಟ್ಟಡಿ = ತಪ್ಪು ಹೆಜ್ಜೆ; ನಡಿಗೆ ಬಾರದ ಮಕ್ಕಳು ಇಡುವ ಹೆಜ್ಜೆ

೧. ಮಸ್ತಕ = ತಲೆ
ಕುಸ್ತರಿಸಿ = ವಿಸ್ತೃತವಾಗಿ
ಬಿನಗು =ಕ್ಷುದ್ರ
೨. ಸುರಭಿ = ಪರಿಮಳ
ಕಂಜ = ಕಮಲ, ನಿರುಮಾಲ್ಯ= (<ನಿರ್ಮಾಲ್ಯ) ದೇವರ ಪೂಜೆಗಿಟ್ಟು ತೆಗೆದ ಬಾಡಿದ ಹೂ
ಆಘ್ರಾಣಿಸು = ಮೂಸಿ ನೋಡು
ಕುಂತಳ = ಕೂದಲು
೩. ಪ್ರಣತೆ = ಹಣತೆ
ಗೋಘೃತ = ಹಸುವಿನ ತುಪ್ಪ
ಹರಿದಿನ ವ್ರತ = ಏಕಾದಶಿ ವ್ರತ
ಜಾಗರ = ಜಾಗರಣೆ
ಪಣ್ಯಾಂಗನೆ = ಸೂಳೆ
ಬೆಳತನಕ = ಬೆಳಗಿನವರೆಗೆ
೪. ತೋಯ = ತೊವ್ವೆ
ಪಳಿದ್ಯ = ಪಲ್ಯ
ಪರುಠವಿಸಿ = ಸಿದ್ಧಗೊಳಿಸಿ
ಮಿಂಚುಕೂಳು = ಕೊರ್ರೈಸುವ ಆಹಾರ (ತಾಮಸಾಹಾರ)
೫. ಜವನವರ = ಯಮನ ದೂತರ

* * * *

## ೭೦
## ಹಿಂದೂಸ್ತಾನಿ ಕಾಪಿ – ಏಕತಾಳ

ದಾಸನಾಗೋ ಭವಪಾಶನೀಗೋ– ವಿಶೇಷನಾಗೋ ॥ಪ॥

ಏಸೊ ಕಾಯಂಗಳ ಕಳೆದು ಎಂಬತ್ತಾಲ್ಕು ಲಕ್ಷ ಜೀವ
ರಾಶಿಯನ್ನು ದಾಟಿ ಬಂದೆ ಈ ಶರೀರ ತಾನಲ್ಲ ತನ್ನದಲ್ಲ
ಆಶೆಯು ತರವಲ್ಲ ಸ್ಥಿರವಲ್ಲ ಮುಂದೆ ಬಾಹೋದಲ್ಲ
ಆಶಾಕ್ಲೇಶ ದೋಷವೆಂಬ ಅಬ್ಧಿಯೊಳು ಮುಳುಗಿ ಯಮನ
ಪಾಶಕ್ಕೊಳಗಾಗದೆ ನಿರ್ದೋಷಿಯಾಗೊ– ಸಂತೋಷಿಯಾಗೊ ॥ಅ॥

ಕಾಶಿ ವಾರಣಾಸಿ ಕಂಚಿ ಕಾಳಹಸ್ತಿ ರಾಮೇಶ್ವರ
ಏಸು ದೇಶ ತಿರುಗಿದರೆ ಬಾಹೋದೇನೊ– ಅಲ್ಲಿ ಆಹೋದೇನೊ
ದೋಷನಾಶೆ ಕೃಷ್ಣವೇಣಿ ಗಂಗೆ ಗೋದಾವರಿ ಭವ
ನಾಶಿ ತುಂಗಭದ್ರೆ ಯಮುನೆ ವಾಸದಲ್ಲಿ– ಉಪವಾಸದಲ್ಲಿ
ಮೀಸಲಾಗಿ ಮಿಂದು ಜಪತಪ ಹೋಮನೇಮಗಳ
ಏಸು ಬಾರಿ ಮಾಡಿದರೂ ಫಲವೇನೊ– ಇದು ಚೆಲುವೇನೊ
ವಾಸುದೇವನೆಂಬ ಒಳಗಿಹ ಹಂಸನ ಸೇರಿ
ಲೇಸನುಂಡು ಮೋಸಗೊಳದೆ ಮುಕ್ತನಾಗೊ– ನೀ ಶಕ್ತನಾಗೊ ॥೧॥

ಅತ್ತಲೋ ಇತ್ತಲೋ– ಎತ್ತಲೋ ಈ ಸಂಸಾರ
ಬತ್ತಲೆಗೆ ಬತ್ತಲೆ ನಿತ್ಯವಲ್ಲ– ಪರಿಮಿತಿ ಇಲ್ಲ
ಕತ್ತಲೆ ಕಾವಳದೊಳು ಕಾಣಲಾರದೆ ನೀನು
ಸತ್ಯವೆಂಬ ದಾರಿಯನು ಸೇರಲಿಲ್ಲ– ಲೇಸು ತೋರಲಿಲ್ಲ
ಉತ್ತಮ 'ಅ ಉ ಮ' ಎಂಬ ಓಂಕಾರ ಬೀಜಾಕ್ಷರ
ಚಿತ್ತದಲಿ ಗ್ರಹಿಸು ನೀ ಬಿಡಬೇಡ– ಬಿಟ್ಟು ಕೆಡಬೇಡ



ಹೊತ್ತಾರೆಯಲೊ ಬೈಗಿನಲೊ ಆಗಲೊ ಈಗಲೊ ಕಾಯ
ನಿತ್ಯವೆಂದು ಸ್ಥಿರವೆಂದು ನಂಬಬೇಡ– ನಿನಗೆ ಡಂಬ ಬೇಡ ॥೨॥

ಆಯಿತೊ ಹೋಯಿತೊ ಏನಾಯಿತೊ ಈ ದೇಹಕ್ಕೆ
ತಾಯಿ ಯಾರೊ ತಂದೆ ಯಾರೊ ಮಡದಿ ಯಾರೊ ಮಕ್ಕಳ್ಯಾರೊ
ಮಾಯದೊಳು ಸಿಲುಕಿ ಬಲು ಕಾಲದಿಂದ ಶ್ರೀ ರಘು
ರಾಯನೆಂಬ ವಸ್ತುವಿನ ಸ್ಮರಣೆ ಬಿಟ್ಟು– ಭವದಿ ಮಮತೆ ಇಟ್ಟು
ನಾಯ ಬಾಯ ಅರಿವೆಯಂತೆ ನಾನಾ ಕೋಟಲೆಯಲಿ ಬಿದ್ದು
ಬಾಯಿ ಬಾಯಿ ಬಿಡುತಲಿ ಸಾವುದೇನೊ– ನೀ ನೋವುದೇನೊ
ತ್ರಾಯಿ ತ್ರಾಯಿ ತ್ರಾಯಿಯೆಂದು ತ್ರೈಲೋಕ್ಯದೊಡೆಯ ಪುಣ್ಯ
ದಾಯಕನ ಹೊಂದಿ ನೀ ಧನ್ಯನಾಗೊ– ಮುಕ್ತ ಮಾನ್ಯನಾಗೊ ॥೩॥

ಅಂದಿಗೊ ಇಂದಿಗೊ ಒಮ್ಮೆ ಸಿರಿ ಕಮಲೇಶನನ್ನು
ಒಂದು ಬಾರಿ ಅರುಹಿಂದ ನೆನೆಯಲಿಲ್ಲ– ಮನ ತಣಿಯಲಿಲ್ಲ
ಬಂದು ಬಂದು ಭ್ರಮೆಗೊಂಡು ಮಾಯಾಮೋಹಕೆ ಸಿಕ್ಕಿ
ನೊಂದು ಬೆಂದು ಒಂದರಿಂದ ಉಳಿಯಲಿಲ್ಲ– ಬಂಧ ಕಳೆಯಲಿಲ್ಲ
ಸಂದೇಹವ ಮಾಡದಿರು ಅರಿವು ಎಂಬ ದೀಪ ಹಿಡಿದು
ಇಂದು ಕಾಣು ದೇಹದಲಿ ಪಿಂಡಾಂಡ– ಹಾಗೆ ಬ್ರಹ್ಮಾಂಡ
ಇಂದಿರಾ ರಮಣನ ಧ್ಯಾನವನ್ನು ಮಾಡಿ ವಿವೇಕದಿ ಮು
ಕುಂದನಿಂದ ಮುಕುತಿಯ ಬೇಡು ಕಂಡ್ಯ– ನೀ ನೋಡು ಕಂಡ್ಯ ॥೪॥

ನೂರು ಬಾರಿ ಶರಣು ಮಾಡಿ ನೀರ ಮುಳುಗಲ್ಯಾಕೆ ಪರ
ನಾರಿಯರ ನೋಟಕೆ ಗುರಿಯ ಮಾಡಿದೆ– ಮನ ಸೆರೆಯ ಮಾಡಿದೆ
ಸೋರೆಯೊಳು ಸುರೆ ತುಂಬಿ ಮೇಲೆ ಹುವ್ವಿನ ಹಾರ ಹಾಕಿ
ಗೀರುಗಂಧ ಅಕ್ಷತೆಯ ಧರಿಸಿದಂತೆ– ನೀ ಮೆರೆಸಿದಂತೆ
ಗಾರುಡಿಯ ಮತ ಬಿಟ್ಟು ನಾದಬ್ರಹ್ಮನ ಪಿಡಿದು
ಸಾರಿ ಸೇರಿ ಮುಕ್ತಿಯನ್ನು ಶಮನದಿಂದ– ಮತ್ತೆ ಸುಮನದಿಂದ
ನಾರಾಯಣ ಅಚ್ಯುತಾನಂತಾದಿಕೇಶವನ
ಸಾರಾಮೃತವನುಂಡು ಸುಖಿಸೊ ಲಂಡ ಜೀವವೆ– ಎಲೊ ಭಂಡ ಜೀವವೆ ॥೫॥

ಭಾವ– ದಾಸ ದೀಕ್ಷೆ ಹೊಂದಿದವರು ಬರಿಯ ಶುಷ್ಕ ಆಚಾರವಿಚಾರಗಳಲ್ಲಿ ಕಾಲ ಕಳೆಯದೆ ಓಂಕಾರ ಮಂತ್ರದ ಜಾಡನ್ನು ಹಿಡಿದು ಒಳಗಿರುವ ಹಂಸನನ್ನು ಕಾಣಲು ಪ್ರಯತ್ನಿಸಬೇಕು. ಬ್ರಹ್ಮರಂಧ್ರದ ಅಮೃತವನ್ನು ಹೀರಿ ಸುಖಿಸಬೇಕು– ಎಂದು ಕನಕದಾಸರು ಈ ಕೀರ್ತನೆಯಲ್ಲಿ ಕರೆಕೊಟ್ಟಿದ್ದಾರೆ. ಬೂಟಾಟಿಕೆಯ ದಾಸರೇ ಅಧಿಕವಾಗಿ ಕಣ್ಣಿಗೆ ಬೀಳುತ್ತಿದ್ದುದರಿಂದ ('ಬೂಟಾಟಿಕೆ ದಾಸಯ್ಯನಿಗೆ ಬುಲ್ಲೆಲ್ಲ ನಾಮ' ಎಂಬ ಜನಪದ ಗಾದೆ ಈ ಹಿನ್ನೆಲೆಯಿಂದಲೇ ಮೂಡಿದಂಥದು) ಅಂಥವರಿಗೆ ಕನಕದಾಸರು 'ಗಾರುಡಿಯ ಮತ ಬಿಟ್ಟು ನಾದ ಬ್ರಹ್ಮನ ಪಿಡಿದು' ಮುಕ್ತಿಯನ್ನು ಸಾಧಿಸು ಎಂದು ಕಿವಿ ಮಾತು ಹೇಳಿದ್ದಾರೆ.

ಅರ್ಥ– ಭವ = ಹುಟ್ಟು ಸಾವಿನ ಸಂಸಾರ
ಕಾಯ = ಶರೀರ
ಬಾಹೋದಲ್ಲ = ಬರುವುದಲ್ಲ
ಅಬ್ಧಿ = ಸಮುದ್ರ

೧. ಏಸು = ಎಷ್ಟು
ಬಾಹೋದೇನೊ = ಬರುವುದೇನೊ
ಆಹೋದೇನೊ = ಆಗುವುದೇನೊ
ವಾಸುದೇವ = ಕೃಷ್ಣ
ಲೇಸು = ಒಳ್ಳೆಯದು

೨. ಕಾವಳ = ಮಂಜು
ಬೀಜಾಕ್ಷರ = ಮಂತ್ರದ ಮೊದಲ ಅಕ್ಷರ
ಹೊತ್ತಾರೆ = ಬೆಳಗು, ಬೈಗು = ಸಂಜೆ

೩. ರಘುರಾಯ = ರಾಮ (ವಿಷ್ಣು)
ವಸ್ತು = ಪರಬ್ರಹ್ಮ
ಅರಿವೆ = ಬಟ್ಟೆ
ತ್ರಾಯಿ (<ತ್ರಾಹಿ) = ರಕ್ಷಿಸು

೪. ಕಮಲೇಶ = ವಿಷ್ಣು
ಅರುಹು = ಜ್ಞಾನ



ಪಿಂಡಾಂಡ = ಜೀವಾತ್ಮ
ಬ್ರಹ್ಮಾಂಡ = ಪರಮಾತ್ಮ
ಇಂದಿರಾರಮಣ = ವಿಷ್ಣು
ಮುಕುಂದ = ವಿಷ್ಣು

೫. ಸೋರೆ = ಮಡಕೆ
ಸುರೆ = ಹೆಂಡ
ಗಾರುಡಿಯ = ಡಂಭಾಚಾರದ, ಬೂಟಾಟಿಕೆಯ
ನಾದಬ್ರಹ್ಮನ ಪಿಡಿದು = ಪ್ರಣವ ಮಂತ್ರದ ಮೂಲಕ; ಪ್ರಣವ ಸ್ವರೂಪಿಯನ್ನು ಹಿಡಿದು
ಶಮನ = ಶಾಂತಿ
ಸುಮನ = ಒಳ್ಳೆಯ ಮನಸು, ಹೂವಿನಂಥ ಮನಸು
ಲಂಡ = ದುಷ್ಟ, ನೀತಿಬಾಹಿರ;

* * * *

## ೭೧
## ದ್ವಿಜಾವಂತಿ – ಆದಿತಾಳ

ಬಲಗೊಂಬೆ ಚೆನ್ನರಾಯ ಭಕ್ತರ ಪ್ರಿಯ ॥ಪ॥

ವೇದ ವಾದಗಳಲ್ಲಿ। ಕಾದುವ ಜನರಲ್ಲಿ
ಓದುವ ವಿದ್ಯೆಗಳಲ್ಲಿ। ವಾದವ ಗೆಲಿಸಯ್ಯ ॥೧॥

ಆರು ವೈರಿಗಳಲ್ಲಿ। ಅಷ್ಟ ಗಜಂಗಳಲ್ಲಿ
ಮೂರು ಏಳರಲ್ಲಿ। ಮುಂದೆ ನೀ ಗೆಲಿಸಯ್ಯ ॥೨॥

ಪರಮ ಭಕ್ತಿಯೊಳ್ನಿನ್ನ। ಚರಣಕೆರಗುವೆ ಮುನ್ನ
ಸಿರಿಯ ಪಾಲಿಪ ಚೆನ್ನ। ವರದ ಕೇಶವ ರನ್ನ ॥೩॥

ಭಾವ– ಭಕ್ತನ ಕೈಬಿಡದೆ ಕಾಯಿ ಎಂಬುದೇ ಈ ಸರಳ ಕೀರ್ತನೆಯ ಆಶಯ.

ಅರ್ಥ– ಬಲಗೊಂಬೆ = ಪ್ರದಕ್ಷಿಣೆ ಬರುವೆ
ಕಾದುವ = ಹೋರಾಡುವ, ಜಗಳ ಕಾಯುವ
ಆರುವೈರಿಗಳು = ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ
ಅಷ್ಟಗಜ = ಎಂಟು ಆನೆ. ಅಂದರೆ ಎಂಟು ಮದಗಳು (ಕುಲ, ಶೀಲ, ಧನ, ರೂಪ, ಯೌವನ, ವಿದ್ಯೆ, ತಪ, ರಾಜ್ಯ)
ಮೂರು = ಪಾಪತ್ರಯಗಳು (ಸಂಚಿತ, ಆಗಾಮಿ, ಪ್ರಾರಬ್ಧ)
ಏಳು = ಸಪ್ತ ವ್ಯಸನ (ಸ್ತ್ರೀ, ಅಕ್ಷ, ಮೃಗಯಾ, ಪಾನ, ವಾಕ್ ಪಾರುಷ್ಯ, ದಂಡ ಪಾರುಷ್ಯ, ಅರ್ಥದೂಷಣೆ)

* * * *



## ೭೨
## ಶಂಕರಾಭರಣ – ಛಾಪು ತಾಳ

ನಿನಗಿಂತ ಕುಂದೇನೊ ನಮ್ಮಮ್ಮ ಜಯಲಕ್ಷ್ಮಿ ॥ಪ॥

ನಿನಗಿಂತ ಕುಂದೇನೊ ಸನಕಾದಿಗಳ ಸ್ವಾಮಿ
ಮನಸಿಜನೊಡೆಯನೆ ಕನಕಗರ್ಭನ ಜನಕ ॥ಅ॥

ಮಚ್ಚ್ಯಾವತಾರ ನೀನಾದರೆ– ಆಕೆ
ಮಚ್ಚ್ಯಗಂಗಳೆ ತಾನಾದಳೊ
ಹೆಚ್ಚಿನ ಶಂಖವ ಪಿಡಿದರೆ– ಆಕೆ
ನಿಚ್ಚ ಶಂಖಕಂಠಳಾದಳಯ್ಯ ॥೧॥

ನೀಲವರ್ಣ ನೀನಾದರೆ– ಆಕೆ
ನೀಲಕುಂತಳೆ ತಾನಾದಳೊ
ಲೋಲ ಕಮಲನಾಭನಾದರೆ– ಆಕೆ
ಬಾಲ ಕಮಲಮುಖಿಯಾದಳಯ್ಯ ॥೨॥

ಬೆಟ್ಟವ ನೀನೊಂದು ಪೊತ್ತರೆ– ಆಕೆ
ಬೆಟ್ಟದಂಥ ಕುಚವೆರಡು ಪೊತ್ತಳೊ
ಮೆಟ್ಟಿ ಶೇಷನ ನೀ ತುಳಿದರೆ– ಆಕೆ
ಕಟ್ಟಿ ಬಾಸೆಗೆ ಶೇಷನ ನಿಲಿಸಿಹಳಯ್ಯ ॥೩॥

ಗಜರಾಜವರದ ನೀನಾದರೆ– ಆಕೆ
ಗಜಗಮನೆಯು ತಾನಾದಳಯ್ಯ
ನಿಜ ನರಸಿಂಹ ನೀನಾದರೆ– ಆಕೆ
ಭಜಿಸಿ ಸಿಂಹಮಧ್ಯೆಯಾದಳಯ್ಯ ॥೪॥

**ಈ ಪರಿಯೊಳು ನೀನು ಜನಿಸಿದೆ– ಭಲೆ**
**ಭಾಪುರೆ ಬಾಡದೊಳು ನೆಲೆಸಿದೆ**
**ಗೋಪಿಯರ ಮೋಹ ಸಲಿಸಿದೆ– ಚೆಲುವ**
**ಶ್ರೀಪತಿ ಆದಿಕೇಶವರಾಯ ಮೆರೆದೆ ॥೫॥**

ಭಾವ– ಲಕ್ಷ್ಮಿ ನಿನಗಿಂತ ಕಡಿಮೆಯೇನಲ್ಲ ತಿಳಿದುಕೊ ಎಂದು ಭಗವಂತನನ್ನು ಛೇಡಿಸುತ್ತಾ, ರೇಗಿಸುತ್ತಾ ಅನುರಾಗದಿಂದ ಆರಾಧಿಸುವ ಕೀರ್ತನೆ ಇದು. ಉಪ್ಪು ಹುಳಿ ಖಾರವಿಲ್ಲದ ಸಪ್ಪೆ ಸ್ತುತಿಗಿಂತ, ಕದನ ತರಾಟೆಯ ನಂತರದ ಮದನ ಭರಾಟೆ ಅಥವಾ ಕಿಸರಾಟದ ನಂತರದ ಕೊಸರಾಟ ಹೆಚ್ಚು ಆನಂದದಾಯಕ ಎಂಬ ನಿಲುವಿನಿಂದ ಮೂಡಿದ ಹಾಡಿದು.

ಅರ್ಥ– ಮನಸಿಜ = ಮನ್ಮಥ
ಕನಕಗರ್ಭನ ಜನಕ = ಬ್ರಹ್ಮನ ತಂದೆ (ವಿಷ್ಣು)

೧. ಮಚ್ಚ್ಯಗಂಗಳೆ = ಮೀನಾಕ್ಷಿ
ಶಂಖಕಂಠ = ಶಂಖದಂಥ ಕೊರಳು
೨. ನೀಲವರ್ಣ = ಕಪ್ಪು ಬಣ್ಣ
ನೀಲಕುಂತಳೆ = ಕಪ್ಪಾದ ಕೂದಲುಳ್ಳವಳು
ಕಮಲನಾಭ = ಹೊಕ್ಕುಳಲ್ಲಿ ಕಮಲವುಳ್ಳವನು
ಕಮಲಮುಖಿ = ಕಮಲದಂಥ ಮುಖವುಳ್ಳವಳು
೩. ಕುಚ = ಸ್ತನ
ಶೇಷ = ಹಾವು
ಬಾಸೆ = ಜಡೆ, (ಹೊಕ್ಕುಳ ಮೇಲ್ಭಾಗದಲ್ಲಿ ಹಾವಿನ ಮರಿಯಂತೆ ಕಾಣುವ ಕೂದಲು)
೪. ಗಜಗಮನೆ = ಆನೆಯಂಥ ಗಂಭೀರ ನಡೆಗೆಯವಳು
ಸಿಂಹಮಧ್ಯೆ = ಸಿಂಹದಂತೆ ಸಣ್ಣ ಸೊಂಟವುಳ್ಳವಳು.
೫. ಭಾಪುರೆ = ಶಹಬ್ಬಾಸ್
ಶ್ರೀಪತಿ = ಲಕ್ಷ್ಮಿಯ ಗಂಡ (ವಿಷ್ಣು)

* * * *



## ೭೩
## ಮೋಹನ – ಆಟತಾಳ

**ಅರಿತು ಭಜಿಪರ್‍ಯಾರಯ್ಯ ರಂಗಯ್ಯ ನಿನ್ನ ॥ಪ॥**

**ಸಿರಿದೇವಿಯು ಕಿರಿಬೆರಳಲ್ಲಿರುವ ಸೊಬಗನ್ನು**
**ಅರಿಯಲಾರಳೊ ದೇವ ॥ಅ॥**

**ಇಂದಿರಾದೇವಿಯು ಅರಿಯಲಾರಳು ದೇವ**
**ಬೃಂದಾರಕರೆಲ್ಲ ನಿಂದು ಯೋಚಿಪರು**
**ನಂದ ತೀರ್ಥರ ಮತದೊಳಗೆ ಬಂದವರೆಲ್ಲ**
**ಎಂದಿಗಾದರು ಪರಮಾನಂದ ಪೊಂದುವರು ॥೧॥**

**ಮಾನವರು ಹೀನಮಾರ್ಗದೊಳು ಮುಳುಗಿಹರು**
**ಜ್ಞಾನಿಗಳು ನಿಂದು ಧ್ಯಾನಿಪರು ನಿನ್ನ**
**ನೀನೆ ದಯಮಾಡಿ ಸಲಹೊ ಎನ್ನನು ಕೃಷ್ಣ**
**ಕಾನನದೊಳು ಕಣ್ಣುಮುಚ್ಚಿ ಬಿಟ್ಟಿಹರೊ ॥೨॥**

**ಜಲದೊಳಗಿನ ಕಪ್ಪೆ ಜಲದ ಸವಿಯರಿಯದು**
**ಜಲದ ಸುಗಂಧವ ಜಲವರಿಯದು**
**ನೆಲೆಯ ಕಂಡವರ್‍ಯಾರು ನೆಲೆಯಾದಿಕೇಶವನೆ**
**ಸುಲಲಿತ ತತ್ತ್ವವನು ಸುಲಭ ಮಾರ್ಗದಿ ತೋರೊ ॥೩॥**

ಭಾವ– ಪ್ರತಿಯೊಬ್ಬರ ಅಂತರಾತ್ಮನಾಗಿ ಅಡಗಿರುವ ಭಗವಂತನನ್ನು ಜ್ಞಾನಿಗಳು ಮಾತ್ರ ಕಾಣುತ್ತಾರೆಯೇ ವಿನಾ ಅಜ್ಞಾನಿಗಳು ಕಾಣಲಾರರು ಎಂಬ ಆಶಯವನ್ನೊಳಗೊಂಡಿರುವ ಕೀರ್ತನೆಯಿದು. 'ಜಲದ ಸುಗಂಧವ ಜಲವರಿಯದು' ಎಂಬ ಮಾತು ನಮ್ಮೊಳಗೇ ಇರುವ ದೇವರನ್ನು

ನಾವು ಕಾಣಲಾರದ ಅಜ್ಞಾನದ ಅತಂತ್ರ ಸ್ಥಿತಿಯಲ್ಲಿದ್ದೇವೆ ಎಂಬುದನ್ನು ಧ್ವನಿಸುತ್ತದೆ.

ಅರ್ಥ– ೧. ಇಂದಿರಾದೇವಿ = ಲಕ್ಷ್ಮಿ
ಬೃಂದಾರಕರು = ದೇವತೆಗಳು
ನಂದತೀರ್ಥರ ಮತ = ಮಧ್ವಮತ
೨. ಕಾನನ = ಕಾಡು
೩. ಜಲ = ನೀರು,
ಸುಲಲಿತ = ಸುಂದರ, ಸರಳ.

* * * *



## ೭೪
## ಕೇದಾರಗೌಳ – ಅಟತಾಳ

ಬಂಟನಾಗಿ ಬಾಗಿಲ ಕಾಯ್ವೆ ಹರಿಯ ॥ಪ॥
ವೈಕುಂಠದ ಸೊಂಪಿನ ದಾಸರ ಮನೆಯ ॥ಅ॥

ಹೊರಸುತ್ತು ಪ್ರಾಕಾರ ನಾ ಸುತ್ತಿ ಬರುವೆ
ಬರುವ ಹೋಗುವರ ವಿಚಾರಿಸುತಿರುವೆ
ಕರದಿ ಕಂಬಿಯ ಪೊತ್ತು ಅಲ್ಲಿ ನಿಂದಿರುವೆ ಶ್ರೀ
ಹರಿಯ ಸಮ್ಮುಖದ ಓಲಗದೊಳಿರುವೆ ॥೧॥

ತೊತ್ತು ತೊಂಡನಾಗಿ ಬಾಗಿಲ ಕಾಯ್ವೆ
ಚಿತ್ರದ ಚಾವಡಿ ರಜವನು ಬಳಿವೆ
ಮುತ್ತಿನ ರಂಗವಲ್ಲಿಯನಿಟ್ಟು ಬರೆವೆ
ರತ್ನಗಂಬಳಿ ಹೊತ್ತು ಹಾಸುವೆನು ॥೨॥

ವೇಳೆವೇಳೆಗೆ ನಾನೂಳಿಗವ ಮಾಡುವೆ
ಆಲವಟ್ಟಿಗೆ ಚಾಮರವ ಬೀಸುವೆ
ತಾಳದಂಡಿಗೆ ಭೃಂಗಿ ಮೇಳಗಳ ಕೂಡಿ ಶ್ರೀ
ಲೋಲನ ಕೊಂಡಾಡಿ ಪಾಡುವೆನು ॥೩॥

ಎಂಜಲ ಹರಿವಾಣಂಗಳ ಬೆಳಗುವೆ
ಕಂಜನಾಭನ ಪಾದಕಮಲವ ತೊಳೆವೆ
ರಂಜಿಪ ಕುಸುಮದ ಮಾಲೆ ತಂದಿಡುವೆ
ಸಂಜೆಗೆ ಪಂಜಿನ ದಾಸನಾಗಿರುವೆ ॥೪॥

**ಮೀಸಲೂಳಿಗವ ನಾ ಮಾಡಿಕೊಂಡಿರುವೆ**
**ಶೇಷ ಪ್ರಸಾದವ ಉಂಡುಕೊಂಡಿರುವೆ**
**ಶೇಷಗಿರಿ ಕಾಗಿನೆಲೆಯಾದಿಕೇಶವನ**
**ದಾಸರ ದಾಸರ ದಾಸರ ಮನೆಯ ॥೫॥**

ಭಾವ– ವಿಷ್ಣುವಿನ ಸೇವಕನಾಗಿ ಅವನ ಸೇವೆಯಲ್ಲಿ ನನ್ನ ದೇಹ ಸವೆಸುವೆನು ಎಂಬ ಅರ್ಪಣಾ ಮನೋಭಾವ ಈ ಕೀರ್ತನೆಯ ನಾಡಿ ಮಿಡಿತವಾಗಿದೆ.

ಅರ್ಥ– ಬಂಟ = ಸೇವಕ
ವೈಕುಂಠದ ಸೊಂಪಿನ ದಾಸರು = ವಿಷ್ಣು
ಕಂಬಿ = ಬೆತ್ತ
ತೊತ್ತು ತೊಂಡ = ಸೇವಕ
ಚಾವಡಿ = ಸಭಾಸ್ಥಾನ
ರಜ = ಧೂಳು
ಆಲವಟ್ಟಿಗೆ =ಬೀಸಣಿಗೆ
ಭೃಂಗಿ ಮೇಳ = ನೃತ್ಯ ಮೇಳ
ಕಂಜನಾಭ = ಹೊಕ್ಕುಳಲ್ಲಿ ಕಮಲವುಳ್ಳವನು (ವಿಷ್ಣು)
ಶೇಷಪ್ರಸಾದ = ಉಂಡು ಉಳಿದ ಅನ್ನ
ಶೇಷಗಿರಿ = ತಿರುಪತಿ

* * * *



## ೭೫
## ಕಲ್ಯಾಣಿ – ಝಂಪೆ ತಾಳ

**ಏನೆಂದು ಕೊಂಡಾಡಿ ಸ್ತುತಿಸಲೋ ದೇವ**
**ನಾನೇನು ಬಲ್ಲೆ ನಿನ್ನ ಮಹಿಮೆಗಳ ಮಾಧವ ॥ಪ॥**

**ಹರಿಮುಕುಂದನು ನೀನು ನರಜನ್ಮ ಹುಳು ನಾನು**
**ಪರಮಾತ್ಮನು ನೀನು ಪಾಮರನು ನಾನು**
**ಗರುಡ ಗಮನನು ನೀನು ಮರುಳು ಪಾಪಿಯು ನಾನು**
**ಪರಂಜ್ಯೋತಿಯು ನೀನು ದುರುಳ ತಿರುಕನು ನಾನು ॥೧॥**

**ವಾರಿಧಿಶಯನನಾದ ಕಾರುಣ್ಯನಿಧಿ ನೀನು**
**ಘೋರದಿಂದಿಹ ಕಾಮಿಕ್ರೋಧಿ ನಾನು**
**ಈರೇಳು ಭುವನದೊಳು ಇರುವ ಮೂರುತಿ ನೀನು**
**ದೂರಿ ನಿನ್ನನು ಬಯ್ವ ದುಷ್ಟ ನಾನು ॥೨॥**

**ಅಣುರೇಣು ತೃಣಗಳಲಿ ಪರಿಪೂರ್ಣನು ನೀನು**
**ಕ್ಷಣಕ್ಷಣಕೆ ಅವಗುಣದ ಕುಕರ್ಮಿ ನಾನು**
**ವಾಣಿಯರಸನ ಪೆತ್ತ ವೈಕುಂಠಪತಿ ನೀನು**
**ಕ್ಷಣಭಂಗುರ ತನುವಿನ ಗೊಂಬೆ ನಾನು ॥೩॥**

**ಕಂಬದಲಿ ಬಂದ ಆನಂದ ಮೂರುತಿ ನೀನು**
**ನಂಬಿಕೆಯಿಲ್ಲದ ಪ್ರಪಂಚಕನು ನಾನು**
**ಅಂಬರೀಷಗೆ ಒಲಿದ ಅಕ್ರೂರಸಖ ನೀನು**
**ಡಂಬ ಕರ್ಮಿಯು ನಾನು ನಿರ್ಜಿತನು ನೀನು ॥೪॥**

**ತಿರುಪತಿಯ ವಾಸ ಶ್ರೀ ವೆಂಕಟೇಶನೆ ನಿನ್ನ**
**ಚರಣಸೇವಕರ ಸೇವಕನು ನಾನು**
**ಬಿರುದುಳ್ಳವನು ನೀನು ಮೊರೆಹೊಕ್ಕವನು ನಾನು**
**ಸಿರಿ ಕಾಗಿನೆಲೆಯಾದಿಕೇಶವನು ನೀನು ॥೫॥**

ಭಾವ– ಭಗವಂತನ ಅಮಿತತೆಯನ್ನೂ ಮಾನವನ ಸೀಮಿತತೆಯನ್ನೂ ಮನಗಂಡು ಆರ್ದ್ರ ಹೃದಯದಿಂದ ಹಾಡಿರುವ ಕೀರ್ತನೆಯಿದು. ಪರಮಾತ್ಮನ ಪರಿಪೂರ್ಣತೆಯನ್ನೂ ಮಾನವನ ಅರೆಕೊರೆಯನ್ನೂ ಜೊತೆಜೊತೆಯಲ್ಲಿ ಥಳುಕು ಹಾಕಿ ಹೇಳಿರುವ ರೀತಿಯಲ್ಲಿ ಸರಳತೆ ಸಹಜತೆಗಳು ಕೆನೆಗಟ್ಟಿವೆ.

ಅರ್ಥ– ೧. ಪಾಮರ = ಸಾಮಾನ್ಯ, ಅಜ್ಞಾನಿ
ಮರುಳು = ಭ್ರಾಂತ
ದುರುಳ = ದುಷ್ಟ
೨. ವಾರಿಧಿಶಯನ = ಸಮುದ್ರದಲಿ ಮಲಗುವವನು
ಈರೇಳು = ಹದಿನಾಲ್ಕು
ದೂರಿ = ನಿಂದಿಸಿ, ಅಪವಾದ ಹೊರಿಸಿ
೩. ವಾಣಿಯರಸ = ಸರಸ್ವತಿಯ ಗಂಡ, ಬ್ರಹ್ಮ
ಕ್ಷಣಭಂಗುರ – ಅಶಾಶ್ವತ
೪. ಪ್ರಪಂಚಕ = ವಂಚಕ
ಡಂಬ = ಆಡಂಬರ, ಬೂಟಾಟಿಕೆ
ನಿರ್ಜಿತ = ಸೋಲಿಲ್ಲದವನು
೫. ಚರಣ = ಪಾದ

* * * *



## ೭೬
## ಮುಖಾರಿ –ಝಂಪೆ ತಾಳ

**ಏನಿದೆತ್ತಣ ಬಯಕೆ ಎಲೊ ಮಂಕುಜೀವ**
**ನೀನು ಅರಿತರೆ ಪೇಳು ನಿಜವನೆನಗೆ ॥ಪ॥**

**ಎಂಟೆರಡು ಮಾರುತರು ಎಡೆಎಡೆಗೆ ಬರುತಿರಲು**
**ನಂಟರೈವರು ಕೂಡಿ ಆಕ್ರಮಿಸುತಿಹರು**
**ದಾಂಟುವುದು ಅಸದಳವೊ ಎರಡೊಂದು ಬಲೆಗಳಲಿ**
**ಕಂಟಕದಿ ಬಲು ತಾಪದಿಂದ ಬಳಲುವರು ॥೧॥**

**ಆರೆರಡು ದಂತಿಗಳು ದಾರಿಯೊಳು ನಿಂತಿಹವು**
**ಆರು ಮೂರು ತುರಗಗಳು ದಾರಿಯನು ಕೊಡವು**
**ಮೂರೆರಡನೀಡಾಡಿ ತೋರುವುದು ಎನ್ನಾಣೆ**
**ಸಾರಿ ಏನೇನಹುದು ಎಂಬುದನು ನೋಡು ॥೨॥**

**ಪರರನ್ನು ನಿಂದಿಸದೆ ಪರಯೋಗ್ಯ ನೀನಾಗಿ**
**ಪರರ ಪಾಪಗಳ ನೀ ಕಟ್ಟಿಕೊಳದೆ**
**ಪರಮಾತ್ಮ ಕಾಗಿನೆಲೆಯಾದಿಕೇಶವರಾಯ**
**ಪರಹಿತಕೆ ಸಖನೆಂದು ಭಜಿಸೆಲೊ ಮನುಜ ॥೩॥**

ಭಾವ– ಸಾಧಕನಿಗೆ ಎದುರಾಗುವ ಅಡ್ಡಿ ಆತಂಕಗಳನ್ನು ದಾಟಿದ ಹೊರತೂ ಸಿದ್ಧಿ ದುರ್ಲಭ ಎಂಬ ಧ್ವನಿಯಿದೆ ಇದರಲ್ಲಿ.

ಅರ್ಥ– ಎಂಟೆರಡು ಮಾರುತರು = ಹತ್ತು ವಾಯುಗಳು
ಪಂಚಪ್ರಾಣ ೫ (ಪ್ರಾಣ, ಅಪಾನ, ಉದಾನ, ಸಮಾನ ಮತ್ತು ವ್ಯಾನ)
ಉಪವಾಯು ೫ (ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯ)

ನಟರೈವರು = ಪಂಚೇಂದ್ರಿಯಗಳು (ಕಣ್ಣು, ಕಿವಿ, ನಾಲಗೆ, ಮೂಗು, ಚರ್ಮ)
ಎರಡೊಂದು ಬಲೆ = ಈಷಣಾತ್ರಯ (ದಾರೇಷಣ, ಪುತ್ರೇಷಣ, ವಿತ್ತೇಷಣ) ಅಥವಾ ಹೆಣ್ಣು, ಹೊನ್ನು, ಮಣ್ಣು.
ಆರೆರಡು ದಂತಿಗಳು = ಎಂಟು ಆನೆಗಳು ಅಂದರೆ ಎಂಟು ಮದಗಳು. (ಕುಲ, ಶೀಲ, ಧನ, ರೂಪ, ಯೌವನ, ವಿದ್ಯೆ, ತಪ, ರಾಜ್ಯ)
ಆರು ಮೂರು ತುರಗಗಳು = ೯ ಕುದುರೆಗಳು ಎಂದರೆ ನವರಂಧ್ರಗಳು ಅಥವಾ ನವ ವಿಧಶಕ್ತಿ (ಕಣ್ಣು–೨, ಕಿವಿ–೨, ಮೂಗಿನ ಹೊಳ್ಳೆ–೨, ಬಾಯಿ–೧, ಮೂತ್ರದ್ವಾರ–೧, ಗುದದ್ವಾರ–೧)
ಮೂರೆರಡು = ಷಡ್ವೈರಿಗಳು (ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ)
ಈಡಾಡಿ = ಚೆಲ್ಲಾಡಿ, ಎರಚಾಡಿ

* * * *



## ೭೭
## ಸೌರಾಷ್ಟ್ರ – ಆದಿತಾಳ

**ದಾಸಾರ್ಯರ ದಾಸರ ದಾಸ ನಾನು– ಬಾಢ**
**ದೀಶ ಕಾಯ್ದುಕೊಳ್ಳೊ ॥ಪ॥**

**ಗುಟ್ಟು ಮಾಡಿಕೊಂಡಿರದೆ ಕಂಡವರಿಗೆ ಕಾರ್ಪಣ್ಯ**
**ಪಟ್ಟು ಬಡವನಾದೆನಲ್ಲ– ಅಯ್ಯ ಕೈ**
**ಗೊಟ್ಟು ರಕ್ಷಿಸುವರಿಲ್ಲ ಜನ್ಮ ಜನ್ಮಂಗಳಲಿ**
**ಪುಟ್ಟುವಂತೆ ಮಾಡಬೇಡ ಮಾಧವ ಮನ್ನಿಸೊ ಎನ್ನ ॥೧॥**

**ಮಡದಿ ಮಕ್ಕಳೆಂಬ ಪಾಶ ಮಮತೆ ಎನ್ನ ಕೊರಳ**
**ಬಿಡದೆ ಸುತ್ತಿಕೊಂಡಿತಲ್ಲಯ್ಯ**
**ಪಡೆದ ದ್ರವ್ಯವೆಲ್ಲ ವಸ್ತು ಕ್ಷೇತ್ರಂಗಳ ಕಾಣದೆ ನಿತ್ಯ–**
**ನಡೆದುದ ವಿಸ್ತರಿಸಲಾರೆ ನೀಲಮೇಘಶ್ಯಾಮ ನಿನ್ನ ॥೨॥**

**ಘೋರ ಸಂಸಾರವೆಂಬ ವಾರಿಧಿಯೊಳಗೆ ಬಿದ್ದು**
**ಪಾರಗಾಣದವನಾದೆನಲ್ಲಯ್ಯ**
**ಧೀರ ಕರ್ತನಾದ ಬಾಡದಾದಿಕೇಶವೇಶ ಸರ್ವ**
**ಸಾರಿದೆ ಸಲಹೊ ಎನ್ನುದ್ಧಾರಿ ಮುದ್ದು ಕೃಷ್ಣ ನಿನ್ನ ॥೩॥**

ಭಾವ– ಸಂಸಾರ ವಿರಕ್ತಿ ಹಾಗೂ ಭಗವದನುರಕ್ತಿ ಇದರ ಮೂಲದ್ರವ್ಯ.

ಅರ್ಥ– ೧. ಕಂಡವರಿಗೆ = ಅನ್ಯರಿಗೆ; ಕೈಕೊಟ್ಟು = ಸಹಾಯ ನೀಡಿ
೨. ನೀಲಮೇಘಶ್ಯಾಮ = ಕೃಷ್ಣ
೩. ವಾರಿಧಿ = ಸಮುದ್ರ; ಪಾರ = ದಡ

* * * * *

## ೭೮
## ಮುಖಾರಿ – ಝಂಪೆತಾಳ

**ಹೂವ ತರುವರ ಮನೆಗೆ ಹುಲ್ಲ ತರುವೆ ॥ಪ॥**
**ಆವ ಪರಿಯಲಿ ಸಲಹೊ ದೇವ ಚಿನ್ಮಯನೆ ॥ಅ॥**

**ಈರೇಳು ಜನ್ಮದಿಂ ದಾಸನಾಗಿಹೆ ನಾನು**
**ಸೇರಿದೆನೊ ತವ ಶರಣರ ಸೇವೆಗೆ**
**ಘೋರ ದುರಿತಗಳೆಂಬ ವಾರಿಧಿಯ ಬತ್ತಿಸಿ**
**ನಾರಸಿಂಹನೆ ಕಾಯೊ ನಮ್ಮ ಕುಲಸ್ವಾಮಿ ॥೧॥**

**ರಂಗನಾಥನೆ ನಿನ್ನ ಡಿಂಗರಿಗನೋ ನಾನು**
**ಡಂಗುರವ ಹೊಯಿಸಯ್ಯ ದಾಸನೆಂದು**
**ಭಂಗಪಡಿಸದೆ ನಿನ್ನ ಶರಣರೊಳಗಿಂಬಿಟ್ಟು**
**ಗಂಗೆ ಜನಕನೆ ಕಾಯೊ ಚರಣಕ್ಕೆ ಶರಣು ॥೨॥**

**ಎಷ್ಟು ಮಾಡಲು ನಿನ್ನ ಬಂಟನೋ– ವೈಷ್ಣವರ**
**ಹುಟ್ಟು ದಾಸಿಯ ಮಗನು ಪರದೇಶಿಯೋ**
**ಸೃಷ್ಟಿಗೊಡೆಯ ಕಾಗಿನೆಲೆಯಾದಿಕೇಶವನೆ– ಕೈ**
**ಬಿಟ್ಟೆಯಾದರೆ ನಿನಗೆ ಹರಿದಾಸರಾಣೆ ॥೩॥**

ಭಾವ– ಭಕ್ತ ಹೂವು ತಂದು ನಿನ್ನನ್ನು ಪೂಜಿಸಿದರೆ, ನೀನು ಅವನಿಗೆ ಹುಲ್ಲುಹೊರೆಯನ್ನು ಹೊತ್ತು ತರುವ ಸೇವಕನಾಗಿ ಸಹಾಯ ಮಾಡುತ್ತೀಯೆಯಾದ್ದರಿಂದ ನನ್ನನ್ನು ಕೈಬಿಡದೆ ಸಲಹು ಎಂದು ದೇವರಲ್ಲಿ ವಿನಂತಿಸಿಕೊಂಡಿದ್ದಾರೆ ಕನಕದಾಸರು.



ಅರ್ಥ– ಈರೇಳು = ಹದಿನಾಲ್ಕು
ದುರಿತ = ಪಾಪ
ವಾರಿಧಿ = ಸಮುದ್ರ
ಡಿಂಗರಿಗ = ಸೇವಕ
ಇಂಬಿಟ್ಟು = ಆಶ್ರಯಕೊಟ್ಟು, ಜಾಗಕೊಟ್ಟು
ಗಂಗೆಜನಕ = ವಿಷ್ಣು
ಭಂಟ = ಸೇವಕ

* * * *

## ೭೯
## ಸಾವೇರಿ – ಝಂಪೆ ತಾಳ

**ಪಥ ನಡೆಯದಯ್ಯ ಪರಲೋಕ ಸಾಧನಕೆ– ಮ**
**ನ್ಮಥನೆಂಬ ಖಳನು ಮಾರ್ಗವ ಕಟ್ಟಿ ಸುಲಿಯುತ್ತಿರೆ ॥ಪ॥**

**ತನುರೋಮ ಗಿಡ ವೃಕ್ಷ ತಳಿತ ಭುಜಲತೆ ಮೆರೆವ**
**ಘನಸಿಂಹ ಗಜ ಮೃಗಗಳಿಂದೊಪ್ಪುವ**
**ವನಿತೆಯರ ಕಾಯ ಕಾಂತಾರವೆಂಬ ಮಾರ್ಗದಿ**
**ಸ್ತನದ್ವಯ ಕಣಿವೆಯ ಮಧ್ಯ ಸೇರಿಹನು ॥೧॥**

**ಗಿಳಿ ನವಿಲು ಕೋಗಿಲೆ ವಸಂತ ಭ್ರಮರಂಗಳ**
**ಬಲದೊಡನೆ ಮದನ ಮಾರ್ಗವ ಕಟ್ಟಲು**
**ಬಲವುಳ್ಳ ಭಕ್ತ ಮುನಿ ಸಂನ್ಯಾಸಿ ಯೋಗಿಗಳು**
**ಸುಲಿಸಿಕೊಂಡರು, ಕೆಲರು ಸಿಕ್ಕಿದರು ಸೆರೆಯ ॥೨॥**

**ಕಾಳಗದೊಳಿದಿರಿಲ್ಲ ಸುರರು ದಾನವರು– ಕ**
**ಟ್ಟಾಳು ಮನ್ಮಥನ ಛಲದಂಕ ಬಿರುದು**
**ಪೇಳಲೆನ್ನಳವೆ ಬಡದಾದಿಕೇಶವರಾಯ–**
**ನಾಳ ಸಂಗಡ ಹೋದರಾವ ಭಯವಿಲ್ಲ ॥೩॥**

ಭಾವ– ಮನ್ಮಥನ ಬಾಧೆಯಿಂದ ತಪ್ಪಿಸಿಕೊಂಡು ಪಾರಮಾರ್ಥಿಕ ಪಥದಲ್ಲಿ ಹೆಜ್ಜೆ ಹಾಕಬೇಕಾದರೆ ಭಗವಂತನ ನೆರವು ಅಗತ್ಯ ಎಂಬುದು ಇದರ ಭಾವ.

ಅರ್ಥ– ಪಥ = ದಾರಿ
ವನಿತೆಯರ ಕಾಯ ಕಾಂತಾರ = ಹೆಂಗಸರ ದೇಹವೆಂಬ ಕಾಡು



ಸ್ತನದ್ವಯ = ಎರಡು ಕುಚಗಳು
ಕಾಳಗ = ಯುದ್ಧ
ಕಟ್ಟಾಳು = ಶೂರ
ಛಲದಂಕ ಬಿರುದು = ಹಟದಿಂದ ಯುದ್ಧ ಮಾಡುವ ಶೂರ

* * * *

## ೮೦
## ಕೇದಾರಗೌಳ – ಅಟತಾಳ

**ತನು ನಿನ್ನದು ಜೀವನ ನಿನ್ನದು ರಂಗ ॥ಪ॥**
**ಅನುದಿನದಲಿ ಬಾಹೊ ಸುಖದುಃಖ ನಿನ್ನದಯ್ಯ ॥ಅ॥**

**ಸವಿನುಡಿ ವೇದ ಪುರಾಣ ಶಾಸ್ತ್ರಂಗಳ**
**ಕಿವಿಗೊಟ್ಟು ಕೇಳುವ ಕಥೆ ನಿನ್ನದು**
**ನವವಮೋಹನಾಂಗಿಯರ ರೂಪವನು ಕಣ್ಣಿಂದ**
**ಎವೆಯಿಕ್ಕದೆ ನೋಡುವ ನೋಟ ನಿನ್ನದಯ್ಯ ॥೧॥**

**ಒಡಗೂಡಿ ಗಂಧ ಕಸ್ತೂರಿ ಪರಿಮಳಂಗಳ**
**ಬಿಡದೆ ಲೇಪಿಸಿಕೊಂಬುವುದು ನಿನ್ನದು**
**ಷಡುರಸದನ್ನಕ್ಕೆ ನಲಿದಾಡುವ ಜಿಹ್ವೆ**
**ಕಡು ರುಚಿಗೊಂಡರಾ ರುಚಿ ನಿನ್ನದಯ್ಯ ॥೨॥**

**ಮಾಯಾ ಪಾಶದ ಬಲೆಯೊಳಗೆ ಸಿಲುಕಿರುವ**
**ಕಾಯ ಪಂಚೇಂದ್ರಿಯಂಗಳು ನಿನ್ನವು**
**ಕಾಯಜಪಿತ ಕಾಗಿನೆಲೆಯಾದಿಕೇಶವ**
**ರಾಯ ನೀನಲ್ಲದೆ ನರರು ಸ್ವತಂತ್ರರೆ ॥೩॥**

ಭಾವ– ಪಾತ್ರಧಾರಿಯ ನಡೆನುಡಿ, ಹಾವಭಾವ, ಕುಣಿತ ಮಣಿತಗಳೆಲ್ಲ ಸೂತ್ರಧಾರಿಯಾದ ನಿನ್ನ ಮರ್ಜಿಯಂತೆ. ಆದ್ದರಿಂದ ನೀನು ಆಡಿಸಿದಂತೆ ನಾವು ಆಡುತ್ತೇವೆ; ತಪ್ಪು ಒಪ್ಪುಗಳೆಲ್ಲ ನಿನಗೆ ಸೇರತಕ್ಕವೇ, ನಿನಗೆ ಅರ್ಪಿತವೇ ಎಂಬ ದರ್ಶನ ಈ ಕೀರ್ತನೆಯ ನಾಡಿಮಿಡಿತ ವಾಗಿದೆ.



ಅರ್ಥ– ಬಾಹೊ– ಬರುವ, ಷಡುರಸ = ಆರು ರಸ (ಹುಳಿ, ಉಪ್ಪು, ಕಾರ, ಸಿಹಿ, ಕಹಿ, ಒಗರು)
ಜಿಹ್ವೆ– ನಾಲಗೆ
ಪಂಚೇಂದ್ರಿಯಗಳು = ಕಣ್ಣು, ಕಿವಿ, ನಾಲಗೆ, ಮೂಗು, ಚರ್ಮ
ಕಾಯಜಪಿತ = ಮನ್ಮಥನ ತಂದೆ.

* * * *

## ೮೧
## ಪೂರ್ವಿ – ಅಟತಾಳ

**ಬಂದೆವಯ್ಯ ಗೋವಿಂದಶೆಟ್ಟಿ– ನಿಮ್ಮ**
**ಹರಿವಾಣ ತೀರ್ಥಪ್ರಸಾದ ಉಂಟೆನಲಾಗಿ ||ಪ||**

**ಅಪ್ಪವು ಅತಿರಸ ತುಪ್ಪವು ಚಿನಿಪಾಲು**
**ಒಪ್ಪುವ ಸಕ್ಕರೆ ಯಾಲಕ್ಕಿಯು**
**ಅಪರೂಪವಾದ ಕಜ್ಜಾಯಗಳನೆಲ್ಲ**
**ಛಪ್ಪನ್ನ ದೇಶಕ್ಕೆ ಮಾರುವ ಶೆಟ್ಟಿ ||೧||**

**ಒಡೆದ ಮಡಕೆ ತಂದು ಇಡಿದು ನಾಮವ ಮಾಡಿ**
**ಕೊಡುವೆ ನೀ ಕಾಸಿಗೆ ಒಂದೊಂದನು**
**ಒಡಲು ತುಂಬಿ ಮಿಕ್ಕ ಅನ್ನವ ಮಾರಿಸಿ**
**ಒಡವೆಯ ಗಳಿಸುವ ಕಡುಲೋಭಿ ಶೆಟ್ಟಿ ||೨||**

**ಶೇಷಗಿರಿಯಲ್ಲಿ ವಾಸ ಮಾಡಿಕೊಂಡು**
**ದೇಶದೇಶಕ್ಕೆ ಹೆಸರಾದ ಶೆಟ್ಟಿ**
**ಕಾಸುಕಾಸಿಗೆ ಬಡ್ಡಿ ಗಳಿಸಿಕೊಂಬ ಆದಿ**
**ಕೇಶವ ನಾರಾಯಣ ತಿಮ್ಮ ಶೆಟ್ಟಿ ||೩||**

ಭಾವ– ಶೆಟ್ಟಿಯ ರೂಪಕದಲ್ಲಿ ತಿರುಪತಿ ತಿಮ್ಮಪ್ಪನನ್ನು ಕಟ್ಟಿ ಹಾಕಿರುವ ಕನಕದಾಸರ ಸದ್ಯೋಜಾತ ಪ್ರತಿಭೆಗೆ ಜೀವಂತವಿದ್ದಾಗಲೂ ದೇಹಾಂತವಾದ ಮೇಲೂ ಕರುಬುತ್ತಿದ್ದ, ಕರುಬುತ್ತಿರುವ ಹಲಕೆಲ ಮತ್ಸರಾವತಾರಿಗಳೂ ತಲೆದೂಗುವಂತಿದೆ; ಬಾಯಿ ಚಪ್ಪರಿಸುವಂತಿದೆ. ಸವಕಲು ನಾಣ್ಯದ ಅಭಿವ್ಯಕ್ತಿಗೆ ಜೋತು ಬೀಳದೆ, ಸುಂಕು ಮುರಿಯದ ಹೊಸ ನಾಣ್ಯದ ಅಭಿವ್ಯಕ್ತಿಗೆ ಹಾತೊರೆವ ಅಭಿಜಾತ ಕಲೆಗಾರರು



ಕನಕದಾಸರು ಎಂಬುದಕ್ಕೆ ಇದು ನಿದರ್ಶನ. ನಿಂದಾಸ್ತುತಿಯ ಈ ಮೂರು ನುಡಿಯ ಹಾಡು, ಇತರರ ಜಡ್ಡುಗಟ್ಟಿದ ನೂರಾರು ಹಾಡುಗಳನ್ನು ಮೆಟ್ಟಿ ನಿಲ್ಲುತ್ತದೆ.

ಅರ್ಥ– ಛಪ್ಪನ್ನ = ಐವತ್ತಾರು
ಇಡಿದು = ಕುಟ್ಟಿ, ಚಚ್ಚಿ
ಒಡವೆ = ಐಶ್ವರ್ಯ

* * * *

## ೮೨
## ನವರೋಜ್ – ಅಟತಾಳ

ಅಂಧಂತಮಸು ಇನ್ನಾರಿಗೆ– ಗೋ
ವಿಂದನ ನಿಂದಿಸುವರಿಗೆ ॥ಪ॥

ಸಂದೇಹವಿಲ್ಲದೆ ಸಾರಿಸಾರಿಗೆ ವಾಯು
ನಂದನನ ವಂದಿಸದವರಿಗೆ ॥ಅ॥

ಮಾತುಮಾತಿಗೆ ಹರಿಯ ನಿಂದಿಸಿ– ಸ
ರ್ವೋತ್ತಮ ಶಿವನೆಂದು ವಾದಿಸಿ
ಧಾತುಗ್ರಂಥಗಳೆಲ್ಲ ತೋರಿಸಿ– ವೇ
ದಾಂತ ಪ್ರಮಾಣಗಳ ಹಾರಿಸಿ
ಸೋತು ಸಂಕಟಪಟ್ಟು ಘಾತಕ ಒಡಲೊಳಗಿಟ್ಟು
ನೀತಿ ಹೇಳುವ ಕೆಟ್ಟ ಜಾತಿಗಳಿಗಲ್ಲದೆ ॥೧॥

ಮೂಲಕವತಾರಕ್ಕೆ ಭೇದವು– ಮುಖ್ಯ
ಶೀಲಪಂಡಿತರೊಳಗೆ ವಿವಾದವು
ಲೀಲಾ ಸಾದೃಶ್ಯವ ತೋರುತ– ಲಿಂಗ
ಭಂಗವಿಲ್ಲದ ದೇಹ ಹಾರುತ
ಮೂಲ ಗುರುವು ಕುಂತೀಬಾಲನೆನ್ನದೆ ವೃಥಾ
ಶೀಲಗೆಟ್ಟಂಥ ಖೂಳರಿಗಲ್ಲದೆ ಮತ್ತೆ ॥೨॥

ವ್ಯಾಸರ ಮಾತುಗಳಾಡುತ– ವಿ
ಶ್ವಾಸ ಘಾತಕತನ ಮಾಡುತ
ದೋಷವೆಂದರೆ ನುಡಿ ಕೇಳದೆ– ಸಂ
ತೋಷವೆಂದರೆ ನೋಡಿ ಬಾಳದೆ



ಶೇಷಶಯನನಾದಿಕೇಶವರಾಯನ
ದಾಸರೊಡೆಯ ಮಧ್ವದ್ವೇಷಿಗಳಿಗಲ್ಲದೆ ॥೩॥

ಭಾವ– ಕತ್ತಲ ಲೋಕ ಸೇರುವವರು ವಿಷ್ಣು ದ್ವೇಷಿಗಳೇ, ವೈಷ್ಣವಮತ ದ್ವೇಷಿಗಳೇ ಎಂಬ ಧ್ವನಿ ಈ ಕೀರ್ತನೆಯಲ್ಲಿದೆ. ಕನಕದಾಸರು ಜೀವಿಸಿದ್ದ ಕಾಲದಲ್ಲಿ ಶಿವಪಾರಮ್ಯ ಹಾಗೂ ವಿಷ್ಣು ಪಾರಮ್ಯದ ಬಗೆಗೆ ಇದ್ದ ಘರ್ಷಣೆಯೇ ಈ ಕೀರ್ತನಾ– ಕೂಸಿಗೆ ಜನ್ಮವಿತ್ತಿದೆ ಎನ್ನಿಸುತ್ತಿದೆ.

ಅರ್ಥ– ಅಂಧಂತಮಸು = ಕತ್ತಲ ಲೋಕ, ನಾಯಕನರಕಗಳಲ್ಲಿ ಒಂದು.
ಸಾರಿಸಾರಿಗೆ = ಬಾರಿಬಾರಿಗು
ವಾಯುನಂದನ = ವಾಯುಪುತ್ರ (ಆಂಜನೇಯ, ಭೀಮಸೇನ, ಮಧ್ವಾಚಾರ್ಯ)
ಧಾತುಗ್ರಂಥಗಳು = ಆಧಾರ ಗ್ರಂಥಗಳು
ಮೂಲಕವತಾರಕ್ಕೆ ಭೇದವು = ಮೂಲ ರೂಪಕ್ಕೂ ಅವತಾರಕ್ಕೂ ಭೇದ. ಆದರೆ ವೈಷ್ಣವರಲ್ಲಿ ಮೂಲಕ್ಕೂ ಅವತಾರಕ್ಕೂ ಭೇದವಿಲ್ಲ.
ಲಿಂಗಭಂಗವಿಲ್ಲದ ದೇಹ = ಸ್ಥೂಲದೇಹ
ಕುಂತೀಬಾಲ = ಭೀಮ (ಇಲ್ಲಿ ವಾಯುವಿನ ಮೂರನೆ ಅವತಾರಕ್ಕೆ ಒತ್ತು ಇದೆ)
ಶೇಷಶಯನ = ವಿಷ್ಣು

* * * *

## ೮೩
# ಮುಖಾರಿ – ಝಂಪೆ ತಾಳ

**ಎಂತಹುದೊ ನಿನ್ನಯ ಭಕುತಿ ಎನಗೆ– ಶ್ರೀ**
**ಕಾಂತ ನಿನ್ನಯ ಒಲುಮೆಯಿಲ್ಲದ ಮೂಢಾತ್ಮನಿಗೆ ॥ಪ॥**

**ಹಿಂದೆ ಮಾಡಿದ ಸುಕೃತ ಫಲವು ಮೊದಲಿನಿತಿಲ್ಲ**
**ಇಂದು ಬಂದಡೆ ಒಳ್ಳೆ ಮತಿಯ ಕೊಡಲಿಲ್ಲ**
**ಸಂದ ವಯಸನು ತಿಳಿದು ಕುಂದುತಿದೆ ಎನ್ನ ಮನ**
**ದಂಧಕಾರವ ಬಿಡಿಸಿ ಹೊಂದಿಸು ಜ್ಞಾನವನು ॥೧॥**

**ವೇದಶಾಸ್ತ್ರ ಶಬ್ದ ತರ್ಕ ಮೀಮಾಂಸೆಗಳ**
**ಓದಿದವನಲ್ಲ ನಿನ್ನಯ ಭಕುತಿಗಧಿಕ**
**ವಾದ ಇನ್ನೊಂದೇನನಸುರುವೆನು ನಾ ಮುನ್ನ ಸಂ**
**ಪಾದಿಸುವ ಭಕುತಿ ಇನ್ನೆಂತಿಹುದೊ ದೇವ ॥೨॥**

**ಹುಟ್ಟಿದ ಮೊದಲುಗೊಂಡು ಇಂದು ಪರಿಯಂತರವು**
**ಭ್ರಷ್ಟನಾಗಿ ಪರರ ಸೇವೆಯಿಂದಿರುತಿಹೆನು**
**ಇಷ್ಟಲ್ಲದಿನ್ನೆನಗೆ ತೃಪ್ತಿ ಇನ್ನೆಂತಿಹುದೀ**
**ಕಷ್ಟ ಶರೀರದೊಳು ತೊಳಲಲಾರೆನು ಹರಿಯೆ ॥೩॥**

**ನರಜನ್ಮವೆಂಬ ಪಾತಕದ ಪಂಜರದೊಳಗೆ**
**ಸ್ಥಿರವೆಂಬೊ ಅಹಂಕೃತಿ ಜೀವನವ ನಿರ್ಮಿಸಿ**
**ಎರವಿನ ಮಾತಾಪಿತರನುಜರೆಂಬ**
**ಉರಿಕಾವು ಕ್ಷಯವೆಂಬ ಸರಿಗಳನು ವಂದಿಸುವೆನು ॥೪॥**



**ಇನಿತು ಪರಿಯಲಿ ನಾನು ಹಲುಬಿದೊಡೆ**
**ನೀನು ಸುಮ್ಮನಿದ್ದೊಡೆ ಬಹು ಅಪಕೀರ್ತಿಯು**
**ನಿನ್ನ ದಾಸಗೊಲಿದು ಸಲಿಸಯ್ಯ ಮನದಿಷ್ಟ**
**ಕನಕಾದ್ರಿಯೊಳು ನೆಲಸಿದಾದಿಕೇಶವರಾಯ ॥೫॥**

ಭಾವ– ಸಂಸಾರ ಬಂಧನದಿಂದ ಜಿಗುಪ್ಸೆ ಹೊಂದಿ ಕಂಸಾರಿಯ ಕೃಪೆಗಾಗಿ ಬಂದ ಭಕ್ತನ ಕೋರಿಕೆ ಈ ಕೀರ್ತನೆಯ ಮೂಲಧಾತು. ಬಹುಶಃ ಕನಕದಾಸರು ಅಧಿಕಾರದ ಗದ್ದುಗೆಯಿಂದ ಇಳಿದು ವೈರಾಗ್ಯ ಹೊಂದಿದ ಹೊಸದರಲ್ಲಿ ಮೂಡಿದ ಹಾಡೆನಿಸುತ್ತದೆ.

ಅರ್ಥ– ಸುಕೃತ = ಪುಣ್ಯ
ಸಂದ = ಕಳೆದ
ಮನದಂಧಕಾರವ (<ಮನದ+ಅಂಧಕಾರ) = ಮನಸ್ಸಿನ ಅಜ್ಞಾನ ಕತ್ತಲನ್ನು
ಉರಿಕಾವು = ಹೊಟ್ಟೆ ಮೈಕೈ ಉರಿಯುವ ರೋಗ
ಸರಿ = ಕಲ್ಲು

* * * *

## ೮೪
## ಕಾಂಬೋದಿ – ಝಂಪೆ ತಾಳ

**ಏಕೆ ದಯವಿನಿತಿಲ್ಲ ಲೋಕಪಾವನ ಮೂರ್ತಿ ॥ಪ॥**
**ಬೇಕೆಂದು ನಿನ್ನ ಪಾದ ನಂಬಿದ ದಾಸನ ಮೇಲೆ ॥ಅ॥**

**ಎಡರಿಗಾಗುವರಿಲ್ಲ ಕಡನ ನಂಬುವರಿಲ್ಲ**
**ಬಡವನೆಂದು ವಸ್ತ್ರವ ಕೊಡುವರಿಲ್ಲ**
**ದೃಢದೊಳಿದ್ದರು ಬವಣೆ ಬಂದೊಡನೆ ಕಾಡುವುವು**
**ಒಡೆಯ ಕಂಡೂ ಕಾಣದಿರುವುದುಚಿತವಲ್ಲ ॥೧॥**

**ಮೊರೆಯ ಕೇಳುವರಿಲ್ಲ ಸಿರಿವಂತ ನಾನಲ್ಲ**
**ಪರಮಾತ್ಮ ನಿನ್ನೊಳಗ ನಾನರಿತಿಲ್ಲ**
**ಬೆರೆತುಕೊಂಡಿರಲು ಸಜ್ಜನರ ಗೆಳೆತನವಿಲ್ಲ**
**ಪರಮಹಂಸನೆ ಹರಿಸೊ ಇಂಥ ಕೊರತೆಗಳೆಲ್ಲ ॥೨॥**

**ನೀಲವರ್ಣದ ಲೋಲ ಕಾಲನವರಿಗೆ ಶೂಲ**
**ಬಾಲ್ಯದಿ ಯಶೋದೆಯ ಹಾಲ ಸವಿದ ಗೋಪಾಲ**
**ನಾಲಗೆಗೆ ನಿನ್ನ ವಿಶಾಲ ಅಷ್ಟಾಕ್ಷರಿಯನಿತ್ತು**
**ಪಾಲಿಸೋ ಶ್ರೀಕಾಗಿನೆಲೆಯಾದಿ ಕೇಶವನೆ ॥೩॥**

ಭಾವ– ಎಲ್ಲವನ್ನೂ ತೊರೆದು ಒಂಟಿಯಾಗಿ ಬಾಯ್ತೆರೆದು ಓಡಿಬಂದ ಭಕ್ತ–ಕರುವಿಗೆ ದೈವಗೋವಿನ ಕೃಪೆಯ ಕೆಚ್ಚಲು ದೊರೆಯದಿದ್ದಾಗ (ಸೊರ ಬಿಡದಿದ್ದಾಗ) ಭಕ್ತ–ಕರು ಅರಚುತ್ತಾ ಅಲ್ವರಿಯುವ ರೀತಿಯಲ್ಲಿದೆ ಈ ಕೀರ್ತನೆ.



ಅರ್ಥ– ಎಡರು = ತೊಂದರೆ
ಕಡ = ಸಾಲ
ಬವಣೆ = ಕಷ್ಟ
ಪರಮಹಂಸ = ಪರಮಾತ್ಮ
ನೀಲವರ್ಣದ = ಕಪ್ಪುಬಣ್ಣದ
ಕಾಲನವರಿಗೆ = ಯಮನಾಳುಗಳಿಗೆ
ಅಷ್ಟಾಕ್ಷರಿ = ಅಷ್ಟಾಕ್ಷರಗಳ ಮಂತ್ರ (ಓಂ ನಮೋ ನಾರಾಯಣಾಯ)

* * * *

## ೮೫
## ಶಂಕರಾಭರಣ – ಅಟತಾಳ

**ಇದ್ದೀಯಾ ಶ್ರೀ ಹರಿ ನೀನೊಲಿದು ಬಂದಿದ್ದೀಯಾ ॥ಪ॥**

**ಇದ್ದೀಯಾ ಶ್ರೀಹರಿ ನೀನು– ವೃದ್ಧಿ**
**ಸಿದ್ಧಿಯ ನಡುವೆ ಪದುಮನಾಭನು– ಅಭಿ**
**ವೃದ್ಧಿಯಾಗಲು ತಡವೇನು– ಅಹ**
**ಬುದ್ಧಿಯಾಗಿ ಭಜಿಸುವ ಬಾಳುವೆಗೆ– ಸ**
**ಮೃದ್ಧಿಯಾಗಿ ಸರ್ವ ಸಿದ್ಧಿಯ ಕೊಡಲಾಗಿ ॥೧॥**

**ನಂಬಿದ್ದ ಸುಜನರು ಹರಿಯೆ– ಕೆಟ್ಟ**
**ದೆಂಬ ಸುದ್ದಿಯ ನಾನರಿಯೆ– ಸತ್ಕು**
**ಟುಂಬ ಎಂಬುದು ಹೊಸಪರಿಯೆ– ಅಹ**
**ಬೆಂಬಲವಾಗಿ ಸಜ್ಜನರ ಸಲಹುವ– ಕೃ**
**ಪಾಂಬುಧಿ ಮೂಜಗಕೊಲಿಯಲೋಸುಗ ಬಂದು ಉಲಿಯೆ ॥೨॥**

**ಶೇಷಗಿರೀಶ ಮದ್ಬಂಧು– ಆದಿ**
**ಕೇಶವ ಗುರುವೆ ನೀನೆಂದು– ಕೃಷ್ಣ**
**ಕ್ಲೇಶ ಬಿನ್ನೈಸುವೆ ಇಂದು– ಅಹ**
**ಆಸೆ ಬಿಟ್ಟು ಪೂಜಿಸುವ ಭಕ್ತರ**
**ದಾಸನೆಂದು ವೆಂಕಟೇಶ ನೀನೊಲಿದು ಬಂದಿದ್ದೀಯಾ ॥೩॥**

ಭಾವ– ಭಗವತ್‌ಕೃಪೆ ದೊರಕಿದಾಗಿನ ಸಮೃದ್ಧ ಸಂತೃಪ್ತ ಭಾವದಿಂದ ಪ್ರೇರಿತವಾಗಿದೆ ಈ ಕೀರ್ತನೆ. 'ಇದ್ದೀಯ ಹಾಗೂ ಒಲಿದು ಬಂದಿದ್ದೀಯ' ಎಂಬ ಪಲ್ಲವಿಯ ಮಾತುಗಳು ಪ್ರಶ್ನಾತ್ಮಕವಲ್ಲ, ಇತ್ಯಾತ್ಮಕ.



ಅರ್ಥ– ಪದುಮ ನಾಭ = ಹೊಕ್ಕುಳಲ್ಲಿ ಕಮಲವಿರುವವನು (ವಿಷ್ಣು)
ಪರಿಯೆ = ರೀತಿಯೆ
ಕೃಪಾಂಬುಧಿ = ಕೃಪಾ ಸಾಗರ
ಉಲಿಯೆ = ಧ್ವನಿಗೈಯಲು
ಶೇಷಗಿರೀಶ = ತಿರುಪತಿಯೊಡೆಯ (ವೆಂಕಟೇಶ)
ಮದ್ಬಂಧು (<ಮತ್+ಬಂಧು) = ನನ್ನ ಬಂಧು
ಬಿನ್ನೈಸುವೆ = ವಿಜ್ಞಾಪಿಸುವೆ

* * * *

## ೮೬

## ಪಂತುವರಾಳಿ – ರೂಪಕತಾಳ

**ಸಾಕು ಸಾಕು ಮನುಜಸೇವೆಯು, ರಂಗಯ್ಯ ಇನ್ನು ॥ಪ॥**

**ಸಾಕು ಸಾಕು ಮನುಜಸೇವೆ ಮಾಡಿ ದಣಿದು ನೊಂದೆ ನಾನು**
**ಬೇಕು ನಿನ್ನ ಪಾದಭಜನೆ ಕೊಟ್ಟು ಸಲಹೊ ರಂಗಯ್ಯ ॥ಅ॥**

**ಹೊತ್ತರೆದ್ದು ಹೋಗಿ ಪರರ ಚಿತ್ತವೃತ್ತಿಯನ್ನು ತಿಳಿದು**
**ಹತ್ತರಿದ್ದು ಹಲವು ಕೆಲಸ ಭೃತ್ಯನಂತೆ ಮಾಡಿ– ರಿಕ್ತ**
**ಹಸ್ತದಿಂದ ಮನೆಯ ಸೇರುವೆ– ಆಸೆಗಾಗಿ**
**ಮತ್ತೆ ಕಂಡ ಕಡೆಗೆ ತೊಲಗುವೆ– ಬಂದು ಅಪರ**
**ರಾತ್ರಿಯಲ್ಲಿ ತಿಂದು ಒರಗುವೆ ರಂಗಯ್ಯ ರಂಗ ॥೧॥**

**ಸ್ನಾನ ಸಂಧ್ಯಾನುಷ್ಠಾನ ನೇಮವೆಲ್ಲ ತೊರೆದುಬಿಟ್ಟು**
**ಹೀನನಾಗಿ ಕೆಟ್ಟ ಜನರ ಮನೆಗಳನ್ನು ತಿರುಗಿ ತಿರುಗಿ**
**ಶ್ವಾನನಂತೆ ದಿನವ ಕಳೆವೆನೊ– ದುರಾಸೆಯನ್ನು**
**ಮನಸಿನಲ್ಲಿ ಮಡಗಿಕೊಂಡು ಕುದಿವೆನೊ**
**ಕೊನೆಗೂ ಎಳ್ಳುಕಾಳಿನಷ್ಟು ಸುಖವ ಕಾಣೆನೊ ರಂಗಯ್ಯರಂಗ ॥೨॥**

**ಒಡಲಿನಾಸೆಗಾಗಿ ನೊಣನು ತುಡುಕಿಬಿದ್ದು ಜೇನುಕೊಡದಿ**
**ಮಿಡುಕುವಂತೆ ಬಾಯಿಬಿಡುವೆ ಬಿಸರುಹಾಕ್ಷನೆ**
**ಬಿಡಿಸು ಎನ್ನ ಬಂಧಪಾಶವ ಕಾಗಿನೆಲೆಯಾದಿಕೇಶವ**
**ಕೊಡಿಸು ನಿನ್ನ ಭಕ್ತರ ಸಂಗವ– ಕನಕದಾಸ**
**ನೊಡೆಯ ವೆಂಕಟಾದ್ರಿ ಮಾಧವ– ರಂಗಯ್ಯ ರಂಗ ॥೩॥**



ಭಾವ– ಅನಿತ್ಯವಾದ ಐಹಿಕ ಜಂಜಾಟದಲ್ಲಿ ಸತ್ತು ಸುಣ್ಣವಾಗಿ ಪಾರಮಾರ್ಥಿಕ ಜೀವನದತ್ತ ಮನಸ್ಸು ತಿರುಗಿದಾಗಿನ ಆಂತರಿಕ ತೊಳಲಾಟ ರೂಪದ ನಿವೇದನೆಯಾಗಿದೆ ಈ ಕೀರ್ತನೆ. 'ಒಡಲಿನಾಸೆಗಾಗಿ ನೊಣನು ತುಡುಕಿ ಬಿದ್ದು ಜೇನುಕೊಡದಿ, ಮಿಡುಕುವಂತೆ ಬಾಯಿಬಿಡುವೆ' ಎಂಬ ಮಾತು ಮಿಡುಕಾಟವನ್ನೂ, ಅದೇ ಸನ್ನೆಗೋಲಾಗಿ ಪರಮಾತ್ಮನ ಹುಡುಕಾಟಕ್ಕೆ ಪ್ರೇರೇಪಿಸಿರುವುದನ್ನೂ ನಾವಿಲ್ಲಿ ಮನಗಾಣಬಹುದು.

ಅರ್ಥ– ಹೊತ್ತರೆ = ಮುಂಜಾನೆ
ಭೃತ್ಯ = ಸೇವಕ
ರಿಕ್ತ ಹಸ್ತ = ಬರಿಗೈ
ಅಪರರಾತ್ರಿ = ಅರ್ಧರಾತ್ರಿಯ ನಂತರ, ಕಲ್ಲೂ ನೀರೂ ಕರಗುವ ಹೊತ್ತು
ಒರಗುವೆ = ಮಲಗುವೆ

೨. ಶ್ವಾನ = ನಾಯಿ
ಮಡಗಿಕೊಂಡು = ಇಟ್ಟುಕೊಂಡು
೩. ಬಿಸುರುಹಾಕ್ಷ = ಕಮಲದಂತೆ ಕಣ್ಣುಳ್ಳವನು (ವಿಷ್ಣು)
ಪಾಶ = ಹಗ್ಗ

* * * *

## ೮೭
## ರೇಗುಪ್ತಿ – ಅಟತಾಳ

**ಇಷ್ಟುದಿನ ಈ ವೈಕುಂಠ**
**ಎಷ್ಟು ದೂರವೊ ಎನ್ನುತಲಿದ್ದೆ**
**ದೃಷ್ಟಿಯಿಂದಲಿ ನಾನು ಕಂಡೆ**
**ಸೃಷ್ಟೀಗೀಶನೆ ಶ್ರೀರಂಗಶಾಯಿ** ॥ಪ॥

**ಎಂಟು ಏಳನು ಕಳೆದುದರಿಂದ**
**ತುಂಟರೈವರ ತುಳಿದುದರಿಂದ**
**ಕಂಟಕನೊಬ್ಬನು ಅಳಿದುದರಿಂದ**
**ಭಂಟನಾಗಿ ಬಂದೆ ಶ್ರೀರಂಗಶಾಯಿ** ॥೧॥

**ವನ ಉಪವನಗಳಿಂದ**
**ಘನ ಸರೋವರಗಳಿಂದ**
**ಕನಕ ಗೋಪುರಗಳಿಂದ**
**ಘನಶೋಭಿತನೆ ಶ್ರೀರಂಗಶಾಯಿ** ॥೨॥

**ವಜ್ರವೈಢೂರ್ಯ ತೊಲೆಗಳ ಕಂಡೆ**
**ಪ್ರಜ್ವಲಿಪ ಮಹಾದ್ವಾರವ ಕಂಡೆ**
**ನಿರ್ಜರಾದಿ ಮುನಿಗಳ ಕಂಡೆ**
**ದುರ್ಜನಾಂತಕ ಶ್ರೀರಂಗಶಾಯಿ** ॥೩॥

**ರಂಭೆ ಊರ್ವಶಿ ಮೇಳವ ಕಂಡೆ**
**ತುಂಬುರು ನಾರದರ ಕಂಡೆ**
**ಅಂಬುಜೋದ್ಭವ ಪ್ರಮುಖರ ಕಂಡೆ**
**ಶಂಬರಾರಿ ಪಿತನೆ ಶ್ರೀರಂಗಶಾಯಿ** ॥೪॥



**ನಾಗಶಯನನ ಮೂರುತಿ ಕಂಡೆ**
**ಭೋಗಿ ಭೂಷಣ ಶಿವನನು ಕಂಡೆ**
**ಭಾಗವತರ ಸಮ್ಮೇಲವ ಕಂಡೆ**
**ಕಾಗಿನೆಲೆಯಾದಿಕೇಶವ ಶ್ರೀರಂಗಶಾಯಿ** ॥೫॥

ಭಾವ– ಯೋಗ ದೃಷ್ಟಿಯಿಂದ ಭಗವಂತನ ದಿವ್ಯದರ್ಶನ ಪಡೆದುದರ ಹಿಗ್ಗು ಮತ್ತು ಕೃತಕೃತ್ಯತಾಭಾವ ಸಚಿತ್ರ ವರ್ಣನೆಯಾಗಿ ಒಡಮೂಡಿದೆ. ಕನಕದಾಸರು ಅಪರೋಕ್ಷ ಜ್ಞಾನಿಯಾಗಿದ್ದಂತೆಯೇ ಪರಮ ಯೋಗಿಯೂ ಆಗಿದ್ದರು ಎಂಬುದು ಇದರಿಂದ ಮನದಟ್ಟಾಗುತ್ತದೆ.

ಅರ್ಥ– ದೃಷ್ಟಿಯಿಂದ = ಒಳನೋಟದಿಂದ
ಶ್ರೀರಂಗಶಾಯಿ = ಶ್ರೀರಂಗಪಟ್ಟಣದ ರಂಗನಾಥ

೧. ಎಂಟು = ಅಷ್ಟ ಮದ (ಅನ್ನ, ಧನ, ಯೌವನ, ರೂಪ, ಕುಲ, ವಿದ್ಯೆ, ಅಧಿಕಾರ, ತಪ)
ಏಳು = ಸಪ್ತ ವ್ಯಸನ (ಬೇಟೆ, ಜೂಜು, ಮದ್ಯಪಾನ, ಸ್ತ್ರೀ, ವಾಕ್ಪಾರುಷ್ಯ, ದಂಡಪಾರುಷ್ಯ, ಅರ್ಥದೂಷಣೆ)
ತುಂಟರೈವರು = ಪಂಚೇಂದ್ರಿಯಗಳು (ಕಣ್ಣು, ಕಿವಿ, ನಾಲಗೆ, ಮೂಗು, ಚರ್ಮ)
ಕಂಟಕನೊಬ್ಬನು = ತಡೆಗಾರ ಮನ್ಮಥ
೨. ಘನ = ಶ್ರೇಷ್ಠ, ದೊಡ್ಡ; ಕನಕ = ಚಿನ್ನ
೩. ನಿರ್ಜರಾದಿ = ದೇವತೆಗಳೇ ಮೊದಲಾದ
ದುರ್ಜನಾಂತಕ = ದುಷ್ಟರಿಗೆ ಯಮನಾದವನು (ವಿಷ್ಣು)
೪. ಅಂಬುಜೋದ್ಭವ = ಕಮಲಭವ (ಬ್ರಹ್ಮ)
ಶಂಬರಾರಿ = ಶಂಬರಾಸುರನ ಶತ್ರು (ಮನ್ಮಥ)
೫. ನಾಗಶಯನ = ಹಾವನ್ನು ಹಾಸಿಗೆಯಾಗುಳ್ಳವನು (ವಿಷ್ಣು)
ಭೋಗಿಭೂಷಣ = ಹಾವನ್ನು ಆಭರಣವಾಗಿ ಧರಿಸಿದವನು (ಶಿವ)
ಭಾಗವತರ = ಭಕ್ತರ

* * * *

## ೮೮
## ಕಾಫಿ – ಅಟತಾಳ

**ನಡತೆಹೀನನಾದರೇನಯ್ಯ – ಜಗ**
**ದೊಡೆಯನ ಭಕುತಿ ಇದ್ದರೆ ಸಾಲದೆ ॥ಪ॥**

**ಪುಂಡರಾ ಪಾಂಡುನಂದನರು ಮತ್ತದರೊಳು**
**ಕಂಡೋರ್ವಳನೈವರು ಭೋಗಿಪರು**
**ಖಂಡಿಸಿದರು ರಣದೊಳು ಗುರುಹಿರಿಯರ**
**ಪುಂಡರೀಕಾಕ್ಷನ ಒಲುಮೆಯೊಂದಲ್ಲದೆ ॥೧॥**

**ಒಂದೊಂದು ಪರಿ ಬುದ್ಧಿಯ ಹೇಳಿ ಹಿರಣ್ಯಕ**
**ಕಂದನ ನಿರ್ಬಂಧಿಸುತಿರಲು**
**ಅಂದು ಸಾಧಿಸಲು ಕಂಬದ ಬಳಿಯೆ ತನ್ನ**
**ತಂದೆಯ ಕೊಲಿಸಿದನೆಂಬರು ಜನರು ॥೨॥**

**ದಾಸಿಯ ಜಠರದೊಳು ಜನಿಸಿದ ವಿದುರ – ಸ**
**ನ್ಯಾಸಿಯೆಂದೆನಿಸಿಕೊಂಡ**
**ಸಾಸಿರನಾಮದೊಡೆಯ ಕೃಷ್ಣ ಬಾಡದಾದಿ**
**ಕೇಶವನ ಭಕುತಿಯೊಂದಿದ್ದರೆ ಸಾಲದೆ ॥೩॥**

ಭಾವ– ಹೊನ್ನಿದ್ದರೆ ತೊನ್ನು ಮುಚ್ಚಿ ಹೋದಂತೆ, ದೈವದ ಹೊನ್ನು ಧರಿಸಿದರೆ ಅರೆಕೊರೆಗಳ ತೊನ್ನು ಮುಚ್ಚಿ ಹೋಗುತ್ತದೆ, ಗಣನೆಗೆ ಬರುವುದಿಲ್ಲ ಎಂಬ ಭಾವ ಈ ಕೀರ್ತನೆಯಲ್ಲಿದೆ.



ಅರ್ಥ– ಪುಂಡರೀಕಾಕ್ಷ = ಕಮಲದಂತೆ ಕಣ್ಣುಳ್ಳವ (ವಿಷ್ಣು)
ಹಿರಣ್ಯಕ = ಹಿರಣ್ಯ ಕಶ್ಯಪ
ಕಂದ= ಪ್ರಹ್ಲಾದ
ಸಾಸಿರ = ಸಹಸ್ರ

* * *

## ೮೯
## ಪೀಲು – ಮುಟ್ಟೆತಾಳ

**ನಾನು ನೀನು ಎನ್ನದಿರು ಹೀನ ಮಾನವ ॥ಪ॥**
**ಜ್ಞಾನದಿಂದ ನಿನ್ನ ನೀನೆ ತಿಳಿದು ನೋಡೆಲೊ ॥ಅ॥**

**ಹೆಣ್ಣು ಹೊನ್ನು ಮಣ್ಣು ಮೂರು ನಿನ್ನದೇನಲೊ**
**ಅನ್ನದಿಂದ ಬಂದ ಕಾಮ ನಿನ್ನದೇನೆಲೊ**
**ಕರ್ಣದಿಂದ ಬರುವ ಘೋಷ ನಿನ್ನದೇನೆಲೊ**
**ನಿನ್ನ ಬಿಟ್ಟು ಹೋಹ ದೇಹ ನಿನ್ನದೇನಲೊ ॥೧॥**

**ಹಲವು ಜನ್ಮದಿಂದ ಬಂದಿರುವನು ನೀನೆಲೊ**
**ಮಲದ ಗರ್ಭದಲಿ ನಿಂದಿರುವನು ನೀನೆಲೊ**
**ಜಲದ ದಾರಿಯಲಿ ಬಂದಿರುವನು ನೀನೆಲೊ**
**ಕುಲವು ಜಾತಿ ಗೋತ್ರವುಳ್ಳವನು ನೀನೆಲೊ ॥೨॥**

**ಕಾಲಕರ್ಮ ಶೀಲನೇಮ ನಿನ್ನದೇನೆಲೊ**
**ಜಾಲವಿದ್ಯೆ ಬಯಲ ಮಾಯೆ ನಿನ್ನದೇನೆಲೊ**
**ಕೀಲು ಜಡಿದ ತೊಗಲಗೊಂಬೆ ನಿನ್ನದೇನೆಲೊ**
**ಲೋಲ ಆದಿಕೇಶವನ ಭಕ್ತನಾಗೆಲೊ ॥೩॥**

ಭಾವ– ಸೂತ್ರಧಾರ ಕುಣಿಸಿದಂತೆ ಕುಣಿವ ತೊಗಲಗೊಂಬೆಯಾದ ಮಾನವ ಅಹಂಕಾರ ಪಡುವುದು ಸಲ್ಲ. ತರವಲ್ಲ– ಎಂಬುದು ಈ ಕೀರ್ತನೆಯ ಭಾವ.



ಅರ್ಥ– ಘೋಷ = ನಾದ
ಜಲದ ದಾರಿ = ಯೋನಿಮಾರ್ಗ
ಜಾಲವಿದ್ಯೆ = ಮಾಯಾಮಂತ್ರ ಮಾಟ ಇತ್ಯಾದಿ ವಾಮವಿದ್ಯೆ
ಕೀಲು = ತಿರುಗಣಿ, ಅಗುಳಿ

* * *

## ೯೦
## ಪಂತುವರಾಳಿ – ಅಟತಾಳ

**ಯಮದೂತರಿನ್ನೇನು ಮಾಡುವರು ಪೇಳೊ**
**ರಮೆಯರಸ ರಘುನಾಥ ನಿನ್ನರಿಕೆಯುಳ್ಳವರಿಗೆ ॥ಪ॥**

**ಮಂಡಲದೊಳಗೊಬ್ಬ ಜಾರಸ್ತ್ರೀಯಳು ತನ್ನ**
**ಗಂಡನರಿಕೆಯಿಂದ ವ್ಯಭಿಚಾರಗೈಯೆ**
**ಮಂಡಲಪತಿಯು ಶೋಧಿಸಿ ಹಿಡಿದೆಳೆತಂದು**
**ಭಂಡು ಮಾಡಲು ಬೆದರುವಳೆ ಕೇಳೆಲೊ ಹರಿ ॥೧॥**

**ಕಳವಿನ ಒಡವೆಯ ಒಡೆಯಗೆ ಪಾಲೀವ**
**ಕಳಬಂಟ ಕನ್ನವ ಕೊರೆಯುತಿರೆ**
**ಕಳವು ಮಾಡಿದನೆಂದು ಹಿಡಿದೆಳೆತಂದರೆ**
**ತಳವಾರನೇನು ಮಾಡುವನು ಕೇಳೆಲೊ ಹರಿ ॥೨॥**

**ಮನವಚನದಲಿ ಮಾಡಿದ ಪಾಪ ಪುಣ್ಯಗಳ**
**ನಿನಗರ್ಪಿಸುವೆ ಕಾಲಕಾಲದಲಿ**
**ಘನ ಕೃಪಾಂಬುಧಿ ಕಾಗಿನೆಲೆಯಾದಿಕೇಶವ**
**ಎನಗೆ ಆರೇನು ಮಾಡುವರು ಕೇಳೆಲೊ ಹರಿ ॥೩॥**

ಭಾವ– ಭಕ್ತ ತನ್ನ ಪಾಪಪುಣ್ಯಗಳನ್ನು ಭಗವಂತನಿಗೆ ಅರ್ಪಿಸಿದ ಮೇಲೆ ಯಾರೇನು ಮಾಡಬಲ್ಲರು ಎಂಬ ಭಾವ ಲೌಕಿಕ ದೃಷ್ಟಾಂತಗಳೊಂದಿಗೆ ರುಜುವಾತುಗೊಂಡಿದೆ. ಆದರೆ ಈ ಲೌಕಿಕ ದೃಷ್ಟಾಂತಗಳು ಧರ್ಮ ನೀತಿ ಬಿಟ್ಟು ಅಧೋಗತಿಯತ್ತ ಹೆಜ್ಜೆ ಹಾಕತೊಡಗಿದ್ದ ವಿಜಯನಗರದ ಆಡಳಿತ, ಅಧಿಕಾರಿ ವರ್ಗ, ಜನಜೀವನದ ಗತಿಸ್ಥಿತಿಯನ್ನು ಮಿಂಚಿನಂತೆ ಪಳಂಚಿಸಿದೆ ಎಂಬುದನ್ನು ಮರೆಯಬಾರದು.



ಅರ್ಥ– ರಮೆಯರಸ = ಲಕ್ಷ್ಮಿಯ ಗಂಡ (ವಿಷ್ಣು)
ಅರಿಕೆ = ತಿಳಿವಳಿಕೆ
ಕಳಬಂಟ = ಕಳವು ಮಾಡುವ ಬಂಟ
ತಳವಾರ (<ತಲವಾರ) = ಗ್ರಾಮ ರಕ್ಷಕ
ಕೃಪಾಂಬುಧಿ = ಕೃಪಾಸಾಗರ

* * * *

## ೯೧
## ಕಾಂಬೋದಿ – ಏಕತಾಳ

**ಡಿಂಬದಲ್ಲಿ ಇರುವ ಜೀವ ಕಂಬಸೂತ್ರ ಗೊಂಬೆಯಂತೆ**
**ಎಂದಿಗಿದ್ದರೊಂದು ದಿನ ಸಾವು ತಪ್ಪದು ॥ಪ॥**

**ಹುಟ್ಟುತೇನು ತಾರಲಿಲ್ಲ ಸಾಯುತೇನು ಒಯ್ಯಲಿಲ್ಲ**
**ಸುಟ್ಟು ಸುಟ್ಟು ಸುಣ್ಣದ ಹರಳಾಯಿತೀ ದೇಹ**
**ಹೊಟ್ಟೆ ಭಾಳ ಕೆಟ್ಟದೆಂದು ಎಷ್ಟು ಕಷ್ಟ ಪಟ್ಟರೂನು**
**ಬಿಟ್ಟು ಹೋಗುವಾಗ ಗೇಣು ಬಟ್ಟೆ ಕಾಣದು ॥೧॥**

**ಹತ್ತು ಎಂಟು ಲಕ್ಷ ಎಣಿಸಿ ಮತ್ತೆ ಸಾಲದೆಂದು ಪರರ**
**ಅರ್ಥಕ್ಕಾಗಿ ಆಸೆಪಟ್ಟು ಸುಳ್ಳು ನ್ಯಾಯ ಮಾಡ್ವರು**
**ಬಿತ್ತಿ ಬೆಳೆದು ತನ್ನದೆಂಬ ವ್ಯರ್ಥಚಿಂತೆಯನ್ನು ಮಾಡೆ**
**ಸತ್ತು ಹೋದ ಮೇಲೆ ಅರ್ಥ ಯಾರಿಗಾಹುದೊ ॥೨॥**

**ಹೊನ್ನು ಹೆಣ್ಣು ಮಣ್ಣು ಮೂರು ತನ್ನಲಿದ್ದು ಉಣ್ಣಲಿಲ್ಲ**
**ಅಣ್ಣ ತಮ್ಮ ತಾಯಿ ತಂದೆ ಬಯಸಲಾಗದು**
**ಅನ್ನ ವಸ್ತ್ರ ಭೋಗಕ್ಕಾಗಿ ತನ್ನ ಸುಖವ ಕಾಣಲಿಲ್ಲ**
**ಮಣ್ಣುಪಾಲು ಆದಮೇಲೆ ಯಾರಿಗಾಹುದೊ ॥೩॥**

**ಬೆಳ್ಳಿ ಬಂಗರಿಟ್ಟುಕೊಂಡು ಒಳ್ಳೆ ವಸ್ತ್ರ ಹೊದ್ದುಕೊಂಡು**
**ಅಳ್ಳಾಚಾರಿ ಗೊಂಬೆಯಂತೆ ಆಡಿಹೋಯಿತು**
**ಹಳ್ಳ ಹರಿದು ಹೋಗುವಾಗ ಗುಳ್ಳೆ ಬಂದು ಒಡೆಯುವಂತೆ**
**ಉಳ್ಳೆ ಪೊರೆಯಂತೆ ಕಾಣೊ ಸಂಸಾರದಾಟವು ॥೪॥**



**ವಾರ್ತೆ ಕೀರ್ತಿಯೆಂಬುವೆರಡು ಸತ್ತ ಮೇಲೆ ಬಂದವಯ್ಯ**
**ವಸ್ತು ಪ್ರಾಣನಾಯಕನು ಎಲ್ಲಿ ದೊರಕ್ಯಾನು**
**ಕರ್ತೃ ಕಾಗಿನೆಲೆಯಾದಿಕೇಶವನ ಚರಣಕಮಲ**
**ನಿತ್ಯದಲ್ಲಿ ಭಜಿಸಿ ಸುಖಿಯಾಗಿ ಬಾಳೆಲೊ ॥೫॥**

ಭಾವ– ಸೂತ್ರಧಾರಿ ಆಡಿಸಿದಂತೆ ಕುಣಿಯುವ, ನಿಲ್ಲಿಸಿದರೆ ನಿಲ್ಲುವ, ಮಲಗಿಸಿದರೆ ಮಲಗುವ ಸೂತ್ರ ಗೊಂಬೆಯಂತೆ ಈ ದೇಹ ಹಾಗೂ ಜೀವ ಎಂದು ಹೇಳುತ್ತಾ, ಮಾನವ ದೇಹದ ಅನಿತ್ಯತೆಯನ್ನು ಮನಗಾಣಿಸಿ, ನಿತ್ಯಾತ್ಮನಾದ ಭಗವಂತನತ್ತ ಚಿತ್ತವಿಡುವಂತೆ ಮಾನವನಿಗೆ ಬೋಧಿಸಲಾಗಿದೆ; ಲೌಕಿಕದಲ್ಲಿದ್ದೂ ಪಾರಲೌಕಿಕವನ್ನು ಅಳವಡಿಸಿಕೊಳ್ಳಬೇಕೆಂಬ ಆಶಯವಿದೆ.

ಅರ್ಥ– ಡಿಂಬ = ದೇಹ

ಕಂಬ ಸೂತ್ರ ಗೊಂಬೆಯಂತೆ = ಸೂತ್ರಧಾರಿ ಆಡಿಸಿದಂತೆ ಕುಣಿಯುವ ಇಲ್ಲದಿದ್ದರೆ ನಿಶ್ಚೇಷ್ಟಿತವಾಗಿ ಬೀಳುವ ಗೊಂಬೆ. (ಇಲ್ಲಿ ಮುಖ್ಯವಾಗಿ ಗಮನಿಸಬೇಕಾದದ್ದು ಕನಕದಾಸರು ಬರೀ ಸೂತ್ರದಗೊಂಬೆ ಎಂದು ಬಳಸಿಲ್ಲ. ಕಂಬಸೂತ್ರ ಗೊಂಬೆ ಎಂದು ಬಳಸಿದ್ದಾರೆ. ಜನಪದ ಕಲೆಯಾದ ಗೊಂಬೆಯಾಟದಲ್ಲಿ ಎರಡು ಬಗೆ. ಒಂದು ಸೂತ್ರ(ದಾರ)ದಿಂದ ಆಡಿಸುವ ಗೊಂಬೆಯಾಟ. ಇನ್ನೊಂದು ಕಂಬಿಯಿಂದ– ಕಬ್ಬಿಣದ ಸಲಾಖೆಯಿಂದ– ಆಡಿಸುವ ಗೊಂಬೆಯಾಟ. ಎರಡನೆಯದರ ನಿರ್ದೇಶನವಿದೆ ಇಲ್ಲಿ. ಜಾನಪದ ಜಗತ್ತಿನ ಸಾಂದ್ರ ಅನುಭವ ಕನಕದಾಸರಿಗಿತ್ತೆಂಬುದು ಇದರಿಂದ ವಿದಿತವಾಗುತ್ತದೆ)

ಅರ್ಥ = ಐಶ್ವರ್ಯ, ಹಣ

ಅಳ್ಳಾಚಾರಿ ಗೊಂಬೆ = ಯಕ್ಷಗಾನ ಬಯಲಾಟಗಳಲ್ಲಿ ಹನುಮನಾಯಕ, ಕೋಡಂಗಿ ಪಾತ್ರವಿದ್ದಂತೆ ಸೂತ್ರದ ಗೊಂಬೆಯಾಟದಲ್ಲಿ ಅಳ್ಳಾಚಾರಿ ಪಾತ್ರ. ಹಳೆಯ ಮೈಸೂರಿನ ಕಡೆ ಇದಕ್ಕೆ ಕಿಳ್ಳೆಕ್ಯಾತ ಅಥವಾ ಚಿಳ್ಳೆಕ್ಯಾತ ಎಂದು ಹೇಳುವುದೂ ಉಂಟು. ಆ ವೃತ್ತಿಯವರಿಗಿರುವ

ಕಿಳ್ಳೆಕ್ಯಾತರು ಎಂಬ ಹೆಸರು ಇದರಿಂದಲೇ ಬಂದದ್ದು.

ಉಳ್ಳೆ ಪೊರೆ = ಉರುಳಿ ಹೋಗುವ ಗರಿ

ವಾರ್ತೆ ಕೀರ್ತಿ = ಸುದ್ದಿ (ಅಪಕೀರ್ತಿ) ಮತ್ತು ಹೆಸರುವಾಸಿಗೆ (ಸತ್‌ಕೀರ್ತಿ)

ವಸ್ತು ಪ್ರಾಣನಾಯಕ = ಪರವಸ್ತು, ಪರಬ್ರಹ್ಮ

* * * *



## ೯೨
## ಕೇದಾರಗೌಳ – ಝಂಪೆ ತಾಳ

ತಲ್ಲಣಿಸದಿರು ಕಂಡ್ಯ ತಾಳು ಮನವೆ ॥ಪ॥
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ ॥ಅ॥

ಬೆಟ್ಟದಾ ತುದಿಯಲ್ಲಿ ಹುಟ್ಟಿದ ವೃಕ್ಷಕ್ಕೆ
ಕಟ್ಟೆಯನು ಕಟ್ಟಿ ನೀರೆರೆದವರು ಯಾರೊ
ಪುಟ್ಟಿಸಿದ ಸ್ವಾಮಿ ತಾ ಹೊಣೆಗಾರನಾಗಿರಲು
ಗಟ್ಯಾಗಿ ಸಲಹುವನು ಇದಕೆ ಸಂಶಯವಿಲ್ಲ ॥೧॥

ಅಡವಿಯೊಳಗಾಡುವ ಮೃಗ ಪಕ್ಷಿಗಳಿಗೆಲ್ಲ
ಅಡಿಗಡಿಗೆ ಆಹಾರವಿತ್ತವರು ಯಾರೊ
ಪಡೆದ ಜನನಿಯ ತೆರದಿ ಸ್ವಾಮಿ ಹೊಣೆಗೀಡಾಗಿ
ಬಿಡದೆ ರಕ್ಷಿಪನು ಇದಕೆ ಸಂಶಯವಿಲ್ಲ ॥೨॥

ನವಿಲಿಗೆ ಚಿತ್ರ ಬರೆದವರು ಯಾರು
ಪವಳದ ಲತೆಗೆ ಕೆಂಪಿಟ್ಟವರು ಯಾರು
ಸವಿಮಾತಿನರಗಿಳಿಗೆ ಹಸುರು ಬರೆದವರು ಯಾರು
ಅವನೆ ಸಲಹುವನು ಇದಕೆ ಸಂಶಯವಿಲ್ಲ ॥೩॥

ಕಲ್ಲಿನಲಿ ಹುಟ್ಟಿ ಕೂಗುವ ಕಪ್ಪೆಗಳಿಗೆಲ್ಲ
ಅಲ್ಲಲ್ಲಿಗಾಹಾರ ತಂದೀವರಾರು
ಬಲ್ಲಿದನು ಕಾಗಿನೆಲೆಯಾದಿಕೇಶವರಾಯ
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ ॥೪॥

ಭಾವ– ದೈವದ ತಾಯಿತನವನ್ನು ಬೋಧಿಸುತ್ತ ತಹತಹ ಪಡುವ ಮಾನವನಿಗೆ ಭರವಸೆ ನೀಡುವಂಥ, ಕೀರ್ತನೆಯಿದು. ಕನಕದಾಸರ ಸ್ವಾನುಭವದ, ಹೃದಯಾಂತರಾಳದಿಂದ ಹೊರಹೊಮ್ಮಿದ ದರ್ಶನದ ಆಣಿ ಮುತ್ತು.

ಅರ್ಥ– ತಲ್ಲಣಿಸದಿರು = ತಹತಹ ಪಡದಿರು, ಕಳವಳಿಸದಿರು
ಪವಳ = ಹವಳ

* * * *



೯೩

## ಕಾಂಬೋದಿ – ಝಂಪೆ ತಾಳ

ನಾರಾಯಣ ಎಂಬ ನಾಮದ ಬೀಜವನು ನಾಲಗೆಯ
ಕೂರಿಗೆಯ ಮಾಡಿ ಬಿತ್ತಿರಯ್ಯ ॥ಪ॥

ತನುವ ನೇಗಿಲು ಮಾಡಿ ಹೃದಯ ಹೊಲವನು ಮಾಡಿ
ತನ್ವಿರಾ ಎಂಬ ಎರಡೆತ್ತು ಹೂಡಿ
ಜ್ಞಾನವೆಂಬೊ ಮಿಣಿಯ ಕಣ್ಣಿ ಹಗ್ಗವ ಮಾಡಿ
ಧ್ಯಾನವೆಂಬ ಧಾನ್ಯವ ನೋಡಿ ಬಿತ್ತಿರಯ್ಯ ॥೧॥

ಕಾಮಕ್ರೋಧಗಳೆಂಬ ಗಿಡಗಳನು ತರಿಯಿರಯ್ಯ
ಮದಮತ್ಸರವೆಂಬ ಪೊದೆಯ ಹಿರಿಯಿರಯ್ಯ
ಪಂಚೇಂದ್ರಿಯಗಳೆಂಬ ಮಂಚಿಕೆಯ ಹಾಕಿರಯ್ಯ
ಚಂಚಲವೆಂಬ ಹಕ್ಕಿಯ ಓಡಿಸಿರಯ್ಯ ॥೨॥

ಉದಯಾಸ್ತಮಾನವೆಂಬ ಎರಡು ಕೊಳಗವ ಮಾಡಿ ಆಯು
ಶ್ಯದ ರಾಶಿಯನು ಅಳೆಯಿರಯ್ಯ
ಇದು ಕಾರಣ ಕಾಗಿನೆಲೆಯಾದಿಕೇಶವನ
ಮುದದಿಂದ ನೆನೆನೆನೆದು ಸುಖಿಯಾಗಿರಯ್ಯ ॥೩॥

ಭಾವ– ಹೃದಯವೆಂಬ ಹೊಲದಲ್ಲಿ ನಾರಾಯಣ ಎಂಬ ಬೀಜವನ್ನು ಬಿತ್ತಿ ದೈವಭಕ್ತಿಯ ಫಸಲು ತೆಗೆದು ಸಂತೃಪ್ತ ಜೀವನ ಸಾಗಿಸಿ ಎಂದು ಬೋಧಿಸುವ ಸುಂದರ ಹಾಡಿದು. ಗಾದಿಯನೇರಿ ಕೂತ ವಿದ್ವದ್ ಜನರಿಗೆ ಸಾಹಿತ್ಯ ಮುಟ್ಟಿದರೆ ಸಾಲದು. ಬೀದಿಯ ಜನರಿಗೂ ಮುಟ್ಟಬೇಕು ಬೇರು ನೀರುಂಡಾಗ ಮಾತ್ರ ಮರವು ಚಿಗುರು ಕಾಯಿ ಹಣ್ಣುಗಳಿಂದ ತುಂಬಿ ತುಳುಕುವುದು ಎಂಬ ಸ್ವಸ್ಥ

ಜನಸಂಮುಖ ದೃಷ್ಟಿ ಕನಕದಾಸರಿಗಿರುವುದಿರಂದಲೇ ವ್ಯವಸಾಯದ ರೂಪಕದಲ್ಲಿ ರೈತಾಪಿ ಜನರಿಗೆ ಸುಲಭವಾಗಿ ಮುಟ್ಟುವಂತೆ, ಅಲ್ಲಿ ಸ್ಪಂದನ ಸುಳಿದಿರುಗುವಂತೆ ಮಾಡಿದ್ದಾರೆ ಎಂಬುದನ್ನು ಮರೆಯುವಂತಿಲ್ಲ.

ಅರ್ಥ– ಕೂರಿಗೆ = ಬಿತ್ತನೆಯ ಸಾಧನ (ಕೂರಿಗೆ ಬಟ್ಟಲಲ್ಲಿ ಬಿಡುವ ರಾಗಿ ವಿವಿಧ ಸೆಡ್ಡೆಗಳ ಮೂಲಕ ಸಮವಾಗಿ ಉಕ್ಕೆಯೊಳಕ್ಕೆ ಬೀಳುವಂತೆ ನಿರ್ಮಿಸಿರುವ ಸಾಧನ)

ತನ್ವಿರಾ = ಶ್ವಾಸೋಚ್ಛ್ವಾಸ (ತನ್ವಿರಾ ಎಂಬುದಕ್ಕೆ ಧಾತುರೂಪ ಸಂಸ್ಕೃತದಲ್ಲೂ ಇದ್ದಂತಿಲ್ಲ. 'ತಿಂಗಳಿನಾ' ಎಂಬ ರೂಪವಿರಬಹುದೆ? ಅದು ಲಿಪಿಕಾರರ ಕೈಯಲ್ಲಿ ತನ್ವಿರಾ ಎಂದಾಗಿರಬಹುದೆ? ತಿಂಗಳು ಎಂದರೆ ಚಂದ್ರ, ಇನ ಎಂದರೆ ಸೂರ್ಯ. ಸೂರ್ಯನಾಡಿ ಚಂದ್ರನಾಡಿಗೆ ಇಡಾಪಿಂಗಳ ಎಂಬ ಹೆಸರುಂಟು. ಇಡಾಪಿಂಗಳ ಎಂಬ ಸಂಸ್ಕೃತ ಶಬ್ದ ಮೂಲಕ್ಕೆ 'ತಿಂಗಳಿನಾ' ಎಂಬ ಕನ್ನಡ ಶಬ್ದರೂಪವನ್ನು ಟಂಕಿಸಿರಬಹುದೆ? ಹಾಗೆ ಟಂಕಿಸುವುದರಲ್ಲಿ ಕನಕದಾಸರು ನಿಷ್ಣಾತರು ಎಂಬುದಕ್ಕೆ ಉದಾಹರಣೆಗಳು ಹೇರಳವಾಗಿವೆ ಅವರ ಕೀರ್ತನೆ ಹಾಗೂ ಕೃತಿಗಳಲ್ಲಿ)

ಮಿಣಿ = ಚರ್ಮದ ಹಗ್ಗ

ಕಣ್ಣಿ ಹಗ್ಗ = ಇದು ಜೋಡುನುಡಿ. ಕಣ್ಣಿಗೂ ಹಗ್ಗವೆಂದೇ ಅರ್ಥ (ಹೆಣ್ಣು ಹೆಂಗಸು ಎಂಬುದು ಬಳಕೆಯಲ್ಲಿರುವಂತೆ)

ಪಂಚೇಂದ್ರಿಯಗಳು = ಐದು ಇಂದ್ರಿಯಗಳು (ಕಣ್ಣು, ಕಿವಿ, ಮೂಗು, ನಾಲಗೆ, ಚರ್ಮ)

ಮಂಚಿಕೆ = ಹಕ್ಕಿಗಳನ್ನು ಓಡಿಸಲು ಹಾಕಿರುವ ಅಟ್ಟಣೆ

ಉದಯಾಸ್ತಮಾನ = ಸೂರ್ಯೋದಯ ಸೂರ್ಯಾಸ್ತ

ಕೊಳಗ = ಧಾನ್ಯ ಅಳೆಯುವ ಸಾಧನ (ಕೊಳಗಕ್ಕೆ ಕೆಲವು ಕಡೆ ಎಂಟು ಸೇರು. ಕೆಲವು ಕಡೆ ಹದಿನಾರು ಸೇರು)

* * * *



## ೯೪
## ಕೇದಾರಗೌಳ – ಝಂಪೆ ತಾಳ

ನೀನುಪೇಕ್ಷೆಯ ಮಾಡೆ ಬೇರೆ ಗತಿಯಾರೆನಗೆ
ನಿಗಮಗೋಚರ ಮುಕುಂದ ॥ಪ॥

ಗಾನರಸಲೋಲ ಆಗಮಶೀಲ ಭಕ್ತಪರಿಪಾಲ
ಸನ್ನುತ ಗೋಪಾಲ ಬಾಲ ॥ಅ॥

ಜಪತಪಾನುಷ್ಠಾನ ಜಪಿತನೆಂದೆನಿಸುವೆನೆ
ಅಪ್ಪ ಜಾಣತನವೆನ್ನೊಳಿಲ್ಲ
ಗುಪಿತದಿಂದ ದಾನ ಧರ್ಮವನು ನಾ ಮಾಡುವೆನೆ
ಅಪರಿಮಿತ ಧನವು ಇಲ್ಲ
ಅಪಾರ ಕರ್ಮಗಳ ಅನುಸರಿಸಿ ನಡೆವುದಕೆ
ನಿಪುಣತ್ವ ಮೊದಲೆ ಇಲ್ಲ
ರಪಣ ನಿಪುಣತ್ವ ಜಾಣತ್ವ ಇಲ್ಲದಿಹ ಕೃಪಣಗೆ
ಸುಪವಿತ್ರ ನೀನಲ್ಲದೆ ಇಲ್ಲ –ಸಿರಿನಲ್ಲ ।೧॥

ಆನೆ ನೆಗಳಿಗೆ ಸಿಲುಕಿ ಅರೆಬಾಯಿ ಬಿಡುತಿರಲು
ಮೌನದಿಂ ಬಂದು ಕಾಯ್ದೆ
ಹೇ ನಾರಗಾ ಎಂದಜಮಿಳಗೆ ಮುಕ್ತಿಯನು
ನೀನೊಲಿದು ಕೃಪೆ ಮಾಡಿದೆ
ಹಾನಿಯಿಲ್ಲದ ಪದವಿ ನೀನಿತ್ತು ಧ್ರುವಗೆ ಕಡು
ದೀನತ್ವವನು ಬಿಡಿಸಿದೆ
ದಾನವಾಂತಕ ಸಕಲ ದಿವಿಜ ಮುನಿವಂದ್ಯ ಅಭಿ
ಮಾನಿ ಎನ್ನನೂ ಸಲಹದೆ – ಬರಿದೆ ॥೨॥

**ಈಶಣತ್ರಯದ ಬಯಲಾಸೆಯಲಿ ಭ್ರಮೆಗೊಂಡು**
**ಬೇಸರದಿ ಮನದಿ ನೊಂದು**
**ಹೇಸಿಗೆಯ ಸಂಸಾರ ಮಾಯಕ್ಕೆ ಸಿಲುಕಿ ನಾ**
**ಘಾಸಿ ಪಡಲಾರೆನಿಂದು**
**ವಾಸುದೇವನೆ ನಿನ್ನ ಪೊಂದಿ ಬದುಕುವೆನೆಂದು**
**ಆಸೆ ಪಡುತಿಹೆನು ಇಂದು**
**ದಾಸನೆಂದೆನಿಸಿ ಡಂಗುರ ಹೊಯ್ಸಿ ಬಡದಾದಿ**
**ಕೇಶವನೆ ಕರುಣಿಸಯ್ಯಾ ಬಂದು** ||೩||

ಭಾವ– ಭಕ್ತನ ಹೃದಯಾಂತರಾಳದ ಆರ್ದ್ರ ಪ್ರಾರ್ಥನೆ ಇದು; ವಿನಯ ಹಾಗೂ ಪ್ರಾಮಾಣಿಕತೆಗಳು ಸರಳತೆಯ ಕವಚ ತೊಟ್ಟಿರುವುದು ವಿಶೇಷ.

ಅರ್ಥ– ಉಪೇಕ್ಷೆ = ಅಲಕ್ಷ್ಯ, ತಾತ್ಸಾರ
ನಿಗಮಗೋಚರ = ಜ್ಞಾನದ ಕಣ್ಣಿಗೆ ಕಾಣುವವನು
ಆಗಮ = ಶಾಸ್ತ್ರ
ಜಪಿತ = ಮಂತ್ರ ಪಠಿಸುವವನು
ಗುಪಿತ (<ಗುಪ್ತ) = ರಹಸ್ಯ
ರಪಣ = ಐಶ್ವರ್ಯ
ಕೃಪಣ = ಲೋಭಿ
ನೆಗಳು = ಮೊಸಳೆ
ದಾನವಾಂತಕ = ರಾಕ್ಷಸ ಸಂಹಾರಿ (ವಿಷ್ಣು)
ದಿವಿಜ = ದೇವತೆ
ಈಷಣ ತ್ರಯ = ಮೂರು ಬಗೆಯ ಕಾಮನೆಗಳು: ಧಾರೇಷಣ, ಪುತ್ರೇಷಣ, ವಿತ್ತೇಷಣ (ಹೆಂಡತಿ, ಮಕ್ಕಳು, ಧನ)

* * * *



೯೫

## ಧನ್ಯಾಸಿ – ಆದಿತಾಳ

**ಏನು ಬರುವುದೊ ಸಂಗಡೇನು ಬರುವುದೊ** ||ಪ||
**ದಾನ ಧರ್ಮ ಮಾಡಿ ಬಹು ನಿಧಾನಿ ಎನಿಸಿಕೊಳ್ಳೊ ಮನುಜ** ||ಅ||

**ಹೆಂಡರಿಲ್ಲ ಮಕ್ಕಳಿಲ್ಲ ಮಂಡೆ ತುಂಬ ಬಂಧುಬಳಗ**
**ಕಂಡು ಬಿಡಿಸಿಕೊಂಬರಾರೊ ದುಂಡ ಯಮನ ದೂತರೆಳೆಯೆ**
**ಬಂಡಿ ತುಂಬ ಇದ್ದ ಧನವು ಹಿಂದೆ ಉಳಿವುದಲ್ಲೊ ನಿನ್ನ**
**ಅಂಡಿಕೊಂಡು ಬರುವ ವಸ್ತು ಕೀರ್ತಿ ಅಪಕೀರ್ತಿ ಎರಡೆ** ||೧||

**ಎನ್ನದೆಂದು ತನ್ನದೆಂದು ಹೊನ್ನು ಹೆಣ್ಣು ಮಣ್ಣಿಗಾಗಿ**
**ಬನ್ನಪಟ್ಟು ಬಾಯಿಬಿಡುವೆ ಬರಿದೆ ಮೋಹದಿ**
**ಚೆನ್ನ ಮನದಿ ಪರಹಿತಾರ್ಥ ಮಾಡಿ ಪುಣ್ಯಪಡೆಯೊ ನೀನು**
**ಇನ್ನು ಮುಂದೆ ಕಿತ್ತು ತಿಂಬ ಕೂಪದಲ್ಲಿ ಕೆಡಲು ಬೇಡ ಮನುಜ** ||೨||

**ಬತ್ತಲಿಂದ ಬರುತ್ತಿಹರು ಬತ್ತಲಿಂದ ಹೋಗುತಿಹರು**
**ಕತ್ತಲೆ ಕಾಲವನು ಬೆಳಕು ಮಾಡಿ ಹೊತ್ತುಗಳೆವರು**
**ಸತ್ತರಿಲ್ಲ ಅತ್ತರಿಲ್ಲ ಹೊತ್ತುಕೊಂಡು ಹೋಹರಿಲ್ಲಿ**
**ಮತ್ತೆ ದೇಹ ಮಣ್ಣುಗೂಡಿದಂತೆ ಕೆಡಲು ಬೇಡ ಮನುಜ** ||೩||

**ಕಟ್ಟಲಿಲ್ಲ ಬಿಚ್ಚಲಿಲ್ಲ ಕಷ್ಟಪಟ್ಟು ಬಳಲಲಿಲ್ಲ**
**ಸುಟ್ಟು ಸುಟ್ಟು ಸುಣ್ಣದ್ದರಳು ಆಯಿತಲ್ಲೊ ಕಾಯ**
**ಬಿಟ್ಟು ಹೋಗುವಾಗ ಬೊಟ್ಟು ಬಟ್ಟೆ ನಿನಗೆ ಹೊಂದಲಿಲ್ಲ**
**ಕಟ್ಟ ಕಡೆಗೆ ದೃಷ್ಟಿ ನೋಟ ಬಟ್ಟ ಬಯಲು ಆಗುತಿಹುದು** ||೪||

**ಗರುವದೋರಿ ನಿಂದ ನೀನು ಬರಿದೆ ಕಾಲ ಕಳೆದೆ – ಮುಂ**
**ದರಿದು ನೋಡು ನರರ ತನುವು ದೊರಕಲರಿಯದು**
**ನೆರೆ ಮಹಾಮೂರ್ತಿ ಒಡೆಯ ಬಾಡದಾದಿಕೇಶವನಲ್ಲಿಟ್ಟು ಭಕುತಿ**
**ಚರಣ ಭಜಿಸಿ ಚಂಚಲಳಿಸಿ ವರವ ಪಡೆದು ಹೊಂದು ಮುಕುತಿ ॥೫॥**

ಭಾವ– ಮನುಷ್ಯ ಸಂಪಾದಿಸಿದ ಯಾವ ವಸ್ತುವೂ ತನ್ನೊಡನೆ ಬರುವುದಿಲ್ಲ– ಕೀರ್ತಿ ಅಪಕೀರ್ತಿಗಳ ವಿನಾ. ಆದ್ದರಿಂದ ಇರುವಷ್ಟು ಕಾಲ ಪರಹಿತಾರ್ಥದಲ್ಲಿ ಪರಮಾತ್ಮನನ್ನು ಕಾಣುವ ಜ್ಞಾನಿಯಾಗು ಎಂಬ ಉಪದೇಶವಿದೆ ಈ ಕೀರ್ತನೆಯಲ್ಲಿ.

ಅರ್ಥ– ನಿಧಾನಿ = ಜ್ಞಾನಿ, ಆಶ್ರಯದಾತ

೧. ಮಂಡೆ = ತಲೆ

೨. ದುಂಡ = ದುಂಡಾವರ್ತಿಯ, ಕಟುಕ
ಅಂಡಿಕೊಂಡು (<ಅಂಟಿಕೊಂಡು) = ಜೊತೆ ಬಿಡದೆ, ಬೆಸುಗೆ ಗೊಂಡು

೨. ಬನ್ನ = ತೊಂದರೆ
ಕೂಪ = ಬಾವಿ

೩. ಕತ್ತಲೆ..... ಮಾಡಿ = ಹೊತ್ತು ಮುಳುಗಿ ಹೊತ್ತು ಹುಟ್ಟುವ ತನಕ
ಹೊತ್ತುಗಳೆವರು = ಕಾಲ ಕಳೆಯುವರು

೪. ಕಟ್ಟಲಿಲ್ಲ ಬಿಚ್ಚಲಿಲ್ಲ = ಕಿಂಚಿತ್ತೂ ಕೆಲಸ ಮಾಡಲಿಲ್ಲ. (ದನಗಳನ್ನು ಗೊಂತಿಗೆ ಕಟ್ಟುವ ಮತ್ತೆ ಬಿಚ್ಚಿ ಮೇಯಲೋಸುಗ ಬಿಡುವ ಕ್ರಿಯೆಯಿಂದ ಮೂಡಿದ್ದು)
ಬೊಟ್ಟು = ಬೆಟ್ಟುದ್ದ, ಚೂರು

೫. ನರರ ತನುವು ದೊರಕಲರಿಯದು = ಮನುಷ್ಯ ಜನ್ಮ ಶ್ರೇಷ್ಠ ಮತ್ತೆ ದೊರೆಯುವುದು ದುರ್ಲಭ
ಚಂಚಲಳಿಸಿ = ಚಾಂಚಲ್ಯವನ್ನು ನಾಶಮಾಡಿ

* * * *



## ೯೬
## ಮುಖಾರಿ – ಝಂಪೆ ತಾಳ

**ಆರು ಸಮಯಕ್ಕೊದಗಲಿಲ್ಲ**
**ಮೋರೆ ನೋಡುತ ಸುಮ್ಮನಿಹರೆಲ್ಲ ॥ಪ॥**

**ಮಗಳು ಮಹಲಕುಮಿ ಮೊಮ್ಮಗನು ಸರಸಿಜಭವನು**
**ಖಗರಾಜವಾಹನನು ತನ್ನಳಿಯನು**
**ಅಗಜನಂದು ತನ್ನೊಡಲೊಳಿಂಬಿಟ್ಟು ಮೂ**
**ರ್ಬೊಗಸೆ ಮಾಡಿದ ಮುನಿಯ ಬಿಡಿಸಲಿಲ್ಲ ॥೧॥**

**ಶ್ರೀದೇವಿ ಭೂದೇವಿ ಮಾತೆಯರು ತಾವಿರಲು**
**ಯಾದವರಾಯ ಮೋಹದ ತಂದೆಯು**
**ವೇದಮುಖದಣ್ಣನಿರೆ ಉರಿ ನಯನದಿಂದ ಸ್ಮರ**
**ಬೂದಿಯಾಗುವಾಗ ಬಿಡಿಸಲಿಲ್ಲವೇಕೆ ॥೨॥**

**ಪಿತನು ಸಾಗರನು ಹಿತದಾಕೆ ಶ್ರೀದೇವಿ**
**ಅತಿ ಬೀಗನಾದವ ನಾರಾಯಣ**
**ಜತೆ ಅಳಿಯರು ಬೊಮ್ಮ ಮನ್ಮಥರಿರಲಾಗಿ**
**ಕ್ಷಿತಿಯೊಳಗೆ ಶಶಿ ಕ್ಷೀಣವಾಗುವ ಸಮಯದಿ ॥೩॥**

**ತೆತ್ತೀಸ ಕೋಟಿ ದೇವರ್ಕಳು ತಾವಿರಲು**
**ಒತ್ತಿನಲಿ ಇಂದ್ರ ಉಪೇಂದ್ರರಿರಲು**
**ಮತ್ತೆ ಪಾರ್ವತಿ ಪುತ್ರ ವೀರೇಶ ದಕ್ಷನ**
**ನೆತ್ತಿ ಹರಿಗಡಿವಾಗ ನೋಡುತಿಹರೆಲ್ಲ ॥೪॥**

**ಇಂಥಿಂಥ ದೊಡ್ಡವರು ಈ ಪಾಡು ಪಡಲಾಗಿ**
**ಭ್ರಾಂತ ಮನುಜರಿಗೆ ಪೇಳಲಿನ್ನೆಷ್ಟು**
**ಕಂತುಪಿತ ಕಾಗಿನೆಲೆಯಾದಿಕೇಶವನ**
**ಸಂತೋಷದಿಂ ನೆನೆದು ಸುಖಿಯಾಗೊ ಮನುಜ ॥೫॥**

ಭಾವ– ಬಂಧುಬಾಂಧವರಾರೂ ಆಪತ್ಕಾಲದಲ್ಲಿ ಆತುಕೊಳ್ಳುವುದಿಲ್ಲ– ಪರಮಾತ್ಮನ ವಿನಾ ಎಂಬ ಭಾವ ಈ ಕೀರ್ತನೆಯ ಆತ್ಮವಾಗಿದೆ. ಘಟಾನುಘಟಿಗಳಾದ ದೈವ ಬಂಧುಗಳಲ್ಲೇ ಈ ಸ್ಥಿತಿ ಇರುವಾಗ ಹುಲುಮಾನವರಾದ ನಮಗೆ ಇನ್ನಾರು ಆಗುತ್ತಾರೆ ಎಂದು ಪೌರಾಣಿಕ ದೃಷ್ಟಾಂತಗಳನ್ನು ನೀಡಿದ್ದಾರೆ. ಆದರೆ ಆ ದೃಷ್ಟಾಂತಗಳಲ್ಲಿ ಕೇಶವನೂ ಇದ್ದಾನಲ್ಲ ಎಂಬ ಸಂದೇಹ ಓದುಗರನ್ನು ಕಾಡದಿರದು.

ಅರ್ಥ– ಸರಸಿಜಭವ = ಬ್ರಹ್ಮ

೧. ಅಗಜ = ಅಗಸ್ತ್ಯ
ಖಗರಾಜವಾಹನ = ವಿಷ್ಣು
(ಸಮುದ್ರ ರಾಜನ ಮಗಳು ಲಕ್ಷ್ಮಿ, ಮೊಮ್ಮಗ ಬ್ರಹ್ಮ ಅಳಿಯ ಶ್ರೀಹರಿ. ಇವರೆಲ್ಲ ಇದ್ದೂ ಅಗಸ್ತ್ಯ ಸಮುದ್ರವನ್ನು ಮೂರು ಬೊಗಸೆ ಮಾಡಿ ಕುಡಿದಾಗ ಯಾರು ರಕ್ಷಿಸಲಿಲ್ಲ ಎಂಬ ಭಾವ ಇಲ್ಲಿದೆ.

೨. ಯಾದವರಾಯ = ಕೃಷ್ಣ
ವೇದಮುಖ = ಬ್ರಹ್ಮ
ಉರಿನಯನ = ಹಣೆಗಣ್ಣು, ಕೆಂಡಗಣ್ಣು
(ಶಿವ ತನ್ನ ಉರಿಗಣ್ಣಿನಿಂದ ಕಾಮನನ್ನು ಸುಟ್ಟಾಗ ತಾಯಂದಿರಾದ ಶ್ರೀದೇವಿ ಭೂದೇವಿಯರು, ತಂದೆ ಕೃಷ್ಣ, ಅಣ್ಣ ಬ್ರಹ್ಮ ಯಾರೂ ಅಡ್ಡ ಬರಲಿಲ್ಲವಲ್ಲ ಎಂಬ ಭಾವ ಇಲ್ಲಿದೆ)

೩. ಶಶಿ = ಚಂದ್ರ
ಕ್ಷೀಣವಾಗುವ ಸಮಯ = ಗ್ರಹಣ ಕಾಲ
(ತಂದೆ ಕ್ಷೀರಸಾಗರನಿದ್ದೂ, ಅಕ್ಕ ಲಕ್ಷ್ಮಿ ಇದ್ದೂ, ಬೀಗ ಶ್ರೀಹರಿಯಿದ್ದೂ, ಸೋದರಳಿಯರಾದ ಬ್ರಹ್ಮ ಮನ್ಮಥರಿದ್ದೂ ಚಂದ್ರನ ಗ್ರಹಣಕಾಲದಲ್ಲಿ ಯಾರೂ ಆಗಲಿಲ್ಲವಲ್ಲ ಎಂಬ ಭಾವ ಇಲ್ಲಿದೆ)



೪. ತೆತ್ತೀಸ = ಮೂವತ್ತು ಮೂರು
(ಪಾರ್ವತಿ ಪುತ್ರನಾದ ವೀರೇಶ ದಕ್ಷನ ನೆತ್ತಿಯನ್ನು ಹರಿಗಡಿದಾಗ ಮೂವತ್ತು ಮೂರು ಕೋಟಿ ದೇವತೆಗಳಿದ್ದೂ, ಸನಿಹದಲ್ಲೇ ಇಂದ್ರ ಉಪೇಂದ್ರರುಗಳಿದ್ದೂ ಸುಮ್ಮನೆ ನೋಡುತ್ತಿದ್ದರೇ ವಿನಾ ಯಾರೂ ಬಂದು ತಡೆಯಲಿಲ್ಲ ಎಂಬ ಭಾವವಿಲ್ಲಿದೆ)

೫. ಪಾಡು = ತೊಂದರೆ
ಕಂತುಪಿತ = ಮನ್ಮಥನ ತಂದೆ (ವಿಷ್ಣು)

* * * *

## ೯೭
## ಗೌಳಿಪಂತು – ತ್ರಿಪುಟ ತಾಳ

**ಎಳ್ಳು ಕಾಳಿನಷ್ಟು ಭಕ್ತಿ ಎನ್ನೊಳಗಿಲ್ಲ ॥ಪ॥**
**ಕಳ್ಳರಿಗೆ ಕಳ್ಳನಂತೆ– ಬೆಳ್ಳಕ್ಕಿಯಂದದಿ ಡಂಭ ॥ಅ॥**

**ಗಾಣದೆತ್ತಿನಂತೆ ಕಣ್ಣ ಮುಚ್ಚಿ ಪ್ರದಕ್ಷಿಣೆಯ ಮಾಡಿ**
**ಕಾಣದೆ ತಿರುಗುವೆನೆರಡು ಕಣ್ಣಿದ್ದು ನಾನು**
**ಮಾಣಿಕ್ಯದ ರಾಶಿಯಲ್ಲಿ ಅಂಧಕರೈವರು ಕೂಡಿ**
**ಆಣಿಮುತ್ತ ಹಿಡಿದು ಹಿಡಿದು ಬಿಡುವ ಭ್ರಮಿತನಯ್ಯ ॥೧॥**

**ಗುಂಡು ಮುಳುಗನ ಹಕ್ಕಿಯಂತೆ ಕಂಡ ಕಂಡ ನೀರ ಮುಳುಗಿ**
**ಮಂಡೆ ಶೂಲೆ ಬಾಹೋದಲ್ಲದೆ ಗತಿಯ ಕಾಣೆನೊ**
**ಮಂಡೂಕನಂದದಲಿ ನೀರ ತಡಿಯಲಿ ಕುಳಿತುಕೊಂಡು**
**ಮುಂಡೆ ಮುಸುಕನಿಕ್ಕಿ ಮೂಗು ಹಿಡಿದು ಬಿಡುವ ಭ್ರಮಿತನಯ್ಯ ॥೨॥**

**ಇಕ್ಕುಳದ ಕೈಯಲ್ಲಿ ಹಿಡಿದ ಕಾದ ಕಬ್ಬಿಣದಂತೆ**
**ಸಿಕ್ಕಿ ಸಿಡಿಮಿಡಿಗೊಂಬೆ ಗತಿಯ ಕಾಣದೆ**
**ಹೊಕ್ಕುಳ ಹೂವಿನ ಬಾಡಾದಾದಿಕೇಶವನ ಮೊರೆ**
**ಹೊಕ್ಕೆನಿಂದು ಮನ್ನಿಸಿ ಕಾಯೊ ದೇವದೇವೋತ್ತಮನೆ ॥೩॥**

ಭಾವ– ಅನನ್ಯ ಭಕ್ತಿರಹಿತವಾದ ಯಾಂತ್ರಿಕ ಆಚಾರ–ವಿಚಾರಗಳನ್ನು ಕಂಡ ಕನಕದಾಸರು ಬೇಸತ್ತು, ಡಂಭಾಚಾರ ರಹಿತವಾದ ಸಮರ್ಪಣಾ ರೂಪದ ಭಕ್ತಿಯ ಮಾಂತ್ರಿಕ ಶಕ್ತಿಯತ್ತ ಮುಖ ಮಾಡಿರುವುದನ್ನು ನಾವಿಲ್ಲಿ ನೋಡಬಹುದು. ಗಾಣದೆತ್ತು, ಗುಂಡುಮುಳುಗನ ಹಕ್ಕಿ, ಮಂಡೂಕಗಳ ರೂಪಕದಲ್ಲಿ ಶುಷ್ಕ ಆಚಾರಗಳು ಹೇಗೆ ನಿಷ್ಪ್ರಯೋಜಕ ಎಂಬುದನ್ನು ಮುಷ್ಟಿಗ್ರಾಹ್ಯ ಮಾಡಿದ್ದಾರೆ.



ಅರ್ಥ– ಡಂಭ = ಬಡಿವಾರ,
ಬೆಳ್ಳಕ್ಕಿ = ೧. ಕೊಕ್ಕರೆ, ೨. ಸತ್ತ್ವವಿಲ್ಲದ ಬರೀ ತೋರಿಕೆಯ (ಉದಾ: ಬೆಳ್ಳಕ್ಕರಿಗ)
ಅಂಧಕ = ಕುರುಡ
ಅಂಧಕರೈವರು = ಪಂಚೇಂದ್ರಿಯಗಳು (ಕಣ್ಣು, ಕಿವಿ, ಮೂಗು, ನಾಲಗೆ, ಚರ್ಮ)
ಆಣಿಮುತ್ತು = ಶ್ರೇಷ್ಠ ಮುತ್ತು
ಭ್ರಮಿತ = ಹುಚ್ಚ
ಮಂಡೆಶೂಲೆ = ತಲೆನೋವು
ಮಂಡೂಕ = ಕಪ್ಪೆ
ಹೊಕ್ಕುಳ ಹೂವ = ಕಮಲನಾಭ (ವಿಷ್ಣು)

* * * *

೯೮

## ಆನಂದಭೈರವಿ – ಆದಿ ತಾಳ

**ಯಾತಕೆ ದಯಮಾಡಲೊಲ್ಲೆ ರಂಗಯ್ಯ– ಜಗ ॥ಪ॥**
**ನ್ನಾಥ ನಿನ್ನ ನಂಬಿದೆನಲ್ಲೊ ರಂಗಯ್ಯ ॥ಅ॥**

**ಚಿಕ್ಕಂದು ಮೊದಲೆ ನಾನು ರಂಗಯ್ಯ – ನೀನೆ**
**ದಿಕ್ಕೆಂದು ನಂಬಿದೆನೊ ರಂಗಯ್ಯ ॥೧॥**

**ನೆಂಟರಿಷ್ಟರು ನೀನೆ ರಂಗಯ್ಯ – ನಿನ್ನ**
**ಬಂಟರಿಗೆ ಬಂಟನಯ್ಯ ರಂಗಯ್ಯ ॥೨॥**

**ದಾಸರ ದಾಸನಯ್ಯ ರಂಗಯ್ಯ – ಕರ್ಮ**
**ಪಾಶಗಳ ಮೋಚನೆ ಮಾಡೊ ರಂಗಯ್ಯ ॥೩॥**

**ಶೇಷಗಿರಿ ವಾಸ ರಂಗಯ್ಯ – ಆದಿ**
**ಕೇಶವನೆ ರಕ್ಷಿಸೊ ರಂಗಯ್ಯ**

ಭಾವ– ಭಗವತ್ಕೃಪೆಗಾಗಿ ಶರಣಾಗತ ಭಾವದಿಂದ ಯಾಚಿಸುವ ಅಕೃತಕ ನಿರ್ಮಲ ಭಕ್ತಿಯ ಆತ್ಮನಿವೇದನೆ ಸಹಜಸುಂದರವಾಗಿ ಅಭಿವ್ಯಕ್ತಗೊಂಡಿದೆ ಇಲ್ಲಿ.

ಅರ್ಥ– ಶೇಷಗಿರಿ = ತಿರುಮಲೆ
ಮೋಚನೆ = ಬಿಡುಗಡೆ



೯೯

## ಮುಖಾರಿ – ಝಂಪೆತಾಳ

**ಏನು ಮಾಡಲಯ್ಯ ಬಯಲಾಸೆ ಬಿಡದು ॥ಪ॥**
**ಮಾನವ ಮೃಗೇಂದ್ರ ರಾಮಚಂದ್ರ ರಕ್ಷಿಸಯ್ಯ ॥ಅ॥**

**ಜ್ಯೋತಿರ್ಮಯವಾದ ದೀಪದ ಬೆಳಕಿಗೆ ತಾನು**
**ಕಾತರಿಸಿ ಬೀಳುವ ಪತಂಗದಂದದಲಿ**
**ಧಾತುಗೆಟ್ಟು ಬೆಳ್ಳಿ ಬಂಗಾರದಲಿ ಮೆರೆವ**
**ಧೂರ್ತೆಯರ ನೋಡುವೀ ಚಕ್ಷುರಿಂದ್ರಿಯಕೆ ॥೧॥**

**ಅಂದವಹ ಸಂಪಗೆಯ ಅರಳ ಪರಿಮಳವುಂಡು**
**ಮುಂದುವರಿಯದೆ ಬೀಳ್ವ ಮಧುಪನಂತೆ**
**ಸಿಂಧೂರ ಗಮನೆಯರ ಸಿರಿಮುಡಿಯೊಳಿಪ್ಪ ಪೂ**
**ಗಂಧ ವಾಸಿಸುವ ಘ್ರಾಣೇಂದ್ರಿಯಕೆ ॥೨॥**

**ಗಾಣದ ತುದಿಯೊಳಿಪ್ಪ ಭೂನಾಗನಂ ಕಂಡು**
**ಪ್ರಾಣಾಹುತಿಯೆಂದು ಸವಿವ ಮೀನಿನಂತೆ**
**ಏಣಾಕ್ಷಿಯರ ಚೆಂದುಟಿಯ ಸವಿಯ ಸವಿಸವಿದು**
**ಜಾಣತನದಲಿ ನಲಿವ ಜಿಹ್ವೇಂದ್ರಿಯಕೆ ॥೩॥**

**ದಿಮ್ಮಿ ದಿಮ್ಮಿ ಘಣಘಣಾ ಎಂಬ ಘಂಟೆಯ ರವಕೆ**
**ಜುಮುಜುಮನೆ ಬೆಮೆಗೊಳ್ಳುವ ಹರಿಣದಂತೆ**
**ರಮಣಿಯರ ರಂಜಕದ ನುಡಿಗಳನು ಕೇಳಿ ಪ್ರ**
**ಣಮವೆಂದು ತೋಷಿಸುವ ಕರ್ಣೇಂದ್ರಿಯಕೆ ॥೪॥**

**ತ್ವಕ್ಕು ಮೊದಲಾದ ಪಂಚೇಂದ್ರಿಯಗಳೊಳು ಸಿಕ್ಕಿ**
**ಕಕ್ಕುಲಿತೆಗೊಂಬುದಿದ ನೀನು ಬಿಡಿಸೊ**
**ಸಿಕ್ಕಸದಿರು ಸಿಕ್ಕಿಗೆ ಆದಿಕೇಶವರಾಯ**
**ದಿಕ್ಕಾಗಿ ನಿನ್ನಂಘ್ರಿಯೊಳೆನ್ನ ಮನವನಿರಿಸೊ ॥೫॥**

ಭಾವ– ಸಾಧಕನು ಹೆಣ್ಣು ಹೊನ್ನು ಮಣ್ಣುಗಳ ಮೇಲಿನ ಆಸೆಯನ್ನು ಬಿಡ ಬೇಕಾಗುತ್ತದೆ. ಪಂಚೇಂದ್ರಿಯಗಳ ಮೇಲಿನ ಪ್ರಭುತ್ವ ಅವನ ಸಾಧನಾ ಮಾರ್ಗದ ಮೊದಲ ಸೋಪಾನ. ಪಂಚೇಂದ್ರಿಯಗಳನ್ನು ಹಿಡಿತದಲ್ಲಿಟ್ಟು ಕೊಳ್ಳುವುದು ಕಪ್ಪೆಗಳನ್ನು ತಕ್ಕಡಿಗೆ ಹಾಕಿ ತೂಗುವುದೂ– ಎರಡೂ ಒಂದೇ ನಮೂನೆ ಎಂಬ ಸತ್ಯ ಸಾಮಾನ್ಯರಿಗೂ ಸಾಧಕರಿಗೂ ಅನುಭವವೇದ್ಯ. ಬಾಹ್ಯ ಪ್ರಲೋಭನೆಗಳಿಗೆ ಪಂಚೇಂದ್ರಿಯಗಳು ಪಕ್ಕಾಗದಿರಬೇಕಾದರೆ, ಅವುಗಳ ಹಗ್ಗ ಮೂಗುದಾರ ತನ್ನ ಕೈಯಲ್ಲಿರುವ ಮನಸ್ಸು ಅಥವಾ ಅಂತಃಕರಣ ಭಗವತ್ಪಾದದಲ್ಲಿ ಸದಾ ಸಂಲಗ್ನ ಗೊಂಡಿರುವುದೇ ಸಿದ್ಧೌಷಧ ಎಂಬುದೇ ಈ ಕೀರ್ತನೆಯ ಆಶಯ ಮತ್ತು ಧ್ವನಿಯಾಗಿದೆ. ಆದರೆ ಹೊನ್ನುಮಣ್ಣುಗಳ ಪ್ರಲೋಭನೆಗಿಂತ ಈ ಕೀರ್ತನೆಯಲ್ಲಿ ಹೆಣ್ಣಿನ ಪ್ರಲೋಭನೆಯೇ ಎಲ್ಲ ನುಡಿಗಳಲ್ಲೂ ಬಂದಿರುವುದರಿಂದ ಕನಕದಾಸರು ಇನ್ನೂ ಕಟ್ಟರೆಯದಲ್ಲಿದ್ದಾಗ ಕಟ್ಟಿದ ಕೀರ್ತನೆ ಇರಬೇಕು ಎನ್ನಿಸುತ್ತದೆ.

ಅರ್ಥ– ಮೃಗೇಂದ್ರ = ಸಿಂಹ, ಪತಂಗ = ಚಿಟ್ಟೆ
ಧಾತುಗೆಟ್ಟು = ನೀತಿ ಮರೆತು, ಧೂರ್ತೆ = ವಂಚಕಿ
ಚಕ್ಷು = ಕಣ್ಣು, ಮಧುಪ = ದುಂಬಿ
ಸಿಂಧೂರ = ಆನೆ, ಘ್ರಾಣ = ಮೂಗು
ಗಾಣ = ಗಾಳ, ಭೂನಾಗ = ಎರೆಹುಳು, ಮಣ್ಮುಕ್ಕ
ಜಿಹ್ವೆ = ನಾಲಗೆ, ಹರಿಣ = ಜಿಂಕೆ
ಪ್ರಣಮ = ನಮಸ್ಕಾರ, ತೋಷಿಸುವ =ಆನಂದಿಸುವ
ಕರ್ಣ = ಕಿವಿ, ತ್ವಕ್ಕು = ಚರ್ಮ, ಕಕ್ಕುಲಿತೆ = ಆಸೆ

* * * *



## ೧೦೦
## ಕಾಂಬೋದಿ – ಝಂಪೆ ತಾಳ

**ಎಂದಿದ್ದರೀ ಕೊಂಪೆ ಎನಗೆ ನಂಬಿಕೆಯಿಲ್ಲ ॥ಪ॥**
**ಮುಂದರಿತು ಶ್ರೀಹರಿಯ ಭಜಿಸುವುದು ಲೇಸು ॥ಅ॥**

**ಎಲುವುಗಳು ತೊಲೆಜಂತೆ ನರಗಳವು ಬಿಗಿದಂತೆ**
**ಬಲಿದ ಚರ್ಮವು ಮೇಲು ಹೊದಿಕೆಯಂತೆ**
**ಗಳಗಳನೆ ನುಡಿವ ನಾಲಗೆ ಗಂಟೆಯುಲಿಯಂತೆ**
**ಕೆಲಕಾಲಕೀ ಕೊಂಪೆ ಕಡೆಗಾಹುದಂತೆ ॥೧॥**

**ಕಂಡಿಗಳು ಒಂಬತ್ತು ಕಳಬಂಟರೈವರು**
**ಅಂಡಲೆವುದೊತ್ತಿನಲಿ ಷಡುವರ್ಗವು**
**ಮಂಡಲಕೆ ಹೊಸಪರಿಯ ಮನ್ಮಥನ ಠಾಣ್ಯವಿದು**
**ಮಂಡೆ ಹೋಗುವುದನ್ನು ಅರಿಯದೀ ಕೊಂಪೆ ॥೨॥**

**ಕೊಂಪೆಯಲಿ ಶೃಂಗಾರ ಕೊಂಡಾಡಲವಳಲ್ಲ**
**ಕೆಂಪು ಬಣ್ಣಗಳಿಂದ ಚೆನ್ನಾಯಿತು**
**ಇಂಪಿನಲಿ ಕಾಗಿನೆಲೆಯಾದಿಕೇಶವನನ್ನು**
**ಸೊಂಪಿನಲಿ ನೆನೆನೆನೆದು ಸುಖಿಯಾಗು ಮನುಜಾ ॥೩॥**

ಭಾವ– ‘ಕೊಂಪೆ’ಯ ರೂಪಕದಲ್ಲಿ ದೇಹರಚನೆಯನ್ನು ಅದರ ನಶ್ವರತೆಯನ್ನೂ ಚಿತ್ರಿಸುತ್ತಲೇ ಆದಿಕೇಶವನ ‘ಹಂಪೆ’ಯೇ ವಾಸಯೋಗ್ಯ ಎಂದು ದಾಸರು ಭಾವಿಸಿದಂತಿದೆ.

ಅರ್ಥ– ಕೊಂಪೆ = ಕುಗ್ರಾಮ, ಗುಡಿಸಲು (=ದೇಹ)

ಕಂಡಿಗಳು ಒಂಬತ್ತು = ದೇಹದ ನವದ್ವಾರಗಳು (ಕಣ್ಣು=೨, ಕಿವಿ=೨, ಮೂಗಿನ ಹೊರಳೆ=೨, ಬಾಯಿ=೧, ಗುದ=೧, ಜನನೇಂದ್ರಿಯ=೧)

ಕಳಬಂಟರೈವರು = ಐದು ಜ್ಞಾನೇಂದ್ರಿಯಗಳು (ಕಣ್ಣು, ಕಿವಿ, ಮೂಗು, ನಾಲಗೆ, ಚರ್ಮ)

ಷಡುವರ್ಗ = ಆರು ಶತ್ರುಗಳು (ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ)

ಮಂಡೆ = ತಲೆ

* * * *



## ೧೦೧
## ಮುಖಾರಿ – ಝಂಪೆ ತಾಳ

ಇರಬಂದುದಿಲ್ಲ ಸಂಸಾರ– ಇದನರಿತು
ಸಿರಿಹರಿಯ ಭಜಿಸುವುದು ಸಾರ ॥ಪ॥

ಧರೆಯನಾಳಿದ ತ್ರಿಶಂಕು ದೊರೆಯು ತಾನೆಲ್ಲಿ
ಹರಿಶ್ಚಂದ್ರ ಮೊದಲಾದ ಚಕ್ರವರ್ತಿಗಳೆಲ್ಲಿ
ಶರಧಿ ಮಧ್ಯದೊಳಿದ್ದ ರಾವಣಾಸುರನೆಲ್ಲಿ
ಸಿರಿಯುಳ್ಳ ಕೌರವರು ಪಾಂಡವರು ತಾವೆಲ್ಲಿ
ಧರೆಗಿಳಿದು ಪೋದಾತ ವಾಲಿಯು ತಾನೆಲ್ಲಿ
ಸುರರೊಡನೆ ಹೋರಿದಾ ಬಲಿಯು ತಾನೆಲ್ಲಿ ॥೧॥

ದಶರಥ ಮೊದಲು ಷೋಡಶ ರಾಯರುಗಳೆಲ್ಲಿ
ಅಸಹಾಯ ಶೂರ ವೀರ ವಿಕ್ರಮರೆಲ್ಲಿ
ಅಸಮಬಲ ವಸುಮತಿಯ ಹಿರಣ್ಯಾಕ್ಷನೆಲ್ಲಿ
ವಸುಧೆಯೊಳಗಿದ್ದ ಹದಿನಾರು ಸಾವಿರರೆಲ್ಲಿ
ಸುಶರೀರ ಎನಿಸಿದ ಅಭಿಮನ್ಯು ತಾನೆಲ್ಲಿ ॥೨॥

ಈ ಪರಿಯೆ ಈ ಧರೆಯನಾಳಿ ಹೋದವರೆಷ್ಟು
ಈ ಪರಿಯೆ ಸ್ವರ್ಗಕ್ಕೆ ಇಂದ್ರಾದಿಗಳು ಎಷ್ಟು
ಈ ಪರಿಯೆ ಹರಬ್ರಹ್ಮರಾದವರು ತಾವೆಷ್ಟು
ಈ ಪರಿಯೆ ಯುಗಪ್ರಳಯವಾಗಿ ಹೋದವು ಎಷ್ಟು
ಈ ಪರಿಯೆ ಜಲ ಪ್ರಳಯವಾಗಿ ಹೋದವು ಎಷ್ಟು
ಶ್ರೀಪತಿ ಕೇಶವನಲಿಡು ಭಕುತಿ– ಕೊಡುವ ಮುಕುತಿ ॥೩॥

ಭಾವ– ಅನಿತ್ಯವಾದ ಪ್ರಾಪಂಚಿಕ ಸುಖಸಂಪತ್ತಿಗಿಂತ ನಿತ್ಯವಾದ ಪಾರಮಾರ್ಥಿಕ ಸುಖಸಂಪತ್ತು ಮೇಲು ಎಂಬುದು ಈ ಕೀರ್ತನೆಯ ಆಶಯ; ಸಂಸಾರ ಭೋಗಭಾಗ್ಯಗಳ ಬಗೆಗಿನ ನಿರಸನದಿಂದ ಭಕ್ತಿವೈರಾಗ್ಯಗಳತ್ತ ವಾಲಿದ ಕನಕದಾಸರ ಮನಸ್ಸು ಹೀಗೆ ಹಿಂದಿನದನ್ನೆಲ್ಲ ಸಿಂಹಾವಲೋಕನ ಮಾಡಿದೆ ಎನ್ನಿಸುತ್ತದೆ.

ಅರ್ಥ– ಶರಧಿ = ಸಮುದ್ರ, ಷೋಡಶ = ಹದಿನಾರು, ವಸುಮತಿ = ಭೂಮಿ, ವಸುಧೆ = ಭೂಮಿ, ಕುಸುಮಬಾಣ = ಮನ್ಮಥ

* * * *



## ೧೦೨
## ಕಾಂಬೋದಿ – ಝಂಪೆ ತಾಳ

**ಜಪವ ಮಾಡಿದರೇನು ತಪವ ಮಾಡಿದರೇನು**
**ವಿಪರೀತ ಕಪಟಗುಣ ಕಲುಷವಿದ್ದವರು ॥ಪ॥**

**ಆದಿಗುರುವರಿಯದೆ ಅತ್ತಲಿತ್ತಲು ತೊಳಲಿ**
**ವೇದಶಾಸ್ತ್ರವನೋದಿ ಬಾಯಾರಲು**
**ಹಾದಿಯನು ಕಾಣದಂತಿರುತಿರ್ದು ಹಲವೆಂಟು**
**ವಾದ ತರ್ಕದೊಳಿದ್ದ ಭೇದವಾದಿಗಳು ॥೧॥**

**ನುಡಿನಡೆವ ಕಾಲದಲಿ ದಾನ ಮಾಡದೆ ಇರಲು**
**ಅಡವಿಯೊಳು ಕೆರೆತುಂಬಿ ಬತ್ತಿದಂತೆ**
**ಮಡದಿ ಮಕ್ಕಳಿಗೆಂದು ಒಡವೆ ವಸ್ತ್ರವ ಗಳಿಸೆ**
**ಹಿಡಿಯಲಾ ಯಮನವರ ಕಟ್ಟಿಗೊಳಗಾಗಿ ॥೨॥**

**ಚಳಿಮಳೆಯ ಅತಿ ಕಾರುಗತ್ತಲೆಯೊಳಗೆ ಎದ್ದು**
**ಹೊಳೆಯೊಳಗೆ ಮುಳುಗಿ ಜಪ ತಪವ ಮಾಡಿ**
**ಕಳವಳಿಸಿ ನೂರೆಂಟು ಹಲುಬಿ ಬಳಲಲು ಬೇಡ**
**ನಳಿನಾಕ್ಷ ಆದಿಕೇಶವನ ನೆನೆ ಮನವೆ ॥೩॥**

ಭಾವ– ಕಪಟಿಗಳ ನೇಮ ನಿಷ್ಠೆ, ಜಪತಪಗಳಿಂದ ಯಾವ ಫಲವೂ ದೊರಕುವುದಿಲ್ಲ– ಹೃದಯ ಶುದ್ಧಿಯಿರದ ಹೊರತೂ ಎಂಬುದೇ ಈ ಕೀರ್ತನೆಯ ಆಶಯ. ವ್ಯಾಸಕೂಟದ ಕರ್ಮಠರು ಭಕ್ತಿಗೆ ಸಾಧನೆಗೆ ಮನಗೊಡದೆ ಸಿದ್ಧಾಂತಕ್ಕೆ ಶುಷ್ಕ ಆಚಾರವಿಚಾರ ತರ್ಕಕ್ಕೆ ತಲೆಕೊಟ್ಟು, ತಲೆಕೆಟ್ಟವರಿಗಿಂತ ಕಡೆಯಾಗಿ ಆವುಟ ಮಾಡುತ್ತ ಹಾರಾಡುವುದನ್ನು ಕಂಡು, ಬಾವುಟ ಹಾರಿಸುತ್ತ ಓಡಾಡವುದನ್ನು ಕಂಡು (ನಾಯಿಗೆ

ಕೆಲಸ ಇಲ್ಲ ನಿಲ್ಲೋಕೆ ಹೊತ್ತಿಲ್ಲ ಎಂಬ ಜನಪದ ಗಾದೆಗನುಗುಣವಾಗಿ) ಕನಕದಾಸರು ಗೇಲಿ ಮಾಡಿರುವುದನ್ನು ಮರೆಯುವಂತಿಲ್ಲ. ಒಂದನೆಯ ಚರಣ ತಿರುಳನ್ನು ಬಿಟ್ಟು ಕರಟಕ್ಕೆ ಕಚ್ಚಾಡುವ ಕರ್ಮಠ ದ್ವೈತಿಗಳ ಚಿತ್ರಣವಾಗಿದೆ.

ಅರ್ಥ– ಆದಿಗುರು = ಪರಮಾತ್ಮ
ಭೇದವಾದಿಗಳು = ಮಾಧ್ವರು

* * * *



## ೧೦೩
## ಕಾಂಬೋದಿ – ಝಂಪೆ ತಾಳ

ಈ ಸಿರಿಯ ನಂಬಿ ಹಿಗ್ಗಲು ಬೇಡ ಮನವೆ ॥ಪ॥
ವಾಸುದೇವನ ಭಜಿಸೊ ಒರಟು ಜೀವನವೆ ॥ಅ॥

ನೆಂಟರೂರಿಗೆ ಹೋಗಿ ನಾಲ್ಕು ದಿವಸವಿದ್ದರೆ
ಎಂಟು ದಿನದಾಯಾಸ ಅಟ್ಟಬಹುದೊ
ಉಂಟು ಸೌಭಾಗ್ಯವೆಂಬ ಧೈರ್ಯವ ಬಿಟ್ಟು ವೈ
ಕುಂಠವಾಸಿಯ ಭಜಿಸೊ ತುಂಟ ಜೀವನವೆ ॥೧॥

ಮಡದಿ ಮಕ್ಕಳು ಎಂಬ ಮಾಯಾ ಸಂಸಾರಕ್ಕೆ
ಸಡಗರವಗೊಂಡು ಬರಿದೆ ಭ್ರಮಿಸಲೇಕೆ
ಬಿಡದೆ ಯಮನಾಳುಗಳು ಬಾರೆಂದು ಎಳೆವಾಗ
ಮಡದಿ ಮಕ್ಕಳು ಬಹರೆ ಭಂಡ ಜೀವನವೆ ॥೨॥

ಇಷ್ಟ ಸಂಪತ್ತನ್ನು ಬಡವರಾ ಕರೆತಂದು
ಕೊಟ್ಟು ಮಾಡಿದ ಪುಣ್ಯಫಲ ತನ್ನದೊ
ಸೃಷ್ಟಿಯೊಳು ಕಾಗಿನೆಲೆಯಾದಿಕೇಶವನಂಘ್ರಿ
ಮುಟ್ಟಿ ಮನದಲಿ ಭಜಿಸೊ ಭ್ರಷ್ಟಜೀವನವೆ ॥೩॥

ಭಾವ– ಸಂಪತ್ತು ಕೇಂದ್ರೀಕೃತಗೊಳ್ಳಬಾರದು, ಅದು ಅತಿ ಮಮಕಾರದ ಲಕ್ಷಣ. ಉಳ್ಳವರು ಇಲ್ಲದವರಿಗೆ ಹಂಚಿದಾಗ ಸಿಗುವ ಸುಖಕ್ಕೆ ಸಮನಾದ ಸುಖ ಸಿರಿಯ ಶೇಖರಣೆಯಿಂದ ಬರುವುದಿಲ್ಲ ಎಂಬುದು ಕನಕದಾಸರ ನಿಲುವು. ಆದ್ದರಿಂದಲೇ ಸಂಸಾರದ ಮಮಕಾರ ಹೋಗಿ ಸರ್ವಾತ್ಮನ

ಮಮಕಾರ ಮೂಡಲಿ ಎಂಬ ಆಶಯವನ್ನೊಳಗೊಂಡಿದೆ ಈ ಕೀರ್ತನೆ.

ಅರ್ಥ– ವಾಸುದೇವ = ಕೃಷ್ಣ
ವೈಕುಂಠವಾಸಿ = ವಿಷ್ಣು

* * * *



## ೧೦೪
## ಕೇದಾರಗೌಳ – ಝಂಪೆತಾಳ

ತೊರೆದು ಜೀವಿಸಬಹುದೆ ಹರಿ ನಿನ್ನ ಚರಣವನು
ಬರಿಯ ಮಾತೇಕಿನ್ನು ಅರಿತು ಪೇಳುವೆನಯ್ಯ ॥ಪ॥

ತಾಯಿ ತಂದೆಯ ಬಿಟ್ಟು ತಪವ ಮಾಡಲುಬಹುದು
ದಾಯಾದಿ ಬಂಧುಗಳ ಬಿಡಲು ಬಹುದು
ರಾಯ ಮುನಿದರೆ ಮತ್ತೆ ರಾಜ್ಯವನು ಬಿಡಬಹುದು
ಕಾಯಜ ಪಿತ ನಿನ್ನಡಿಯ ಬಿಡಲಾಗದು ॥೧॥

ಒಡಲು ಹಸಿಯಲು ಅನ್ನವಿಲ್ಲದಲೆ ಇರಬಹುದು
ಪಡೆದ ಕ್ಷೇತ್ರವ ಬಿಟ್ಟು ಪೋಗಬಹುದು
ಮಡದಿ ಮಕ್ಕಳ ಕಡೆಗೆ ತೊಲಗಿಸಿಯು ಬಿಡಬಹುದು
ಕಡಲೊಡೆಯ ನಿನ್ನಡಿಯ ಗಳಿಗೆ ಬಿಡಲಾಗದು ॥೨॥

ಪ್ರಾಣವನು ಪರರು ಬೇಡಿದರೆತ್ತಿ ಕೊಡಬಹುದು
ಮಾನಾಭಿಮಾನ ತಗ್ಗಿಸಲು ಬಹುದು
ಪ್ರಾಣನಾಯಕನಾದ ಆದಿಕೇಶವರಾಯ
ಜಾಣ ಶ್ರೀಕೃಷ್ಣ ನಿನ್ನಡಿಯ ಬಿಡಲಾಗದು ॥೩॥

ಭಾವ– ಭಕ್ತನಾದವನು ಎಲ್ಲವನೂ ಬಿಟ್ಟು ಜೀವಿಸಬಲ್ಲ, ಭಗವಂತನನ್ನು ಮಾತ್ರ ಬಿಟ್ಟಿರಲು ಸಾಧ್ಯವಿಲ್ಲ ಎಂಬುದೇ ಈ ಕೀರ್ತನೆಯ ಆಶಯ.

ಅರ್ಥ– ಕಾಯಜ = ಮನ್ಮಥ, ಕಾಯಜಪಿತ = ಕೃಷ್ಣ
ಕಡಲೊಡೆಯ = ವಿಷ್ಣು

* * * *

## ೧೦೫
## ಭೈರವಿ – ಝಂಪೆ

**ನೋಡಿ ಮರುಳಾಗದಿರು ಪರಸತಿಯರ ॥ಪ॥**
**ನಾಡೊಳಗೆ ಕೆಟ್ಟವರ ಪರಿಯ ನೀನರಿತು ॥ಅ॥**

**ಶತಮಖವ ಮಾಡಿ ಸುರಸಭೆಗೈದ ನಹುಷ ತಾ**
**ನಾತುರದಿ ಶಚಿಗೆ ಮನಸೋತು ಭ್ರಮಿಸಿ**
**ಅತಿ ಬೇಗ ಚಲಿಸೆಂದು ಬೆಸಸಲಾ ಮುನಿಯಿಂದ**
**ಗತಿಗೆಟ್ಟು ಉರಗನಾಗಿದ್ದ ಪರಿಯರಿತು ॥೧॥**

**ಸುರಪತಿಯು ಗೌತಮನ ಸತಿಗಾಗಿ ಕಪಟದಿಂ**
**ಧರೆಗೆ ಮಾಯಾವೇಷ ಧರಿಸಿ ಬಂದು**
**ಪರಮ ಮುನಿಯ ಶಾಪದಿಂದಂಗದೊಳು ಸಾ**
**ಸಿರ ಕಣ್ಗಳಾಗಿರ್ದ ಪರಿಯ ನೀನರಿತು ॥೨॥**

**ಸ್ಮರನ ಶರತಾಪವನು ಪರಿಹರಿಸಲರಿಯದೆ**
**ದುರುಳ ಕೀಚಕನು ದ್ರೌಪದಿಯ ತುಡುಕಿ**
**ಮರುತ ಸುತ ಭೀಮನಿಂದಿರುಳೊಳಗೆ ಹತನಾಗೆ**
**ನರಗುರಿಯೆ ನಿನ್ನ ಪಾಡೇನು ಧರೆಯೊಳಗೆ ॥೩॥**

**ಹರನ ವರವನು ಪಡೆದು ಶರಧಿ ಮಧ್ಯದೊಳಿದ್ದು**
**ದುರುಳ ದಶಶಿರನು ಜಾನಕಿಯನೊಯ್ಯೆ**
**ಧುರದೊಳಗೆ ರಘುವರನ ಶರದಿಂದ ಈರೈದು**
**ಶಿರಗಳನೆ ಹೋಗಲಾಡಿಸಿದ ಪರಿಯನರಿತು ॥೪॥**



**ಇಂತಿಂಥವರು ಕೆಟ್ಟು ಹೋದರೆಂಬುದನರಿತು**
**ಭ್ರಾಂತಿಯನೆ ಬಿಟ್ಟು ಭಯಭಕ್ತಿಯಿಂದ**
**ಕಂತುಪಿತ ಕಾಗಿನೆಲೆಯಾದಿಕೇಶವನ ನಿ**
**ರಂತರದಿ ಭಜಿಸಿ ನೀ ಸತ್ಯಸುಖಿಯಾಗು ॥೫॥**

ಭಾವ– ಪರಸತಿಗಮನ ತರವಲ್ಲ ಎಂಬುದನ್ನು ಪೌರಾಣಿಕ ದೃಷ್ಟಾಂತಗಳ ಮೂಲಕ ಮನದಟ್ಟು ಮಾಡಿಕೊಡುವ ಪ್ರಯತ್ನವೇ ಈ ಕೀರ್ತನೆಯ ಆಶಯ. ಇಲ್ಲಿ ಉಕ್ತವಾಗಿರುವ ಕೇಡಿನ ಸರಮಾಲೆಯನ್ನು ಇಷ್ಟಪಡದ ಕನಕದಾಸರು ಅನುಕ್ತವಾದ ಲೇಸಿನ ವನಮಾಲೆಯತ್ತ ಒಲವು ತೋರಿದ್ದಾರೆ ಎಂಬುದು ಧ್ವನಿತವಾಗುತ್ತದೆ.

ಅರ್ಥ– ೧. ಶತಮಖ = ನೂರು ಯಜ್ಞ
ಬೆಸಸಲು = ಆಜ್ಞಾಪಿಸಲು
ಆ ಮುನಿ = ಅಗಸ್ತ್ಯ
ಉರಗ = ಹಾವು (ನೂರು ಯಜ್ಞ ಮಾಡಿದವನು ಇಂದ್ರಪದವಿಗೆ ಅರ್ಹ. ಅದೇ ರೀತಿಯಲ್ಲಿ ನಹುಷ ನೂರು ಯಾಗ ಮಾಡಿ, ಸುರಲೋಕದ ಶಚೀದೇವಿಯನ್ನು ಬಯಸಿ, ಅಗಸ್ತ್ಯನಿಂದ ಶಾಪ ಹೊಂದಿ ಸರ್ಪವಾಗುತ್ತಾನೆ)
೨. ಗೌತಮಸತಿ = ಅಹಲ್ಯೆ (ಗೌತಮನ ಶಾಪದಿಂದ ದೇವೇಂದ್ರನಿಗೆ ಮೈಯೆಲ್ಲ ತೂತೋ ತೂತಾಗಿ, ಆಕಾರಣದಿಂದಲೇ ಅವನಿಗೆ ಸಾಸಿಗರಣ್ಣ ಎಂಬ ಹೆಸರು ಬಂದದ್ದು)
೩. ಸ್ಮರ = ಮನ್ಮಥ, ಶರ = ಬಾಣ, ಮರುತ = ವಾಯು
೪. ಶರಧಿ = ಸಮುದ್ರ, ದಶಶಿರ = ರಾವಣ, ಈರೈದು = ಹತ್ತು
೫. ಇಂತು = ಹೀಗೆ
ಕಂತುಪಿತ = ಮನ್ಮಥನ ತಂದೆಯಾದ ವಿಷ್ಣು

* * * *

## ೧೦೬
## ಮುಖಾರಿ – ಅಟತಾಳ

ನನ್ನಿಂದ ನಾನೇ ಜನಿಸಿ ಬಂದೆನೆ ದೇವ
ಎನ್ನ ಸ್ವತಂತ್ರವು ಲೇಶವಿದ್ದರು ತೋರು ॥ಪ॥

ನಿನ್ನ ಪ್ರೇರಣೆಯಿಂದ ನಡೆದು ನುಡಿದ ಮೇಲೆ
ನಿನ್ನದು ತಪ್ಪೋ ನನ್ನದು ತಪ್ಪೋ ಪರಮಾತ್ಮ ॥ಅ॥

ಜನನಿಯ ಜಠರದಲಿ ನವಮಾಸ ಪರಿಯಂತ
ಘನದಿ ನೀ ಪೋಷಿಸುತಿರೆ, ನಾನು
ಜನಿಸಲಾರೆನು ಎನೆ ಜನಿಸೆಂದಿಕ್ಕಳದಿಂದ
ವನಜಾಕ್ಷ ನೂಕಿದವನು ನೀನಲ್ಲವೆ ॥೧॥

ಎಲುವುಗಳ ಜಂತೆ ಮಾಡಿ ನರಗಳ ಹುರಿಯಿಂ
ಹೊಲಿದು ಚರ್ಮವ ಹೊದಿಸಿ ದೇಹದೊಳು
ಮಲಮೂತ್ರಕೆ ಹೊರದಾರಿ ನಿರ್ಮಿಸಿ ಹೃದಯದಲಿ
ನೆಲಸಿ ಚೇತನವನಿತ್ತವ ನೀನಲ್ಲವೆ ॥೨॥

ಜನಿಸಿದಾರಭ್ಯದಿಂದ ಇಂದಿನ ಪರಿಯಂತ
ಘನಘನ ಪಾಪ ಸುಕರ್ಮಂಗಳನು
ಮನಕೆ ಬೋಧಿಸಿ ಮಾಡಿಸಿ ಮುಂದೆ ಇದನೆಲ್ಲ
ಅನುಭವಿಸುವುದು ಜೀವನೊ ನೀನೊ ದೇವ ॥೩॥

ಅಂಧಕನ ಕೈಲಿ ಕೋಲಿತ್ತು ಕರೆದೊಯ್ಯುವಾ
ಮುಂದಾಳು ತಪ್ಪಿ ಗುಂಡಿಗೆ ಕೆಡಹಲು



ಅಂಧಕನ ತಪ್ಪೊ ಅದು ಮುಂದಾಳಿನ ತಪ್ಪೊ
ಹಿಂದಾಡಬೇಡ ಎನ್ನೊಳು ತಪ್ಪಿಲ್ಲವೊ ॥೪॥

ಕಂದನ ತಾಯಿ ಆಡಿಸುವಾಗ ಅದು ಪೋಗಿ
ಅಂದಿ ಬಾವಿ ನೋಡುವುದನು ಕಂಡು
ಬಂದು ಬೇಗನೆ ಬಾಚಿ ಎತ್ತಿಕೊಳ್ಳದಿದ್ದರದು
ಕಂದನ ತಪ್ಪೊ ಮಾತೆಯ ತಪ್ಪೊ ಪರಮಾತ್ಮ ॥೫॥

ಭಾರ ನಿನ್ನದೊ ದೂರು ನಿನ್ನದೊ ಕೃಷ್ಣ
ನಾರಿ ಮಕ್ಕಳು ತನುಮನ ನಿನ್ನದಯ್ಯ
ಕ್ಷೀರದೊಳಗದ್ದು ನೀರೊಳಗದ್ದು ಗೋವಿಂದ
ಹೇರನೊಪ್ಪಿಸಿದ ಮೇಲೆ ಸುಂಕವೆ ದೇವ ॥೬॥

ನ್ಯಾಯವಾದರೆ ದುಡುಕು ನಿನ್ನದೊ, ರಂಗ ಮತ್ತ–
ನ್ಯಾಯವಾದರೆ ಪೇಳುವರಾರು
ಮಾಯಾರಹಿತ ಕಾಗಿನೆಲೆಯಾದಿ ಕೇಶವ
ಕಾಯಯ್ಯ ತಪ್ಪನೆಣಿಸದೆ ದೇವ ॥೭॥

ಭಾವ– ಮನುಷ್ಯನ ನಡೆನುಡಿಗೆ ಭಗವಂತನ ಪ್ರೇರಣೆಯೇ ಕಾರಣವಾಗಿರುವುದರಿಂದ ತಪ್ಪು ಒಪ್ಪುಗಳೆಲ್ಲ ಅವನಿಗೇ ಸಲ್ಲತಕ್ಕವು ಎಂಬ ಆಶಯದಿಂದ ಕೂಡಿದೆ ಈ ವರ್ತನೆ.

ಅರ್ಥ– ವನಜಾಕ್ಷ = ವಿಷ್ಣು
ಜಂತೆ = ಮಾಳಿಗೆ ಮನೆಯ ತೊಲೆಗಳ ಮೇಲೆ ಅಡ್ಡಡ್ಡಲಾಗಿ ಹರಡುವ ಗಳುಗಳು
ಅಂಧಕ = ಕುರುಡ
ಅಂದಿ = ಎಟುಕಿಸಿ, ತುದಿಬೆರಳ ಮೇಲೆ ನಿಗುರಿ ನಿಂತು;
ಕ್ಷೀರ = ಹಾಲು
ಸುಂಕ = ತೆರಿಗೆ

* * * *

## ೧೦೭
## ಕಲ್ಯಾಣಿ – ಧೃವತಾಳ

ಕಾಡುವ ದುರಿತಗಳನು ಬಿಡಿಸೆಂದು
ಬೇಡಿಕೊಂಬೆನೊ ದೇವ ನಾ ನಿನ್ನ ॥ಪ॥

ಅಡಿದಾಸನೆಂಬೋ ಎನಗೊಂದು
ದೃಢ ಬುದ್ಧಿಯು ಇಲ್ಲದೆ
ಮಡದಿ ಮಕ್ಕಳೆಂಬೊ ಕಡಲೊಳು ಮುಳುಗಿದೆ
ಕಡೆ ಹಾಯಿಸೊ ಎನ್ನೊಡೆಯ ನೀನಾದಡೆ ॥೧॥

ಆಸೆಗಳ ಆಧಿಕ್ಯದಿಂದೀ ಪರಿಯ ಯಮ
ಪಾಶಕ್ಕೆ ಒಳಗಾದೆನೋ
ಮೀಸಲೂಳಿಗವ ಮಾಡದೆಯೆ ಪರಿಪರಿಯ
ಕ್ಲೇಶದಿಂದಲಿ ಗಾಸಿಗೊಂಡೆನಯ್ಯ ॥೨॥

ಪಾಡುವೆನು ನಿನ್ನ ನಾಮ ಸೀತಾರಾಮ
ಆಡುವೆನು ಮನದಣಿವ ತನಕ
ಬೇಡಿಕೊಂಬೆನೊ ನಿನ್ನ ಭಕ್ತರ ಸೇವೆಯನು
ಬಾಡದಾದಿ ಕೇಶವ ಭಕ್ತವತ್ಸಲನೆ ॥೩॥

ಭಾವ– ಕಾಡುವ ದುರಿತಗಳನ್ನು ಪಾರು ಮಾಡೆಂದು ಭಗವಂತನಿಗೆ ಮೊರೆ ಇಡುವ ದೈನ್ಯ ಭಾವವಿದೆ.

ಅರ್ಥ– ದುರಿತ = ಪಾಪ, ಕಡೆ ಹಾಯಿಸು = ದಡ ಮುಟ್ಟಿಸು

* * * *



## ೧೦೮
## ಕೇದಾರಗೌಳ – ಛಾಪುತಾಳ

ಸಿರಿಯ ಮದವೆ ಮುಕುಂದ– ನಿನ್ನ
ಚರಣ ಸೇವಕನ ಬಿನ್ನಹ ಪರಾಕೆಲೊ ದೇವ ॥ಪ॥

ಅಷ್ಟದಿಕ್ಪಾಲಕರ ಮಧ್ಯದಲಿ ವೈಕುಂಠ
ಪಟ್ಟಣವು, ಸಿರಿಯೋಲಗವ ನಿತ್ಯದಿ
ಕಟ್ಟಿ ಓಲೈಸುರಿಹ ದಾಸರನಿಮಿಷರು, ಮನ
ಮುಟ್ಟಿ ಪಾಡುವ ನಾರದರ ಗೀತ ಸಂಭ್ರಮದ ॥೧॥

ಸಕಲ ಐಸಿರಿಯ ಅಧಿದೇವಿಯೆ ಪಿರಿಯರಸಿ
ಯಕುತಿಯೊಳು ಲೋಕಗಳ ಸೃಜಿಸುವಂಥ
ಶಕುತ ನಿನ್ನಯ ಹಿರಿಯ ಮಗನು, ಜೀವಿಗಳ ಮೊ
ಹಕದಿ ಮರುಳು ಮಾಳ್ಪಾತ ಕಿರಿಮಗನೆಂಬ ॥೨॥

ಬಲ್ಲಿದರಿಗೆಲ್ಲ ಬಲ್ಲಿದನೆಂಬ ಅರಿ ಹೃದಯ
ದಲ್ಲಣನೆಂಬ ಬಿರುದು ಸಾಹಸ
ಇಲ್ಲ ನಿನಗಾರು ಇದಿರೆಂಬ ಗರ್ವದಿ ಎನ್ನ
ಸೊಲ್ಲು ಕಿವಿ ಕೇಳದಂತಾಯಿತೆ ಹರಿಯೆ? ॥೩॥

ಶೇಷ ಹಾಸು ಮಂಚವು, ಗರುಡ ತುರಗವು, ಪೀತ
ವಾಸದುಡುಗೆಯು, ಕೊರಳಲಿ ವೈಜಯಂತಿ
ಮೀಸಲಳಿಯದ ಪುಷ್ಪ ಮಾಲೆಗಳ ಧರಿಸಿ ಜಗ
ದೀಶನೆಂಬುವ ಬಿರುದ ಹೊಗಳಿಸಿಕೊಳುವ ॥೪॥

**ಭಕ್ತವತ್ಸಲನೆಂಬ ಬಿರುದು ಬಿಡು, ಅಲ್ಲದೊಡೆ**
**ಶಕ್ತ ಎನ್ನನು ಕಾಯೋ ಸುಲಭದಿಂದ**
**ಮುಕ್ತಿಯನು ಪ್ರಕಟಿಸಲು ಲೋಕದೊಳು ಭಜಕರ್ಗೆ**
**ಯುಕ್ತ ಕರ್ತ ಕಾಗಿನೆಲೆಯಾದಿಕೇಶವರಾಯ ॥೫॥**

ಭಾವ– ಐಶ್ವರ್ಯ ಮದದಲ್ಲಿರುವ ಓ ದೇವರೆ, ಬಡಬಗ್ಗರ ದೀನದಲಿತರ ಚರಣಭಜಕರ ಬಿನ್ನಹ ಕೇಳುವುದಿಲ್ಲವೆ? ಎಂದು ಪ್ರಶ್ನಿಸುತ್ತಾ, ಜಗ್ಗಿಸಿ ಅಲ್ಲಾಡಿಸುತ್ತಾ, ದೇವರಿಗೇ ತಬ್ಬಿಬ್ಬು ಮಾಡುವಂಥ ಧಾಟಿಯಲ್ಲಿದೆ ಕನಕದಾಸರ ಈ ಕೀರ್ತನೆ. ಸಿರಿಯ ಮದ ಮಾನವರಿಗೇ ಏನು, ದೇವರಿಗೂ ಬಿಟ್ಟಿದ್ದಲ್ಲ ಎಂಬ ಕೀಟಲೆಯ ಲೇವಡಿಯ ಧ್ವನಿಯೂ ಇದೆ.

ಅರ್ಥ– ಬಿನ್ನಹ = ವಿಜ್ಞಾಪನೆ
ಪರಾಕು = ಮನ್ನಿಸು, ಲಾಲಿಸು;
ಅಷ್ಟದಿಕ್ಪಾಲಕರು = ಪೂರ್ವದಿಂದ ಮೊದಲುಗೊಂಡು ಈಶಾನ್ಯದವರೆಗಿನ ಎಂಟು ದಿಕ್ಕುಗಳ ಪಾಲಕರು (ಇಂದ್ರ, ಅಗ್ನಿ, ಯಮ ನಿರ್‌ರುತಿ, ವರುಣ, ವಾಯು, ಕುಬೇರ, ಈಶಾನ ಅಥವಾ ಶಿವ)
ಪೀತವಾಸ = ಪೀತಾಂಬರ
ಅನಿಮಿಷರು = ದೇವತೆಗಳು
ತುರಗ = ಕುದುರೆ
ವೈಜಯಂತಿ = ಹಾರ

* * * *



## ೧೧೯
## ಕಾಂಬೋದಿ – ರೂಪಕತಾಳ

**ಕಾಯೊ ಕರುಣಾಕರನೆ ಕಡುಪಾಪಿ ನಾನು**
**ನ್ಯಾಯವೆಂಬುದು ಎನ್ನೊಳೆಳ್ಳನಿತಿಲ್ಲ ॥ಪ॥**

**ಎಣ್ಣೆಕೊಪ್ಪರಿಗೆಯೊಳ್ಬಿದ್ದು ಸ್ತುತಿಸಿದವನಲ್ಲ**
**ಚಿನ್ನಕಶಿಪು ಬಾಧೆಗೊಳಗಾದವನಲ್ಲ**
**ಬಣ್ಣಗೆಟ್ಟಡವಿಯಲಿ ತಪಸು ಮಾಡಿದವನಲ್ಲ**
**ಹೆಣ್ಣನೊಲ್ಲದೆ ನಿನ್ನ ಬಂಟನಾದವನಲ್ಲ ॥೧॥**

**ಒಲಿದು ದಾನವನಿತ್ತ ವೈರಿಕುಲದವನಲ್ಲ**
**ಬಲು ಭಕುತಿಯ ದಾಸಿ ಪುತ್ರ ನಾನಲ್ಲ**
**ಕಲಹದಲಿ ಪಣೆಗೆ ಬಾಣವ ನೆಡಿಸಿದವನಲ್ಲ**
**ಕಳವಳದಿ ಕರೆದ ಪಾಂಚಾಲಿ ನಾನಲ್ಲ ॥೨॥**

**ಉರಗರಾಜನ ತೆರದಿ ಹಾಸಿಗಾದವನಲ್ಲ**
**ಗರುಡನಂದದಿ ಪೊತ್ತು ತಿರುಗಿದವನಲ್ಲ**
**ಸಿರಿಧವನೆ ಕಾಗಿನೆಲೆಯಾದಿಕೇಶವ ನಿನ್ನ**
**ಚರಣ ಡಿಂಗರಿಗ ಮಾತ್ರ ನಾನಾಗಿಹೆನೆಂದು ॥೩॥**

ಭಾವ– ಬೇರೆಯವರಿಗೆ ಹೋಲಿಸಿಕೊಂಡರೆ ನನ್ನ ಸಾಧನೆ ಸೊನ್ನೆಯಾದರೂ ನೀನು ಕಡುಪಾಪಿಯಾದ ನನ್ನನ್ನು ಕಾಯಬೇಕು ಎಂದು ದೇವರಲ್ಲಿ ಮೊರೆಯಿಡುವ ಭಕ್ತನ ಕೋರಿಕೆಯಂತಿದೆ ಈ ಕೀರ್ತನೆ.

ಅರ್ಥ– ೧. ಎಣ್ಣೆ... ಸ್ತುತಿಸಿದವನಲ್ಲ = ನಿನ್ನನ್ನು ಪ್ರಾರ್ಥಿಸಿದ ಸುಧನ್ವ ನಾನಲ್ಲ (ಪಾಂಡವರ ಅಶ್ವಮೇಧ ಯಾಗದ ಸಂದರ್ಭದಲ್ಲಿ

ತಡಮಾಡಿದನೆಂದು ಹಂಸಧ್ವಜನ ಮಗನಾದ ಸುಧನ್ವನನ್ನು ಪುರೋಹಿತರ ಅಭಿಪ್ರಾಯದಂತೆ ಕಾದ ಎಣ್ಣೆ ಕೊಪ್ಪರಿಗೆಗೆ ಹಾಕಲಾಯಿತೆಂದೂ, ಸುಧನ್ವ ವಿಷ್ಣುವನ್ನು ಪ್ರಾರ್ಥಿಸಿದ್ದರಿಂದ ಪಾರಾದನೆಂದೂ ಕಥೆ)

ಚಿನ್ನಕಶಿಪು... ಆದವನಲ್ಲ = ಹಿರಣ್ಯಕಶಿಪುವಿನ ಉಪಟಳಕ್ಕೆ ಒಳಗಾಗಿ ನಿನ್ನನ್ನು ಪ್ರಾರ್ಥಿಸಿದ ಪ್ರಹ್ಲಾದ ನಾನಲ್ಲ. ಚಿನ್ನಕಶಿಪು = ಹಿರಣ್ಯಕಶಿಪು

ಬಣ್ಣ... ಮಾಡಿದವನಲ್ಲ = ತನ್ನ ಮಲತಾಯಿಯಿಂದ ಅವಮಾನ ಗೊಂಡು ಕಾಡಿನಲ್ಲಿ ತಪಸ್ಸು ಮಾಡಿದ ಧ್ರುವ ನಾನಲ್ಲ. ಬಣ್ಣಗೆಟ್ಟು = ಅವಮಾನ ಹೊಂದಿ.

ಹೆಣ್ಣ... ಬಂಟನಾದವನಲ್ಲ = ಬ್ರಹ್ಮಚಾರಿಯಾಗುಳಿದು ನಿನ್ನ ಬಂಟನಾಗಿ ಸೇವೆ ಸಲ್ಲಿಸಿದ ಆಂಜನೇಯನಲ್ಲ.

೨. ಒಲಿದು... ಕುಲದವನಲ್ಲ = ಕೇಳಿದ ದಾನವನ್ನು ನೀಡಿದ ದೈತ್ಯವಂಶದ ಬಲಿಚಕ್ರವರ್ತಿ ಅಲ್ಲ

ಬಲು... ನಾನಲ್ಲ = ದಾಸಿಯಲ್ಲಿ ಹುಟ್ಟಿದರೂ ನಿನ್ನ ಭಕ್ತನಾದ ವಿದುರನಲ್ಲ

ಕಲಹದಲಿ... ನೆಡಿಸಿದವನಲ್ಲ = ಭೀಷ್ಮ (ಚಕ್ರ ಹಿಡಿದು ಯುದ್ಧ ಭೂಮಿಗೆ ಇಳಿಯುವುದಿಲ್ಲ ಎಂದು ಶಪಥ ಮಾಡಿದ ಕೃಷ್ಣನನ್ನು ಭೀಷ್ಮ ಇಳಿಸಿದ ಕಥಾ ಸಂದರ್ಭ.

ಕಳವಳದಿ... ತಾನಲ್ಲ = ದುಶ್ಶಾಸನ ಸೀರೆ ಸೆಳೆದಾಗ ಮೊರೆಯಿಟ್ಟ ದ್ರೌಪದಿಯಲ್ಲ

೩. ಉರಗರಾಜ = ಆದಿಶೇಷ

ಸಿರಿಧವ = ಲಕ್ಷ್ಮಿಯ ಗಂಡ (ವಿಷ್ಣು)

ಡಿಂಗರಿಗ = ಸೇವಕ

* * * *



## ೧೧೦
## ಮುಖಾರಿ – ಛಾಪು ತಾಳ

ಮರೆಯದಿರು ಮರೆಯದಿರು ಎಲೆ ಮಾನವ ॥ಪ॥
ಗರುವವೇತಕೆ ನಿನಗೆ ಎಲೆ ಮಂಕು ಜೀವ ॥ಅ॥

ರೂಪದಲಿ ಮನ್ಮಥನೆ ಶಾಪದಲಿ ಗೌತಮನೆ
ಕೋಪದಲಿ ದೂರ್ವಾಸ ಮುನಿಯೆ ನೀನು
ತಪದಲ್ಲಿ ವ್ಯಾಸನೆ ಕೃಪೆಯಲ್ಲಿ ಬಲೀಂದ್ರನೆ
ನಿಪುಣತ್ವದಲ್ಲಿ ನಾರದ ಮುನಿಯೆ ನೀನು ॥೧॥

ಯತಿಯಲ್ಲಿ ಅಗಸ್ತ್ಯನೆ ಕ್ಷಿತಿಪರಲಿ ಜನಮೇಜಯನೆ
ಗೀತದಲಿ ಗಂಧರ್ವನೇ ನೀನು
ವ್ರತದಲಿ ಲಕ್ಷ್ಮಣನೆ ಮತಿಯಲ್ಲಿ ಕಶ್ಯಪನೆ
ವಿತರಣ ಗುಣದಲಿ ಯಮಧರ್ಮನೆ ನೀನು ॥೨॥

ನ್ಯಾಯದಲಿ ಭರತನೆ ಉಪಾಯದಲಿ ಕೃಷ್ಣನೇ
ಕಾಯಶುದ್ಧಿಯಲಿ ಅಂಬರೀಷನೆ ನೀನು
ಮಾಯದಲಿ ಕಾವ್ಯನೇ ದಾಯದಲಿ ಶಕುನಿಯೇ
ನೀ ಯಾರ ಹೋಲುವೆ ಎಲೆ ಮಾನವ ॥೩॥

ಕೊಡುವುದಕೆ ಕರ್ಣನೆ ನಡತೆಯಲಿ ಧರ್ಮಜನೆ
ದೃಢ ಮನಸಿನಲಿ ರುಕ್ಮಾಂಗದನೆ ನೀನು
ಪಡೆಯಲ್ಲಿ ಕೌರವನೆ ನುಡಿಯಲ್ಲಿ ಗಾಂಗೇಯನೆ
ಮಡದಿಯರ ಭೋಗಕ್ಕೆ ಸುರಪತಿಯೆ ನೀನು ॥೪॥

ಬಾಣದಲಿ ರಾಮನೇ ತ್ರಾಣದಲಿ ಭೀಮನೇ
ಕೇಣದಲಿ ಶಿಶುಪಾಲನೇನೊ
ಗುಣದಲಿ ಸುಧರ್ಮನೇ ರಣದಲಿ ಶಲ್ಯನೆ ಆನು
ಗುಣ್ಯವಾದದಲಿ ನರಪತಿಯೆ ನೀನು ॥೫॥

ಛಲದಲ್ಲಿ ರಾವಣನೆ ಬಲದಲ್ಲಿ ವಾಲಿಯೇ
ನಿಲುಗಡೆಯ ಮನದಲ್ಲಿ ದ್ರೋಣನೇ ನೀನು
ಕುಲದಲಿ ವಸಿಷ್ಠನೇ ಗೆಲುವಿನಲಿ ಪಾರ್ಥನೇ
ಬಿಲುವಿದ್ಯೆಯಲಿ ಪರಶುರಾಮನೆ ನೀನು ॥೬॥

ಶಕ್ತಿಯಲಿ ಹನುಮನೇ ಭಕ್ತಿಯಲಿ ವಿಭೀಷಣನೆ
ಕೀರ್ತಿಯಲಿ ಹರಿಶ್ಚಂದ್ರರಾಯನೆ ನೀನು
ಅರ್ತಿಯಲಿ ಶುಕಮುನಿಯೆ ಸ್ಫೂರ್ತಿಯಲಿ ಸೂರ್ಯನೇ
ಮುಕ್ತಿ ಸಾಧನಕೆ ಪ್ರಹ್ಲಾದನೆ ನೀನು ॥೭॥

ಗೋತ್ರದಲಿ ಬ್ರಹ್ಮನೇ ಸೂತ್ರದಲ್ಲಿ ಕೌಶಿಕನೆ
ಪಾತ್ರದಲಿ ವಾಲ್ಮೀಕಿ ಋಷಿಯೆ ನೀನು
ಮಾತಿನಲಿ ಗುರುಸುತನೆ ಜ್ಯೋತಿಯಲಿ ಬೃಹಸ್ಪತಿಯೆ
ನೀತಿಮಾರ್ಗದಲಿ ಸಹದೇವನೇ ನೀನು ॥೮॥

ಅಂಗದಲಿ ಅಜಮಿಳನೆ ಶೃಂಗದಲಿ ಮಾರುತನೆ
ಕಂಗೊಳಿಪ ತನದಲ್ಲಿ ಕಾಮಸುತನೆ
ಗಂಗೆಯನು ಪಡೆದಂಥ ನೆಲೆಯಾದಿಕೇಶವನ
ಹಿಂಗದೆ ಭಜಿಸಿ ಪಾವನನಾಗು ಮನುಜ ॥೯॥

ಭಾವ– ಮರಕ್ಕಿಂತ ಮರ ದೊಡ್ಡದಿದೆ ಎಂಬುದನ್ನರಿತು ಗರ್ವ ಪಡದೆ ಬಾಳಿರಿ ಎಂಬುದನ್ನು ಹಲವಾರು ಘಟಾನುಘಟಿಗಳ ಉದಾಹರಣೆಗೊಟ್ಟು ತಿಳಿಯ ಹೇಳಿರುವ ಕೀರ್ತನೆಯಿದು.



ಅರ್ಥ– ಕ್ಷಿತಿಪ = ರಾಜ
ಮತಿ = ಬುದ್ಧಿ
ಕಾಯ = ಶರೀರ
ದಾಯ = ಪಗಡೆಯಾಟದಲ್ಲಿ ದಾಳ ಉರುಳಿಸುವುದು
ಪಡೆ = ಸೈನ್ಯ
ತ್ರಾಣ = ಶಕ್ತಿ
ಕೇಣ = ಮತ್ಸರ, ರೋಷ
ಆನುಗುಣ್ಯ = ಕ್ರಮಬದ್ಧ, ತಾರ್ಕಿಕ
ಅರ್ತಿ = ಪ್ರೀತಿ
ಶೃಂಗ = ಔನ್ನತ್ಯ
ಕಂಗೊಳಿಪ = ಕಣ್ಣಿಗೆ ಹಬ್ಬವನ್ನುಂಟುಮಾಡುವ, ಆಕರ್ಷಕ

* * * *

## ೧೧೧
## ಮುಖಾರಿ – ಅಟತಾಳ

ಪಾಪಾತ್ಮ ನಾನಲ್ಲ ಪಾಪವೆನದಿನಿತಿಲ್ಲ ॥ಪ॥
ಶ್ರೀಪತಿಯೆ ನಿನಗೆ ನೀನೇ ಮಾಡಿಕೊಂಡೆ ॥ಅ॥

ವರದನು ಕರದಲಿ ಉಷ್ಣಜಲ ಮೃತ್ತಿಕೆಯ
ತರಲು ಕೈ ಸುಟ್ಟಾಗ ಪಣೆಯ ಕೊಣೆದು ಬೈದೆ
ಮರಳಿ ನಾಚಿಕೆ ಇರದೆ ಚರಣಕೆ ಪಾವುಗೆ ತಂ
ದಿರಿಸಿದಪರಾಧ ಎನ್ನದೊ ನಿನ್ನದೊ ದೇವ ॥೧॥

ಬಂದ ಭೃಗು ಮುನಿ ಎದೆಯನೊದೆಯೆ ಆತಗೆ ಪಾಪ
ಅಂದು ಮೂದಲಿಸಿ ಬೈದವರಿಗೆ ದೋಷ
ನಿಂದುದೇ ಹಣೆಯೊಳಗೆಸೆಯೆ ಭೀಷ್ಮಂಗಘವು
ಹೊಂದಿದಾ ಪಾಂಡವರಿಗೆ ಕುಂದು ಬಂದಿತೆ ದೇವ ॥೨॥

ಕುರುಡನಿಗೆ ದಾರಿಯನು ತೋರದೆ ಆತಗೆ ಮುನಿದು
ದರಿಗೆ ನೂಕಿದಡೆ ಅವನು ಏನು ಮಾಡುವನು
ಶಿರಕೆ ತಪ್ಪಾಗಿ ಗುರಿಯಿಡಲದು ಸರಳ ತಪ್ಪೆ
ಅರಸನಾಳ ಕೊಂದಡೆ ಆರೇನು ಮಾಡುವರು ॥೩॥

ಕುಣಿಸಿದರೆ ಆಡುವುದು ಬೊಂಬೆ ಸೂತ್ರಮುಖದಿ
ಇನಿತುಂಟೆ ಕಪಟನಾಟಕ ಸೂತ್ರಧಾರಿ
ಇನಿತಾಡಿಸಿದರಾಡುವೆ ಪಾಪ ಪುಣ್ಯಂಗಳಿಂದ
ಎಣಿಕೆಗಾನಲ್ಲ ನೀನಲ್ಲದಿಲ್ಲ



ತಂದೆತಾಯಿಗಳು ತಮ್ಮ ಕಂದಗೆ ಸರ್ಪಮುಖ
ದಿಂದ ಕಚ್ಚಿಸಲು ಆ ತಪ್ಪು ಕಂದನದೆ
ಮುಂದರಿಯದಜ್ಞಾನಿಯೆಂದು ಕ್ಷಮಿಸೆಲ್ಲವನು
ತಂದೆ ವೇಲಾಪುರದ ಆದಿಕೇಶವನೆ ॥೫॥

ಭಾವ– ಆಡಿಸುವವನ ಕೈಚಳಕಕ್ಕೆ ಅನುಗುಣವಾಗಿ ಸೂತ್ರದ ಗೊಂಬೆ ಕುಣಿಯುತ್ತದೆ; ಸೂತ್ರಧಾರನ ತಪ್ಪೇ ವಿನಾ ಸೂತ್ರದ ಬೊಂಬೆಯ ತಪ್ಪು ಖಂಡಿತ ಅಲ್ಲ– ಎಂದು ಕನಕದಾಸರು ಸರ್ವಾಪರಾಧಗಳನ್ನು ಸೃಷ್ಟಿಕರ್ತನ ತಲೆಗೆ ಕಟ್ಟಿರುವುದು ಕಂಡು ಬರುತ್ತದೆ.

ಅರ್ಥ– ಅಂದು = ಆಡಿ
ಅಘ = ಪಾಪ
ದರಿಗೆ = ಹಳ್ಳಕ್ಕೆ

* * * *

## ೧೧೨
## ಪಂತುವರಾಳಿ – ಛಾಪುತಾಳ

ಅಡಿಗೆಯನು ಮಾಡಬೇಕಣ್ಣ– ನಾನೀಗ ಜ್ಞಾನ
ದಡಿಗೆಯನು ಮಾಡಬೇಕಣ್ಣ ॥ಪ॥

ಅಡಿಗೆಯನ್ನು ಮಾಡಬೇಕು
ಮಡಿಸಬೇಕು ಮದಗಳನ್ನು
ಒಡೆಯನಾಜ್ಞೆಯಿಂದ ಒಳ್ಳೆ
ಸಡಗರದಲಿ ಮನೆಯ ಸಾರಿಸಿ ॥ಅ॥

ತನ್ನ ಗುರುವನ್ನು ನೆನೆಯಬೇಕಣ್ಣ
ತನುಭಾವವೆಂಬ ಭಿನ್ನ ಕಲ್ಮಶವಳಿಯಬೇಕಣ್ಣ
ಒನಕೆಯಿಂದ ಕುಟ್ಟಿಕೇರಿ ತನಗೆ ತಾನೆ ಆದ ಕೆಚ್ಚ
ನನುವರಿತು ಇಕ್ಕಬೇಕು ಅರಿವರ್ಗವೆಂಬ ತುಂಟರಳಿಸಿ ॥೧॥

ತತ್ವಭಾಂಡವ ತೊಳೆಯಬೇಕಣ್ಣ– ಸತ್ಯಾತ್ಮನಾಗಿ
ಅರ್ತಿ ಅಕ್ಕಿಯ ಮಥಿಸಬೇಕಣ್ಣ
ಕತ್ತರಿ ಮನವೆಂಬ ಹೊಟ್ಟನು ಎತ್ತಿ ಒಲೆಗೆ ಹಾಕಿ ಇನ್ನು
ಮುತ್ತಿಕೊಂಡಿಹ ಮಮತೆಯನ್ನು ಎತ್ತಿ ಎಸರ ಹಿಂಗಿಸುತಲಿ ॥೨॥

ಜನನ ಸೊಂಡಿಗೆ ಹುರಿಯಬೇಕಣ್ಣ– ನಿಜವಾಗಿ ನಿಂತು
ತನುವು ತುಪ್ಪವ ಕಾಸಬೇಕಣ್ಣ
ಕನಕಗಿರಿ ಕಾಗಿನೆಲೆಯಾದಿಕೇಶವನ ದಾಸ
ಕನಕನ ಕಟ್ಟಳೆಯೊಳು ನಿಂತು ಸುಖದ ಪಾಕವ ಚಂದದಿ ಸವಿದುಣ್ಣಲಿಕ್ಕೆ ॥೩॥



ಭಾವ– ಅಡಿಗೆಯ ರೂಪಕದಲ್ಲಿ ಜ್ಞಾನವನ್ನಟ್ಟು ಸವಿದುಣ್ಣುವುದನ್ನು ಕನಕದಾಸರು ಈ ಕೀರ್ತನೆಯಲ್ಲಿ ಚಿತ್ರಿಸಿದ್ದಾರೆ.

ಅರ್ಥ– ಮಡಿಸಬೇಕು = ಸಾಯಿಸಬೇಕು, ನಾಶಗೊಳಿಸಬೇಕು.
ಮದಗಳು = ಎಂಟು ಬಗೆಯ ಅಹಂಕಾರಗಳು
ಅರಿವರ್ಗ = ಆರು ಶತ್ರುಗಳು
ಭಾಂಡ = ಮಡಕೆ, ಪಾತ್ರೆ; ಅರ್ತಿ = ಪ್ರೀತಿ
ಎಸರ = ನೀರನ್ನು

* * * *

## ೧೧೩
## ನವರೋಜು – ತ್ರಿಪುಟ ತಾಳ

ಮೊರೆಹೊಕ್ಕೆ ಹರಿ ನಿಮ್ಮ ಚರಣಕಮಲವ ನಾನು
ಮರೆಯದೆ ಸಲಹೆನ್ನ ವರದಾ ॥ಪ॥

ಕರಿ ಧ್ರುವ ಪ್ರಹ್ಲಾದ ವಿಭೀಷಣರ ರಕ್ಷಿಸಿದೆ
ಪರಂದೇವಿ ವಲ್ಲಭನೆ ವರದಾ ॥ಅ॥

ಎಂಬತ್ತು ನಾಲ್ಕು ಲಕ್ಷ ಜೀವರಾಶಿ ಯೋನಿಯೊಳು
ಹಂಬಲಿಸಿ ನಾ ಬಂದೆ ವರದಾ
ಅಂಬುಜೋದ್ಭವನ ಬರೆಹವ ಮೀರಲಾರದೆ ನರ
ಬೊಂಬೆ ಗರ್ಭದೊಳಿದ್ದೆ ವರದಾ ॥೧॥

ತುಂಬಿದ್ದ ಕೀವು ಮಲಮೂತ್ರ ರಕ್ತದಿಂ ಹೊರಳುವ
ಸಂಭ್ರಮದೊಳಿದ್ದೆ ನಾ ವರದಾ
ಒಂಬತ್ತು ಮಾಸವು ಕಳೆದು ಗುಂಡಿಯೊಳಿಳಿದು ಈ
ಕುಂಭಿನಿಗೆ ನಾ ಬಂದೆ ವರದಾ ॥೨॥

ನಸುನುಡಿಯನು ಕಲಿತು ನಸುನಗೆಗಳ ನಕ್ಕು ಈ
ಕುಶಲದಾಟವ ಕಲಿತೆ ವರದಾ
ಎಸೆವ ಯೌವನ ಬಂದು ಶಶಿಮುಖಿಯರೊಳು ಕಾಮ
ತೃಷೆಗೆ ನಾನೊಳಗಾದೆ ವರದಾ ॥೩॥

ನುಸುಳಿಸುವ ಚಾಂಡಾಲ ಗುಣವನೆಣಿಸದೆ ಕಾಮ
ವಶನಾಗಿ ನಾನಿದ್ದೆ ವರದಾ



ಉಸುರಲೆನ್ನಳವಲ್ಲ ಬೆಸನಿತ್ತು ಸಲಹೆನ್ನ
ಬಿಸುರುಹಾಕ್ಷನೆ ಕಂಚಿ ವರದಾ ॥೪॥

ಗುರು ಹಿರಿಯರ ಕಂಡು ಸರಿಸಮಾನದಿ ನಾನು
ಬೆರೆದುಕೊಂಡಿದ್ದೆನೋ ವರದಾ
ನರರ ಕೊಂಡಾಡಿ ನಾಲಗೆಯೊಣಗಿ ಅತಿಯಾಗಿ
ನರನರಳಿ ಬೆಂಡಾದೆ ವರದಾ ॥೫॥

ಕಾಸಿಗಾಸೆಯ ಪಟ್ಟು ಸಹಸ್ರ ಲಕ್ಷದ ಪುಸಿಯ
ಬೇಸರಿಸದೆ ಬೊಗಳಿದೆ ವರದಾ
ವಿಶೇಷ ನಿಮ್ಮಂಘ್ರಿಯ ನಂಬಲಾರದೆ ಕೆಟ್ಟ
ದೋಷಕನು ನಾನಾದೆ ವರದಾ ॥೬॥

ಪಂಚೇಂದ್ರಿಯಗಳೊಳಗೆ ಸಂಚರಿಸುವೀ ಮನವು
ಕೊಂಚ ಗುಣಕೆಳೆಯುತಿದೆ ವರದಾ
ಪಂಚತ್ರಿಂಶತ್ಕೋಟಿ ಭೂಮಂಡಲದೊಳೆನ್ನಂಥ
ಪಂಚಪಾತಕನುಂಟೆ ವರದಾ ॥೭॥

ಮುಂಚೆ ಶ್ರೀ ಹರಿಯೆ ನಿಮ್ಮ ವರಧ್ಯಾನ ಮಾಡುವರ
ಪಂಚೆಯಲ್ಲಿರಿಸೆನ್ನ ವರದಾ
ಪಂಚಬಾಣನ ಪಡೆದ ನೆಲೆಯಾದಿ ಕೇಶವ ಈ ಪ್ರ
ಪಂಚವನು ಬಿಡಿಸೆನ್ನ ವರದಾ ॥೮॥

ಭಾವ– ಕಂಚಿ ವರದರಾಜನ ಮುಂದೆ ಕಿಂಚಿತ್ ಅಳುಕದೆ ತನ್ನೆಲ್ಲ ತಪ್ಪುಗಳನ್ನು ಎತ್ತಿ ಹೇಳಿ ಕ್ಷಮೆ ಯಾಚಿಸುವ ಆಶಯವನ್ನೊಳಗೊಂಡಿದೆ ಈ ಕೀರ್ತನೆ.

ಅರ್ಥ– ಕುಂಭಿನಿ= ಭೂಮಿ
ಬಿಸರುಹಾಕ್ಷ = ಕಮಲಾಕ್ಷ (ವಿಷ್ಣು)

ಬೆಸನ = ಅಪ್ಪಣೆ
ಪಂಚೆ = ಸಮೀಪ, ಸಾನ್ನಿಧ್ಯ;
ಪಂಚಬಾಣ = ಮನ್ಮಥ
ಪಂಚತ್ರಿಂಶತ್ಕೋಟಿ = ಮೂವತ್ತೈದು ಕೋಟಿ

* * * *



## ೧೧೪
## ಕಾಂಬೋದಿ – ಅಟತಾಳ

ಕಷ್ಟ ತನುವಿನಲಿ ಹುಟ್ಟಿ ತೊಳಲುವಂಥ
ಎಷ್ಟೆಂದು ತಾಳುವೆನೊ ಶ್ರೀರಂಗ ॥ಪ॥

ಅಷ್ಟರೊಳೆಂದೆನ್ನ ಅವಗುಣವೆಣಿಸದೆ
ಕಷ್ಟ ಪಡಿಸುವುದೇನು ಶ್ರೀರಂಗ ॥ಅ॥

ನರಜನ್ಮವನು ಎತ್ತಿ ನರಕದೊಳಗೆ ಸುತ್ತಿ
ಗುರಿ ಗೊತ್ತು ಕಾಣೆನಯ್ಯ ಶ್ರೀರಂಗ
ಪರಮಪಾತಕನಾಗಿ ಹರಿ ನಿಮ್ಮ ಸ್ಮರಣೆಯನು
ಮರೆದು ಪಾಮರನಾದೆ ಶ್ರೀರಂಗ ॥೧॥

ಅತಿವೇಧೆಯಲಿ ಸತಿಸುತರೆಂಬ ಮಂದ ದು
ರ್ಮತಿಗೆ ಮರುಳಾದೆನೊ ಶ್ರೀರಂಗ
ಅತುಳ ಪ್ರಪಂಚಕ್ಕೆ ಹಿತನಾಗಿ ದುಷ್ಟ ಸಂ
ಗತಿಯ ನಾನರಿದಿದ್ದೆನೊ ಶ್ರೀರಂಗ ॥೨॥

ಮಿತಿಮೀರಿ ಮನ ಹರಿ ಪದವ ನೆನೆಯದೆ ಪರ
ಸತಿಯರಿಗಳುಪಿದೆನೊ ಶ್ರೀರಂಗ
ಕೃತಬುದ್ಧಿಯೊಳು ಉನ್ನತನಾಗಿ ತಾನೆರೆದು
ಸ್ತುತಿ ಮಾಡಿಕೊಂಡಿದ್ದೆನೈ ಶ್ರೀರಂಗ ॥೩॥

ಆಶಾಪಾಶಗಳೆಂಬ ದೇಹಕ್ಕೆ ಸಿಲ್ಕಿ ಸ
ದ್ವಾಸನೆಯನು ಬಿಟ್ಟೆನು ಶ್ರೀರಂಗ

**ಮೋಸದಿಂದಾತ್ಮಘಾತುಕನಾಗಿ ಅಪರಾಧ**
**ವೇಸೊಂದು ಮಾಡಿದೆನಯ್ಯ ಶ್ರೀರಂಗ ||೪||**

**ಈಸಲಾರದೆ ಹೊಳೆಯಲಿ ಕಾಸಲಾರದೆ ಒಲೆಯಲಿ**
**ಸೋಸುತ್ತ ಕುಳಿತಿಹೆನು ಶ್ರೀರಂಗ**
**ವಾಸುಕಿ ಶಯನ ನೆಲೆಯಾದಿಕೇಶವ ನಿಮ್ಮಾಶ್ರಿತ**
**ದಾಸರ ದಾಸನಯ್ಯ ಶ್ರೀರಂಗ ||೫||**

ಭಾವ– ಹಿಂದಿನ ತಮ್ಮ ಅವಗುಣಗಳ ಆತ್ಮಾವಲೋಕನವನ್ನು ನಡೆಸುತ್ತಾ ಪಶ್ಚಾತ್ತಾಪದಿಂದ ಪರಮಾತ್ಮನಿಗೆ ನಿವೇದಿಸಿಕೊಳ್ಳುವುದೇ ಈ ಕೀರ್ತನೆಯ ಆಶಯವಾಗಿದೆ. ಶ್ರೀರಂಗ ಕ್ಷೇತ್ರ ಸಂದರ್ಶನದ ಸಮಯದಲ್ಲಿ ಮೂಡಿದ್ದು, ಹಾಡಿದ್ದು.

ಅರ್ಥ– ಪಾಮರ = ಸಾಮಾನ್ಯ, ಅಸಂಸ್ಕೃತ;
ವೇಧೆ = ನೋವು, ಬಾಧೆ;
ಮಂದ = ಜಡ, ಅಸೂಕ್ಷ್ಮ;
ಅತುಳ = ಅಗಾಧ, ಅಳೆಯಲಾಗದ;
ಅಳುಪು = ಆಶಿಸು
ಏಸೊಂದು = ಎಷ್ಟೊಂದು
ವಾಸುಕಿ = ಆದಿಶೇಷ

* * * *



## ೧೧೫
## ತಿಲಂಗ್ – ಆದಿತಾಳ

**ಬಯಗುತನಕ ಆಟ ಕೂಟ ಊಟದ ಕೆಲಸ ಉಂಡ ಮೇಲೆ ಶಯನ ||ಪ||**
**ಬಯಲಾಯಿತು ಈ ಒಗತನವೆಲ್ಲ ರಕ್ಷಿಸಯ್ಯ ರಘುಕುಲ ತಿಲಕ ||ಅ||**

**ಪುರಾಣವಿಲ್ಲ ಪುಣ್ಯ ಕಥೆಯಿಲ್ಲ ಪಾರಾಯಣದಿ ಮನಸಿಲ್ಲ**
**ತರೋಣ ಬರೋಣ ತಿನ್ನೋಣ ಮಲಗೋಣ ಮತ್ತೇಳೋಣ ||೧||**

**ಕಣ್ಣಿಗೆ ಜೋಂಪು ಹತ್ತುವತನಕ ಅನ್ಯ ವಿಷಯ ಮಾತುಕತೆಯಾಟ**
**ಹೆಣ್ಣು ಹೊನ್ನು ಮಣ್ಣು ಮಮಕಾರದಿ ಒಳಹೊರಗಿಣುಕಾಟ ||೨||**

**ಹೀಗಾಗಿ ನಿನ್ನಲ್ಲಿಗೆ ಬಂದೆ ಇನ್ನಾದರು ಸಲಹೊ ಸಿರಿ**
**ಕಾಗಿನೆಲೆಯಾದಿಕೇಶವ ಶಿರಬಾಗಿ ಬೇಡಿಕೊಂಬೆ ||೩||**

ಭಾವ– ಪ್ರಾಪಂಚಿಕ ಸ್ತರದಿಂದ ಪಾರಮಾರ್ಥಿಕ ಸ್ತರದತ್ತ ದೃಷ್ಟಿ ಹೊರಳಿಸುವ ತೀರ ಸರಳ ಕೀರ್ತನೆ ಇದು

ಅರ್ಥ– ಬಯಗು (<ಬೈಗು) = ಸಂಜೆ,
ಒಗತನ = ಸಂಬಂಧ
ರಘುಕುಲ ತಿಲಕ = ಶ್ರೀರಾಮ

* * * *

## ೧೧೬
## ಸುರಟ – ಆದಿತಾಳ

ವ್ಯರ್ಥವಾಯಿತಲ್ಲ ಜನ್ಮವು ಸಾರ್ಥಕಾಗಲಿಲ್ಲ ॥ಪ॥

ಅರ್ಥದಾಸೆಯಲಿ ಪೃಥ್ವಿಯೊಳಗೆ ಸುತ್ತಿ
ಮತ್ತನಾಗಿ ಬಲು ಕೃತ್ಯಗಳನು ಮಾಡಿ ॥ಅ॥

ಹರಿಯ ನೆನೆಯಲಿಲ್ಲ ಹರುಷದಿ ಗರುವ ಪುಟ್ಟಿತಲ್ಲ
ಪರಮ ಮೂಢರಲಿ ನಿರುತ ಸಂಗವ ಮಾಡಿ
ಗುರುಹಿರಿಯರ ದಯೆ ದೊರೆಯದೆ ಸುಮ್ಮನೆ ॥೧॥

ಏನು ಪೇಳಲೇನು ಎನಗೆ ಹೀನ ಬಿಡದು ಮುನ್ನ
ಶ್ವಾನಗಿಂತಲು ಬಲು ಮಾನಗೆಟ್ಟು ನಾ
ದೀನನಾಗಿ ಮನೆಮನೆಗಳ ತಿರುಗಿ ॥೨॥

ಭಾಗವತರ ಪಾದಕ್ಕೊಂದಿನ ಬಾಗಿ ನಡೆಯಲಿಲ್ಲ
ರಾಗರಂಗು ಭಕ್ತಿಭಾವದೊಳು
ಬೀಗಿ ಚೆನ್ನಕೇಶವನನು ನೆನೆಯದೆ ॥೩॥

ಭಾವ– ವ್ಯರ್ಥವಾಗಿ ಜೀವನ ಕಳೆದದ್ದರ ಬಗೆಗಿನ ವ್ಯಥೆ ಈ ಕೀರ್ತನೆಯ ನಾಡಮಿಡಿತ.

ಅರ್ಥ– ಅರ್ಥ = ಹಣ, ಪೃಥ್ವಿ = ಭೂಮಿ, ಮತ್ತ = ಗರ್ವಾಂಧ
ಶ್ವಾನ = ನಾಯಿ, ರಾಗ = ಪ್ರೀತಿ, ರಂಗು = ಆಧಿಕ್ಯ
ಬೀಗಿ = ಗರ್ವ ಪಟ್ಟು

* * * *



## ೧೧೭
## ರೇಗುಪ್ತಿ – ತ್ರಿಪುಟತಾಳ

ಆವ ಪರಿಯಲಿ ನಿಮ್ಮನೊಲಿಸಿ ಮೆಚ್ಚಿಪ ವಿಧವು
ರವೆಯಷ್ಟು ತೋರದಲ್ಲ ॥ಪ॥

ದೇವ ದೇವೇಶ ನೀನೆಂದು ನಂಬಿರಲು ಕೃ
ಪಾವಲೋಕನದಿ ಸಲಹೊ ದೇವ ॥ಅ॥

ಫಣಿರಾಜನಾಸನದಿ ಕುಳಿತಿಹಗೆ ಅರಿವೆಯಾ
ಸನವ ನಾನೆಂತ್ಹಾಸಲಿ
ಘನವಾದ ಗಂಗೆಯನು ಪಡೆದವಗೆ ಕಲಶ ನೀ
ರನದೆಂತು ಮೈಗೆರೆಯಲಿ
ತನುವಿನ ಪರಿಮಳವು ಘಮಘಮಿಪನಿಗೆ ಸುಚಂ
ದನವದೆಂತು ನಾ ಪೂಸಲಿ
ಅನವರತ ನಾಭಿಯೊಳು ಶತಪತ್ರವಿಹಗೆ ಮಿ
ಕ್ಕಿನ ಪೂವ ಮುಡಿಸಲೆಂತೈ ದೇವ ॥೧॥

ಸುರುಚಿರೋಜ್ವಲ ಪೀತವಾಸನಿಗೆ ಉಡುಗೊರೆಯ
ಅರಿವೆಯೇನನು ಪೊದಿಸಲಿ
ವರ ಕೌಸ್ತುಭವು ಕೊರಲೊಳಗೆ ಇಪ್ಪವಗೆ ಆ
ಭರಣವಾವುದ ತೊಡಿಸಲಿ
ತರಣಿ ಶತಕೋಟಿತೇಜನ ಮುಂದೆ ಹ್ಯಾಗೆ ನಾ
ಪೆರತೊಂದು ದೀಪವಿಡಲಿ
ನೆರಹಿದ ಫಣಿಪತಿಯ ಸ್ತೋತ್ರದೂರನ ನಾನು
ಸ್ಮರಿಪೆನೆಂತಯ್ಯ ದೇವ ದೇವ ॥೨॥

**ವನಜಜಾಂಡ ಕೋಟಿಯುದರಂಗೆ ಆವುದನು**
**ಉಣಿಸಿ ತೃಪ್ತಿಯ ಮಾಡಲಿ**
**ಅನಿಮಿಷರಿಗಮೃತವನ್ನೆರೆದವನ ತೃಷೆಯ ನೀ**
**ರಿನೊಳೆಂತು ಸಂತವಿಡಲಿ**
**ವಿನತೆಯಾತ್ಮಜ ಪಕ್ಷದನಿಲನಿರೆ ಬೇರೆ ಬೀ**
**ಸಣಿಗೆಯನ್ನೇಂ ಬೀಸಲಿ**
**ಅಣುರೇಣು ಪರಿಪೂರ್ಣ ಮೂರುತಿಗೆ ನಾ ಪ್ರದ**
**ಕ್ಷಿಣೆಯೆಂತು ಸುತ್ತಿಬರಲಿ ದೇವ** ॥೩॥

**ಮಿಗೆ ಫಣಿಯ ಫಣದಾತಪತ್ರವಿರುವಂಗೆ ನೆರ**
**ಳಿಗೆ ಕೊಡೆಯನೇಂ ಪಿಡಿಯಲಿ**
**ಪಗಲಿರುಳು ಸಾಮಗಾನ ಪ್ರಿಯನ ಮುಂದೆ ಗೀ**
**ತಗಳ ನಾನೇಂ ಪಾಡಲಿ**
**ಜಗವರಿಯೆ ಲಕ್ಷ್ಮೀದೇವಿಪತಿಗೆ ಎಷ್ಟು ಹೊ**
**ನ್ನುಗಳ ದಕ್ಷಿಣೆಯ ಕೊಡಲಿ**
**ನಿಗಮತತಿ ಕಾಣದಿಹ ಮಹಿಮನಿಗೆ ನಮಿಸುವ**
**ಬಗೆಯ ನಾನರಿವೆನೆಂತೈ ದೇವ** ॥೪॥

**ಒಲಿಸುವುದನರಿಯೆ ಮೆಚ್ಚಿಸುವ ಬಗೆಯರಿಯೆ ಹೊ**
**ಗಳುವ ಹೊಲಬ ನಾನರಿಯೆನು**
**ತಿಳಿದುದಿಲ್ಲವು ಷೋಡಶೋಪಚಾರದ ಪೂಜೆ**
**ಗಳಲೊಂದು ಪರಿಯಾದರೂ**
**ನೆಲೆಯ ಕಾಣೆನು ನಿಗಮಶಾಸ್ತ್ರ ನವವಿಧ ಭಕ್ತಿ**
**ಯೊಳಗೊಂದು ಬಗೆಯಾದರೂ**
**ಅಳಿಲಸೇವೆಯನೊಪ್ಪಿಸಿಕೊಂಡು ಶರಣನ ಸಲಹೊ**
**ನೆಲೆಯಾದಿ ಕೇಶವನೆ ಸ್ವಾಮಿ–ಪ್ರೇಮಿ** ॥೫॥

ಭಾವ– ಕನಕದಾಸರು ಈ ಕೀರ್ತನೆಯಲ್ಲಿ ಪರಮಾತ್ಮನ ಅಸಮಾನ್ಯತೆಯನ್ನು ತಮ್ಮ ಅಸಹಾಯಕತೆಯ ಮುಖೇನ ಧ್ವನಿಸಿರುವ ಜಾಣ್ಮೆ ಹೆಜ್ಜೆ ಹೆಜ್ಜೆಗೂ



ವಿಸ್ಮಯವನ್ನು ಉಂಟು ಮಾಡುತ್ತದೆ; ನವವಿಧ ಭಕ್ತಿ, ಷೋಡಶೋಪಚಾರ ನಾನು ತಿಳಿದಿಲ್ಲ ಎಂದು ವಿನಂತಿಸಿಕೊಳ್ಳುತ್ತಲೇ ಅವುಗಳನ್ನು ಅಡಕ ಮಾಡಿರುವ ರೀತಿ ಸುಂದರ ಕಲ್ಪನೆಗೆ ತೋರ್‌ಬೆರಳಾಗಿದೆ.

ಅರ್ಥ– ರವೆ = ಚೂರು, ಅಣು

೧. ಫಣಿರಾಜ = ಆದಿಶೇಷ
ಆಸನ = ಪೀಠ
ಅರಿವೆ = ಬಟ್ಟೆ
ಸುಚಂದನ = ಒಳ್ಳೆಯ ಶ್ರೀಗಂಧ
ಪೂಸು = ಬಳಿ, ಲೇಪಿಸು;
ಅನವರತ = ಸದಾ
ನಾಭಿ = ಹೊಕ್ಕುಳು
ಶತಪತ್ರ = ಕಮಲ

೨. ಸುರುಚಿರ = ಕಾಂತಿಯುಕ್ತ
ಪೀತವಾಸ = ಪೀತಾಂಬರ
ಕೌಸ್ತುಭ = ರತ್ನ
ತರಣಿ = ಸೂರ್ಯ
ಫಣಿಪತಿ = ಆದಿಶೇಷ
ಫಣಿಪತಿಯ ಸ್ತೋತ್ರ ದೂರನ = ಸಾವಿರ ನಾಲಗೆಯ ಆದಿಶೇಷನಿಗೂ ನಿನ್ನ ಮಹಿಮೆಯನ್ನು ಸ್ತುತಿಸಲು ಸಾಧ್ಯವಾಗದೆ ಇರುವಂಥ ಮಹಿಮ.

೩. ವನಜಜಾಂಡ = ಬ್ರಹ್ಮಾಂಡ (ವನಜಜ = ಬ್ರಹ್ಮ+ಅಂಡ)
ವನಜಜಾಂಡ ಕೋಟಿಯುದರಂಗೆ = ತನ್ನ ಹೊಟ್ಟೆಯಲ್ಲಿ ಬ್ರಹ್ಮಾಂಡ ಕೋಟಿಯನ್ನು ಅಡಗಿಸಿಕೊಂಡಿರುವ ಮಹಿಮನಿಗೆ
ಅನಿಮಿಷರು = ದೇವತೆಗಳು
ತೃಷೆ = ಬಾಯಾರಿಕೆ
ವಿನತೆಯಾತ್ಮಜ = ವಿನತೆಯ ಮಗನಾದ ಗರುಡ

ಪಕ್ಷದ = ರೆಕ್ಕೆಯ
ಅನಿಲ = ಗಾಳಿ

೪. ಫಣಿಯ = ಹಾವಿನ
ಫಣದ = ಹೆಡೆಯ
ಆತಪತ್ರ = ಕೊಡೆ
ನಿಗಮ ತತಿ = ವೇದಸಮೂಹ

೫. ಹೊಲಬು = ರೀತಿ, ಮಾರ್ಗ

ಷೋಡಶೋಪಚಾರ = ಹದಿನಾರು ಬಗೆಯ ಉಪಚಾರದ ಪೂಜೆ (ಆಸನ, ಸ್ವಾಗತ, ಪಾದ್ಯ, ಅರ್ಘ್ಯ, ಆಚಮನೀಯ, ಮಧುಪರ್ಕ, ಆಚಮನ, ಸ್ನಾನ, ವಸನ, ಆಭರಣ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ವಂದನೆ.)

ನವವಿಧಭಕ್ತಿ = ಒಂಬತ್ತು ಬಗೆಯ ಭಕ್ತಿ (ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮನಿವೇದನ)

* * * *



## ೧೧೮
## ಕಾಂಬೋದಿ – ಝಂಪೆ ತಾಳ

ಎಲ್ಲಿಂದ ಬಂದೆ ಮುಂದೆತ್ತ ಪಯಣ
ಇಲ್ಲಿ ನಿನಗೆಷ್ಟು ದಿನವಾಲಸ್ಯ ಮರುಳೆ ॥ಪ॥

ಮಾತೆಯುದರದೊಳು ನವಮಾಸ ಮಲ ಮೂತ್ರದೊಳು
ಯಾತನೆಯ ಯೋನಿ ಮುಖ ಮಾರ್ಗವಿಡಿದು
ಭೂತಳಕೆ ಬಂದ ಹದನೇನ ತೀರಿಸಿಕೊಂಡೆ
ಜಾತಿ ಯಾವುದು ನಿನ್ನ ಹೆಸರೇನು ಮರುಳೆ ॥೧॥

ಮುಂದಾವ ಪಥವ ಸೇರುವೆ ಮರುಳೆ, ಸಾಕಿನ್ನು
ಹಿಂದೆ ನೆರವಾಗಿ ನಿಂತಾಪ್ತರುಂಟೆ
ಒಂದುಗೂಡಿದ ಪತ್ನಿ ಸುತರೆಲ್ಲ ವರ್ಜಿಪರು
ನಿಂದು ಮಾತಾಡು ಬರಿದೆ ಬಳಲಿದೆ ಮರುಳೆ ॥೨॥

ಬರವಿದೇತಕೆ ನಿನ್ನ ಸ್ಥಳವೆಲ್ಲಿ ನೆಲೆಗೊಂಡು
ಇರುವ ಮಂದಿರವಾವುದದನೆನಗೆ ಪೇಳೊ
ಧರೆಯೊಳಗೆ ವರಕಾಗಿನೆಲೆಯಾದಿಕೇಶವನ
ಸಿರಿ ಚರಣಕಮಲವನು ನೆರೆನಂಬಿ ಸುಖಿಸೊ ॥೩॥

ಭಾವ– ಬಂದದ್ದು ಎಲ್ಲಿಂದ, ಹೋಗುವುದು ಎಲ್ಲಿಗೆ ಎಂಬ ಆತ್ಮಚಿಂತನೆಯಿಲ್ಲದೆ ಬರಿದೆ ಜೀವಿಸುವ ಅನಿತ್ಯ ಸಂಸಾರದತ್ತ ಗಮನ ಸೆಳೆಯಲಗಿದೆ ಈ ಕೀರ್ತನೆಯಲ್ಲಿ.

ಅರ್ಥ– ಆಲಸ್ಯ = ಜಡತ್ವ
ಹದನ = ರೀತಿ, ನಿಲವು;
ಹಿಂದೆ ನೆರವಾಗಿ ನಿಂತ = ನಿನ್ನ ಹಿಂದೆ ಸಹಾಯಕರಾಗಿ ನಿಂತಿರುವ
ಧರೆ = ಭೂಮಿ, ಪ್ರಪಂಚ

* * * *



## ೧೧೯
## ಶಂಕರಾಭರಣ – ಅಟತಾಳ

ಹ್ಯಾಂಗೆ ನೀ ದಾಸನಾದೆ ಪ್ರಾಣಿ ॥ಪ॥

ಹ್ಯಾಂಗೆ ನೀ ದಾಸನಾದೆ ಹೀಂಗೆ ಸಂಸಾರದೊಳು
ಮಂಗನಂದದಲಿ ಭವ ಭಂಗವ ಪಡುವವನು ॥ಅ॥

ಆಸೆಯ ಬಿಡಲಿಲ್ಲ ಕಾಸು ಗಳಿಸುವೆಯಲ್ಲ
ದೋಷಕ್ಕೆ ಗುರಿಯಾಗಿ ಹೇಸಿಕೆಯೊಳು ಬಿದ್ದು ॥೧॥

ತನುವು ತನ್ನದು ಎಂದು ತನಯ ಮಾನಿನಿಯರೆ
ತನಗೆ ಗತಿಯೆಂದು ನಂಬಿರುವ ಮೂಢನೆ ॥೨॥

ಕಾಲನ ದೂತರು ಕರುಣಸಂಪನ್ನರೆ
ಕಾಲ ವ್ಯರ್ಥದಿ ಕಳೆವ ಕೀಳು ಬುದ್ಧಿಯ ಪ್ರಾಣಿ ॥೩॥

ತಲೆ ಹುಳಿತ ನಾಯಂತೆ ಹಲವು ಬೀದಿಯ ತಿರುಗಿ
ಗೆಲುವಿನಿಂದಲಿ ಮೂಲ ಮಲವನಳಿಯದೆ ॥೪॥

ಉದರಪೋಷಣೆಗಾಗಿ ಅಧಮರ ಯಾಚಿಸುತ
ಮದಗರ್ವವೆಂಬುವುದ ಬದಿಯಲ್ಲಿ ಇಟ್ಟುಗೊಂಡು ॥೫॥

ಹಿರಿಯರ ನಿಂದಿಸಿ ಹರಿದಾಸನೆನಿಸಿದೆ
ಗುರುಮಂತ್ರವರಿಯದ ಮರುಳು ಪಾಮರ ಪ್ರಾಣಿ ॥೬॥

ಕಾಲುಗೆಜ್ಜೆಯ ಕಟ್ಟಿ ಮೇಲೆ ಕರತಾಳ ತಟ್ಟಿ
ಶ್ರೀಲೋಲನ ಗುಣ ಪೊಗಳಿ ನಟಿಸದಲೆ ॥೭॥

ಕುಣಿಕುಣಿದು ಮನದಣಿದು ಮಣಿದು ಸಜ್ಜನ ಪದಕೆ
ಅಣಿಮಾದಿ ಅಷ್ಟಸಿದ್ಧಿಯನು ಕೈಗೊಳ್ಳದಲೆ ॥೮॥

ವೇದಶಾಸ್ತ್ರಗಳನು ಮೋದದಿಂದೋದದೆ
ಬಾದರಾಯಣಕೃತ ಭಾಗವತ ಕೇಳದೆ ॥೯॥

ಕಟ್ಟಿ ಕೈ ಪರರಲಿ ಹೊಟ್ಟೆಗೋಸುಗವೆ ಕಂ
ಗೆಟ್ಟು ಯಾಚಿಸುವ ಭ್ರಷ್ಟಪ್ರಾಣಿಯೆ ನೀನು ॥೧೦॥

ನೇಮದಿ ಉಪವಾಸ ಆ ಮಹಾ ಏಕಾದಶಿ
ಕಾಮಜನಕನನು ಪ್ರೇಮದಿ ಸ್ಮರಿಸಿದೆ ॥೧೧॥

ಏಸುದಿನ ಬದುಕಿದರು ಸೂಸುವ ಪಾಪವ
ಈಸಿ ದಾಟದೆ ಕಾಸುವೀಸಕೆ ಬಾಳಿದವ ॥೧೨॥

ಅಂಗಳದೊಳಡಗಿಪ್ಪ ಸುಮಂಗಳ ಮೂರ್ತಿ ಪಾ
ದಂಗಳ ಮನದಲಿ ಹಿಂಗದೆ ಭಜಿಸದೆ ॥೧೩॥

ಬತ್ತಿ ಹೋಯಿತು ನದಿ ಬಿತ್ತದೆ ಬೆಳೆಯದೆ
ಅತ್ತರೆ ಬಹುದೇನೊ ಉತ್ತಮ ಫಲ ಸೂಸಿ ॥೧೪॥

ಆಡುವ ಮಕ್ಕಳ ಕೈಗೆ ನೀಡದೆ ಕಡಲೆಯ
ಬೇಡಿದರೆ ಕೊಟ್ಟು ಕೂಡಿ ಆಡದವನು ನೀ ॥೧೫॥

ಶೃಂಗಾರ ಬಯಸುತ ಬಂಗಾರದೊಡವೆಯ
ಹಿಂಗದೆ ಶ್ರೀ ತುಲಸಿಯ ರಂಗಗರ್ಪಿಸದೆ ॥೧೬॥



ಡಂಬವ ಮಾಡಿಕೊಂಡು ತುಂಬ ಪಾಪ ಒಳಗೆ
ಹಂಬಲಿಸಿದರಿನ್ನು ಬೆಂಬಲಕಾರುಂಟು ॥೧೮॥

ದುಂಡು ನಾಮವ ಬಳಿದು ಭಂಡತನದಲಿ ಜಗದಿ
ದಂಡಿಗೆ ಬೆತ್ತ ಪಿಡಿದು ಹೆಂಡಿರ ಕಾಯ್ವನೆ ॥೧೯॥

ಹಕ್ಕಿವಾಹನನ ಗುಣ ಲೆಕ್ಕಿಸಿ ಪೊಗಳದೆ
ಬೆಕ್ಕಸ ಬೆರಗಾಗಿ ಅಕ್ಕಿಗೆ ತಿರುಗುವವ ॥೨೦॥

ಭೋಗಿಶಯನನ ಪಾದ ರಾಗದಿ ಭಜಿಸದೆ
ಕಾಗಿನೆಲೆಯಾದಿಕೇಶವರಾಯನೆನದೆ ॥೨೧॥

ಭಾವ– ನಿಷ್ಠದಾಸರಂತೆ ಮೇಲೆ ಮೇಲೆ ತೋರಿಸಿಕೊಳ್ಳುತ್ತ ಒಳಗೆ ಪಕ್ಕಾ ಸಂಸಾರವಂದಿಗರಾದ ಬಡಿವಾರದ ದಾಸರನ್ನು ಬಯಲಿಗೆಳೆ ದಿದ್ದಾರೆ ಕನಕದಾಸರು. 'ಬಡಿವಾರದ ದಾಸಯ್ಯನಿಗೆ ಬುಲ್ಲೆಲ್ಲ ನಾಮ' ಎಂಬ ಜನಪದ ಗಾದೆ ಇಂಥವರನ್ನು ನೋಡಿದ ಮೇಲೆಯೇ ಮೂಡಿರುವಂಥದು ಎಂಬುದನ್ನು ಅಲ್ಲಗಳೆಯಲು ಆಗುವುದಿಲ್ಲ.

ಅರ್ಥ– ಶ್ರೀಲೋಲ = ವಿಷ್ಣು, ಅಷ್ಟಸಿದ್ಧಿ = ಅಣಿಮಾ
ಲಘಿಮಾ ಮೊದಲಾದ ಎಂಟು ಸಿದ್ಧಿಗಳು
ಬಾದರಾಯಣ = ವೇದವ್ಯಾಸ
ಕಾಮಜನಕ = ಕೃಷ್ಣ, ಮೂಲಮಲ = ಸಂಚಿತ ಪಾಪ
ಚಿತ್ತಜ = ಮನ್ಮಥ, ಚಿತ್ತಜನಯ್ಯ = ಕೃಷ್ಣ (ವಿಷ್ಣು)
ಡಂಬ = ಬಡಿವಾರ, ದಂಡಿಗೆ = ತಂಬೂರಿ
ಹಕ್ಕಿವಾಹನ = ವಿಷ್ಣು, ಭೋಗಿಶಯನ = ವಿಷ್ಣು

* * * *

## ೧೨೦
## ಕಾಂಬೋದಿ – ಝಂಪೆತಾಳ

**ಯಾಕೆಲೊ ರಂಗ ನಿನಗಿಂತು ನಟನೆಯ ಮಾತು ॥ಪ॥**
**ಮಾಕಾಂತ ಕರೆಸಿದರೆ ಬಾರದಿಹ ಪೊಗರು ॥ಅ॥**

**ಗೊಲ್ಲತನವಂ ಬಿಡಿಸಿ ಗೋಗಾವ ಡಿಂಬ್ಬರಿಸಿ**
**ಉಳ್ಳ ತಸ್ಕರ ಬುದ್ಧಿ ಕಡೆಗೆ ಇರಿಸಿ**
**ಬಾಲಕನ ವಂದರಿಸಿ ಬಹು ಭಾಗ್ಯವಂತನೆನಿಸಿ**
**ಎಲ್ಲರೊಳು ಸಲಿಗೆ ನಿಲಿಸಿದಳೊ ನಿಮ್ಮರಸಿ ॥೧॥**

**ಕೆಸರ ಚೊಗೆಯಂಬಿಡಿಸಿ ಗುಂಜ ಸರವಂ ತೆಗಿಸಿ**
**ಬಿಸರುಹ ಮಣಿಮಾಲೆ ಕಡೆಗೆ ಇಡಿಸಿ**
**ಪೊಸ ಪೀತಾಂಬರ ಉಡಿಸಿ ನವರತ್ನವಂ ತೊಡಿಸಿ**
**ವಸುಧೆಯೊಳು ಮಿಗಿಲಾಗಿ ನಿಲಿಸಿದಳೊ ನಮಿಸಿ ॥೨॥**

**ಎನ್ನ ಮಾತನು ಕೇಳು ಮುನಿಸು ಕೃತ್ಯವ ಸೀಳು**
**ಇನ್ಯಾಕೆ ಯೋಚನೆ ಫಲವ ಪೇಳು**
**ಬಿನ್ನಹವನು ಕೇಳು ನೆರೆಗೂಡಿ ಸುಖಬಾಳು**
**ಚೆನ್ನ ಬಾಡದಾದಿಕೇಶವ ದಯಾಳು ॥೩॥**

ಭಾವ– "ಗಂಡೆಂಬ ಧಿಮಾಕಿನಿಂದ ಹೆಂಡತಿಯ ಮೇಲೆ ಮುನಿಸಿಕೊಂಡು ಮಾತು ಬಿಟ್ಟು ಮನಸನ್ನು ನೋಯಿಸಬಾರದು; ಗಂಡನ ದೋಷ ದೌರ್ಬಲ್ಯಗಳಿಗೆ ಕಡಿವಾಣ ಹಾಕಿ ಅಡ್ಡಮಾರ್ಗದಿಂದ ದೊಡ್ಡ ಮಾರ್ಗಕ್ಕೆ ತಂದು ಘನತೆಗಾಂಭೀರ್ಯಗಳ ವ್ಯಕ್ತಿತ್ವ ರೂಪಿಸುವವಳು ಹೆಂಡತಿಯೇ ಎಂಬುದನ್ನು ಮರೆಯಬಾರದು" ಎಂದು– ಲಕ್ಷ್ಮಿಯೊಡನೆ ಮಾತುಬಿಟ್ಟ



ಹಲವಂಗದ ರಂಗನನ್ನೇ ತರಾಟೆಗೆ ತೆಗೆದುಕೊಂಡು– ಬುದ್ಧಿವಾದ ಹೇಳುವ ಧಾಟಿಯಲ್ಲಿದೆ ಈ ಕೀರ್ತನೆ. ಪರೋಕ್ಷವಾಗಿ ಭಕ್ತ ಭಗವಂತನ (ಶರಣಸತಿ ಲಿಂಗಪತಿ) ಸಾಮರಸ್ಯದ ಕೂಡುಬಾಳುವೆ ಅನಿವಾರ್ಯ ಎಂಬುದು ಇದರ ಆಶಯವಾಗಿದೆ.

ಅರ್ಥ– ಮಾಕಾಂತ = ವಿಷ್ಣು (ಮಾ = ಲಕ್ಷ್ಮೀ)
ಪೊಗರು = ಸೊಕ್ಕು, ಧಿಮಾಕು
ಡಿಂಬು = ಬಾಧೆ
ತಸ್ಕರ = ಕಳ್ಳ
ವಂದರಿಸಿ = ಸ್ತುತಿಸಿ
ಚೊಗೆ = ಅಂಗಿ
ಗುಂಜ = ಗುಲಗಂಜಿ
ಬಿಸರುಹ = ತಾವರೆ
ಪೀತಾಂಬರ = ರೇಶ್ಮೆ ವಸ್ತ್ರ
ವಸುಧೆ = ಭೂಮಿ
ಬಿನ್ನಹ = ವಿಜ್ಞಾಪನೆ

* * * *

## ೧೨೧
## ರಾಗ? - ತಾಳ?

ಮಣ್ಣಿನ ಮಹಿಮೆ ಮನುಜ ನೀನರಿಯೆ
ಷಣ್ಮಹಿಷಿಯುತ ಸರ್ವೋತ್ತಮನ ಲೀಲೆ ॥ಪ॥

ಮಣ್ಣಲಿ ದೊರಕಿದಳು ಮಾತಾಯಿ ಸೀತಾ
ಮಣ್ಣಳೆದ ವಾಮನ ಮಹಬಲಿಯ ಬೇಡಿ
ಮಣ್ಣು ಪಾವನವಾಯ್ತು ರಾಮಪದ ಸ್ಪರ್ಶದಿ
ಮಣ್ಣುಂಡ ಬಾಯಲಿ ಬ್ರಹ್ಮಾಂಡ ತೋರಿದ ಕೃಷ್ಣ ॥೧॥

ಮಣ್ಣಿಗೇ ನಡೆಯಿತು ಮಹಾಭಾರತ ಯುದ್ಧ
ಮಣ್ಣಿಗೇ ಮಡಿದರ ಸಂಖ್ಯೆಗೆಣೆಯಿಲ್ಲ
ಮಣ್ಣಲಿ ಬಿತ್ತೆ ಬೀಜ ಮಹಾವೃಕ್ಷವಾಗುವುದು
ಅಣ್ಣ ನಮ್ಮಾದಿಕೇಶವನ ಅನುಗ್ರಹದಿಂ ॥೨॥

* * * *



## ೧೨೨
## ರಾಗ? - ತಾಳ?

ನಿನ್ನ ನಾ ಮರೆತರೂ ಎನ್ನ ಕೈ ಬಿಡದಿರು ಕರುಣಿ
ಚನ್ನಕೇಶವ ಶ್ರೀ ವೆಂಕಟಾದ್ರಿನಿಲಯ ॥ಪ॥

ಎನ್ನ ತಪ್ಪುಗಳ ನಾನು ಮರೆಯಲೆಂತು ಎನ್ನ
ಬೆನ್ನ ನೋಡಿಕೊಳ್ಳಲಹುದೆ ಎನ್ನಿಂದ ॥ಅ॥

ಮಂಜು ಮರೆಯಾಗುವುದು ಮಾರ್ತಾಂಡ ಮೂಡೆ
ಕಂಜಲೋಚನ ನಿನ್ನ ಪದಕಮಲ ಸ್ಮರಣೆ
ರಂಜಿಸಿ ಮನವನು ಪಾರಾಗಿಪುದು ಪಾಪಗಳ
ಅಂಜಿಕೆಯ ಬಿಡಿಸುತ ಅನುಗ್ರಹಿಪ ಕರುಣಿ ॥೧॥

ದಯೆ ನಿನ್ನದಿರೆ ಭಯ ಎನಗಿಲ್ಲ ಹರಿ
ಮಾಯೆ ಮೋಹಗಳಿಗೆ ಮರುಳಾಗಿಹ ಬೊಂಬೆ
ಜಯವಾಗಿಸಿ ಈ ಜನ್ಮ ಕೃತಾರ್ಥವ ಮಾಡು
ತೋಯಜಾಕ್ಷ ಶ್ರೀ ನೆಲೆಯಾದಿಕೇಶರಾಯ ॥೨॥

* * * *

೧೨೩
## ರಾಗ – ತಾಳ?

ಕೊಡಲು ನೀನಾರು ಬಿಡಲು ನೀನಾರು
ಪೊಡವಿಗೊಡೆಯ ಶ್ರೀಹರಿಲೀಲೆಯದು ॥ಪ॥

ಮಾಡಲು ನೀನಾರು ಮಾಡೆನಲು ನೀನಾರು
ಮಾಡದವರಿಂದ ಮಾಡಿಪ ಮೋಡಿರೂಪ
ಮಾಡಬೇಕೆಂಬರ ತಡೆದು ಕಾಡಿಪನವನು
ಹಿಡಿಗೆ ಅಡಗದಾ ಹಿರಣ್ಯಗರ್ಭನವನಿರೆ ॥೧॥

ಪಾಡುವ ಪದ್ಯಗಳಲಿ ಭಾವವಾಗಿರುವ
ನೋಡುವ ನೋಟಗಳ ನೋವು ಗ್ರಹಿಸುವ
ನುಡಿವ ನುಡಿಯ ತಾತ್ಪರ್ಯವನರಿವ
ನಾಡಿ ನರಗಳಂತೊಲಿವ ಆದಿಕೇಶವರಾಯ ॥೨॥

* * * *

# ಹರಿ ಸರ್ವೋತ್ತಮತ್ವ

**Blank**



## ೧೨೪
## ಕಾಂಬೋದಿ – ಝಂಪೆತಾಳ

**ನೀ ಮಾಯೆಯೊಳಗೊ ನಿನ್ನೊಳು ಮಾಯೆಯೊ ॥ಪ॥**
**ನೀ ದೇಹದೊಳಗೊ ನಿನ್ನೊಳು ದೇಹವೊ ಹರಿಯೆ ॥ಅ॥**

**ಬಯಲೊಳಗೆ ಆಲಯವೊ ಆಲಯದೊಳಗೆ ಬಯಲೊ**
**ಬಯಲು ಆಲಯವೆರಡು ನಯನದೊಳಗೊ**
**ನಯನ ಬುದ್ಧಿಯ ಒಳಗೊ ಬುದ್ಧಿ ನಯನದ ಒಳಗೊ**
**ನಯನ ಬುದ್ಧಿಗಳೆರಡು ನಿನ್ನೊಳಗೊ ಹರಿಯೆ ॥೧॥**

**ಸವಿಯು ಸಕ್ಕರೆಯೊಳಗೊ ಸಕ್ಕರೆಯು ಸವಿಯೊಳಗೊ**
**ಸವಿಯು ಸಕ್ಕರೆ ಎರಡು ಜಿಹ್ವೆಯೊಳಗೊ**
**ಜಿಹ್ವೆ ಮನಸಿನ ಒಳಗೊ ಮನಸು ಜಿಹ್ವೆಯ ಒಳಗೊ**
**ಜಿಹ್ವೆ ಮನಸುಗಳೆರಡು ನಿನ್ನೊಳಗೊ ಹರಿಯೆ ॥೨॥**

**ಕುಸುಮದಲಿ ಗಂಧವೋ ಗಂಧದಲಿ ಕುಸುಮವೋ**
**ಕುಸುಮ ಗಂಧಗಳೆರಡು ಆಘ್ರಾಣದೊಳಗೊ**
**ಅಸಮಭವ ಕಾಗಿನೆಲೆಯಾದಿಕೇಶವರಾಯ**
**ಉಸುರಲೆನ್ನಳವಲ್ಲ ಎಲ್ಲ ನಿನ್ನೊಳಗೊ ಹರಿಯೆ ॥೩॥**

ಭಾವ– ದೈವದ ಸಾರ್ವಭೌಮ ಶಕ್ತಿ ಪ್ರಶ್ನಾತೀತ, ಊಹಾತೀತ; ಒಂದರೊಳಗೊಂದು ಹೆಣೆದುಕೊಂಡಿರುವ ಜೀವಾತ್ಮ–ಪರಮಾತ್ಮ, ಪಿಂಡಾಂಡ–ಬ್ರಹ್ಮಾಂಡಗಳ ಜಟಿಲ ರಚನೆಯ ಸಿಕ್ಕನ್ನು ಬಿಡಿಸಲು ಹೊರಟ ಮಂದಿಗೆ ಲೆಕ್ಕವಿಲ್ಲ; ಆ ಮಾಯಕಾರ ಕೈಗೂ ಸಿಕ್ಕ ಬಾಯ್ಗೂ ಸಿಕ್ಕ; ಲಾಳಿಯಾಡಿಸಿ ಹಾಸು ಹೊಕ್ಕ ಕೂಡಿಸಿ ನೇಯುವ ಆ ಅಪ್ರಾಕೃತ ನೇಕಾರ ಯಾರ ಕೈಗೂ ಸಿಗದೆ ನುಣುಚಿಕೊಳ್ಳುವ ನೇತಾರನೂ ಹೌದು.

ಎಲ್ಲವನ್ನೂ ಎಲ್ಲರನ್ನೂ ಸಿಕ್ಕಿನೊಳಗಿಕ್ಕಿ, ತಾನು ಮಾತ್ರ ಸಿಕ್ಕಿನೊಳಗಿದ್ದೂ ಸಿಕ್ಕದ ಹಕ್ಕಿಯಂತೆ ಅನಂತತೆಯಲ್ಲಿ ಹಾರಾಡುವ ಪರಾತ್ಪರ ವಸ್ತುವಿನ ಅಪ್ರಮೇಯ ಸಾಮರ್ಥ್ಯದ ಗುಣಗಾನವೆನ್ನಬಹುದು ಈ ಕೀರ್ತನೆ.

ಅರ್ಥ– ಆಲಯ = ಮನೆ
ನಯನ = ಕಣ್ಣು
ಜಿಹ್ವೆ = ನಾಲಗೆ
ಆಘ್ರಾಣ = ಮೂಗು

* * * *



೧೨೫

## ಕಲ್ಯಾಣಿ – ರೂಪಕ

**ಈ ಪರಿಯ ಸೊಬಗಾವ ದೇವರಲಿ ನಾ ಕಾಣೆ**
**ಗೋಪಿದೇವಿಯ ತನಯ ಗೋಪಾಲ ಬಾಲಗಲ್ಲದೆ ॥ಪ॥**

**ದೊರೆಯತನದಲಿ ನೋಡೆ ಧರಣಿ ಜಾತೆಯ ರಮಣ**
**ಸಿರಿಯತನದಲಿ ನೋಡೆ ಶ್ರೀಕಾಂತನು**
**ಹಿರಿಯತನದಲಿ ನೋಡೆ ಸರಸಿಜೋದ್ಭವ ಪಿತನು**
**ಗುರುವುತನದಲಿ ನೋಡೆ ಆದಿಗುರುವು ॥೧॥**

**ಪಾವನತ್ವದಿ ನೋಡೆ ದೇವಿ ಗಂಗಾಜನಕ**
**ದೇವತ್ವದಲಿ ನೋಡೆ ದಿವಿಜರೊಡೆಯ**
**ಲಾವಣ್ಯದಲಿ ನೋಡೆ ಲೋಕ ಮೋಹನ ಪಿತನು**
**ಜಾವ ಧೈರ್ಯದಲಿ ನೋಡೆ ಅಸುರಾಂತಕ ॥೨॥**

**ಗಗನದಲಿ ಸಂಚರಿಪ ವೈನತೇಯ ವಾಹನ**
**ಜಗವನು ಪೊತ್ತಿರ್ಪ ಶೇಷ ಶಯನ**
**ಕಾಗಿನೆಲೆಯಾದಿಕೇಶವರಾಯಗಲ್ಲದೆ**
**ಮಿಗಿಲು ದೈವಗಳಿಗೀ ಭಾಗ್ಯಮುಂಟೆ ॥೩॥**

ಭಾವ– ಮಧುರಾನಗರದ ಶ್ರೀ ಗೋಪಾಲಕೃಷ್ಣ ಸ್ವಾಮಿಯ ಅಲಂಕಾರವನ್ನು ಕಂಡು ಆನಂದಿಸಿದ ಕನಕದಾಸರು ಕಟ್ಟಿ ಹಾಡಿದ ಕೀರ್ತನೆಯಿದು ಎಂದು ಪ್ರತೀತಿ. ಶ್ರೀ ಹರಿಯ ಸರ್ವೋತ್ತಮತೆಯನ್ನು ಸರ್ವಾಂಗ ಸುಂದರವಾಗಿ ಕೆತ್ತಿರುವ ಕೀರ್ತನೆ ಎನ್ನಿಸದಿರದು.

ಅರ್ಥ– ಗೋಪಿದೇವಿ = ಯಶೋದೆ

೧. ಧರಣಿಜಾತೆ = ಸೀತೆ
ಶ್ರೀಕಾಂತ = ಲಕ್ಷ್ಮಿಯ ಗಂಡ
ಸರಸಿಜೋದ್ಭವ = ಬ್ರಹ್ಮ
೨. ಪಾವನತ್ವ = ಪಾವಿತ್ರ್ಯ
ದಿವಿಜರೊಡೆಯ = ದೇವತೆಗಳ ಒಡೆಯ
ಲೋಕಮೋಹನ = ಮನ್ಮಥ
ಜಾವ = ಪಹರೆ, ರಕ್ಷಕ
ಅಸುರಾಂತಕ = ರಾಕ್ಷಸಾಂತಕ
೩. ಗಗನ = ಆಕಾಶ
ವೈನತೇಯ = ಗರುಡ, ಶೇಷ = ಸರ್ಪ
ಮಿಗಿಲು = ಮಿಕ್ಕ, ಉಳಿದ

* * * *



## ೧೨೬
## ಪಂತುವರಾಳಿ – ಛಾಪುತಾಳ

ಎಲ್ಲಿ ನೋಡಿದರಲ್ಲಿ ರಾಮ– ಇದ ||ಪ||
ಬಲ್ಲ ಜಾಣರ ದೇಹದೊಳಗೆ ನೋಡಣ್ಣ ||ಅ||

ಕಣ್ಣೇ ಕಾಮನ ಬೀಜ– ಈ
ಕಣ್ಣಿಂದಲೆ ನೋಡು ಮೋಕ್ಷ ಸಾಮ್ರಾಜ್ಯ
ಕಣ್ಣಿನ ಮೂರುತಿ ಬಿಗಿದು– ಒಳ
ಗಣ್ಣಿಂದಲೇ ದೇವರ ನೋಡಣ್ಣ ||೧||

ಮೂಗೇ ಶ್ವಾಸ ನಿಶ್ವಾಸ– ಈ
ಮೂಗಿಂದಲೇ ಕಾಣೊ ಯೋಗ ಸಂನ್ಯಾಸ
ಮೂಗನಾದರೆ ವಿಶೇಷ– ಒಳ
ಮೂಗಲಿ ನೋಡಣ್ಣ ಲೀಲಾವಿಲಾಸ ||೨||

ಕಿವಿಯೇ ಕರ್ಮಕೆ ದ್ವಾರ– ಈ
ಕಿವಿಯಿಂದಲೇ ಕೇಳೊ ಮೋಕ್ಷದ ಸಾರ
ಕಿವಿಯೇ ಕರ್ಮ ಕುಠಾರ– ಒಳ
ಗಿವಿಯಲ್ಲಿ ಕಾಣೊ ನಾದದ ಬೇರ ||೩||

ಬೊಮ್ಮ ಮಾಡಿದ ತನುಬಿಟ್ಟು– ವಿಶ್ವ
ಕರ್ಮನು ಮಾಡಿದ ಬೊಂಬೆಯನಿಟ್ಟು
ಸುಮ್ಮನೆ ಕೂಗುಗಳಿಟ್ಟು– ಅದ
ನೆಮ್ಮುವನೆಂಬೋನು ಹೋಹ ಕಂಗೆಟ್ಟು ||೪||

**ರೂಢಿಯೊಳಗೆ ಶುದ್ಧ ಮೂಢ– ಈ**
**ಕಾಡುಕಲ್ಲುಗಳನ್ನು ನಂಬಬೇಡ**
**ನಾಡಾಡಿ ದೈವಗಳನೆಲ್ಲ– ನಮ್ಮ**
**ಬಡದಾದಿ ಕೇಶವನೊಬ್ಬನೆ ಬಲ್ಲ ॥೫॥**

ಭಾವ– ಈ ಕೀರ್ತನೆಯಲ್ಲಿ ಸರ್ವಾಂತರ್ಯಾಮಿಯಾದ ದೇವರು ಮನುಷ್ಯನ ದೇಹಾಂತರ್ಯಾಮಿ ಕೂಡ ಎಂಬ ಸತ್ಯ ಒಳಗಣ್ಣಿದ್ದವರಿಗೆ ವೇದ್ಯವಾಗುತ್ತದೆ ಎಂಬುದನ್ನು ಕಣ್ಣು ಕಿವಿ ಮೂಗುಗಳ ವ್ಯಾಪಾರದೊಂದಿಗೆ ಚಿತ್ರಿಸಲು ಯತ್ನಿಸಲಾಗಿದೆ; ಯೌಗಿಕ ಮಾರ್ಗದಿಂದ ದೈವಿಕ ನೆಲೆ ಕಾಣಬಹುದು ಎನ್ನುವತ್ತ ಗಮನ ಸೆಳೆಯಲಾಗಿದೆ.

ಅರ್ಥ– ಕುಠಾರ = ಕೊಡಲಿ
ಬೊಮ್ಮ = ಬ್ರಹ್ಮ
ತನು = ಶರೀರ
ಹೋಹ = ಹೋಗುವ
ರೂಢಿ = ಪ್ರಪಂಚ
ನಾಡಾಡಿ = ಸಾಮಾನ್ಯ, ಅಪ್ರಮುಖ

* * * *



## ೧೨೭
## ಸಾವೇರಿ ಅಟತಾಳ

**ಮುತ್ತು ಬಂದಿದೆ ಕೇರಿಗೆ– ಜನರು ಕೇಳಿ ॥ಪ॥**
**ಭಕ್ತಿಯುಳ್ಳವರೆಲ್ಲ ಕಟ್ಟಿಕೊಳ್ಳಿ ಸೆರಗಿನಲ್ಲಿ ॥ಅ॥**

**ಥಳಥಳಿಸುವ ಮುತ್ತು ಕಮಲ ನೇತ್ರದ ಮುತ್ತು**
**ಕಲುಷ ಪರ್ವತಕ್ಕಿದು ಕುಲಿಶವಾಗಿಹ ಮುತ್ತು**
**ಹಲಧರಾನುಜನೆಂಬ ಪವಿತ್ರ ನಾಮದ ಮುತ್ತು**
**ಒಲಿದು ಭಜಿಪರ ಭವವ ತರಿದು ಕಾಯುವ ಮುತ್ತು ॥೧॥**

**ಅಂಜದಿದ್ದವರಿಗೆ ಅಂಜಿಕೆ ತೋರುವ ಮುತ್ತು**
**ಭಂಜಿಸಿದವರಿಗೆ ಭಯವ ತೋರುವ ಮುತ್ತು**
**ಸಂಜೀವರಾಯರ ಹೃದಯದೊಳಗಿಹ ಮುತ್ತು**
**ಕಂಜಭವಾದಿಗಳೆ ಶಿರಸಾವಹಿಸುವ ಮುತ್ತು ॥೨॥**

**ಜ್ಞಾನವೆಂಬ ದಾರದಲ್ಲಿ ಪೋಣಿಸಿ ನೋಡುವ ಮುತ್ತು**
**ಜ್ಞಾನಿಗಳ ಮನದಲ್ಲಿ ಮೆರೆವ ಮುತ್ತು**
**ಆನಂದತೀರ್ಥರ ಮನದಲೊಪ್ಪುವ ಮುತ್ತು**
**ಶ್ರೀನಿಧಿ ಆದಿಕೇಶವನೆಂಬ ಆಣಿಮುತ್ತು ॥೩॥**

ಭಾವ– ಮುತ್ತಿನ ರೂಪಕದಲ್ಲಿ ಶ್ರೀಕೃಷ್ಣನ ಮಹಿಮೆಯನ್ನು ಕೊಂಡಾಡುವ ಕೀರ್ತನೆ ಇದು.

ಅರ್ಥ– ಸೆರಗಿನಲ್ಲಿ ಕಟ್ಟಿಕೊಳ್ಳಿ = ಭಕ್ತಿಭಾವದಿಂದ ಕೃತಜ್ಞತಾಭಾವದಿಂದ ಸ್ವೀಕರಿಸಿ
ಕಮಲನೇತ್ರ = ಕಮಲದಂತೆ ಕಣ್ಣುಳ್ಳವನು (ಶ್ರೀಕೃಷ್ಣ)
ಕಲುಷ = ಕಲ್ಮಷ, ಕೊಳೆ (ಪಾಪ)

ಕುಲಿಶ = ವಜ್ರಾಯುಧ
ಹಲಧರ = ಬಲರಾಮ
ಅನುಜ =ತಮ್ಮ (ಶ್ರೀಕೃಷ್ಣ)
ಭವವ ತರಿದು = ಹುಟ್ಟುಸಾವಿನ ಕಟ್ಟನ್ನು ಕಳೆದು
ಸಂಜೀವರಾಯ = ವಾಯುಪುತ್ರ ಹನುಮಂತ
ಕಂಜಭವ = ಬ್ರಹ್ಮ
ಆದಿಗಳೆ = ಮೊದಲಾದವರು
ಆನಂದತೀರ್ಥ = ಮಧ್ವಾಚಾರ್ಯ

* * * *



## ೧೨೮
## ನಾಟಿ – ಝಂಪೆತಾಳ

**ಕಂಡೆ ನಾ ತಂಡತಂಡದ ಹಿಂಡು ಹಿಂಡು ದೈವ ಪ್ರಪಂಚ– ರಿಪು**
**ಗಂಡ ಉದ್ದಂಡ ನರಸಿಂಹನ ಕಂಡೆನಯ್ಯ ॥ಪ॥**

**ಘುಡುಘುಡಿಸಿ ಕಂಬದಲಿ ಧಡಧಡ ಸಿಡಿಲು ಸಿಡಿಯೆ**
**ಕಿಡಿಕಿಡಿಸೆ ನುಡಿಯಡಗಲೊಡನೆ ಮುಡಿವಿಡಿದು**
**ಫಡಫಡನೆ ನಡುನಡುಗೆ ಘುಡುಘುಡಿಸಿ ಸಭೆ ಬೆದರೆ**
**ಹಿಡಿ ಹಿಡಿದು ಹಿರಣ್ಯಕನ ತೊಡೆಮೇಲೆ ಕೆಡಹಿದನ ॥೧॥**

**ಉರದೊಳಪ್ಪಳಿಸಿ ಅರಿ ಬಸಿರ ಸರಸರನೆ ಸೀಳಿ**
**ಪರಿಪರಿಯಲಿ ಚರ್ಮ ಎಳೆದೆಳೆದು ಎಲುಬು ನರ**
**ನರವನು ತೆಗೆದು ನಿರ್ಗಳಿತ ಶೋಣಿತ ಸುರಿಯೆ**
**ಹರಿಹರಿದು ಕರುಳ ಕೊರಳೊಳಿಟ್ಟವನ ॥೨॥**

**ಪುರಜನರು ಹಾಯೆನಲು ಸುರರು ಹೂಮಳೆಗರೆಯೆ**
**ತರತರದ ವಾದ್ಯ ಸಂಭ್ರಮಗಳಿಂದ**
**ಹರಿಹರಿ ಶರಣೆಂದು ಸ್ತುತಿಸಿ ಶಿಶು ಮೊರೆಯಿಡುವ**
**ಕರುಣಾಳು ಕಾಗಿನೆಲೆಯಾದಿಕೇಶವನ ॥೩॥**

ಭಾವ– ವಿಷ್ಣು ನರಸಿಂಹಾವತಾರವನ್ನೆತ್ತಿ ಹಿರಣ್ಯಕಶ್ಯಪನನ್ನು ಸೀಳಿ ಪ್ರಹ್ಲಾದನನ್ನು ಕಾಯ್ದ ಸಂಗತಿಯಿಲ್ಲಿ ಸಚಿತ್ರವಾಗಿ ಸಶಕ್ತವಾಗಿ ಚಿತ್ರಣಗೊಂಡಿದೆ. ಇಲ್ಲಿನ ಪದಶಯ್ಯೆ, ದ್ವಿರುಕ್ತಿ ಉಗ್ರಯ್ಯನ ಸಿಟ್ಟಿನೆಸರಿಗೆ 'ಅಗ್ರಣೆ' (<ಒಗ್ಗರಣೆ) ಹಾಕಿದಂತಿದೆ.

ಅರ್ಥ- ರಿಪು= ಶತ್ರು
ಉದ್ದಂಡ = ಭೀಕರ
ಉರ = ಎದೆ
ಅರಿಬಸುರ = ಶತ್ರುವಿನ ಹೊಟ್ಟೆಯನ್ನು
ನಿರ್ಗಳಿತ ಶೋಣಿತ = ಕೆಳಕ್ಕೆ ಹರಿವ ರಕ್ತ.

* * * *



## ೧೨೯
## ಮಧ್ಯಮಾವತಿ – ಆದಿ

ಪರಮ ಪದವಿಯೆ ಶ್ರೀರಂಗಂ
ಪರವಾಸುದೇವರೆ ಶ್ರೀರಂಗಂ ॥ಪ॥

ವೇದನಾಲ್ಕು ಶೃಂಗಾರವಾದ
ಓಂಕಾರ ವಿಮಾನವೆ ಶ್ರೀರಂಗಂ
ಸಾಧಿಸಿ ಪೂರ್ವಾಚಾರ್ಯರು ನೆಲಸಿಹ
ಆದಿ ವಿಮಾನವೆ ಶ್ರೀರಂಗಂ ॥೧॥

ಸತ್ಯಲೋಕದಲಿ ಬ್ರಹ್ಮನು ಪೂಜಿಪ
ವಸ್ತು ವಿಮಾನವೆ ಶ್ರೀರಂಗಂ
ಭಕ್ತಿಗೆ ಇಕ್ಷ್ವಾಕುರಾಯಗೊಲಿದು ಬಂದ
ಉತ್ತಮಾಯೋಧ್ಯವೆ ಶ್ರೀರಂಗಂ ॥೨॥

ತ್ರೇತಾಯುಗದಿ ವಿಭೀಷಣನಿಗೆ ರಘು
ನಾಥನು ಕೃಪೆ ಇತ್ತ ಶ್ರೀರಂಗಂ
ಪ್ರೀತಿಸಿ ದಕ್ಷಿಣಭೂಮಿಯೊಳಗೆ ರಂಗ
ನಾಥ ನೆಲಸಿಹ ಶ್ರೀರಂಗಂ ॥೩॥

ಮುನ್ನ ಕಾವೇರಿ ಉಭಯ ಮಧ್ಯದೊ
ಳಿನ್ನು ಶೋಭಿಪುದೆ ಶ್ರೀರಂಗಂ
ಸನ್ನುತ ಭಕ್ತರ ಸಲಹುವ ಬಿರುದಿನೊ
ಳಿನ್ನು ತೋರುವುದೆ ಶ್ರೀರಂಗಂ ॥೪॥

**ಶೇಷನ ಮೇಲೆ ಪವಳಿಸಿ ಲಂಕಾ**
**ದೇಶವ ನೋಡುವ ಶ್ರೀರಂಗಂ**
**ಶ್ರೀಸಿರಿನಾಯಕೀ ರಮಣ**
**ಕೇಶವರಾಯರ ಮಹಿಮೆಯೆ ಶ್ರೀರಂಗಂ ॥೫॥**

ಭಾವ– ಶ್ರೀರಂಗ ಕ್ಷೇತ್ರ ದರ್ಶನಕ್ಕೆ ಹೋದಾಗ ಕಟ್ಟಿದ ಹಾಡಿದು. ಶ್ರೀರಂಗದ ಮಹಿಮೆಯನ್ನು ಇದು ಚಿತ್ರವತ್ತಾಗಿ ಕಂಡರಿಸಿದೆ.

ಅರ್ಥ– ಶೇಷ = ಸರ್ಪ
ಸಿರಿನಾಯಕಿ = ರಂಗನಾಯಕಿ

* * * *



## ೧೩೦
## ಭೈರವಿ – ಆದಿ

**ಮರೆಯದಿರು ಹರಿಯ**
**ಮರೆವರೆ ಮೂರು ಲೋಕದ ಧೊರಿಯ ॥ಪ॥**

**ಮದಗಜ ಹರಿಯೆಂದು ಕರೆಯಲು**
**ಒದಗಿ ಆಕ್ಷಣ ಬಂದು**
**ಮುದದಿ ನಕ್ರನ ಕೊಂದು ಸಲ**
**ಹಿದ ಸದ್ಭಕ್ತರ ಬಂಧು**
**ಹದುಳ ಪ್ರಹ್ಲಾದನ ಹೆದರಿಸಿದಸುರನ**
**ಉದರವ ಬಗೆದಂಥದುಭುತ ಮಹಿಮನ ॥೧॥**

**ನಾರಿಯು ತನ್ನ ಕರೆದ ಮಾತ್ರದಿ**
**ಸೀರೆಯ ಮಳೆಗರೆದ**
**ಕ್ರೂರ ಖಳನ ತರಿದು ಆ ಪಾಂಡವರ**
**ಆರಣ್ಯದಿ ಪೊರೆದ**
**ಗಾರಾದಜಮಿಳ ನಾರಗ ಎನಲು**
**ಪಾರಗಾಣಿಸಿದಪಾರ ಗುಣನಿಧಿಯ ॥೨॥**

**ಒಂದು ಬಾರಿ ಶ್ರೀಶಾ ಎಂದರೆ**
**ಬಂದ ದುರಿತ ನಾಶಾ**
**ಬೆಂದವು ಭವ ಪಾಶಾ– ಅವ**
**ಗೆಂದೆಂದಿಗಿಲ್ಲ ಕ್ಲೇಶಾ**
**ತಂದೆ ಕದರುಂಡಲಗಿ ಹನುಮಯ್ಯನೊಡೆಯ**
**ಚಂದಾದಿಕೇಶವನ ನೆನೆದವರೆಂದಿಗು ಧನ್ಯರು ॥೩॥**

ಭಾವ– ಶ್ರೀ ಹರಿಯ ಮಹಿಮೆಯನ್ನು ಬಿತ್ತರಿಸುವ ಆಶಯದ ಕೀರ್ತನೆ ಇದು.

ಅರ್ಥ– ಧೊರಿಯ (<ದೊರೆಯ) = ರಾಜನ

೧. ಮದಗಜ = ಮದಿಸಿದ ಆನೆ
ಮುದದಿ = ಸಂತೋಷದಿಂದ
ನಕ್ರ = ಮೊಸಳೆ
ಹದುಳ = ಕ್ಷೇಮ
ಉದರ = ಹೊಟ್ಟೆ

೨. ಆರಣ್ಯದಿ = ಕಾಡಿನಲ್ಲಿ
ಗಾರಾದ = ನಯವಿಹೀನ
ಪಾರ = ದಡ

೩. ಶ್ರೀಶಾ = ಲಕ್ಷ್ಮಿಯ ಗಂಡ (ವಿಷ್ಣು)
ದುರಿತ = ಪಾಪ

* * * *



೧೩೧

## ಮುಖಾರಿ – ಅಟತಾಳ

**ಸಂಸಾರ ಸಾಗರವನುತ್ತರಿಸುವಡೆ**
**ಕಂಸಾರಿ ನಾಮವೊಂದೇ ಸಾಕು ಮರುಳೆ** ॥ಪ॥

**ಯತಿಯಾಗಬೇಡ ನೀ ವೈರಾಗ್ಯವನೆ ಪಿಡಿದು**
**ಸತತ ವ್ರತವ ಮಾಡುವೆನೆಂಬ ಹಮ್ಮು ಬೇಡ**
**ಶೃತಿಸ್ಮೃತಿಯರಿತು ನಡೆವೆನೆಂಬ ಚೇಷ್ಟೆಯು ಬೇಡ**
**ರತಿಪತಿಪಿತನ ನಾಮವೊಂದೆ ಸಾಕು ಮರುಳೆ** ॥೧॥

**ತನುವ ದಂಡಿಸಿ ತುದಿಯ ಕೋಡುಗಲ್ಲಿನ ಮೇಲೆ**
**ವನಿತೆಯನು ಬಿಟ್ಟು ತಪವಿರಲು ಬೇಡ**
**ಅನುದಿನವು ನೀರೊಳಗೆ ಮುಳುಗಿ ನಡುಗಲು ಬೇಡ**
**ವನಜನಾಭನ ನಾಮ ನೆನೆ ಕಂಡ್ಯ ಮರುಳೆ** ॥೨॥

**ತೀರ್ಥಯಾತ್ರೆಯ ಮಾಡಿ ಬಹುವಿಧದಲಿ ಬಳಲಿ ಕೃ**
**ತಾರ್ಥನಾದೆನೆಂಬುವ ಹೆಮ್ಮೆ ಬೇಡ**
**ಪಾರ್ಥಸಾರಥಿ ಕಾಗಿನೆಲೆಯಾದಿಕೇಶವನ**
**ಕೀರ್ತನೆಯ ಮಾಡಿ ಮುಕುತಿಯ ಹೊಂದು ಮರುಳೆ** ॥೩॥

ಭಾವ– ಸಂಸಾರ ಸಾಗರವನ್ನು ದಾಟಲು ಕಂಸಾರಿ ನಾಮಸ್ಮರಣೆಯೇ ನೌಕೆ, ಯಾಂತ್ರಿಕ ಶುಷ್ಕ ಆಚರಣೆಗಳಿಂದ ಸಾಧ್ಯವಿಲ್ಲ ಎಂಬ ದೃಢವಿಶ್ವಾಸ ಈ ಕೀರ್ತನೆಯ ಆಶಯ.

ಅರ್ಥ– ಕಂಸಾರಿ = ಕೃಷ್ಣ
ಶೃತಿ = ವೇದ

ಸ್ಮೃತಿ = ಧರ್ಮಶಾಸ್ತ್ರ
ರತಿಪತಿಪಿತ = ವಿಷ್ಣು
ವನಿತೆ = ಪತ್ನಿ
ವನಜನಾಭ = ವಿಷ್ಣು
ಪಾರ್ಥಸಾರಥಿ = ಕೃಷ್ಣ

* * * *



## ೧೩೨
## ಕಾಂಬೋದಿ – ಝಂಪೆ

**ನಾರಾಯಣೆನು ಮನವೆ ನರಹರಿಯ ನೆನೆ ಮನವೆ**
**ಘೋರ ದುರಿತಗಳ ಬೆದರಿಸಿ ಓಡಿಸುವುದು ॥ಪ॥**

**ಗುರುವಿನುಪದೇಶದಲಿ ಪರಮ ರಹಸ್ಯವನರಿತು**
**ಮರೆಯದಲೆ ಅಲ್ಲಿ ಅಧಿಕಾರಿಯಾಗೊ**
**ತಿರುಮಂತ್ರವನು ಜಪಿಸು ತಿರುಲಾಂಛನವ ಧರಿಸು**
**ಪರಮ ವೈಷ್ಣವರ ಪಂಕ್ತಿಯ ಸೇರು ಮನವೆ ॥೧॥**

**ಕುಲಛಲಂಗಳ ಬಿಟ್ಟು ಬಲು ಪಾಶಗಳ ತರಿದು**
**ಹಲವು ಕೊಂಬೆಗೆ ನೀನು ಹರಿದಾಡದೆ**
**ಸುಲಭದಲಿ ಶ್ರೀಪಾದತೀರ್ಥ ಪ್ರಸಾದವನು**
**ನೆಲೆಗೊಳಿಸಿ ಆತ್ಮನಿಗೆ ನಿತ್ಯ ಸುಖಿಯಾಗೊ ॥೨॥**

**ಶೇಷವಿಶೇಷವೆಂದೆನಿಪ ಪರಮಾರ್ಥದೊಳು**
**ಮೀಸಲಳಿಯದ ಪಾಪರಹಿತನಾಗು**
**ವಾಸಾಧಿಪತಿ ಕಾಗಿನೆಲೆಯಾದಿಕೇಶವನ**
**ದಾಸಾನುದಾಸರಿಗೆ ದಾಸ ನೀನಾಗೊ ॥೩॥**

ಭಾವ– ನಾರಾಯಣನ ನಾಮಸ್ಮರಣೆಯಿಂದ ಪಾಪ ವಿಮೋಚನೆ ಹಾಗೂ ಶಾಂತಿ ಸಂಪಾದನೆ ಎರಡೂ ಸಾಧ್ಯವಾಗುತ್ತದೆ ಎಂಬುದು ಈ ಕೀರ್ತನೆಯ ಆಶಯ.

ಅರ್ಥ– ದುರಿತ = ಪಾಪ

೧. ತಿರುಮಂತ್ರ = (ಓಂ ನಮೋ ನಾರಾಯಣಾಯ)
ತಿರುಲಾಂಛನ = ಊರ್ಧ್ವ ಪುಂಡ್ರ
ಶೇಷವಿಶೇಷ = ಭಗವಂತನಿಗೆ ಮಾತ್ರ ಮೀಸಲಾದ ಎರಡು ಶಕ್ತಿಗಳು

* * *



## ೧೩೩
## ಸಾರಂಗ – ಆಟ

ಮರೆಯದಿರು ಮರೆಯದಿರು ಮನುಜಾ
ನಾರಾಯಣನ ಸ್ಮರಣೆಯನು ಮಾಡು ಮನುಜಾ ॥ಪ॥

ರಂಗನಾಥನು ಇರಲಿಕ್ಕೆ ಜಂಗುಳಿ ದೈವಗಳೇಕೆ
ತುಂಗಭದ್ರೆ ಇರಲಿಕ್ಕೆ ಕೆರೆ ಬಾವಿಯೇಕೆ
ಅಂಗನೆ ಸತಿ ಇರಲಿಕ್ಕೆ ಬಣಗು ಹೆಣ್ಣುಗಳೇಕೆ
ಮಂಗಳಾತ್ಮನಿರಲಿಕ್ಕೆ ಪರದೈವವೇಕೆ ॥೧॥

ಹಾಲು ಹಳ್ಳವಿರಲಿಕ್ಕೆ ವಾಳಿಯವ ತರಲೇಕೆ
ಮೇಲುನಾಮವಿರಲಿಕ್ಕೆ ಕಟುಕು ಇನ್ನೇಕೆ
ಬಾಲಹನುಮನಿರಲಿಕ್ಕೆ ಹುಲುಕಪಿಗಳೇಕೆ
ಒಳ್ಳೆ ತುಳಸಿಯಿರಲಿಕ್ಕೆ ಕಗ್ಗೊರಲೆಯೇಕೆ ॥೨॥

ಚಿನ್ನದ ಗಿರಿಯಿರಲಿಕ್ಕೆ ಕಬ್ಬಿಣದ ಮೊರಡಿಯೇಕೆ
ರನ್ನ ಮಾಣಿಕವಿರಲಿಕ್ಕೆ ಕಾಜಿನ ಹರಳೇಕೆ
ಅನ್ನ ತುಪ್ಪವಿರಲಿಕ್ಕೆ ಮದ್ಯಪಾನಗಳೇಕೆ
ಚೆನ್ನಾದಿಕೇಶವನಿರೆ ಬಿನುಗು ದೈವಗಳೇಕೆ ॥೩॥

ಭಾವ– ಸರ್ವೋತ್ತಮನಾದ ಹರಿಯುನ್ನು ಬಿಟ್ಟು ಕ್ಷುದ್ರದೇವತೆಗಳ ಮೊರೆ ಬೀಳಬೇಕಾದ ಅಗತ್ಯವಿಲ್ಲ ಎಂಬ ಆಶಯವಿದೆ ಈ ಕೀರ್ತನೆಯಲ್ಲಿ

ಅರ್ಥ ೧. ಜಂಗುಳಿ (<ಜಂಗಲಿ) = ಕಾಡು, ಕ್ಷುದ್ರ
ಬಣಗು = ಕ್ಷುದ್ರ

೨. ವಾಳಿಯವ = ಹಸು
ಕಟಕು = ಹಿಟ್ಟುಗಲ್ಲು
ಹುಲುಕಪಿ = ಸಾಮಾನ್ಯ ಕೋತಿ
ಕಗ್ಗೊರಲೆ = ಕರಿ ಕೊರಲೆ (ಕೊರಲೆ = ಸಸ್ಯವಿಶೇಷ)
೩. ಮೊರಡಿ = ಗುಡ್ಡ
ಕಾಜಿನ = ಗಾಜಿನ
ಬಿನುಗು = ಕ್ಷುದ್ರ

* * * *



## ೧೩೪
## ಮೋಹನ – ಆಟ

**ಹೆತ್ತ ತಾಯಿಗಿಂತ ಅತ್ಯಧಿಕ ಮಾಯವುಂಟೆ**
**ಉತ್ತಮ ಅಶ್ವವ ಕತ್ತೆ ಹೋಲುವುದುಂಟೆ ॥ಪ॥**

**ವಿತ್ತವುಳ್ಳವನ ಕುಲ ಎಣಿಸುವುದುಂಟೆ**
**ಸ್ವಾರ್ಥಕೆ ನ್ಯಾಯ ಎಂದಾದರೂ ಉಂಟೆ ॥೧॥**

**ಅತ್ತೆಮನೆ ಸೇರುವಗೆ ಅಭಿಮಾನವುಂಟೆ**
**ಬತ್ತಲೆ ತಿರುಗುವಗೆ ಭಯವು ಇನ್ನುಂಟೆ ॥೨॥**

**ಪೃಥ್ವಿಯೊಳಗೆ ಕಾಗಿನೆಲೆಯಾದಿಕೇಶವಗೆ**
**ಮರ್ತ್ಯದೊಳನ್ಯ ದೇವರು ಸರಿಯುಂಟೆ ॥೩॥**

ಭಾವ– ಹೆತ್ತ ತಾಯಿಗಿಂತ ಮಿಗಿಲು ಯಾರು ಇಲ್ಲ ಎಂಬ ಭಾವದ ಅನಾವರಣ ಇದರ ಗುರಿ; ಅರ್ಥಾತ್ ವಿಷ್ಣುವಿಗೆ ಮಿಗಿಲಾದ ದೇವರಿಲ್ಲ ಎಂಬ ಭಾವದ ಅನಾವರಣ.

ಅರ್ಥ– ಅಶ್ವ = ಕುದುರೆ
ವಿತ್ತ = ಐಶ್ವರ್ಯ
ಪೃಥ್ವಿ = ಪ್ರಪಂಚ
ಮರ್ತ್ಯ = ಭೂಲೋಕ

* * * *

## ೧೩೫
## ಆನಂದಭೈರವಿ – ಆಟ

**ಕಂಡೆ ಶ್ರೀ ಹರಿ ದಿವ್ಯವಾದ– ಬ್ರ**
**ಹ್ಮಾಂಡ ವ್ಯಾಪಕವಾಗಿ ಬೆಳಗುವ ಪಾದ ॥ಪ॥**

**ಸಿರಿಯು ಸೇವಿಪ ವರ ಪಾದ– ನಮ್ಮ**
**ಗರುಡನಿಂದ ಹೊತ್ತು ತಿರುಗುವ ಪಾದ**
**ತರಳ ಧ್ರುವನ ಕಾಯ್ದ ಪಾದ– ಮುನಿ**
**ಸುರರು ನಮಿಸುವ ಲಲಿತ ಪಾದ ॥೧॥**

**ಸರಸಿಜೋದ್ಭವ ವಂದ್ಯ ಪಾದ**
**ಪುರಹರ ನಮಿತ ಪರಿಪೂರ್ಣ ಪಾದ**
**ನರಗೆ ಸಾರಥಿಯಾದ ಪಾದ**
**ಕೌರವ ಮೂಲ ಮುರಿದಿಟ್ಟ ಪಾದ ॥೨॥**

**ದಿವಿಜರಾಜನಿಗೊಲಿದ ಪಾದ**
**ಅವಿವೇಕಿ ದಾನವರ ಕೊಂದ ಪಾದ**
**ಬುವಿ ಗಯಾಪುರ ಶ್ರೇಷ್ಠ ಪಾದ**
**ಭವ ಹಿಂಗಿಪಾದಿಕೇಶವ ಪಾದ ॥೩॥**

ಭಾವ– ಗಯಾ ಕ್ಷೇತ್ರಕ್ಕೆ ಹೋದಾಗ ಶ್ರೀ ಹರಿಯ ಪಾದದರ್ಶನ ಮಾಡಿ ಹಾಡಿದ ಕೀರ್ತನೆ ಇದು ಎಂದು ಗೊತ್ತಾಗುತ್ತದೆ. ಹರಿಮಹಿಮೆಯ ಸ್ತುತಿಯೇ ಇದರ ಆಶಯ.

ಅರ್ಥ– ಸಿರಿ (<ಶ್ರೀ) = ಲಕ್ಷ್ಮೀ
ಸರಸಿಜೋದ್ಭವ = ಬ್ರಹ್ಮ



ಪುರಹರ = ಈಶ್ವರ
ನರ = ಅರ್ಜುನ
ದಿವಿಜರಾಜ = ಇಂದ್ರ
ದಾನವ = ರಾಕ್ಷಸ
ಬುವಿ = ಪ್ರಪಂಚ
ಭವ = ಹುಟ್ಟು ಸಾವಿನ ಸಂಸಾರ

* * * *

೧೩೬
## ಮುಖಾರಿ – ರೂಪಕ

ಏನೆಂದು ನುಡಿವೆ ನಿನ್ನವರಂತೆ ಕೇಡು ಬುದ್ಧಿ ಎನ್ನೊಳಗಿಲ್ಲ– ಗುಣ
ಹೀನರಲ್ಲದ ಈ ನರರ ಪಾಲಿಪ ಬುದ್ಧಿ ನಿನ್ನೊಳಗಿಲ್ಲ ॥ಪ॥

ತರಳ ಪ್ರಹ್ಲಾದನಂದದಿ ನಿನ್ನ ರೂಪನು ಕೆಡಿಸಲಿಲ್ಲ
ನರನಂತೆ ಬಂಡಿ ಬೋವನ ಮಾಡಿ ನಿನ್ನ ದುಡಿಸಲಿಲ್ಲ
ಪರಾಶರನಂತೆ ನದಿಯೊಳಿದ್ದ ಹೆಣ್ಣ ಕೂಡಲಿಲ್ಲ
ಗರುಡನಂದದಿ ನಿನ್ನ ಪೊತ್ತು ತಿರುಗಲಿಲ್ಲ ॥೧॥

ಸನಕಾದಿ ಮುನಿಯಂತೆ ವನದೊಳು ಅನುದಿನ ಚರಿಸಲಿಲ್ಲ
ಬಿನುಗು ಬೇಡತಿಯಂತೆ ಸವಿದುಂಡ ಹಣ್ಣ ತಿನಿಸಲಿಲ್ಲ
ಇನಕುಲ ಕಪಿಯಂತೆ ವಂಚಿಸಿ ವಾಲಿಯ ಕೊಲಿಸಲಿಲ್ಲ
ಘನ ಪಾತಕದಜಮಿಳನಂತೆ ನಾರಗ ಎನ್ನಲಿಲ್ಲ ॥೨॥

ಕದನದೊಳು ವಿಭೀಷಣನಂತೆ ಅಣ್ಣನ ಕೊಲಿಸಲಿಲ್ಲ
ವಿದುರನ ತೆರನಂತೆ ಸದನವ ಮುರಿದು ನಿನ್ನ ಬೆರೆಯಲಿಲ್ಲ
ಮದಗಜದಂತೆ ಮಕರಿಗೆ ಸಿಲ್ಕಿ ಒರಲಲಿಲ್ಲ
ಗದರಿ ಶಿಶುಪಾಲನಂದದಿ ನಿನ್ನನುಪೇಕ್ಷಿಸಿ ಜರೆಯಲಿಲ್ಲ ॥೩॥

ಬುವಿಯೊಳು ಬಲಿಯಂತೆ ದಾನವ ನೀಡಲಿಲ್ಲ
ಭವನಂತೆ ಶ್ಮಶಾನದಿ ಮನೆ ಮಾಡಿ ಸ್ಮರಿಸಲಿಲ್ಲ
ತವ ಪುಂಡರೀಕನಂತೆ ಹಲಗೆಯಿಟ್ಟಿಗೆ ಮೇಲೆ ನಿಲ್ಲಿಸಲಿಲ್ಲ
ಭುವನದೊಡೆಯ ನೆಲೆಯಾದಿಕೇಶವನ ಮರೆಯಲಿಲ್ಲ ॥೪॥

ಭಾವ– ಪಂಡರಾಪುರದ ವಿಠಲನನ್ನು ಕುರಿತ ನಿಂದಾಸ್ತುತಿಯ ಕೀರ್ತನೆಯಿದು.



ಅರ್ಥ– ತರಳ... ಕೆಡಿಸಲಿಲ್ಲ = ಪ್ರಹ್ಲಾದನನ್ನು ರಕ್ಷಿಸಲು ವಿಷ್ಣು ನರಸಿಂಹಾವತಾರ ಎತ್ತಿದುದನ್ನು ತುಂಬ ಧ್ವನಿಪೂರ್ಣವಾಗಿ 'ನಿನ್ನ ರೂಪನು ಕೆಡಿಸಲಿಲ್ಲ' ಎಂದು ಹೇಳುವಲ್ಲಿ ಕನಕದಾಸರ ಕವಿ ಪ್ರತಿಭೆ ಮಿಂಚಿದೆ ಎನ್ನಬೇಕು.
ಬಂಡಿಬೋವ = ರಥದ ಸಾರಥಿ
೨. ಬಿನುಗು = ಸಾಮಾನ್ಯ, ಕನಿಷ್ಠ
ಇನಕುಲ ಕಪಿ = ಸೂರ್ಯವಂಶದ ಸುಗ್ರೀವ
೩. ಕದನ = ಯುದ್ಧ
ಸದನ = ಮನೆ
ಮಕರಿ = ಮೊಸಳೆ
ಒರಲು = ಕೂಗು, ಕಿರುಚು
ಜರೆ = ಹೀಯಾಳಿಸು
೪. ಬುವಿ = ಭೂಮಿ
ಭವ = ಈಶ್ವರ
ತವ = ನಿನ್ನ
ಭುವನ = ಪ್ರಪಂಚ

* * * *

## ೧೩೭
## ವಸಂತ ಭೈರವಿ – ತಾಳ?

ಶೇಷಶಯನನೊಲಿದೀವ ಭಾಗವತ ಜನರಿಗೆ ॥ಪ॥

ಭಯ ಭಕ್ತಿ ಮಂತ್ರಗಿಂತ್ರಗಳ ವಾದ
ಬಯಲು ದೈವಂಗಳವುಪದಿಗಿವುಪದಿ
ಜಯಾಪಜಯವೆಂಬ ಜನ್ಮಪ್ರಕೃತಿ– ತಾಪ
ತ್ರಯಗಳೆಂಬ ತಾಮಸಗೀಮಸ
ವಯಸಿಗೆ ಬಾರದ ಸುಜ್ಞಾನಗಿಜ್ಞಾನ– ನಿ
ರ್ಣಯಗಳಾಗದ ಮಂತ್ರದರ್ಥಗಿರ್ಥ
ನಯದಿಂದ ನರಹರಿಯ ಹೊಗಳುವರಿಗೆ ಶೇಷ
ಶಯನನೊಲಿದೀವ ಭಾಗವತ ಜನರಿಗೆ ॥೧॥

ಕಾಲ ಮೃತ್ಯು ಕಂಟಕಗಳ ಕಷ್ಟಗಿಷ್ಟ– ಸುಖಾನು
ಕೂಲಗಿನುಕೂಲ ದಾರಿದ್ರ್ಯ ದುಕ್ಕಗಿಕ್ಕ
ಮೇಲೆ ಬಹ ನಿಂದೆ ನಿಷ್ಠೂರಗಿಷ್ಠೂರ– ಭೂ
ಪಾಲರಟ್ಟುಳಿ ವಾಕು ವಾದಗೀದ
ಶೀಲ ಸೂತಕ ನೇಮಗೀಮ– ದೇವತಾ ಪ್ರಸ್ತ
ಕಾಲದಲಿ ಮಾಳ್ಪ ಉಪವಾಸಗಿಪವಾಸ
ನಾಲಗೆಯ ಮೇಲೆ ಅನವರತ ಹೊಗಳುವ ಗೋ
ಪಾಲಕೃಷ್ಣ ಭಾಗವತ ಜನರಿಗೆ ॥೨॥

ಹಿಡಿತಬಿಡಿತಗಳೆಂಬ ಹಿಂಚುಮುಂಚುಗಳು ಪರ
ರೊಡಯವೆಯ ಮೇಲಣಾಸೆಗೀಸೆ
ನಡವಳಿಕೆ ದೋಷ ಪ್ರಾಯಗೀಯ– ದ್ವಿಜಗಿತ್ತ ದು
ರ್ನುಡಿಗಳಾಡಿದರೆಂಬ ನೋವುಗೀವು



ಮಡದಿ ಮಕ್ಕಳು ಭೂಮಿಕ್ಷೇತ್ರ ದೋಹ ಮಾನ ಒಂ
ದೆಡರು ಬಂದೀತೆಂಬ ಚಿಂತೆಗಿಂತೆ
ಪೊಡವಿ ಪತಿ ನರರುಲಿಯೆ ಜಿಹ್ವಾಗ್ರ ಮಧ್ಯದಲಿ
ಪಡೆದು ಪಾಡುವ ಭಾಗವತ ಜನರಿಗೆ ॥೩॥

ತೀರ್ಥಯಾತ್ರೆಯ ಗಮನಗಿಮನ– ಮನ್ನಣೆಯವರ
ಕೂರ್ತು ಫಲವೀವ ಕೋರಿಕೆಗೀರಿಕೆ
ಪ್ರಾರ್ಥನೆಯ ಹರಕೆ ಹರಿದಿನಗಿರಿದಿನಗಳೆಂಬ ಬಹು
ವಾರ್ತೆಯುನ್ನತಿಸುವ ದಿವಸಗಿವಸ
ದೂರ್ತ ಪ್ರಭಾವ ನಿಗಳಂ ಮತ್ತೆ ಮೋ
ಕ್ಷಾರ್ಥ ಬೇಕೆಂಬ ಸಂದೇಹಗಿಂದೇಹ
ದೂರ್ತ ಭಂಜನ ಲಕ್ಷ್ಮೀ ಮನೋಹರನ ಸಂ
ಕೀರ್ತಿಸುತಿಹ ಭಾಗವತ ಜನರಿಗೆ ॥೪॥

ಎಲ್ಲಿಹುದು ಸರ್ವಸಂಗ ಪರಿತ್ಯಾಗವು– ಮ
ತ್ತೆಲ್ಲಿಹುದು ಸುಜ್ಞಾನಯೋಗಿಗಳಿಗೆ
ಎಲ್ಲಿಹುದು ಯಾತ್ರಾಚಾರಂಗಳಿತರರಿಗೆ
ಎಲ್ಲಿಹುದು ನಿತ್ಯ ನಿರ್ಮಳ ಹರಿಗೆ
ಎಲ್ಲಿಹುದು ಹರಿಯ ದಾಸಾನುದಾಸರಿಗೆ ಮ
ತ್ತೆಲ್ಲಿಹುದು ಪರಬ್ರಹ್ಮ ಪುತ್ಥಳಿಗೆ
ಬಲ್ಲಿದನು ಕಾಗಿನೆಲೆಯಾದಿಕೇಶವನಲ್ಲ
ದಿಲ್ಲೆನುತಿಹ ಭಾಗವತ ಜನರಿಗೆ ॥೫॥

ಭಾವ– ಭಾಗವತರಿಗೆ (ಭಕ್ತರಿಗೆ) ಭಗವಂತ ಎಲ್ಲ ಅರಿವನ್ನೂ ನೀಡುವನು ಎಂಬ ವಿಶ್ವಾಸ ಈ ಕೀರ್ತನೆಯ ಶ್ವಾಸವಾಗಿದೆ.

ಅರ್ಥ– ಶೇಷಶಯನ = ಹಾವನ್ನೇ ಹಾಸಿಗೆಯಾಗುಳ್ಳ ವಿಷ್ಣು
ಭಾಗವತ = ಭಕ್ತ

೧. ತಾಪತ್ರಯ = ಮೂರು ಬಗೆಯ ತಾಪಗಳು (ಆದಿದೈವಿಕ, ಆದಿಭೌತಿಕ, ಆಧ್ಯಾತ್ಮಿಕ)
ನರಹರಿ = ನರಸಿಂಹ
೨. ದುಕ್ಕ (<ದುಃಖ) = ನೋವಿನ ಅಳಲು
ಭೂಪಾಲ =ರಾಜ
ಅಟ್ಟುಳಿ = ಹಿಂಸೆ
ವಾಕು = ಮಾತು, ನುಡಿ
ಸೂತಕ = ಜನನ ಮರಣಗಳ ಮೈಲಿಗೆ
ಪ್ರಸ್ತ = ಶುಭಸಮಾರಂಭ
ಅನವರತ = ಸದಾ
೩. ಹಿಂಚು ಮುಂಚು = ಹಿಂದು ಮುಂದು
ದ್ವಿಜ = ಬ್ರಾಹ್ಮಣ, ಬ್ರಹ್ಮಜ್ಞಾನಿ
ದೋಹ (<ದ್ರೋಹ) = ಮೋಸ; ಹಾಲು
ಎಡರು = ತೊಂದರೆ
ಪೊಡವಿ = ಭೂಮಿ
ಜಿಹ್ವಾಗ್ರ = ನಾಲಗೆಯ ತುದಿ
೪. ಕೂರ್ತು = ಪ್ರೀತಿಸಿ, ಮೆಚ್ಚಿ
ನಿಗಳ = ಸಂಕೋಲೆ, ಬಂಧನ
ದೂರ್ತ ಭಂಜನ = ದುಷ್ಟಸಂಹಾರ
೫. ಆಚಾರ = ಕಟ್ಟುಪಾಡು, ಸಂಪ್ರದಾಯ
ಪುತ್ಥಳಿ = ಬೊಂಬೆ
ಬಲ್ಲಿದ = ಶಕ್ತ

* * * *



## ೧೩೮
## ಮುಖಾರಿ – ಅಟತಾಳ

ಆವ ಬಲವಿದ್ದರೇನು– ವಾಸು
ದೇವನಾ ಬಲವು ನಿಜವಾಗಿ ಇರದನಕ ॥ಪ॥

ನೊಸಲಗಣ್ಣಿನ ಬಲ ನಾಲ್ಕು ತೆರದ ಬಲ
ತ್ರಿಶೂಲ ಡಮರು ಅಗ್ನಿ ಫಣಿಯ ಬಲವು
ಪಶುಪತಿಯ ರೂಪಿನ ಬಲದ ಶಿಶುಪಾಲನ
ಅಸುರಮರ್ದನ ಕೃಷ್ಣ ಶಿರವ ಛೇದಿಸುವಾಗ ॥೧॥

ಹರನ ಕರುಣದ ಬಲವು ಸುರರ ಗೆಲಿದಾ ಬಲವು
ಪರಮಶಕ್ತಿಯು ತನ್ನ ಭುಜದ ಬಲವು
ಧರೆಯನೆತ್ತಿದ ಬಲವುಳ್ಳ ಹಿರಣ್ಯಾಕ್ಷನ
ಶಿರವ ಹರಿ ವರಾಹನಾಗಿ ತರಿವಾಗ ॥೨॥

ಮುನ್ನ ಗೆಲಿದ ಬಲ ಮುಕ್ಕಣ್ಣ ಹರನ ಬಲ
ಘನ್ನ ಲಂಕಿಣಿಯ ಕಾವಲಿನ ಬಲವು
ತನ್ನ ವಂಶದ ಬಲವುಳ್ಳ ರಾವಣನ ಶಿರವ
ಸನ್ನುತ ರಾಘವ ಪಟ್ಟನೆ ಪಾರಿಸುವಾಗ ॥೩॥

ಲಿಂಗಪೂಜೆಯ ಬಲ ನಿಶ್ಚಿಂತನಾಗಿಹ ಬಲ
ಹಿಂಗದೆ ಹರನು ಬಾಗಿಲ ಕಾಯ್ದ ಬಲವು
ಮುಂಗೈಯ ಶಕ್ತಿ ಸಾವಿರತೋಳ ಬಾಣನ
ತುಂಗ ವಿಕ್ರಮ ಕೃಷ್ಣ ತೋಳ ಖಂಡಿಸುವಾಗ ॥೪॥

**ಈಸುದೇವರ ಬಲಗಳಿದ್ದರೆ ಫಲವೇನು**
**ವಾಸುದೇವನ ಬಲವಿಲ್ಲದವಗೆ**
**ದೇಶಕಧಿಕ ಕಾಗಿನೆಲೆಯಾದಿಕೇಶವನ**
**ಲೇಸಾದಿ ಚರಣಕಮಲದ ಬಲವಿರದನಕ ॥೫॥**

ಭಾವ– ಸರ್ವೋತ್ತಮನೆನಿಸಿದ ವಿಷ್ಣುವಿನ ಬಲದೆದುರು ಉಳಿದ ಬಲ ನಿಷ್ಕ್ರಿಯ ಎಂಬುದು ಈ ಕೀರ್ತನೆಯ ಆಶಯ.

ಅರ್ಥ– ವಾಸುದೇವ = ವಸುದೇವನ ಮಗ ಕೃಷ್ಣ (ವಿಷ್ಣು)

೧. ನೊಸಲಗಣ್ಣಿನ = ಹಣೆಗಣ್ಣಿನ (ಶಿವನ)
ತ್ರಿಶೂಲ = ಮೂರು ಮೊನೆಯುಳ್ಳ ಆಯುಧ
ಫಣಿ = ಸರ್ಪ
ಪಶುಪತಿ = ಶಿವ
ಅಸುರಮರ್ಧನ = ರಾಕ್ಷಸ ಸಂಹಾರಿ
೨. ಹರ = ಶಿವ
ಧರೆ = ಭೂಮಿ
ವರಾಹ = ಹಂದಿ
೩. ಮುಕ್ಕಣ್ಣ = ಮೂರು ಕಣ್ಣುಳ್ಳ ಶಿವ
ಪಾರಿಸು = ಹಾರಿಸು, ಛೇದಿಸು
೪. ತುಂಗ ವಿಕ್ರಮ = ಉನ್ನತ ಬಲಶಾಲಿ
೫. ಈಸು = ಇಷ್ಟು
ಲೇಸಾದ = ಒಳ್ಳೆಯದಾದ

* * * *



## ೧೩೭
## ನಾಟಿ –ಝಂಪೆ

**ನಂಬು ನಾರಾಯಣನ ನಂಬೊ ನರಹರಿಯ**
**ನಂಬಿದಾ ಭಕ್ತರ ಕುಟುಂಬ ಸಾರಥಿಯ ॥ಪ॥**

**ಬಲಿನಂಬಿ ಪಾತಾಳಲೋಕಕರಸಾದನದೆ**
**ಕುಲದ ಪ್ರಹ್ಲಾದನು ನಿಜವ ಕಂಡ**
**ಕಲಿ ವಿಭೀಷಣ ನಂಬಿ ಲಂಕೆಯಲಿ ಸ್ಥಿರವಾದ**
**ಛಲದ ಪಾರ್ಥನು ನಂಬಿ ವಿಶ್ವರೂಪವ ಕಂಡ ॥೧॥**

**ಅಂಬರೀಷನು ನಂಬಿ ವೈಕುಂಠವೇರಿದನು**
**ಹಂಬಲಿಸಿ ಶಶಿಧರನು ಉರಿಯ ಗೆದ್ದ**
**ಕುಂಭಿನೀದೇವಿ ತಾ ಬಂಧನವ ಕಳೆದಳು**
**ಅಂಬುಜಾಕ್ಷಿ ದ್ರೌಪದಿಯು ಮಾನ ಉಳುಹಿಕೊಂಡಳು ॥೨॥**

**ಅತಿ ಭಕುತರಿಗೆ ಮೆಚ್ಚಿ ಗತಿಮೋಕ್ಷವನಿತ್ತನು**
**ಮತಿ ಭ್ರಷ್ಟ ಅಜಮಿಳನ ಉದ್ಧರಿಸಿದನು**
**ಕ್ಷಿತಿಯೊಳಗೆ ಕಾಗಿನೆಲೆಯಾದಿಕೇಶವರಾಯ**
**ಪತಿತ ಪಾವನ ಪರಮಪುರುಷೋತ್ತಮನನು ॥೩॥**

ಭಾವ– ನಂಬಿದವರ ಕೈಬಿಡನು ಎಂಬುದನ್ನು ಹಲವು ದೃಷ್ಟಾಂತಗಳಿಂದ ಮನದಟ್ಟು ಮಾಡಿ ಕೊಡುವ ಆಶಯವನ್ನು ಈ ಕೀರ್ತನೆ ಒಳಗೊಂಡಿದೆ.

ಅರ್ಥ– ಕುಟುಂಬ ಸಾರಥಿ = ಕುಟುಂಬದ ಯೋಗಕ್ಷೇಮ ನೋಡಿಕೊಳ್ಳುವವನು

ಶಶಿಧರ = ಈಶ್ವರ
ಶಶಿಧರ... ಗೆದ್ದ = ಶ್ರೀಹರಿಯನ್ನು ಮೊರೆಹೊಕ್ಕು ಈಶ್ವರ ಬ್ರಹ್ಮ ಕಪಾಲದ ತಾಪದಿಂದ ಬಿಡುಗಡೆಗೊಂಡ ಕಥಾ ಪ್ರಸಂಗ
ಅಂಬುಜಾಕ್ಷಿ = ಕಮಲದಂತೆ ಕಣ್ಣುಳ್ಳ
ಮತಿಭ್ರಷ್ಟ... ಉದ್ಧರಿಸಿದನು = ಅಜಮಿಳ ಅನಾಚಾರಿಯಾಗಿ ಬದುಕಿದರೂ ಸಾಯುವ ವೇಳೆಯಲ್ಲಿ ತನ್ನ ಮಗ ನಾರಾಯಣನನ್ನು 'ನಾರಗ' ಎಂದು ಕರೆದದ್ದರಿಂದ ಅವನಿಗೆ ಸದ್ಗತಿ ನೀಡಿದ ಎಂಬ ಕಥಾಪ್ರಸಂಗ.

* * * *



## ೧೪೦
## ಕಾಂಬೋದಿ – ಝಂಪೆ

ನಿನ್ನ ಮಹಿಮೆಗಿಂಥವರು ಹೋಣೆಯೆ? ॥ಪ॥

ಚಿನ್ಮಯನೆ ಸಕಲಭುವನಾಧಾರವೆಂಬುದನು
ಬಣ್ಣಿಸಲು ಎನ್ನಳವೆ ಪನ್ನಗೇಂದ್ರನು ಹೋಣೆಯೆ? ॥ಅ॥

ಹರಿ ನಿನ್ನ ಪಾದವು ಪವಿತ್ರತರವೆಂಬುದಕೆ
ಧರಣಿ ಬಲಿ ವಿಧಿ ಭವಾಹ್ಲಾದ ಹೋಣೆಯೊ
ಹರಿಯು ನೀನೆಂಬುದಕೆ ಸರಿಯು ಕೌಸ್ತುಭ ರತ್ನ
ವರಪೀತ ವಸನ ಕ್ಷೀರಾಬ್ಧಿ ಹೋಣೆಯೊ
ಶರಣರಿಚ್ಛೆಯಲಿ ನೀನಿದ್ದುದಕೆ ದ್ರೌಪದಿಯು
ಕರಿರಾಜ ಶಂಭು ಅಂಬರೀಷ ಹೋಣೆಯೊ
ಕರುಣೆಯು ಉದಾರಿ ನೀನೆಂಬುದಕೆ ಧ್ರುವರಾಯ
ಮರುತಸುತ ಸಾಂದೀಪ ಹೋಣೆಯೊ ಕೃಷ್ಣ ॥೧॥

ಸುಲಭ ಭಕುತರ ಕಾಯ್ವನೆಂಬುದಕ್ಕೆಲೊ ದೇವ
ಫಲುಗುಣನು ವಿದುರ ಅಕ್ರೂರ ಹೋಣೆಯೊ
ಛಲದಂಕನೆಂಬುದಕೆ ಬಾಣನು ಹಿರಣ್ಯಕನು
ಜಲಧಿ ದಶಮುಖ ಕಾರ್ತವೀರ್ಯ ಹೋಣೆಯೊ
ಒಲಿಸಿ ನಿನ್ನನು ತುತಿಸಿ ಮುಕುತಿಯನು ಪಡೆದುದಕೆ
ಸಲೆ ಶ್ರುತಿಯು ಗಿರಿಜೆ ಅಜಮಿಳನು ಹೋಣೆಯೊ
ನಳಿನಾಕ್ಷ ಸತ್ತ್ವಗುಣ ನಿನಗೆ ಉಂಟೆಂಬುದಕೆ
ಸಲಿಲಜೋದ್ಭವ ಭೃಗುಮುನೀಂದ್ರ ಹೋಣೆಯೊ ॥೨॥

**ಏಕೋದೇವನದ್ವಿತೀಯ ಬ್ರಹ್ಮ ನೀನೆಂಬುದಕೆ**
**ಏಕಾರ್ಣವದಲಿದ್ದ ವಟಪತ್ರ ಹೊಣೆಯೊ**
**ಲೋಕೇಶ ಸರ್ವಂ ವಿಷ್ಣುಮಯಂ ಜಗತ್ತೆಂಬುದಕೆ**
**ವಾಕೇಶ ವಾತ ಸತ್ವಗುಣ ಹೊಣೆಯೊ**
**ಶ್ರೀಕಾಂತ ನೀನಿತ್ತ ವರವು ಸ್ಥಿರವೆಂಬುದಕೆ**
**ನಾಕೇಶಜಿತನ ಪಿತನನುಜ ಹೊಣೆಯೊ**
**ಲೋಕದೊಳು ಕಾಗಿನೆಲೆಯಾದಿಕೇಶವ ಭಕ್ತ**
**ಸಾಕಾರನೆಂಬುದಕೆ ಸಕಲ ಭುವನವೆ ಹೊಣೆಯೊ** ॥೩॥

ಭಾವ– ಕನಕದಾಸರು ಈ ಕೀರ್ತನೆಯಲ್ಲಿ 'ಶ್ರೀಹರಿ ಮಹಿಮೆಯ ಸ್ಥಾಪನೆಗೆ ಯಾರಾದರೂ ಹೊಣೆಗಾರರಿರಬೇಕೆ?' ಎಂದು ಭಗವಂತನನ್ನು ಪ್ರಶ್ನಿಸುತ್ತಲೇ, ಮಹಿಮಾಸ್ಥಾಪನೆಗೆ ಸಾಕ್ಷಿದಾರರನ್ನು ಕಲೆ ಹಾಕಿರುವ ಕೌಶಲದ ಮೋಡಿ ಸಹೃದಯರನ್ನು ಮಂತ್ರ ಮುಗ್ಧರನ್ನಾಗಿಸುತ್ತದೆ. ಪ್ರೌಢ, ಪರಿಪಕ್ವ ಪ್ರತಿಭೆಗೆ ಮಾತ್ರ ಇಂಥ ಗಾರುಡಿಗ ನೈಪುಣ್ಯ ಸಿದ್ಧಿಸಲು ಸಾಧ್ಯ.

ಅರ್ಥ– ಪನ್ನಗೇಂದ್ರ = ಹಾವುಗಳ ಒಡೆಯ (ಆದಿಶೇಷ)

೧. ವಿಧಿ = ಬ್ರಹ್ಮ
ಭವ = ಶಿವ
ಆಹ್ಲಾದ = ಪ್ರಹ್ಲಾದ
ವರಪೀತವಸನ = ಶ್ರೇಷ್ಠವಾದ ಪೀತಾಂಬರ
ಕ್ಷೀರಾಬ್ಧಿ= ಹಾಲಿನ ಸಮುದ್ರ
ಮರುತಸುತ = ಹನುಮಂತ

೨. ಫಲಗುಣ = ಅರ್ಜುನ
ಅಕ್ರೂರ = ಕಂಸನ ಮಂತ್ರಿಗಳಲ್ಲೊಬ್ಬ; ಕೃಷ್ಣ ಭಕ್ತ
ಬಾಣ = ಬಲಿ ಚಕ್ರವರ್ತಿಯ ಮಗ. ಮಹಾಶಿವಭಕ್ತ. ಶಿವನಿಂದ ಸಾವಿರ ತೋಳುಗಳನ್ನು ಪಡೆದಿದ್ದ. ಆದರೆ ಕೃಷ್ಣನ ಮಗ ಅನಿರುದ್ಧ ಬಾಣನ ಮಗಳು ಉಷೆಯನ್ನು ಪ್ರೀತಿಸಿದಾಗ ಸೆರೆಯಲ್ಲಿಟ್ಟ. ಕೃಷ್ಣ ಯುದ್ಧ ಹೂಡಿ ಅವನನ್ನು ಸೋಲಿಸಿ ಅವನ ಸಾವಿರ ತೋಳುಗಳಲ್ಲಿ ಎರಡು ಮಾತ್ರ ಉಳಿಯುವಂತೆ ಮಾಡಿದ.



ಹಿರಣ್ಯಕ = ಹಿರಣ್ಯ ಕಶ್ಯಪ. ಶಿವಭಕ್ತನಾದ ಅವನು ವಿಷ್ಣು ಭಕ್ತನಾದ ಪ್ರಹ್ಲಾದನನ್ನು ಹಿಂಸಿಸತೊಡಗಿದಾಗ ನರಸಿಂಹಾವ ತಾರವೆತ್ತಿ ಸೀಳಿ ಪಲ್ಲಂಡೆ ಮಾಡಿದ.
ಜಲಧಿ = ಸಮುದ್ರ. (ರಾಮಾವತಾರದಲ್ಲಿ ತನ್ನ ಬಾಣದಿಂದ ಸಮುದ್ರವನ್ನು ಬತ್ತಿಸಿದ)
ದಶಮುಖ = ರಾವಣ
ಕಾರ್ತವೀರ್ಯ = ಜಮದಗ್ನಿಯ ಬಳಿಯಿದ್ದ ಕಾಮಧೇನುಗೆ ಕೈಹಾಕಿದ್ದರಿಂದ ಹಾಗೂ ಜಮದಗ್ನಿಯನ್ನು ಕೊಂದಿದ್ದರಿಂದ ಪರಶುರಾಮಾವತಾರದಲ್ಲಿ ಇಡೀ ಕ್ಷತ್ರಿಯವಂಶವನ್ನೇ ನಾಶ ಮಾಡಿದ.
ತುತಿಸಿ (<ಸ್ತುತಿಸಿ) = ಸ್ತೋತ್ರಮಾಡಿ
ಗಿರಿಜೆ = ಪಾರ್ವತಿ
ನಳಿನಾಕ್ಷ = ಕಮಲಾಕ್ಷ
ಸಲಿಲಜೋದ್ಭವ = ಕಮಲದಲ್ಲಿ ಹುಟ್ಟಿದವನು (ಬ್ರಹ್ಮ)
ಭೃಗಮುನಿ = ತ್ರಿಮೂರ್ತಿಗಳಲ್ಲಿ ಶ್ರೇಷ್ಠರಾರು ಎಂಬುದನ್ನು ನಿರ್ಧರಿಸುವ ಜವಾಬ್ದಾರಿ ಇವನಿಗೆ ಸಿಕ್ಕಿದಾಗ, ಶಿವಲೋಕ ಬ್ರಹ್ಮಲೋಕಗಳಿಗೆ ಹೋಗಿ ಅವರ ಅಸಡ್ಡೆಗೆ ಶಾಪ ಕೊಟ್ಟು ವಿಷ್ಣುಲೋಕಕ್ಕೆ ಬಂದಾಗ ವಿಷ್ಣು ನಿದ್ರೆಯಲ್ಲಿದ್ದನು. ಎತ್ತಿ ಎದೆಗೊದ್ದರೂ ವಿಷ್ಣು ಕೋಪ ಮಾಡಿಕೊಳ್ಳದೆ ಭೃಗು ಮುನಿಯನ್ನು ಉಪಚರಿಸಿದ ಎಂಬ ಕಥೆ.

೩. ಅರ್ಣವ = ಸಮುದ್ರ
ಏಕಾರ್ಣವ = ಪ್ರಳಯಕಾಲದಲ್ಲಿನ ಮಹಾಸಾಗರ
ವಟಪತ್ರ = ಆಲದೆಲೆ (ಪ್ರಳಯಕಾಲದಲ್ಲಿ ತೇಲುತ್ತಿರುವ ಆಲದೆಲೆಯ ಮೇಲೆ ಹರಿ ಮಗುವಾಗಿ ಮಲಗಿರುತ್ತಾನೆ ಎಂಬ ಅನೂಚಾನ ನಂಬಿಕೆ.)

ವಾಕೇಶ = ಬ್ರಹ್ಮ
ವಾತ = ವಾಯು
ನಾಕೇಶಜಿತನ = ಇಂದ್ರಜಿತುವಿನ
ನಾಕೇಶಜಿತನ ಪಿತ = ರಾವಣ
ನಾಕೇಶಜಿತನ ಪಿತನನುಜ = ವಿಭೀಷಣ
ಭುವನ = ಪ್ರಪಂಚ

* * * *



## ೧೪೧
## ಮಧ್ಯಮಾವತಿ – ಆಟ

ನಾರಾಯಣಾ ನಮೋ ನಾರಾಯಣಾ ॥ಪ॥

ಘೋರ ಸಂಸಾರ ಭವದೂರ ಋಷಿಜನ ಮನೋ
ಹಾರ ಸಾಕಾರ ಸಿರಿಧರ ರೂಪನೆ ನಮೋ ॥ಅ॥

ಉತ್ತಾನಪಾದನ ಅಣುಗಗೆ ಧ್ರುವ ಪದವಿ
ಜತ್ತಯಿಸಿ ಕೊಟ್ಟೆ ಶ್ರೀ ನಾರಾಯಣಾ
ಉತ್ಕಚದ ಬಾಲೆಯ ಕಡುಲಜ್ಜೆ ಸಭೆಯೊಳಗೆ
ವಿಸ್ತರಿಸಿ ಕಾಯ್ದೆ ಶ್ರೀ ನಾರಾಯಣಾ
ಕತ್ತರಿಸಿ ನೆಗಳು ನುಂಗಿದ ಕುಮಾರಕನ ತಂ
ದಿತ್ತೆ ಮುನಿವರನಿಗೆ ನಾರಾಯಣಾ
ಚಿತ್ತಜಾರಿ ಕೊಲ್ಲಲಂಬರೀಷ ಭೂ
ಪೋತ್ತಮನ ಕಾಯ್ದೆ ಶ್ರೀ ನಾರಾಯಣಾ ॥೧॥

ನಕ್ರಂಗೆ ಸಿಲ್ಕಿ ನಡುನೀರೊಳೊದರುವ ಗಜವ
ಚಕ್ರದಿಂ ಕಾಯ್ದೆ ಶ್ರೀ ನಾರಾಯಣಾ
ಶುಕ್ರನುಪದೇಶವನು ತವೆ ಜರಿದ ವೈಷ್ಣವರ
ಅಕ್ಕರದಿ ಪಾಲಿಸಿದೆ ನಾರಾಯಣಾ
ಶಕ್ರಜಿತುಪಿತ ಸಹೋದರಗೆ ಸ್ಥಿರರಾಜ್ಯವನು
ಉತ್ಕೃಷ್ಟದಿಂ ಕೊಟ್ಟೆ ನಾರಾಯಣಾ
ದುಷ್ಕೃತದಿ ಸುತನ ಪೆಸರ್ಗೊಂಡವನ ಕಾಯ್ದೆಯೊ ತ್ರಿ
ವಿಕ್ರಮಾಂಕಿತ ವೀರ ನಾರಾಯಣಾ ॥೨॥

**ದುರಿತಾಬ್ಧಿ ಕುಂಭಸಂಭವ ದುರಿತಗಿರಿವಜ್ರ**
**ದುರಿತಮದಗಜಸಿಂಹ ನಾರಾಯಣಾ**
**ದುರಿತಾಹಿ ವೈನತೇಯ ದುರಿತ ಮೃಗ ವ್ಯಾಘ್ರನೆ**
**ದುರಿತ ವನದಾವಶಿಖಿ ನಾರಾಯಣಾ**
**ದುರಿತ ಜೀಮೂತಪವನ ದುರಿತಾಂಧಕಾರ ರವಿ**
**ದುರಿತ ಲತಾಲವಿತ್ರ ನಾರಾಯಣಾ**
**ದುರಿತ ಮರ್ದನ ಕಾಗಿನೆಲೆಯಾದಿಕೇಶವನೆ**
**ದುರಿತ ಬಂಧವ ಪರಿದೆ ನಾರಾಯಣಾ** ॥೩॥

ಭಾವ– ಶ್ರೀಹರಿಯ ಮಹಿಮಾತಿಶಯಗಳನ್ನು ಕೊಂಡಾಡುವ ಕೀರ್ತನೆ ಇದು.

ಅರ್ಥ– ಭವದೂರ = ಹುಟ್ಟು ಸಾವಿನ ಜಂಜಾಟದಿಂದ ಹೊರಗಿರುವವನು (ವಿಷ್ಣು)

೧. ಉತ್ತಾನಪಾದನ ಅಣುಗ = ಉತ್ತಾನ ಪಾದನ ಮಗನಾದ ಧ್ರುವ
ಧ್ರುವಪದವಿ = ಸ್ಥಿರಪದವಿ
ಜತ್ತಯಿಸಿ = ಜೋಪಾನ ಮಾಡಿ
ಉತ್ಕಚದ ಬಾಲೆ = ಉದ್ದವಾದ ಕೂದಲುಳ್ಳ ದ್ರೌಪದಿ
ನೆಗಳು = ಮೊಸಳೆ
ಕತ್ತರಿಸಿ ..... ಮುನಿವರನಿಗೆ = ಕೃಷ್ಣನ ಗುರುವಾದ ಸಾಂದೀಪ ಮಹರ್ಷಿಗೆ ಗುರುದಕ್ಷಿಣೆ ಏನು ಕೊಡಲಿ ಎಂದಾಗ, ಆತ ತನ್ನ ಸತ್ತ ಮಗನನ್ನು ತಂದು ಕೊಡು ಎಂದನೆಂತಲೂ, ಕೃಷ್ಣ ತಂದುಕೊಟ್ಟನೆಂತಲೂ ಕಥೆ.
ಚಿತ್ತಜಾರಿ = ಕಾಮನ ವೈರಿಯಾದ ಶಿವ (ಆದರೆ ಪ್ರಸ್ತುತದಲ್ಲಿ ಶಿವನ ಅವತಾರಿಯಾದ ದುರ್ವಾಸ ಮುನಿ ಎಂಬುದು ಗೃಹೀತಾರ್ಥ)

೨. ನಕ್ರ = ಮೊಸಳೆ



ಶುಕ್ರ..... ಪಾಲಿಸಿದೆ = ವಾಮನನಿಗೆ ದಾನ ನೀಡುವಾಗ ಬಲಿಯ ಗುರುವಾದ ಶುಕ್ರಾಚಾರ್ಯರು ಹೇಳಿದ ಬುದ್ಧಿವಾದವನ್ನು ಲಕ್ಷಿಸಿದೆ ದಾನ ಮಾಡಿದ ಬಲಿಯನ್ನು ವಿಷ್ಣು ಪಾತಾಳದ ರಾಜನನ್ನಾಗಿ ಮಾಡಿದ ಎಂಬ ಕಥಾಪ್ರಸಂಗ.
ಶಕ್ರಜಿತು = ಇಂದ್ರನನ್ನು ಜಯಿಸಿದ ಇಂದ್ರಜಿತು
ಶಕ್ರಜಿತುಪಿತ = ಇಂದ್ರಜಿತುವಿನ ತಂದೆ (ರಾವಣ)
ಶಕ್ರಜಿತು ಪಿತ ಸಹೋದರಗೆ = ವಿಭೀಷಣನಿಗೆ
ದುಷ್ಕೃತದಿ ಸುತನ ಪೆಸರ್ಗೊಂಡವನ = ಅಜಮಿಳನ
ತ್ರಿವಿಕ್ರಮಾಂಕಿತ = ತ್ರಿವಿಕ್ರಮ ಎಂಬ ನಾಮವುಳ್ಳ

೩. ದುರಿತಾಬ್ಧಿ = ಪಾಪವೆಂಬ ಸಮುದ್ರ
ಕುಂಭ ಸಂಭವ = ಅಗಸ್ತ್ಯ (ಸಮುದ್ರದಲ್ಲಿದ್ದ ಕಾಲಕೇಯರೆಂಬ ರಾಕ್ಷಸರು ಜನರನ್ನು ಪೀಡಿಸುತ್ತಿದ್ದುದರಿಂದ ಅಗಸ್ತ್ಯ ಋಷಿ ಸಮುದ್ರದ ನೀರನ್ನೆಲ್ಲಾ ಕುಡಿದುಬಿಟ್ಟನೆಂದೂ ಆಗ ದೇವತೆಗಳು ರಾಕ್ಷಸರನ್ನು ಕೊಂದರೆಂದೂ ಕಥೆ)
ದುರಿತ ಗಿರಿ ವಜ್ರ = ಪಾಪವೆಂಬ ಪರ್ವತಕ್ಕೆ ವಜ್ರಾಯುಧ ನಾದಂಥವನು (ವಿಷ್ಣು)
ದುರಿತ ಮದಗಜಸಿಂಹ = ಪಾಪವೆಂಬ ಮದಿಸಿದ ಆನೆಗೆ ಸಿಂಹದೋಪಾದಿ ಇರುವವನು.
ದುರಿತಾಹಿ ವೈನತೇಯ = ಪಾಪವೆಂಬ ಹಾವಿಗೆ ಗರುಡ ನಂತಿರುವವನು
ದುರಿತ ಮೃಗ ವ್ಯಾಘ್ರ = ಪಾಪವೆಂಬ ಜಿಂಕೆಗೆ ಹುಲಿ ಯಂತಿರುವವನು
ದುರಿತವನ ದಾವಶಿಖಿ = ಪಾಪವೆಂಬ ಕಾಡಿಗೆ ಕಾಳ್ಗಿಚ್ಚಿನಂತಿರು ವವನು
ದುರಿತ ಜೀಮೂತ ಪವನ = ಪಾಪವೆಂಬ ಮೋಡಕ್ಕೆ ಗಾಳಿ ಯಂತಿರುವವನು
ದುರಿತಾಂಧಕಾರ ರವಿ = ಪಾಪವೆಂಬ ಕತ್ತಲೆಗೆ ಸೂರ್ಯ ನಂತಿರುವವನು

ದುರಿತಲತಾ ಲವಿತ್ರ = ಪಾಪವೆಂಬ ಬಳ್ಳಿಗೆ ಕುಡುಗೋಲಿ
ನಂತಿರುವವನು
ದುರಿತ ಮರ್ದನ = ಪಾಪಸಂಹಾರ
ದುರಿತ ಬಂಧವ ಪರಿದೆ = ಪಾಪದ ಪಾಶವನ್ನು ಕತ್ತರಿಸಿದೆ.

* * * *



## ೧೪೨
## ಶಂಕರಾಭರಣ – ಅಟತಾಳ

**ಎಂಥ ಕೀರುತಿ ಪೊತ್ತುವೆರಡು ಪಾದ– ಶ್ರೀ**
**ಕಾಂತ ಬಾಡದ ರಂಗ ಕರುಣಿ ದೇವೋತ್ತುಂಗ ॥ಪ॥**

**ಕುಬ್ಜ ಬ್ರಾಹ್ಮಣನಾಗಿ ಕುಂಭಿನಿ ಈರಡಿ ಮಾಡಿ**
**ಹೆಜ್ಜೆಯೊಳಡಗಿಟ್ಟ ಹೆಚ್ಚಿನ ಪಾದ**
**ಅರ್ಜುನನ ಶಿರವ ಕಾಯಲು ಬಾಣದಿಂದ ರಥವ**
**ಗುಜ್ಜೆಯಲೂರಿ ನೆಲಕೊತ್ತಿದ ಪಾದ ॥೧॥**

**ಶಾಪದಿ ಬಹುಕಾಲ ಅಹಲ್ಯೆಯು ಶಿಲೆಯಾಗೆ**
**ಆ ಪ್ರಾಣ ನಿರ್ಮಿಸಿದ ಅಧಿಕ ಪಾದ**
**ಗೋಪಿ ಕಟ್ಟಿದ ಒರಳ ಗೊಲ್ಲಗೇರಿಗೆಳೆಯುತ**
**ಆ ಫಣಿಯ ತಲೆಯ ಮೇಲಾಡಿದ ಪಾದ ॥೨॥**

**ಕುರುರಾಯನೇಳದೆಯೆ ಕುಳಿತ ಸಿಂಹಾಸನದಿ**
**ಉರುಳಿಸಿಬಿಟ್ಟಂತ ಉನ್ನತ ಪಾದ**
**ಮರಕತ ನಗರಿಯ ಬಾಡ ಬಂಕಾಪು**
**ದರಸು ಸಿರಿಯಾದಿಕೇಶವನ ಶ್ರೀಪಾದ ॥೩॥**

ಭಾವ– ಶ್ರೀಹರಿಯ ಪಾದ ಮಹಿಮೆಯ ಗುಣಗಾನ ಈ ಕೀರ್ತನೆಯ ಆಶಯ.

ಅರ್ಥ– ಶ್ರೀಕಾಂತ = ಲಕ್ಷ್ಮಿಯ ಗಂಡ (ವಿಷ್ಣು)
ದೇವೋತ್ತುಂಗ = ದೇವತೆಗಳಲ್ಲಿ ಅಗ್ರಸ್ಥಾನದಲ್ಲಿರುವವನು, ದೇವೋತ್ತಮ.

೧. ಕುಬ್ಜ ಬ್ರಾಹ್ಮಣ = ವಾಮನ
ಕುಂಭಿನಿ = ಭೂಮಿ
ಈರಡಿ = ಎರಡು ಹೆಜ್ಜೆ
ಗುಜ್ಜೆಯಲು (<ಗುಜ್ಜು+ಎಯ್ಯಲು) = ಕುಗ್ಗುವ ಹಾಗೆ, ಕುಸಿಯುವ ಹಾಗೆ (ಗುಜ್ಜು (ಕ್ರಿ) = ಕುಸಿ)

೨. ಗೋಪಿ ಕಟ್ಟಿದ ಒರಳು = ಯಶೋದೆ ಕೃಷ್ಣನ ತುಂಟತನವನ್ನು ಸಹಿಸಲಾರದೆ ಹುರಿಯಿಂದ ಒರಳುಕಲ್ಲಿಗೆ ಕಟ್ಟಿ ಹಾಕಿದ್ದಳೆಂದೂ, ಅದನ್ನು ಎಳೆದುಕೊಂಡೇ ಗೊಲ್ಲಗೇರಿಗೆ ಹೋಗುತ್ತ ಮರ ಉರುಳುವಂತೆ ಮಾಡಿದನೆಂದೂ ಕಥೆ.
ಫಣಿ = ಸರ್ಪ (ಕಾಳಿಂಗ)

೩. ಮರಕತ = ಹಸಿರು ಬಣ್ಣದ ರತ್ನ (ಬಹುಶಃ ಬಾಡಬಂಕಾಪುರದ ಸುತ್ತ ಮುತ್ತ ಭತ್ತ, ಅಡಿಕೆ, ಬಾಳೆ, ತೆಂಗಿನ ತೋಟಗಳ ಹಸಿರು ಇದ್ದದ್ದರಿಂದ ಕನಕದಾಸರು 'ಮರಕತನಗರಿ' ಎಂಬ ಬಾಡಬಂಕಾಪುರಗಳನ್ನು ಹೆಸರಿಸಿರಬಹುದು).

* * * *



## ೧೪೩
## ಸಾವೇರಿ – ಝಂಪೆ

ಆತನೇ ಪರಮಾತ್ಮ ಪರತತ್ತ್ವ ಪ್ರಣವನೆಂ
ದರಿತು ಪೂಜಿಸಬಾರದೆ
ಆತನಾ ಪದತೋಯ ಶಿರಸಾ ವಹಿಸಿ ಪಾನ
ದಿಂದಧಿಕರಾದರು– ಜೀವಿಗಳು ಮನುಜ ॥ಪ॥

ದಾನಮುಖದಲಿ ಬಲಿಯ ಬೇಡಿ ಭುವನವನೊಂದು
ಪದದಿ ಅಳೆದವನಾವನು
ಮಾನದಾನವನ ನಾಲ್ಕೈಯ ಮುಡಿಗಟ್ಟಿವನ
ಮಾನ ಉಳುಹಿದನಾವನು
ಮಾನ ಮರುಳಾದವನ ಮರ್ದಿಸಿದ ಬ್ರಹ್ಮ ಹತ್ಯೆ
ಮಹಿಗೆ ಇಳುಹಿದನಾವನು
ಭಾನು ಮೊದಲಾದಖಿಳ ಬ್ರಹ್ಮಾಂಡಗಳಿಗೊಂದು
ಪಾದ ಹೊದಿಸಿದನಾವನು? ॥೧॥

ಕೊಟ್ಟ ವರಗಳನೆಲ್ಲ ಕೊಡಹಿ ಬಹು ದನುಜರನು
ಕುಟ್ಟಿ ಹಾಕಿದನಾವನು
ದಿಟ್ಟವರ ಕಾಲಾಂಣ(?) ಕಟ್ಟಿ ಮುನಿ ದೈವಗಳ
ಪಟ್ಟದರಸು ಅದಾವನು
ಬೆಟ್ಟದಾತ್ಮಜೆ ಬೆನಕ ಪೆಸರ್ಗೊಂಡು ತನ ನಾಮ
ಗುಟ್ಟಿನಲಿ ನೆನೆಸಿದುದಾವನು
ಗಟ್ಟಿಯಾಗಿ ಮುನಿಪೆಣ್ಗೆ ಕೊಟ್ಟಿದ್ದ ಶಾಪವನು
ಬಿಟ್ಟೋಡಿಸಿದನಾವನು? ॥೨॥

ವೇದಮುಖದವನ ಅತಿ ಮೋದದಲಿ ಪುಟ್ಟಿಸಿದ
ಆದಿಮೂರುತಿ ಆವನು
ನಾದದಲಿ ಅಖಿಳ ಮಹಿ ನಟಿಸುವ ಮಹಾತ್ಮಕ
ನಾದ ಸಾತ್ತ್ವಿಕನಾವನು
ಆದಿಯಲಿ ಜಗಗಳಿರದಂದು ವಟ ಪತ್ರಶಯನ
ನಾದ ಮೂಲವದಾವನು
ಆದಿಕೇಶವ ದೈವವಲ್ಲದಿನ್ನಿಲ್ಲವೆಂದು
ಆಗಮವು ನುಡಿವುದಾವನನು? ॥೩॥

ಭಾವ– ಶ್ರೀ ಹರಿಯ ಹಿರಿಮೆಗರಿಮೆಯ ಮೂಲ ಶಕ್ತಿಯ ಗುಣಗಾನ ಇದರ ಆಶಯ.

ಅರ್ಥ– ತೋಯ = ನೀರು
ಬೆಟ್ಟದಾತ್ಮಜೆ = ಪಾರ್ವತಿ
ವೇದಮುಖ = ಬ್ರಹ್ಮ
ವಟಪತ್ರ = ಆಲದೆಲೆ

* * * *



೧೪೪
## ಆನಂದ ಭೈರವಿ – ಅಟತಾಳ

ಲಾಲಿ ಪಾವನ ಚರಣ ಲಾಲಿ ಅಘಹರಣ
ಲಾಲಿ ವೆಂಕಟರಮಣ ಲಲಿತ ಕಲ್ಯಾಣ ॥ಪ॥

ವನಜಾಕ್ಷ ಮಾಧವ ವಸುದೇವತನಯ
ಸನಕಾದಿ ಮುನಿವಂದ್ಯ ಸಾಧುಜನಪ್ರಿಯ
ಇನಕೋಟಿಶತತೇಜ ಮುನಿಕಲ್ಪಭೂಜ
ಕನಕಾದ್ರಿನಿಲಯ ವೆಂಕಟರಾಯ ಜೀಯ ॥೧॥

ಜಗದೇಕನಾಯಕ ಜಲಜದಳನೇತ್ರ
ಖಗರಾಜವಾಹನ ಕಲ್ಯಾಣ ಚರಿತ
ಸಗರತನಯಾರ್ಚಿತ ಸನಕಾದಿವಿನುತ
ರಘುವಂಶಕುಲತಿಲಕ ರಮಣೀಯ ಗಾತ್ರ ॥೨॥

ನಂದಗೋಪಕುಮಾರ ನವನೀತ ಚೋರ
ಮಂದಾಕಿನೀ ಜನಕ ಮೋಹನಾಕಾರ
ಇಂದುಧರಸತಿ ವಿನುತ ವಿಶ್ವಸಂಚಾರ
ನಂದಗೋವಿಂದ ಮುಚುಕುಂದ ನುತಸಾರ ॥೩॥

ಪಕ್ಷಿವಾಹನ ವಿಷ್ಣು ಪಾಹಿ ಪರಮೇಶ
ರಕ್ಷ ಕೌಸ್ತುಭಭೂಷ ವೈಕುಂಠವಾಸ
ಅಕ್ಷಯ ಫಲದಾತ ಅಖಿಳ ಲೋಕೇಶ
ಲಕ್ಷಣ ಪರಿಪೂರ್ಣ ಲಕ್ಷ್ಮೀಪ್ರಾಣೇಶ ॥೪॥

ಭಾವ– ಜೋಗುಳ ಹಾಡುವ ಅಥವಾ ಲಾಲಿ ಹಾಡುವ ರೀತಿಯಲ್ಲಿ ವಿಷ್ಣುವಿನ ಗುಣಗಾನವಿದೆ– ದೇವಭಾಷೆಯಲ್ಲಿ.

ಅರ್ಥ– ಅಘಹರಣ = ಪಾಪನಿವಾರಣೆ ಮಾಡುವವನು

೧. ವನಜಾಕ್ಷ = ಕಮಲಾಕ್ಷ
ಇನ = ಸೂರ್ಯ
ಭೂಜ = ವೃಕ್ಷ
೨. ಜಲಜ = ಕಮಲ
ಖಗರಾಜ = ಗರುಡ
ಗಾತ್ರ = ಶರೀರ
೩. ನವನೀತ = ಬೆಣ್ಣೆ
ಮಂದಾಕಿನಿ = ಗಂಗೆ
ಇಂದುಧರ = ಈಶ್ವರ
೪. ಪಕ್ಷಿವಾಹನ = ಗರುಡವಾಹನ
ಭೂಷ = ಆಭರಣ, ಅಲಂಕಾರ
೫. ನರಮೃಗಾಕಾರಿ = ನರಸಿಂಹ
ಅಪ್ರಮೇಯ = ಅಳತೆಗೆ ಸಿಗದವನು
ಸಿರಿಧರ = ಲಕ್ಷ್ಮೀಪತಿ
ತಿಮ್ಮರಾಯ (<ತಿರುಮಲರಾಯ) = ವೆಂಕಟೇಶ.

* * * *



೧೪೫
## ಶಂಕರಾಭರಣ – ಅಟತಾಳ

**ಆತನ ಪಾಡುವೆ ಅನವರತ**
**ಪ್ರೀತಿಯಿಂದ ಭಾಗವತರ ಸಲಹುವ ದೇವನೆಂದು** ॥ಪ॥

**ಆವಾತನ ಕೀರ್ತಿಯ ಕಳೆ ಪೆರೆಯು.......**
**.......ಯಿಂದ ಶುಕನಾರ ಪೊಗಳಿದನು?**
**ಆವಗೆ ಬಲೀಂದ್ರನು ಆರ.......**
**..........................ವಿದನಯ್ಯಾ?** ॥೧॥

**ಕಲು ತರುಣಿಯ ಮಾಡಿದ ಪಾದವಾರದು**
**ಜಲಜ ಸಂಭವನ ಪೆತ್ತವನಾರು?**
**ಕಲಿಯುಗದ ಜನರಿಗೆ ಆರ ನಾಮವು ಗತಿ**
**ಇಳೆಯ ಭಾರವನುಳುಹಿದನಾರಯ್ಯ** ॥೨॥

**ದ್ರುಪದನ ಮಗಳ ಅಭಿಮಾನ ರಕ್ಷಕನಾರು**
**ನೃಪ ಧರ್ಮನೆನೆಸಿಕೊಂಡವನಾರು?**
**ಕೃಪೆಯೊಳು ವಿದುರನ ಮನೆಯಲುಂಡವನಾರು**
**ಆಪತ್ಕಾಲದಿ ಗಜೇಂದ್ರನ ಸಲಹಿದರಾರು?** ॥೩॥

**ಅತಿ ಸ್ನೇಹದಿಂದ ಅರ್ಜುನಗೆ ಸಾರಥಿಯಾಗಿ**
**ರಥವ ನಡೆಸಿದವನಾರು?**
**ಪೃಥಿವಿಯಲಿ.........................................**
**............................................................**

ಭಾವ– ಶ್ರೀ ಹರಿಯ ಮಹಾತ್ಮ್ಯವನ್ನು ಕುರಿತದ್ದು; ಗುರುತ್ವಶಕ್ತಿಯಿಲ್ಲದೆ ಸಪ್ಪೆ ಎನಿಸುತ್ತದೆ.

ಅರ್ಥ– ಪೆರೆ = ಚಂದ್ರ
ಕಲು = ಕಲ್ಲು
ಕಲು..... ಪಾದವಾರದು = ಶ್ರೀರಾಮ ಅಹಲ್ಯೆಯ ಶಾಪವಿಮೋಚನೆ ಮಾಡಿದ ಪ್ರಸಂಗ.
ಜಲಜ ಸಂಭವ = ಬ್ರಹ್ಮ
ಇಳೆ = ಭೂಮಿ
ಪೃಥಿವಿ = ಭೂಮಿ

* * * *



## ೧೪೬
## ಕನ್ನಡ – ಝಂಪೆ

ಅಭ್ಯಾಸವನು ಮಾಡಬೇಕು ಬಿಡದೆ... ಶ್ರೀ ಗು
ರುಭ್ಯೋನಮಃ ಎಂಬ ದಿವ್ಯನಾಮಂಗಳು ॥ಪ॥

ಕೇಶವ ನಾರಾಯಣ ಮಾಧವ ಗೋವಿಂದ ಭವ
ನಾಶ ಭಕ್ತ ಹೃದಯ ಕಮಲಾಬ್ಜದ್ಯುಮಣಿ
ದೋಷರಹಿತ ವಿಷ್ಣು ಮದುಸೂದನ ತ್ರಿವಿಕ್ರಮ ಸು
ರೇಶ ಸರ್ವೋತ್ತಮ ದಿವ್ಯ ನಾಮಂಗಳನು ॥೧॥

ವಾಮನ ಶ್ರೀಧರ ಹೃಷಿಕೇಶ........
........ಪುಣ್ಯೋದರ ಹಿರಣ್ಯವಾಸ
ದಾಮೋದರಾಮಲ ಕೌಸ್ತುಭರತ್ನ ವನಮಾಲಿ
ರಾಮ ರಘುಪುಂಗವನ ನಾಮಂಗಳನು ॥೨॥

ಸಂಕರ್ಷಣ ವಾಸುದೇವ ಪ್ರದ್ಯುಮ್ನ ನಿಖಿ
ಳಾಂಕ ಪಂಕೇಜ ಪತ್ರಾಯತಾಕ್ಷ
ಕಿಂಕರ ರಕ್ಷಕ ಅನಿರುದ್ಧ ಪುರುಷೋತ್ತಮ
ಶಂಕರಪ್ರಿಯ ಅಧೋಕ್ಷಜ ನಾಮಂಗಳಂ ॥೩॥

ನಾರಸಿಂಹಾಚ್ಯುತ ಜನಾರ್ದನ ಉಪೇಂದ್ರ
ಸಾರ ಭವಭಯ ಹರ ಕೃಷ್ಣ ವಿಶ್ವೋ
ದ್ಧಾರ................. ವನಮಾಲಿ ಆ
ಮೂರುತಿಯ ನಾಮಂಗಳಂ ॥೪॥

**ಅಸಮಪಟು ಬಲಿಯ ಕಾಳಗದಿ ನುಂಗಿದ ನಿಜಪಾದ**
**ರಸವಿರುದ್ಧ ತಾವಿಗೊದಗುವ ತೆರದೊಳು**
**ಬಿಸಜಾಕ್ಷ ಕಾಗಿನೆಲೆಯಾದಿಕೇಶವ ಎನ್ನ**
**ಅಸುವಳಿದು ಪೋಪಾಗ ಜಿಹ್ವೆಗೊದಗುವಂತೆ ॥೫॥**

ಭಾವ– ವಿಷ್ಣು ನಾಮ ಸ್ಮರಣೆ ತಪ್ಪದೆ ಮಾಡಿದರೆ ಒಳ್ಳೆಯದು ಎಂಬ ಭಾವವಿದೆ.

ಅರ್ಥ– ೧. ದ್ಯುಮಣಿ = ಸೂರ್ಯ
೨. ಅಮಲ = ಪರಿಶುದ್ಧ
ಪುಂಗವ = ಶ್ರೇಷ್ಠ
೩. ಪಂಕೇಜ = ಕಮಲ
ಆಯತಾಕ್ಷ = ವಿಶಾಲ ಕಣ್ಣುಳ್ಳವನು
೪. ಭವ = ಸಂಸಾರ
೫. ಬಿಸಜಾಕ್ಷ = ಕಮಲಾಕ್ಷ (ವಿಷ್ಣು)

* * * *



## ೧೪೭
## ಮಧ್ಯಮಾವತಿ – ರೂಪಕತಾಳ

**ಪಕ್ಷಿ ಬಂದಿದೆ ಗಂಡಭೇರುಂಡ– ತನ್ನ**
**ಕುಕ್ಷಿಯೊಳು ಈರೇಳು ಜಗವನಿಂಬಿಟ್ಟಂಥ ॥ಪ॥**
**ಜಾತಿ ಸೂತಕವೆಂಬ ತ್ರಿಮಲಕ್ಕೆ ಶೂಲದಂತಿಹ ಪರವಸ್ತು॥ಅ॥**

**ತಿರುಮಂತ್ರೋದಯವೆಂಬಾಸನವನೆ ಪೊತ್ತು ತಾ**
**ಹರುಷದಿಂದ ವೈಷ್ಣವರೆಡೆಯ ಪಾಡಿ**
**ಪರವ ತೋರುವೆನೆಂದು ಪಾಕವನೆತ್ತುತಾ**
**ಹರಿಹರ ಬ್ರಹ್ಮಾದಿಗಳ ಪುಟ್ಟಿಸಿದಂಥ ॥೧॥**

**ಅಕಾರ ಉಕಾರ ಮಕಾರ ಸಾಕಾರದಿಂದ**
**ಪರಮ ರೂಪವ ತಾಳಿ**
**ಅಕಾರ ಕ್ರಿಯಾ ನಾಮ ಮಕಾರವನು**
**ಓಂಕಾರದಿಂದ ಪುಟ್ಟಿಸಿದಂಥ ಪರವಸ್ತು ॥೨॥**

**ಪಾಖಂಡವೆಂತೆಂಬ ಪರವಾದಿಗಳನ್ನು**
**ಲೋಕದೊಳು ತಮ್ಮೊಳಗೈಕ್ಯಮಾಡಿ ಜಗ**
**ದೇಕ ಪತಿ ತಿರುವಕೋವಲೂರಿನೊಳಿರುವಂಥಾ**
**ದಿಕೇಶವರಾಯ ತಾನಾದ ಪರವಸ್ತು ॥೩॥**

ಭಾವ– ಗಂಡಭೇರುಂಡ ಪಕ್ಷಿಯ ರೂಪಕದಲ್ಲಿ ಪರವಸ್ತು(ಪರಬ್ರಹ್ಮ)ವನ್ನು ಕಂಡರಿಸಿರುವ ಕೀರ್ತನೆ ಇದು.

ಅರ್ಥ– ಕುಕ್ಷಿ = ಹೊಟ್ಟೆ
ಈರೇಳು = ಹದಿನಾಲ್ಕು

ಇಂಬಿಟ್ಟಂಥ = ಆಶ್ರಯಕೊಟ್ಟಂಥ, ಜಾಗ ಕೊಟ್ಟಂತಹ
ತ್ರಿಮಲ = ಮೂರು ಬಗೆಯ ಕೊಳೆ (ಸಂಚಿತ, ಆಗಾಮಿ, ಪ್ರಾರಬ್ಧ ಎಂಬ ಪಾಪಗಳು)

೧. ತಿರುಮಂತ್ರ = ಶ್ರೀ ಮಂತ್ರ (ಓಂ ನಮೋ ನಾರಾಯಣಾಯ)
ಆಸನ = ಪೀಠ
ಪರವ = ಮೋಕ್ಷವನ್ನು
ಪಾಕ = ಹದವಾದ ದ್ರವ (ಪತಾಕೆಯ = ಧ್ವಜವ ಎಂದಿರಬಹುದೆ?)
೨. ಸಾಕಾರ = ಆಕಾರಸಹಿತವಾದ
೩. ಪಾಖಂಡ = ನಾಸ್ತಿಕ

* * * *



## ೧೪೮
## ಆರಭಿ – ಝಂಪೆ ತಾಳ

ಯಾದವರಾಯ ಬೃಂದಾವನದೊಳು ವೇಣು
ನಾದವ ಮಾಡುತಿರೆ ॥ಪ॥

ರಾಧೆ ಮುಂತಾದ ಗೋಪಿಯರೆಲ್ಲ
ಮಧುಸೂದನ ನಿಮ್ಮನು ಸೇವಿಸುತ್ತಿರೆ ॥ಅ॥

ಸುರರು ಅಂಬರದಿ ಸಂದಣಿಸಿರೆ ಅ
ಪ್ಸರ ಸ್ತ್ರೀಯರು ಮೈಮರೆದಿರೆ
ಕರದಲಿ ಕೊಳಲನೂದುತ ಪಾಡುತ
ಸರಿಗಮ ಪದನಿ ಸ್ವರಗಳ ನುಡಿಸುತ ॥೧॥

ಹರಬ್ರಹ್ಮರು ನಲಿದಾಡುತಿರೆ ತುಂ
ಬುರು ನಾರದರು ಪಾಡುತಿರೆ
ಪರಿಪರಿ ವಿಧದಲಿ ರಾಗವ ನುಡಿಸುತ
ತುರುಹಿಂಡುಗಳ ಕೂಡುತ ಪಾಡುತ ॥೨॥

ತುರು ಹಿಂಡುಗಳ ತರತರದಲಿ ತನ್ನ
ಕರದಿಂ ಬೋಳೈಸಿ ಸಂತೈಸುತ
ಅರವಿಂದ ನಯನ ಆದಿಕೇಶವರಾಯ
ಕರುಗಳ ಸಹಿತ ಗೋವ್ಗಳ ತಿರುಹುತ ॥೩॥

ಭಾವ– ಬೃಂದಾವನದಲ್ಲಿ ಕೊಳಲನೂದುತ್ತ ಗೊವು ಕಾಯುವ ಕೃಷ್ಣನ ಮೋಡಿಗೆ ಸಕಲ ಸೃಷ್ಟಿಯೂ ಮಂತ್ರಮುಗ್ಧವಾಗಿ ಭಾಗವಹಿಸಿದ ಭಾವ ಇದರಲ್ಲಿದೆ.

ಅರ್ಥ– ಯಾದವರಾಯ = ಕೃಷ್ಣ
ವೇಣು = ಕೊಳಲು
ಮಧುಸೂದನ = ಕೃಷ್ಣ
ತುರು = ಗೋವು
ಅರವಿಂದ ನಯನ = ಕಮಲಾಕ್ಷ (ಕೃಷ್ಣ)

* * * *



## ೧೪೯
## ಮುಖಾರಿ – ತ್ರಿಪುಟತಾಳ

ಆರು ಬದುಕಿದರಯ್ಯಾ ಹರಿ ನಿನ್ನ ನಂಬಿ ॥ಪ॥
ತೋರು ಈ ಧರೆಯೊಳಗೆ ಒಬ್ಬರನು ಕಾಣೆ ಕೃಷ್ಣ ॥ಅ॥

ಕಲಹ ಬಾರದ ಮುನ್ನ ಕರ್ಣನೊಬ್ಬನ ಕೊಂದೆ
ಸುಲಭದಲಿ ಕೌರವರ ಮನೆಯ ಮುರಿದೆ
ನೆಲನ ಬೇಡಲು ಪೋಗಿ ಬಲಿಯ ಭೂಮಿಗೆ ತುಳಿದೆ
ಮೊಲೆಯನುಣ್ಣಲು ಪೋಗಿ ಪೂತನಿಯ ಕೊಂದೆ ॥೧॥

ಕರುಳೊಳಗೆ ಕತ್ತರಿಯನಿಟ್ಟೆ ಹಂಸಧ್ವಜನ
ಸರಸದಿಂ ಮಗಳ ಗಂಡನ ಕೊಲಿಸಿದೆ
ಮರುಳಿನಿಂದಲಿ ಪೋಗಿ ಭೃಗುಮುನಿಯ ಕಣ್ಣೊಡೆದೆ
ಅರಿತು ನರಕಾಸುರನ ಹೆಂಡಿರನು ತಂದೆ ॥೨॥

ತಿರಿದುಂಬ ದಾಸರ ಕೈ ಕಪ್ಪ ಕೊಂಬ ಮರ್ಮ
ತಿರುಮಲಾಚಾರ್ಯ ಶ್ರೀ ಗುರುವೆ ಬಲ್ಲ
ವರ ಕಾಗಿನೆಲೆಯಾದಿಕೇಶವನ ಭಜಿಸಿದರೆ
ತಿರಿವೆನೆಂದರು ತಿರುಪೆ ಕೂಳ್ ಪುಟ್ಟದೈ ಕೃಷ್ಣ ॥೩॥

ಭಾವ– ನಿಂದಾಸ್ತುತಿ ರೂಪದ ಕೀರ್ತನೆ ಇದು. ನಿಂದಿಸುತ್ತಲೆ ವಂದಿಸುವ ಈ ತಂತ್ರ ಅನುಭವದಿಂದ ಮಾಗಿದವರಿಗೆ, ಬಾಗಿದವರಿಗೆ ಮಾತ್ರ ಸಾಧ್ಯ.

ಅರ್ಥ– ೧. ಕಲಹ...... ಕೊಂದೆ = ಕುರುಕ್ಷೇತ್ರ ಯುದ್ಧದಲ್ಲಿ ಕರ್ಣನ ಕೊಲೆಯಾಗಲಿಲ್ಲ. ಅದಕ್ಕೂ ಮೊದಲೇ– ಅಂದರೆ ಕೃಷ್ಣ ಕರ್ಣನ

ಹುಟ್ಟಿನ ಗುಟ್ಟನ್ನು ಹೇಳಿದಾಗಲೆ– ಕೊಲೆಯಾಯಿತು ಎಂಬ ಸತ್ಯ ಕನಕದಾಸರು ದಾರ್ಶನಿಕರು ಎಂಬುದನ್ನು ತೋರಿಸುತ್ತದೆ.
ಸುಲಭದಲಿ... ಮುರಿದೆ = ಮೂಲೋತ್ಪಾಟನೆ ಮಾಡಿದೆ; ಮನೆಯ ದೀಪ ಆರಿಸಿದೆ ಎಂಬ ಭಾವ.

ನೆಲನ..... ತುಳಿದೆ = ವಾಮನಾವತಾರದ ಲೀಲೆ

ಮೊಲೆಯ..... ಕೊಂದೆ = ಕೃಷ್ಣನ ಬಾಲಲೀಲೆಯ ಸಂದರ್ಭ.

೨. ಕರುಳೊಳಗೆ... ಹಂಸಧ್ವಜನ = ಅಶ್ವಮೇಧ ಯಾಗದ ಸಂದರ್ಭದಲ್ಲಿ ಹಂಸ್ವಧ್ವಜನ ಮಗನಾದ ಸುಧನ್ವನು ಯುದ್ಧರಂಗಕ್ಕೆ ಬರಲು ತಡವಾದುದಕ್ಕೆ (ಸತಿ ರತಿಕ್ರೀಡೆಗೆ ಬಲಾತ್ಕರಿಸಿದ ಪ್ರಯುಕ್ತ) ಪುರೋಹಿತರ ಮಾತಿನಂತೆ ಮಗನನ್ನು ಕುದಿವ ಎಣ್ಣೆಕೊಪ್ಪರಿಗೆಗೆ ಹಾಕುವಂಥ ಪ್ರಸಂಗ.

ಸರಸದಿಂ..... ಕೊಲಿಸಿದೆ = ರುಕ್ಮಿಣಿಯಲ್ಲಿ ಹುಟ್ಟಿದ ಚಾರುಮತಿ ಎಂಬ ಮಗಳು ಕೃತವರ್ಮನ ಮಗನಾದ ಬಲಿ ಮದುವೆಯಾದ. ಅವನು ಕೃಷ್ಣನಿಂದ ಹತನಾದ ಪ್ರಸಂಗ.

ಮರುಳಿ..... ಕಣ್ಣೊಡೆದೆ = ಭೃಗುಮುನಿ ಮಲಗಿದ್ದ ವಿಷ್ಣು ಎದ್ದು ನಮಿಸಲಿಲ್ಲ ಎಂದು ಎದೆಗೊದ್ದಾಗ, ವಿಷ್ಣು ಏನೂ ತಿಳಿಯದ ಮುಗ್ಧ ಮರುಳಿನಂತೆ ಕಾಲಿಗೆ ನೋವಾಯಿತ' ಎಂದು ಹಿಸುಕುತ್ತಾ, ಅಂಗಾಲಲ್ಲಿದ್ದ ಕಣ್ಣನ್ನು ಚಿವುಟಿದ ಕಥಾ ಸಂದರ್ಭ. ಆ ಕಣ್ಣೇ ಆ ಮುನಿಯ ಕೋಪಕ್ಕೆ ಕಾರಣ ಎಂದು ತಿಳಿದು ಅದನ್ನು ಚಿವುಟಿ ಹಾಕುತ್ತಾನೆ.

ಅರಿತು..... ತಂದೆ = ನರಕಾಸುರ ತನ್ನ ಮಗ ಎಂಬುದನ್ನು ಅರಿತೂ ಸಹ ಅವನನ್ನು ಕೊಂದು ಅವನ ಹೆಂಡಿರನ್ನು ತಂದ ಕಥಾ ಸಂದರ್ಭ.

* * * *



## ೧೫೦
## ಮುಖಾರಿ – ಅಟತಾಳ

**ನೆನೆಯಬಾರದೆ ಮನವೆ ಪರಮಪಾವನನ ॥ಪ॥**

**ಸಾಕಾರದಿಂದ ಸರ್ವರನು ರಕ್ಷಿಪನ**
**ಜೋಕೆಯಲಿ ತನ್ನ ನೆನೆವವರ ಪಾಲಿಪನ– ಆ**
**ನೇಕ ಮೂರುತಿ ಸೂರ್ಯನಾರಾಯಣನ ॥೧॥**

**ಬ್ರಹ್ಮಾಂಡ ಕೋಟಿ ತಿಮಿರವ ಗೆಲುವವನ**
**ಒಮ್ಮೆ ನೆನೆಯಲು ಪ್ರಸನ್ನನಾದವನ**
**ಧರ್ಮಕ್ಕೆ ಸಾಕ್ಷಾತ್ ರೂಪಾಗಿ ತೋರುವನ**
**ನಿರ್ಮಲಾತ್ಮಕವಾಗಿ ಥಳಥಳಿಸುವವನ ॥೨॥**

**ಹರಗೆ ನಯನವಾಗಿ ಮಕುಟವ ಬೆಳಗುವನ**
**ತರುಣಿಯೈವರ ಲಜ್ಜೆ ಕಾಯ್ದವನ**
**ದುರಿತಕೋಟಿಗಳನುದ್ಧರಿಸುವವನ**
**ಪರಬ್ರಹ್ಮ ಕಾಗಿನೆಲೆಯಾದಿಕೇಶವನ**
**ಮರೆಯದೆ ಭಜಿಪರ ಕಾಯುವವನ ॥೩॥**

ಭಾವ– ಸೂರ್ಯನಾರಾಯಣನನ್ನು ಸ್ತುತಿಸುವ ಕೀರ್ತನೆಯಿದು. ಇದರಲ್ಲಿ ಗಮನಿಸಬೇಕಾದದ್ದು ಮೊದಲನೆಯ ನುಡಿಯಲ್ಲಿ ಮೂರು ಸಾಲುಗಳಿದ್ದರೆ, ಎರಡನೆಯ ನುಡಿಯಲ್ಲಿ ನಾಲ್ಕು ಸಾಲುಗಳು ಹಾಗೂ ಮೂರನೆಯ ನುಡಿಯಲ್ಲಿ ಐದು ಸಾಲುಗಳಿವೆ. ಅಂದರೆ ಏರಿಕೆಯ ಕ್ರಮವನ್ನು ಅನುಸರಿಸಲಾಗಿದೆ.

ಅರ್ಥ– ತಿಮಿರ – ಕತ್ತಲು
ನಯನ = ಕಣ್ಣು
ತರುಣಿಯೈವರ = ಐವರ ತರುಣಿ = ಐವರು ಪಾಂಡವರ ಪತ್ನಿಯಾದ ದ್ರೌಪದಿ
ಲಜ್ಜೆ = ಮಾನ
ದುರಿತ = ಪಾಪ

* * * *



## ೧೫೧
## ಕಾಂಬೋದಿ – ಝಂಪೆ ತಾಳ

ಭಜಿಸಿ ಬದುಕೆಲೊ ಮಾನವ ॥ಪ॥
ಅಜಭವೇಂದ್ರಾದಿಗಳು ವಂದಿಸುವ ಪಾದವನು ॥ಅ॥

ಪಾಕಶಾಸನಗೊಲಿದು ಬಲಿಯ ಮೆಟ್ಟಿದ ಪಾದ
ಕಾಕುಶಕಟನ ಒದ್ದು ಕೊಂದ ಪಾದ
ನಾಕಭೀಕರ ಬಕನ ಮೆಟ್ಟಿ ಸೀಳಿದ ಪಾದ
ಲೋಕಪಾವನ ಗಂಗೆ ಪುಟ್ಟಿದ ಪಾದವನು ॥೧॥

ಶಿಲೆಯ ಸತಿಯಳ ಬಂಧವಿಮುಕ್ತಿಗೊಳಿಸಿದ ಪಾದ
ಒಲಿದು ಪಾರ್ಥನ ರಥವನೊತ್ತಿದ ಪಾದ
ಕಲಿ ಸುಯೋಧನನ ಓಲಗದಿ ಕೆಡಹಿದ ಪಾದ
ಕಲಕಿ ಕಾಳಿಂಗನ ಪೆಡೆ ತುಳಿದ ಪಾದವನು ॥೨॥

ಗರುಡ ಶೇಷಾದಿಗಳು ಬಿಡದೆ ಪೊತ್ತಿಹ ಪಾದ
ಧರೆಯನೀರಡಿ ಮಾಡಿ ಅಳೆದ ಪಾದ
ಸಿರಿ ತನ್ನ ತೊಡೆಯಮೇಲಿರಿಸಿ ಒತ್ತುವ ಪಾದ
ವರ ಕಾಗಿನೆಲೆಯಾದಿಕೇಶವನ ಪಾದವನು ॥೩॥

ಭಾವ– ಅಶಾಂತ ಬದುಕಿನಲ್ಲಿ ಶಾಂತಿ ಸಿಕ್ಕಬೇಕಾದರೆ ಭಗದ್ಭಕ್ತಿಯೇ ತಾರಕ ಮಂತ್ರ ಎಂಬ ಆಶಯವನ್ನೊಳಗೊಂಡಿದೆ ಈ ಕೀರ್ತನೆ. ದುರ್ಮಾರ್ಗ ದಿಂದ ಸನ್ಮಾರ್ಗಕ್ಕೆ ಬರಬೇಕಾದರೆ ಮಾನವನಿಗಿರುವ ಮಾರ್ಗ ಇದೊಂದೇ ಎಂದು ನಂಬಿದ ಕನಕದಾಸರು ಜನರಿಗೆ ಕರೆ ಕೊಟ್ಟಿರುವುದು ಕಂಡು ಬರುತ್ತದೆ.

ಅರ್ಥ- ಅಜ = ಬ್ರಹ್ಮ
ಭವ = ಶಿವ
ಇಂದ್ರಾದಿಗಳು = ಇಂದ್ರನೇ ಮೊದಲಾದವರು

೧. ಪಾಕಶಾಸನ =ಇಂದ್ರ
ಬಲಿ = ಪ್ರಹ್ಲಾದನ ಮಗನಾದ ವಿರೋಚನನ ಮಗ. ಮಹಾ ಪರಾಕ್ರಮಿ. ದೇವತೆಗಳೊಂದಿಗೆ ಯುದ್ಧ ಮಾಡಿ ಇಂದ್ರನನ್ನು ಪದಚ್ಯುತೊಳಿಸಿ, ಇಂದ್ರ ಪದವಿಯನ್ನು ಪಡೆಯಲು ಶುಕ್ರಾಚಾರ್ಯರ ನೇತೃತ್ವದಲ್ಲಿ ನೂರು ಅಶ್ವಮೇಧ ಯಾಗಗಳನ್ನು ಮಾಡಲಾರಂಭಿಸಿದ. ಬ್ರಹ್ಮನ ಮೊರೆಯಂತೆ ವಿಷ್ಣು ವಾಮನ ರೂಪದಿಂದ ಮೂರು ಹೆಜ್ಜೆ ಭೂಮಿ ದಾನ ಬೇಡಿ, ಬಲಿಯನ್ನು ಪಾತಾಳಕ್ಕೆ ತುಳಿದ.
ಕಾಕು ಶಕಟ = ಕೆಟ್ಟ ಶಕಟ. (ಕಂಸನ ಪರಿವಾರದ ರಾಕ್ಷಸ. ಬಂಡಿಯ ರೂಪದಲ್ಲಿ ಕೃಷ್ಣನನ್ನು ಕೊಲ್ಲಲು ಬಂದಾಗ ಒದ್ದು ಅವನನ್ನೇ ಕೊಂದ)
ನಾಕಭೀಕರ = ಸ್ವರ್ಗಕ್ಕೆ ಭಯಂಕರನಾದ
ಲೋಕ... ಪಾದ = ವಾಮನಾವತಾರದಲ್ಲಿ ಒಂದನೇ ಪಾದ ಬ್ರಹ್ಮಾಂಡ ಕೊಪ್ಪರಿಗೆಯ ಬಾಯಿಗೆ ತಾಕಿ, ಮುಚ್ಚಳ ಜರುಗಿ, ಅಲ್ಲಿಂದ ಗಂಗೆ ಹರಿಯತೊಡಗಿದಳು ಎಂಬ ಕಥೆ.

೨. ಶಿಲೆಯ... ಪಾದ = ಕಲ್ಲಾಗಿದ್ದ ಅಹಲ್ಯೆಯನ್ನು ಸಜೀವಗೊಳಿಸಿದ ಕಥೆ
ಪಾರ್ಥ = ಅರ್ಜುನ
ಸುಯೋಧನ = ದುರ್ಯೋಧನ

೩. ಶೇಷ = ಸರ್ಪ
ಧರೆಯ... ಪಾದ = ವಾಮನನಾಗಿ ಆಕಾಶಕ್ಕೊಂದು ಪಾದ ಭೂಮಿಗೊಂದು ಪಾದ ಇಟ್ಟವನು ಮೂರನೆಯ ಪಾದದಿಂದ ಬಲಿಯನ್ನು ಪಾತಾಳಕ್ಕೆ ತುಳಿದ ಕಥೆ.

* * * *



## ೧೫೨
## ಪೂರ್ವಿ – ಏಕತಾಳ

ಮಗುವು ಕಾಣಿರಯ್ಯ ಮಾಯದ । ಮಗುವು ಕಾಣಿರಯ್ಯ ॥ಪ॥

ಸುಗುಣ ವಾದಿರಾಜರೆ ಮೂ
ಜಗವನು ತನ್ನುದರದೊಳಿಟ್ಟ ॥ಅ॥

ಮಾಯಾ ಪೂತನಿಯ ಕೊಂದು ಕಾಯವ ಕೆಡಹಿ ಶಕಟನ್ನ
ಸಾಯಬಡಿದು ಧೇನುಕನ ವೃಷಭಾಸುರನ
ನೋಯ ನೋಡದ್ಯಮಳಾರ್ಜುನಂಗೆ ಸಾಯುಜ್ಯವನೆ ಇತ್ತು ತನ್ನ
ತಾಯಿಗೆ ತಾ ಮಣ್ಣ ಮೆದ್ದು ಬಾಯ ಬಿಟ್ಟು ತೋರಿಸಿದ ॥೧॥

ಏಕವರ್ಣವಾಗಿಯೆ ಸಕಲಲೋಕವು ಆಕಾರವಳಿಯೆ
ಏಕಮೇವಾದ್ವಿತೀಯನೆಂಬಾಗಮಕೆ ಸರಿಯಾಗಿ
ಶ್ರೀ ಕರಾಂಬುಜದಿಂ ಪಾದಾಂಗುಲಿಯಂ ಪಿಡಿದು ಬಾಯೊಳಿಟ್ಟು
ಶ್ರೀಕಾಂತ ವಟಪತ್ರದ ಮೇಲೊರಗಿ ಬ್ರಹ್ಮನ ಪಡೆದ ॥೨॥

ಕಡಹದ ಮರನೇರಿ ಸಂಗಡಿಗರೊಡನೆ ಕಾಳಿಂದಿಯ
ಮಡುವ ಧುಮುಕಿ ಧುಮುಕಿ ಕಲಕಿ ಆ ಕಾಳಿಂಗನ
ಪೆಡೆಯ ತುಳಿದು ಜಡಿಯಲವನ ಮಡದಿಯರು ಬೇಡಿಕೊಳ್ಳೆ
ಕಡಲಿಗಟ್ಟಿ ಬಂದು ತಾಯ ತೊಡೆಯ ಮೇಲೆ ಮಲಗಿದಂಥ ॥೩॥

ಕಲ್ಲಿಗಟ್ಟಿ ಗೂಡೆಯಲಿ ಗೋಲಿಯ ಚೀಲವನಿಕ್ಕಿ
ಹಿಲ್ಲಿ ಕಟ್ಟೋಗರ ಕಡಕಲಕ್ಕಳೆಯಾ ತುದಿಯಲಿ
ನಿಲ್ಲಿಸಿ ಪೆಗಲೊಳು ಕೊಂಬು ಕೋಲನೆ ಪಿಡಿದು
ಗೊಲ್ಲರೊಡಗೂಡಿ ನಮ್ಮೆಲ್ಲರ ಗೋವುಗಳ ಕಾಯ್ದ ॥೪॥

**ಶ್ರುತಿತತಿಗೆ ಗೋಚರಿಸದ ಅಚ್ಯುತನು ಭುವನಾದಿಮೂರ್ತಿ**
**ರತಿಪತಿ ಪಿತನು ಶೇಷಾದ್ಯಾರಾಧ್ಯನು**
**ಕ್ಷಿತಿಗಧಿಕ ವೇಲಾಪುರದ ಪತಿ ವೈಕುಂಠ ಕೇಶವನು**
**ಯತಿಯೆ ನೀ ನೋಡಯ್ಯ ಶರಣಾಗತನ ತೊಡೆಯಿಂ ಮಾಯವಾದ ॥೫॥**

ಭಾವ– ಶ್ರೀಕೃಷ್ಣನ ಲೀಲಾವಿನೋದಗಳನ್ನು ಚಿತ್ರಿಸುತ್ತಲೇ, ಕೃಷ್ಣ ಮಗುವಾಗಿ ಕನಕದಾಸರ ತೊಡೆಯ ಮೇಲೆ ವಿರಾಜಿಸಿದ್ದನ್ನು ಹಾಗೂ ಮಾಯ ವಾದುದನ್ನು ಗುರು ಸಮಾನರಾದ ವಾದಿರಾಜ ಯತಿಗಳಿಗೆ ಸಂಬೋಧಿಸಿ ಹೇಳುವುದು ವಿಸ್ಮಯಕಾರಿಯಾಗಿದೆ. ಮಳೂರಿನ ಅಂಬೆಗಾಲು ಕೃಷ್ಣನನ್ನು ಕಂಡು ಹಾಡಿದ ಕೀರ್ತನೆ ಇದು ಎಂದು ಹೇಳಲಾಗುತ್ತಿದೆ. ಒಟ್ಟಿನಲ್ಲಿ ವಾದಿರಾಜರು ಮತ್ತು ಕನಕದಾಸರು ಜೊತೆಯಲ್ಲಿದ್ದಾಗ ಜರುಗಿದ ಪವಾಡಸದೃಶ ವಿಸ್ಮಯಕಾರಕ ಘಟನೆಯ ಅನಾವರಣ ಇದಾಗಿದೆ. ವೇಲಾಪುರ ಎಂದಿರುವುದರಿಂದ ಬೇಲೂರಿನ ಚೆನ್ನಕೇಶವನ ಸನ್ನಿಧಿ ಎನ್ನಬಹುದು.

ಅರ್ಥ– ಕಾಯ = ಶರೀರ
ಶ್ರೀ ಕರಾಂಬುಜ = ಮಂಗಳಕರವಾದ ಹಸ್ತ ಕಮಲ
ಪಾದಾಂಗುಲಿ = ಕಾಲಿನ ಹೆಬ್ಬೆರಳು
ವಟಪತ್ರ = ಆಲದೆಲೆ (ಜಲಪ್ರಳಯವಾದಾಗ ವಿಷ್ಣು ಮಗುವಾಗಿ ಆಲದೆಲೆಯ ಮೇಲೆ ಮಲಗಿ ಹೆಬ್ಬೆರಳನ್ನು ಬಾಯೊಳಗಿಟ್ಟು ಚೀಪುತ್ತಿದ್ದನೆಂಬ ಕಥೆ)
ಕಡಲಿಗಟ್ಟಿ = ಸಮುದ್ರಕ್ಕೆ ದೂಡಿ
ಕಲ್ಲಿ = ಹೆಣಿಗೆಯ ಕಣ್ಣುಗಳನ್ನುಳ್ಳ ಚೀಲ
ಗೂಡೆ = ಬಿದಿರ ದೆಬ್ಬೆಯಿಂದ ಹೆಣೆದ ಹೆಡಗೆ
ಹಿಲ್ಲಿ (<ಹೀಲಿ) = ನವಿಲುಗರಿ
ಕಡಕಲು = ಬೇಲಿಯಲ್ಲಿ ಹಾದುಹೋಗುವಂತೆ ನೆಟ್ಟಿರುವ ಕವೆ
ಅಕ್ಕಳೆ = ಕವೆ

* * * *



## ೧೫೩
## ಆರಭಿ – ಆಟತಾಳ

**ಬಲ್ಲವರೆ ಬಲ್ಲರು ಎಲ್ಲವರು ಅರಿಯರು**
**ಫುಲ್ಲಲೋಚನ ಪರಬ್ರಹ್ಮನೆಂಬುದನು ॥ಪ॥**

**ಅಜಜ್ಞಾನಾಧಿಕ ಬಲ್ಲ ಅನಲಸ್ನೇಹಿತ ಬಲ್ಲ**
**ಗಜ ಚರ್ಮಾಂಬರ ಬಲ್ಲ ಗರುಡ ಬಲ್ಲ**
**ಭುಜಗೇಶ್ವರ ಬಲ್ಲ ಭೂರಿಲೋಚನ ಬಲ್ಲ**
**ತ್ರಿಜಗದಧಿಪತಿ ತ್ರಿವಿಕ್ರಮನೆಂಬುವನು ॥೧॥**

**ಶುಕಯೋಗೀಶ್ವರ ಬಲ್ಲ ಸುಗುಣ ನಾರದ ಬಲ್ಲ**
**ಭಕುತ ಪ್ರಹ್ಲಾದ ಬಲ್ಲ ಬಲಿಯು ಬಲ್ಲ**
**ರುಕುಮಾಂಗದ ಬಲ್ಲ ಋಷಿ ಪರಾಶರ ಬಲ್ಲ**
**ಮಕರಕುಂಡಲಧರ ಪರಾತ್ಪರನೆಂಬುದನು ॥೨॥**

**ಅಂಬರೀಶನು ಬಲ್ಲ ಅತ್ರಿ ಋಷಿಯು ಬಲ್ಲ**
**ಸಂಭ್ರಮದಿ ಮನು ಬಲ್ಲ ಸಹದೇವ ಬಲ್ಲ**
**ಬೆಂಬಿಡದುದ್ಧವ ಬಲ್ಲ ಬೇಡಿದ ಧ್ರುವ ಬಲ್ಲ**
**ಕಂಬು ಚಕ್ರಧರ ಕರ್ಮಹರನೆಂಬುದನು ॥೩॥**

**ವಶಿಷ್ಠ ಮುನಿ ಬಲ್ಲ ವರ ವಿಭೀಷಣ ಬಲ್ಲ**
**ವಿಶಿಖಶಯನ ಬಲ್ಲ ವಿದುರ ಬಲ್ಲ**
**ಋಷಿ ವಾಲ್ಮೀಕಿ ಬಲ್ಲ ರಾಜ ವಿದೇಹ ಬಲ್ಲ**
**ಶಶಿಮಿತ್ರನೇತ್ರ ಸರ್ವೋತ್ತಮನೆಂಬುದನು ॥೪॥**

**ವಾಗಿನಿಂದಕ್ರೂರ ಬಲ್ಲ ವಚನಿ ಶೌನಕ ಬಲ್ಲ**
**ಯೋಗಿ ಕಪಿಲ ಬಲ್ಲ ಭೃಗು ಬಲ್ಲನು**
**ತ್ಯಾಗಿ ಧರ್ಮಜ ಬಲ್ಲ ರಣದೊಳರ್ಜುನ ಬಲ್ಲ**
**ಕಾಗಿನೆಲೆಯಾದಿಕೇಶವ ಕೈವಲ್ಯನೆಂಬುವನು** ॥೫॥

ಭಾವ– ಶ್ರೀ ಹರಿ ಪರಬ್ರಹ್ಮನೆಂಬುದು ಎಲ್ಲರಿಗೂ ಗೊತ್ತಿಲ್ಲ. ಗೊತ್ತಿರುವ ಜ್ಞಾನಿಗಳ ಸಂವೀಕ್ಷಣೆ ನಡೆಸಿ ವಿಷ್ಣು ಸರ್ವೋತ್ತಮತ್ವವನ್ನು ಆ ಮೂಲಕ ಮನದಟ್ಟು ಮಾಡಿಸುವ ಆಶಯದ ಕೀರ್ತನೆ ಇದು.

ಅರ್ಥ– ಫುಲ್ಲಲೋಚನ = ಕಮಲದಂಥ ಕಣ್ಣುಳ್ಳವನು (ವಿಷ್ಣು)

೧. ಅಜ = ಬ್ರಹ್ಮ
ಅನಲಸ್ನೇಹಿತ =ಬೆಂಕಿಯ ಜೊತೆಗಾರ (ವಾಯು)
ಗಜ ಚರ್ಮಾಂಬರ = ಶಿವ (ಗಜಾಸುರನನ್ನು ಕೊಂದಾಗ ಅವನ ಅಪೇಕ್ಷೆಯಂತೆ ಚರ್ಮವನ್ನು ಹೊದ್ದುಕೊಂಡದ್ದರಿಂದ ಗಜಾಸುರನ ಚರ್ಮವನ್ನೇ ಬಟ್ಟೆಯಾಗಿ ಧರಿಸಿದವನು ಎಂಬ ಹೆಸರು ಬಂತು)
ಭುಜಗೇಶ್ವರ = ಸರ್ಪರಾಜ (ಆದಿಶೇಷ)
ಭೂರಿಲೋಚನ = ಸಹಸ್ರ ಕಣ್ಣುಳ್ಳವನು (ಇಂದ್ರ)
ತ್ರಿವಿಕ್ರಮ = ವಿಷ್ಣು

೨. ಮಕರಕುಂಡಲಧರ = ವಿಷ್ಣು
ಪರಾತ್ಪರ = ಪ್ರರಬ್ರಹ್ಮ

೩. ಉದ್ಧವ = ಶ್ರೀಕೃಷ್ಣನ ಮಂತ್ರಿ, ತತ್ತ್ವಜ್ಞಾನಿ
ಕಂಬು = ಶಂಖ
ಕಂಬು ಚಕ್ರಧರ = ವಿಷ್ಣು
ಕರ್ಮಹರ = ಕರ್ಮವನ್ನು ನಾಶ ಮಾಡುವವನು

೪. ವಿಶಿಖಶಯನ = ಬಾಣದ ಮೇಲೆ ಮಲಗಿದವನು (ಭೀಷ್ಮ)
ರಾಜ ವಿದೇಹ = ವಿದೇಹ ದೇಶದ ರಾಜ (ಜನಕ ಮಹಾರಾಜ)
ಶಶಿ ಮಿತ್ರ ನೇತ್ರ = ಚಂದ್ರ ಸೂರ್ಯರನ್ನು ಕಣ್ಣಾಗುಳ್ಳವನು (ವಿಷ್ಣು)



೫. ವಾಗಿನಿಂದ = ಮಾತಿನಿಂದ ಅಂದರೆ ಜ್ಞಾನದಿಂದ
ವಚನಿ = ಮಾತುಗಾರ, ಬುದ್ಧಿವಂತ
ಕೈವಲ್ಯ = ಸರ್ವಶ್ರೇಷ್ಠ, ಮುಕ್ತಿದಾಯಕ

* * * *

## ೧೫೪
# ಮುಖಾರಿ – ಝಂಪೆತಾಳ

**ಬೊಂಬೆಯಾಟವನಾಡಿಸಿದೆ ಮಹಾಭಾರತದ ||ಪ||**
**ಅಂಬುಜಭವಾದಿ ಅಮರರು ನೋಡುತಿರಲು ||ಅ||**

**ಕುರುಭೂಮಿಯೆಂಬ ಪುರವೀಧಿಯನು ರಚಿಸಿ**
**ಮರೆಯ ಮಾಯದ ಐದು ತೆರೆಯ ಹಾಕಿ**
**ಧರಣೀಶರೆಂಬ ನರಪ್ರತಿಮೆಗಳನಳವಡಿಸಿ**
**ನರನ ರಥವಾಜಿಯ ಸೂತ್ರವನು ಪಿಡಿದು ||೧||**

**ಓದುವನು ನಾರದನು ವಾದ್ಯಕಾರನೆ ಶಂಭು**
**ಬಾದರಾಯಣದೇವ ಕಥಾಪ್ರಸಂಗಿ**
**ಮೇದಿನಿಯ ಹೊರೆಗಳೆವ ಮೃತ್ಯುವಿನ ಹಾಸ್ಯರಸ**
**ವೇದನಿಕರಗಳು ಕೈವಾರಿಸುತಿರಲು ||೨||**

**ಹದಿನೆಂಟು ಅಕ್ಷೋಹಿಣಿ ಮಾರ್ಬಲವ ನೆರೆಸಿ**
**ಹದಿನೆಂಟು ದಿನ ಕದನಕೇಳಿಕೆ ನಡೆಸಿ**
**ಅದರೊಳ್ಳೆಯವರನುಳುಹಿ ಅವನಿಭಾರವನಿಳುಹಿ**
**ಮುದದಿ ಬ್ರಹ್ಮಕಪಾಲವನು ತೃಪ್ತಿಗೊಳಿಸಿ ||೩||**

**ಲೋಕದೊಳಗೈದನೆಯ ವೇದವಿದೆಂದೆನಿಸಿ**
**ಪಾಕಶಾಸನ ಸಭೆಯನು ಮೆಚ್ಚಿಸಿ**
**ಈ ಕಥೆಯ ಕೇಳಿದ ಜನಮೇಜಯನ ಪತಿಕರಿಸಿ**
**ತಾ ಕಪಟನಾಟಕದ ಸೂತ್ರಧಾರನೆನಿಸಿ ||೪||**



**ಇಂತೆಸೆವ ಲೀಲಾವಿನೋದ ರಚನೆಗಳಿಂದ ಲೋ**
**ಕಾಂತರಂಗಳ ಸಂಚರಿಸುತ**
**ಸಂತಸದಿ ಭರತ ಸಂಸಾರವನು ಪೊರೆವ ವೇ**
**ದಾಂತನುತ ಕಾಗಿನೆಲೆಯಾದಿಕೇಶವರಾಯ ||೫||**

ಭಾವ– ಮಹಾಭಾರತ ಯುದ್ಧದ ಆಗುಹೋಗುಗಳು ಬೊಂಬೆಯಾಟದ ರೂಪಕದಲ್ಲಿ ನಿರೂಪಗೊಂಡಿರುವ ವಿಧಾನ ವಿಶಿಷ್ಟವಾಗಿದೆ, ನೂತನವಾಗಿದೆ. ಯಾವ ಕಾಲು ಮುರಿದರೂ ಸೊಂಟಕ್ಕೆ ಊನ ಎಂಬ ಜನಪದ ಗಾದೆಯಂತೆ ಯಾವುದೇ ಸಾಹಿತ್ಯ ಕೃತಿ– ದೇಹಕ್ಕೆ ಅನುಭವದ ಕಾಲು ಮುರಿದರೂ ಕಷ್ಟ, ಅಭಿವ್ಯಕ್ತಿಯ ಕಾಲು ಮುರಿದರೂ ಕಷ್ಟ; ಸ್ವಾಸ್ಥ್ಯಕ್ಕೆ ಧಕ್ಕೆ. ಕನಕದಾಸರ ಕೃತಿಗಳಲ್ಲಿ ಅವೆರಡೂ ಭದ್ರ. ಆದ್ದರಿಂದಲೇ ಹರಿದಾಸ ಸಾಹಿತ್ಯದ ಓದುಗರಿಗೆ 'ಇವರನ್ನು ಹೋಲುವ ದಾಸರುಂಟೆ?' ಎಂದು ಥಟ್ಟನೆ ಅನ್ನಿಸುತ್ತದೆ.

ಅರ್ಥ– ವೀಧಿ = ಬೀದಿ
ಅಂಬುಜಭವಾದಿ ಅಮರರು = ಬ್ರಹ್ಮನೇ ಮೊದಲಾದ ದೇವತೆಗಳು
ಧರಣೀಶ = ರಾಜ
ನರಪ್ರತಿಮೆ = ಮಾನವರೆಂಬ ಗೊಂಬೆ
ನರನ = ಅರ್ಜುನನ
ವಾಜಿಯ = ಕುದುರೆಯ

೨. ಓದುವನು = ಹಾಡುವವನು
ವಾದ್ಯಕಾರ = ಮದ್ದಲೆ ಬಾರಿಸುವವನು
ಬಾದರಾಯಣ = ವೇದವ್ಯಾಸ
ಕಥಾಪ್ರಸಂಗಿ = ಕಥೆ ನಡೆಸಿಕೊಡುವ ಭಾಗವತ
ಮೇದಿನಿಯ = ಭೂಮಿಯ
ಹೊರೆಗಳೆವ = ಭಾರ ಇಳಿಸುವ
ನಿಕರ = ಸಮೂಹ
ಕೈವಾರಿಸು = ಹೊಗಳು

೩. ನೆರೆಸಿ = ಕೂಡಿಸಿ, ಕಲೆಹಾಕಿ
ಕೇಳಿಕೆ = ಆಟ
ಕದನಕೇಳಿಕೆ = ಯುದ್ಧದ ನಾಟಕ
ಅವನಿ = ಭೂಮಿ
ಬ್ರಹ್ಮಕಪಾಲ = ಬ್ರಹ್ಮದ ತಲೆಬುರುಡೆ (ಬುದ್ಧಿ)
೪. ಐದನೆಯ ವೇದ = ಭಾರತಃ ಪಂಚಮೋ ವೇದಃ ಎಂಬ ಕೀರ್ತಿಗೊಳಪಡಿಸಿ
ಪಾಕಶಾಸನ = ಇಂದ್ರ
ಪತಿಕರಿಸಿ = ಉಪಚರಿಸಿ
೫. ವೇದಾಂತನುತ = ಉಪನಿಷತ್ತಿನಿಂದ ಸ್ತುತಿಗೊಂಡ

* * * *



೧೫೫
## ಕಾಂಬೋಧಿ – ಆದಿತಾಲ

**ರಾಮ ನಾಮವ ನೆನೆ ಮನವೆ ॥ಪ॥**
**ರಾಮ ಎಂದವನೆ ಧನ್ಯನೆಂದು ಶ್ರುತಿತತಿಗಳು ಪೊಗಳುತಿರೆ ॥ಅ॥**

**ತರುಣತನದಿ ದಿನ ದಾಟಿತು ಸುಮ್ಮನೆ**
**ಶರೀರದೊಳು ಸ್ವರವಾಡುತಲೆ**
**ತರುಣಿ ಸುತರು ಸಂಸಾರವೆಂಬ**
**ಶರಧಿಯೊಳಗೆ ಮುಳುಗಿರದೆ ಮನವೆ ॥೧॥**

**ಬಗೆಬಗೆ ಜನ್ಮದಿ ಜನಿಸಿದೆ ನಾಳೆಗೆ**
**ಸಿಗುವುದೆ ನಿಜದಿಂ ಈ ಸಮಯ**
**ಮುಗುಧನಾಗಿ ಮತ್ತೆ ಜನಿಸಿ ಬರುವುದು**
**ಸೊಗಸು ಕಾಣುವುದೆ ಛಿ ಮನವೆ ॥೨॥**

**ಚಿಂತೆಯನೆಲ್ಲ ಒತ್ತಟ್ಟಿಗೆ ಇಟ್ಟು**
**ಅಂತರಂಗದಲಿ ಧ್ಯಾನಿಸುತ**
**ಕಂತುಪಿತ ಕನಕಾದಿಕೇಶವನ**
**ಎಂತಾದರೂ ನೀ ಬಿಡಬೇಡ ಮನವೆ ॥೩॥**

ಭಾವ– ಪ್ರಾಪಂಚಿಕ ಸುಖದುಃಖಗಳಲ್ಲಿ ವ್ಯರ್ಥವಾಗಿ ಕಾಲ ಕಳೆಯದೆ ಪಾರಮಾರ್ಥಿಕ ನಿತ್ಯಸುಖ ಪ್ರಾಪ್ತಿಗಾಗಿ ರಾಮನ ನಾಮಸ್ಮರಣೆ ಮಾಡು ಎಂಬುದು ಇದರ ಆಶಯವಾಗಿದೆ. ಮನಸ್ಸನ್ನು ಅದಕ್ಕೊಗ್ಗಿಸುವ ಪ್ರಾರಂಭಿಕ ರಚನೆ ಇದು ಎಂದನ್ನಿಸುತ್ತದೆ.

ಅರ್ಥ– ಶ್ರುತಿ – ವೇದ
ತತಿ = ಸಮೂಹ
ಶರಧಿ = ಸಮುದ್ರ
ಮುಗುಧ = ಮುಗ್ಧ
ಕಂತು = ಮನ್ಮಥ
ಕಂತುಪಿತ = ಕೃಷ್ಣ

* * * *



## ೧೫೬
## ಮೂಖಾರಿ – ಝಂಪೆತಾಳ

ಜಗದಂತರ್ಯಾಮಿಯೆಂದೆನುತ ನಿನ್ನ
ನಿಗಮ ಸಾರುವ ಮಾತು ಪುಸಿಯೆ ರಂಗ ॥ಪ॥

ಭೇದವಿಲ್ಲದೆ ಸಕಲ ಜೀವರನು ಪೊತ್ತಿಹಳು
ಭೂದೇವಿಯೆಂಬಾಕೆ ನಿನ್ನ ಅರ್ಧಾಂಗಿಯು
ಸಾಧನವು ಸಕಲ ಸಿರಿ ಸಂಪತ್ತುಗಳನೀವ
ಶ್ರೀದೇವಿ ನಿನ್ನ ಹಿರಿಯರಸಿಯೋ ದೇವ ॥೧॥

ಎಂಬತ್ತು ನಾಲ್ಕು ಲಕ್ಷ ಜೀವರಾಶಿಗಳನ್ನು
ಬೊಂಬೆಗಳ ಮಾಡಿ ಭವರಂಗದಲಿ
ತುಂಬಿ ಕಲೆಗಳನೊತ್ತಿ ನೊಸಲ ಬರೆಹವ ಬರೆವ
ಅಂಬುಜೋದ್ಭವ ನಿನ್ನ ಹೆಮ್ಮಗನು ದೇವ ॥೨॥

ಸಕಲ ಜೀವರಾಶಿಗಳನು ಕಲ್ಪಿಸುವ ಬೀಜ
ಸುಖದಿಂದ ಮಾಯಾಂಗನೆಯರೊಡಲೊಳು
ಅಕ್ಕರದಿ ಪಿಂಡಾಂಡಗಳ ಕಟ್ಟಿ ಬಲಿಸುವ
ಮಕರಾಂಕ ನಿನ್ನ ಕಿರಿಮಗ ದೇವ ॥೩॥

ರಾಮನಾಮವ ಜಪಿಸಿ ಪರಮ ವೈಷ್ಣವನಾಗಿ
ಹೇಮಗಿರಿ ಸನಿಹ ಸಾಹಸ್ರನಾಮ
ಪ್ರೇಮದಲಿ ಜಪಿಸುತ್ತ ವೈರಾಗ್ಯನಿಧಿಯಾದ
ಸೋಮಶೇಖರನು ನಿನ್ನ ಮೊಮ್ಮಗನು ॥೪॥

**ಜಂಗಮ ಸ್ಥಾವರಕಾಧಾರವಾಗಿಹಳು**
**ಭಂಗಪಡುವ ಜನರ ಕರ್ಮವ ಕಳೆವಳು**
**ಹಿಂಗದೆ ಜಗವ ಪಾವನವ ಮಾಡುವ ಪುಣ್ಯ**
**ಗಂಗೆಯೆಂಬಾಕೆ ನಿಮ್ಮಯ ಮಗಳು ದೇವ ॥೫॥**

**ಶುದ್ಧ ಬುದ್ಧಿಯನುಳ್ಳ ಪ್ರದ್ಯುಮ್ನನಾ ಮಗಳು**
**ಶ್ರದ್ಧೆಯೆನಿಸಿಕೊಂಡು ಸೂತ್ರಗೆ ಸತಿಯಾಗಿ**
**ಸದ್ಯೋಜಾತನ ಪಡೆದು ಪ್ರಸಿದ್ಧವಹ ದೇವಿ**
**ಈ ಧರೆಯೊಳು ಪುಟ್ಟಿ ನಿನ್ನ ದಾಸಿಯಾದಳು ॥೬॥**

**ಇಂತು ಅಣುರೇಣು ತೃಣಕಾಷ್ಟದೊಳಗೆಲ್ಲ**
**ಸಂತೋಷವಾಗಿಹುದು ನಿನ್ನ ಸ್ಮರಣೆ**
**ಯಂತ್ರವಾಹಕನೆಂಬ ಬಿರುದು ಸಲುವುದು ನಿನಗೆ**
**ಕಂತುಪಿತ ಕಾಗಿನೆಲೆಯಾದಿಕೇಶವನೆ ॥೭॥**

ಭಾವ– ವಿಷ್ಣುವಿನ ಸರ್ವಾಂತರ್ಯಾಮಿತ್ವವನ್ನು ಸಂಕ್ಷಿಪ್ತವಾಗಿ ಸಂಸ್ಥಾಪಿಸುವ ಕೀರ್ತನೆ ಇದು. ಅವನ ಕರುಳು ಸಂಬಂಧವೇ ಎಲ್ಲ ಕಡೆ ಇರುವುದನ್ನು ಅವನು ವಿಶ್ವಕುಟುಂಬಿಯಾಗಿರುವುದನ್ನು ಕನಕದಾಸರು ಇಲ್ಲಿ ಕಂಡರಿಸಿದ್ದಾರೆ.

ಅರ್ಥ– ಅರ್ಧಾಂಗಿ = ಪತ್ನಿ
ನೊಸಲ = ಹಣೆಯ
ಅಂಬುಜೋದ್ಭವ = ಬ್ರಹ್ಮ
ಹೆಮ್ಮಗ = ಹಿರಿಯ ಮಗ
ಪಿಂಡಾಂಡ = ದೇಹ
ಮಕರಾಂಕ = ಮನ್ಮಥ
ಜಂಗಮ = ಚಲಿಸುವ



ಸ್ಥಾವರ = ಚಲಿಸದ
ಯಂತ್ರವಾಹಕ = ಸೂತ್ರಧಾರ
ಕಂತುಪಿತ = ಮನ್ಮಥನ ತಂದೆಯಾದ ವಿಷ್ಣು

* * * *

## ೧೫೭
## ಮುಖಾರಿ – ಝಂಪೆ ತಾಳ

**ಎಲ್ಲಿರುವನೋ ರಂಗ ಎಂಬ ಸಂಶಯ ಬೇಡ ॥ಪ॥**
**ಎಲ್ಲಿ ಭಕ್ತರು ಕರೆಯೆ ಅಲ್ಲಿ ಬಂದೊದಗುವನು ॥ಅ॥**

**ತರಳ ಪ್ರಹ್ಲಾದ ಹರಿ ವಿಶ್ವಮಯನೆಂದು**
**ಬರೆದೋದಲವನ ಪಿತ ಕೋಪದಿಂದ**
**ಸ್ಥಿರವಾದಡೀ ಕಂಬದಲಿ ತೋರು ತೋರೆನಲು**
**ಭರದಿಂದ ಬರಲದಕೆ ವೈಕುಂಠ ನೆರೆಮನೆಯೆ ॥೧॥**

**ಪಾಪ ಕರ್ಮವ ಮಾಡಿದಜಮಿಳನ ಯಮಭಟರು**
**ಕೋಪದಿಂದೆಳೆಯುತಿರೆ ಭೀತಿಯಿಂದ**
**ತಾ ಪುತ್ರನನು ಕರೆಯೆ ಕೇಳಿ ರಕ್ಷಿಸೆ ಶ್ವೇತ**
**ದ್ವೀಪವೀ ಧರೆಗೆ ಸನಿಹದಲ್ಲಿಹುದೆ ॥೨॥**

**ಕರಿರಾಜನನು ನೆಗಳು ನುಂಗುತಿರೆ ಭಯದಿಂದ**
**ಮೊರೆಯಿಡಲು ಕೇಳಿ ತ್ವರಿತದಲಿ ಬಂದು**
**ಕರುಣದಲಿ ಬಂಧನವ ಪರಿಹರಿಸೆ ಗಜರಾಜ**
**ನಿರುವ ಸರಸಿಯು ಅನಂತಾಸನಕೆ ಮುಮ್ಮನೆಯೆ ॥೩॥**

**ಕುರುಪತಿಯು ದ್ರೌಪದಿಯ ಸೀರೆಯನು ಸೆಳೆಯುತಿರೆ**
**ತರುಣಿ ಹಾ ಕೃಷ್ಣ ಎಂದೊದರೆ ಕೇಳ್ದು**
**ಭರದಿಂದ ಅಕ್ಷಯಾಂಬರವೀಯೆ ಹಸ್ತಿನಾ**
**ಪುರಿಗೆ ದ್ವಾರಾವತಿಯು ಕೂಗಳತೆಯೆ ॥೪॥**



**ಅಣು ಮಹತ್ತಿನೊಳೆಲ್ಲ ಪರಿಪೂರ್ಣ ವಿಶ್ವಮಯ**
**ಗಣನೆಯಿಲ್ಲದ ಮಹಾಮಹಿಮನೆನಿಪ**
**ಘನ ಕೃಪಾನಿಧಿ ಕಾಗಿನೆಲೆಯಾದಿಕೇಶವನು**
**ನೆನೆದವರ ಮನದೊಳಿಹನೆಂಬ ಬಿರುದುಂಟಾಗಿ ॥೫॥**

ಭಾವ– ಸರ್ವಾಂತರ್ಯಾಮಿಯಾದ ಪರಮಾತ್ಮ ಭಕ್ತವತ್ಸಲನೂ ಆದುದರಿಂದ ಅವನು ಭಕ್ತರಾಧೀನ ಎಂಬ ದೃಢ ನಂಬಿಕೆ ಈ ಕೀರ್ತನೆಯ ಆಶಯ. ಅದರ ಕಂಡರಣೆಗೆ ನಾಲ್ಕು ದೃಷ್ಟಾಂತಗಳು ಪುಷ್ಟಿಯನ್ನು ನೀಡಿವೆ.

ಅರ್ಥ– ನೆಗಳು = ಮೊಸಳೆ
ಮುಮ್ಮನೆ = ಮುಂದಿನ ಮನೆ

* * * *

## ೧೫೮
## ಧನ್ಯಾಸಿ – ಆದಿತಾಳ

**ನಿತ್ಯಂ ಪುರುಷೋತ್ತಮಂ ನ್ಯಾಯಂ– ಅಪ ॥ಪ॥**
**ಮೃತ್ಯುಂ ಸಂಕಟ ಹರಣಂ ॥ಅ॥**

**ಪರಲೋಕ ಸಾಧನ ಕರುಣಾಕರಂ**
**ಶರಣಾಗತ ಜನಾಧಾರಂ**
**ಸರಸಿಜಭವ ಭವರೋಗ ಸಂಹಾರಂ**
**ಪುರುಷೋತ್ತಮ ಘೋರ ವಿಹಾರಂ ॥೧॥**

**ಜ್ಞಾನಭಕ್ತಿ ವೈರಾಗ್ಯ ಸುಜಾತಂ**
**ಜನನ ಮರಣ ರಹಿತ ಜಲನಿಧಿ ಪೋತಂ**
**ಘನ ದಾರಿದ್ರ್ಯ ರವಿ ತಾರಾನಾಥಂ**
**ಅನುಶ್ರುತ ವೈಭವ ಮಂಗಲ ಗೀತಂ ॥೨॥**

**ಭೂರಿಭುವನ ಜೀವನಗುಣಂ– ಗಂಭೀರ**
**ಸಾರಪಲ್ಲವ ನಿಕರಾಭರಣಂ**
**ನಾರದ ವಾಲ್ಮೀಕ್ಯಂತಃಕರಣಂ**
**ವರದಾದಿಕೇಶವ ನಾದ ನಿತ್ಯಸ್ಮರಣಂ ॥೩॥**

ಭಾವ– ಪುರುಷೋತ್ತಮನಾದ ಕೃಷ್ಣನ ಗುಣಗಾನವನ್ನು ದೇವಭಾಷೆಯಲ್ಲಿ ಹಿಡಿದಿಡುವ ಪ್ರಯತ್ನ ಈ ಕೀರ್ತನೆಯಲ್ಲಿದೆ. ಕನಕದಾಸರು ಸಂಸ್ಕೃತದಲ್ಲೂ ಪ್ರಭುತ್ವವುಳ್ಳವರು ಎಂಬುದನ್ನು ಮರೆಯುವಂತಿಲ್ಲ.

ಅರ್ಥ– ಕರುಣಾಕರ = ಕರುಣೆಗೆ ಗಣಿಯಂತಿರುವವನು (ಕೃಷ್ಣ
ಸರಸಿಜ ಭವ = ಬ್ರಹ್ಮ



ಭವ = ಹುಟ್ಟುಸಾವಿನ ಸಂಸಾರ
ಜಲನಿಧಿ = ಸಮುದ್ರ
ಪೋತ = ಶಾಬ, ಮರಿ (ಕಂದ)
ತಾರಾನಾಥ = ಚಂದ್ರ
ಅನುಶ್ರುತ = ಪ್ರಸಿದ್ಧ
ಭೂರಿಭುವನ = ವಿಶಾಲ ಪ್ರಪಂಚ
ಪಲ್ಲವನಿಕರ = ಚಿಗುರಿನ ಸಮೂಹ

* * * *

೧೫೫
## ಸಾವೇರಿ – ಝಂಪೆ ತಾಳ

ವಿಶ್ವಲೋಕೇಶ ವಿಶ್ವಲೋಕೇಶ ವಿಮಲೈಕ ಮೂರ್ತಿ
ವಿಶ್ವ ಉದ್ಧರ ವಿಶ್ವ ಜ್ಞಾನರೂಪ
ವಿಶ್ವದೊಳ ಹೊರಗು ನೀನಲ್ಲದೆ ಬೇರೆ
ವಿಶ್ವನಾಟಕ ಸೂತ್ರಧಾರರುಂಟೆ ಹರಿಯೆ ॥ಪ॥

ಮುಕುಟ ಮಂಡೆಯಲಿ ಧ್ರುವಲೋಕ ಭುವನಾವಳಿಯು
ನಿಖಿಲ ಶ್ರುತಿ ನವರತುನ ನಿಟಿಲದಲ್ಲಿ
ಮುಖದಲಿಂದ್ರರು ಅಗ್ನಿ ಸಪ್ತ ಋಷಿಗಳು ದ್ವಿಜರು
ಮುಖದ್ವಾರದುಸುರಿನಲಿ ಶ್ರುತಿ ಮರುತರು
ದೃಕುಯುಗದಿ ರವಿ ಶಶಿಯು ಎವೆಯಲ್ಲಿ ನಕ್ಷತ್ರ
ಪ್ರಕಟ ಜಿಹ್ವೆಯಲಿ ವಾಣಿ ಕರ್ಣದ್ವಯದಿ
ವಿಕಟ ಕಿವಿಯಲಿ ಅಶ್ವಿನಿದೇವತೆಗಳೆಲ್ಲ
ಸಕಲ ಧರ್ಮವ ಪಡೆದೆಯೆಲೊ ಹರಿಯೆ ॥೧॥

ಸ್ಕಂಧದಲಿ ಅತಿಥಿಗಳು ವಿದ್ಯಾತತಿಗಳು ಮಹಾ
ಚಂದದರಸುಗಳು ಭುಜ ತೋಳಿನಲ್ಲಿ
ಮುಂದುರದಿ ವಿಷ್ಣು ಹರ ಬ್ರಹ್ಮ ಸಹಿತುದರದಲಿ
ಹಿಂದಿನ ಮಗ್ಗುಲಲಿ ಮನುಮುನಿಗಳು
ಮುಂದಿನ ಮಗ್ಗುಲಲಿ ಗಿರಿನಿಚಯಂಗಳು
ಸಂಧಿಯಲಿ ಮಕರಂದ ದೇವತೆಗಳು
ಮುಂದೊರೆದಿಹ ರೋಮಕೂಪದಗ್ರದಳತೆಯು
ವೃಂದಗಳ ಶೋಭಿಪ ರೀತಿಯ ಪಡೆದೆಯೆಲೊ ಹರಿಯೆ ॥೨॥



ಬೆನ್ನಿನಲಿ ವಸುನಿಕರ ಸ್ಮರನು ಲಿಂಗದಲಿ ಈ ಭು
ವನವೆಲ್ಲವು ಚೆಲುವ ನಾಭಿಯಲ್ಲಿ
ಮುನ್ನ ಕೈಯಲಿ ವಿಶ್ವದೇವತೆಗಳು ವೈಶ್ಯ
ಉನ್ನತ ಜಾನುವಿನ ಸಕ್ತಿಯಲಿ
ಭಿನ್ನ ನದಿಗಳು ಸನ್ಮೋಹನ ಶಕ್ತಿ ಪ್ರ
ಸನ್ನ ಪಾದಾಬ್ಜದಿಂ ಶೂದ್ರರು
ನಿನ್ನ ಅವಯವದಲ್ಲಿ ಸಕಲವಂ ಪಡೆದ ಪ್ರ
ಸನ್ನ ಕಾಗಿನೆಲೆಯಾದಿಕೇಶವರಾಯ ॥೩॥

ಭಾವ– ವಿಷ್ಣುವಿನ ಅಂಗಾಂಗಗಳಲ್ಲಿ ವಿಶ್ವವೆಲ್ಲವೂ ಅಡಗಿದೆ ಎಂಬುದು ಇಲ್ಲಿ ಉಕ್ತವಾಗಿದೆ– ಒಂದು ರೀತಿಯಲ್ಲಿ ಬುಟ್ಟಿಯಲ್ಲಿ ವಸ್ತುಗಳನ್ನು ಗಿಡದಂತೆ

ಅರ್ಥ– ಭುವನಾವಳಿ = ಲೋಕ ಸಮೂಹ
ನಿಟಿಲ = ಹಣೆ
ದೃಕುಯುಗ =ದೃಷ್ಟಿದ್ವಯ
ಜಿಹ್ವೆ = ನಾಲಗೆ
ಸ್ಕಂಧ = ಹೆಗಲು
ಉದರ = ಹೊಟ್ಟೆ
ಉರ = ಎದೆ
ಸ್ಮರ = ಮನ್ಮಥ
ಜಾನು = ತೊಡೆ
ಸಕ್ತಿ = ಹೊಂದಿಕೆ

* * * *

## ೧೬೦
## ಆರಭಿ – ಅಟತಾಳ

ನಾರಾಯಣ ನಿನ್ನ ನಾಮವೊಂದಿರುತಿರೆ
ಬೇರೊಂದು ನಾಮವಿನ್ಯಾಕಯ್ಯ ॥ಪ॥

ನೆಟ್ಟನೆ ದಾರಿಯು ಬಟ್ಟೆಯೊಳಿರುತಿರೆ
ಬೆಟ್ಟವ ಬಳಸಲಿನ್ನ್ಯಾಕಯ್ಯ
ಅಷ್ಟೈಶ್ವರ್ಯದ ಮೃಷ್ಟಾನ್ನವಿರುತಿರೆ
ಬಿಟ್ಟಿಕೂಳನು ತಿನ್ನಲ್ಯಾಕಯ್ಯ ॥೧॥

ಪರುಶದ ಪಾಳಗಳಿರುತಿರೆ ಬೀದಿ
ಜರಿಗಲ್ಲ ತೊಳೆಯಲಿನ್ಯಾಕಯ್ಯ
ಹರಿವಾಣದೊಳಗಮೃತಾನ್ನವಿರುತಿರೆ
ತಿರುಪೆಕೂಳನು ತಿನ್ನಲ್ಯಾಕಯ್ಯ ॥೨॥

ಬೆಲ್ಲವು ಕರದೊಳಗಿರುತಿರೆ ಕಾಡ
ಕಲ್ಲನು ಕಡಿಯಲಿನ್ಯಾಕಯ್ಯ
ಬಲ್ಲಿದ ನೆಲೆಯಾದಿಕೇಶವನಿರುತಿರೆ
ಚಿಲ್ಲರೆ ದೈವದ ಹಂಬಲ್ಯಾಕಯ್ಯ ॥೩॥

ಭಾವ– ಜಗನ್ನಿಯಾಮಕನಾದ ನಾರಾಯಣನ ನಾಮವಿರುವಾಗ ಚಿಲ್ಲರೆ ದೈವಗಳ ನಾಮಸ್ಮರಣೆ ಅನಗತ್ಯ ಹಾಗೂ ವ್ಯರ್ಥ ಎಂಬುದು ಈ ಕೀರ್ತನೆಯ ಆಶಯ.

ಅರ್ಥ– ಬಟ್ಟೆ < ಭಾಟಾ = ರಾಜಮಾರ್ಗ, ಹೆದ್ದಾರಿ
ಬಿಟ್ಟಿಕೂಳು = ಪುಕ್ಕಟ್ಟೆ ಸಿಗುವ ಅನ್ನ



ಪರುಶ = ಸ್ಪರ್ಶಶಿಲೆ (ಮುಟ್ಟಿದ್ದನ್ನೆಲ್ಲ ಚಿನ್ನವಾಗಿಸುವಂಥದು)
ಪಾಳ = ಸೀಳುಗಳು, ತುಂಡುಗಳು (ಉದಾಹರಣೆಗೆ ಸೌದೆ ಪಾಳ ಎಂಬ ಮಾತನ್ನು ಗಮನಿಸಿ)
ಜರಿಗಲ್ಲು = ಹಿಟ್ಟುಗಲ್ಲು (ಗಟ್ಟಿಯಿರದ, ಹಿಸಿದುಕೊಂಡು ಪುಡಿಯಾಗುವ ಕಲ್ಲು)
ಬಲ್ಲಿದ = ಶಕ್ತ
ಚಿಲ್ಲರೆ = ಕ್ಷುದ್ರ, ಯಃಕಶ್ಚಿತ್

* * * *

## ೧೬೧
## ಕಾಂಬೋದಿ – ಝಂಪೆ ತಾಳ

**ಆರು ಬಲ್ಲರು ಹರಿಹರಾದಿಗಳ ಮಹಿಮೆಯನು ॥ಪ॥**
**ವಾರಿಜೋದ್ಭವ ಸುರೇಂದ್ರಾದಿಗಳಿಗಳವಲ್ಲ ॥ಅ॥**

**ಪೌರತ್ರಯವ ಗೆಲ್ವ ಸಮಯದಲಿ ತಪ ಮಾಡಿ**
**ನಾರಾಯಣಾಸ್ತ್ರವನು ಪಡೆದನೀತ**
**ಗೌರೀಮನೋಹರನ ಘನತರಾರ್ಚನೆಗೈದು**
**ಚಾರುತರ ಚಕ್ರವನು ಪಡೆದನಾ ಶೌರಿ ॥೧॥**

**ಬಲಿ ಚಕ್ರವರ್ತಿ ಭಕ್ತಿಗೆ ಮೆಚ್ಚಿ ಅವನ ಬಾ**
**ಗಿಲ ಕಾಯ್ದನಚ್ಯುತನು ಅನುಗಾಲದಿ**
**ಬಲು ಭುಜನು ಬಾಣಾಸುರನ ಗೃಹ ದ್ವಾರವನು**
**ಬಳಸಿ ಕಾಯ್ದನು ಹರನು ವರವ ತಾನಿತ್ತು ॥೨॥**

**ಭೋಗಿಶಯನನು ಆಗಿ ಭೋಗಿಭೂಷಣನಾಗಿ**
**ವಾಗೀಶನಾಗಿ ಸೃಷ್ಟಿ ಸ್ಥಿತಿಲಯ**
**ಕ್ಕಾಗು ಕಾರಣ ಕಾರ್ಯ ಕರ್ಮಾದಿ ರೂಪಕ್ಕೆ**
**ಕಾಗಿನೆಲೆಯಾದಿಕೇಶವನ ಮಹಿಮೆಯನು ॥೩॥**

ಭಾವ– ಹರಿಹರರು ಬೇರೆಯಲ್ಲ, ಪರಬ್ರಹ್ಮನ ಅವಳಿ ಜವಳಿ ಮಕ್ಕಳು ಎಂಬುದನ್ನು ಈ ಕೀರ್ತನೆ ಧ್ವನಿಸುತ್ತದೆ.

ಅರ್ಥ– ವಾರಿಜೋದ್ಭವ = ಕಮಲದಲ್ಲಿ ಹುಟ್ಟಿದವನು (ಬ್ರಹ್ಮ)



೧. ಪೌರತ್ರಯವ... ಪಡೆದ ನೀತ = ಹರಿಯಿಂದ ನಾರಾಯಣಾಸ್ತ್ರ ಪಡೆಯಲು ಶಿವನು ತಪಸ್ಸು ಮಾಡಿದ್ದು ಏಕೆಂದರೆ ಪೌರತ್ರಯವನ್ನು ನಾಶ ಮಾಡಲು (ಭೂಮಿಯನ್ನು ರಥವನ್ನಾಗಿ, ನಾಲ್ಕು ವೇದಗಳನ್ನು ನಾಲ್ಕು ಕುದುರೆಗಳನ್ನಾಗಿ, ಬ್ರಹ್ಮನನ್ನು ಸಾರಥಿಯನ್ನಾಗಿ, ಸಮುದ್ರವನ್ನು ಬತ್ತಳಿಕೆಯನ್ನಾಗಿ, ಆದಿಶೇಷನನ್ನು ಬಿಲ್ಲಿನ ಹೆದೆಯನ್ನಾಗಿ, ಮಂದರ ಪರ್ವತವನ್ನು ಬಿಲ್ಲನ್ನಾಗಿ, ವಿಷ್ಣುವನ್ನೇ ಬಾಣವನ್ನಾಗಿ ಮಾಡಿಕೊಂಡು ತ್ರಿಪುರಗಳನ್ನು ಸುಟ್ಟನೆಂಬ ಕಥೆ ಭಾರತದಲ್ಲಿದೆ)
ಗೌರೀ... ಪಡೆದನಾ ಶೌರಿ = ಶಿವನು ವಿಷ್ಣುವಿನ ಚಕ್ರವನ್ನು ನುಂಗಿದ್ದನೆಂದೂ, ವಿಷ್ಣು ಶಿವನನ್ನು ಪೂಜಿಸಿ, ಸಂತುಷ್ಟಿಗೊಳಿಸಿ ಚಕ್ರವನ್ನು ಮರಳಿ ಪಡೆದನೆಂದು ಕಥೆ.
ಪೌರತ್ರಯ = ರಾಕ್ಷಸರ ಮೂರು ಪಟ್ಟಣಗಳು
ಗೌರೀಮನೋಹರ = ಈಶ್ವರ
ಚಾರುತರ = ಸುಂದರ

೨. ಅನುಗಾಲ = ಸದಾಕಾಲ
ಗೃಹದ್ವಾರ = ಮನೆಬಾಗಿಲು

೩. ಭೋಗಿಶಯನ = ಹಾವನ್ನೇ ಹಾಸಿಗೆಯನ್ನಾಗಿ ಉಳ್ಳವನು (ವಿಷ್ಣು)
ಭೋಗಿ ಭೂಷಣ = ಹಾವನ್ನೇ ಆಭರಣವನ್ನಾಗಿ ಉಳ್ಳವನು (ಶಿವ)
ವಾಗೀಶ = ಬ್ರಹ್ಮ
ಆಗು ಕಾರಣ = ಮೂಲ ಕಾರಣ (ಕಾರ್ಯಕರ್ಮಗಳಿಗೆಲ್ಲ ಮೂಲ ಕಾರಣ ಪರಬ್ರಹ್ಮರೂಪಿಯಾದ, ಪರಾತ್ಪರ ವಸ್ತುವಾದ ಆದಿಕೇಶವನೆಂದು ಭಾವ)

* * * *

**Blank**



## ೧೬೨
## ಕಾಂಬೋದಿ – ಅಟತಾಳ

ಬ್ರಹ್ಮ ಲಿಖಿತವ ಮೀರಿ ಬಾಳ್ವರುಂಟು
ನಿರ್ಮಳದಿ ವೈಷ್ಣವರ ಮನಮುಟ್ಟಿ ಭಜಿಸಿ ॥ಪ॥

ಪಾಪಕೆ ಹೇಸದ ಶಬರ ಬಟ್ಟೆಯನು ಕಾದಿರಲು
ಆ ಪಥದಿ ಸಲೆ ವೈಷ್ಣವನು ಬಂದು
ಪಾಪವನು ತಪ್ಪಿಸಿ ರಾಮನಾಮವ ಕೊಡಲು
ಕಾಪಥಕ ವಾಲ್ಮೀಕಿ ಮುನಿಯಾಗಲಿಲ್ಲವೆ? ॥೧॥

ಪಂಚಮಹಾಪಾತಕವ ಮಾಡಿದ ಅಜಾಮಿಳನ
ವಂಚಿಸಿ ಯಮದೂತರೆಳೆದೊಯ್ಯುತಿರಲು
ಕಿಂಚಿತ್ತು ಹರಿನಾಮವನಾಕಸ್ಮಿಕದಿ ನೆನೆಯೆ
ಅಂಚಿಗೆಳೆದೊಯ್ದವರು ವಿಷ್ಣುದೂತರಲ್ಲವೆ? ॥೨॥

ಬಾಲಕ ತನ್ನ ತಾಯ್ತಂದೆಯೊಳ್ ಮುನಿದು ಹಲವು
ಕಾಲ ವನದೊಳು ತಪವ ಮಾಡಲು
ನೀಲಮೇಘಶ್ಯಾಮ ಮೆಚ್ಚಿ ಬಾಲಕನಿಗೆ
ಮೇಲಾದ ಪದವಿಯನು ಕೊಡಲಿಲ್ಲವೆ? ॥೩॥

ದಶಕಂಠನನುಜನು ಜಾನಕಿಯ ಬಿಡ ಹೇಳೆ
ಅಸುರ ಕೋಪವ ತಾಳಿ ಹೊರಗಟ್ಟಿದಾಗ
ಪೆಸರಗೊಳುತ ಬಂದು ಮೊರೆಹೊಕ್ಕ ವಿಭೀಷಣಗೆ
ಶಶಿರವಿ ಪರ್ಯಂತ ಪಟ್ಟಗಟ್ಟಲಿಲ್ಲವೆ? ॥೪॥

**ಕಲಿಗೆ ಬೆದರುವರಲ್ಲ ಕಾಲನ ಬಾಧೆಗಳಿಲ್ಲ**
**ಛಲದಿ ನರಳಿ ಪುಟ್ಟುವ ಗಸಣೆಯಿಲ್ಲ**
**ಒಲಿದು ಕಾಗಿನೆಲೆಯಾದಿಕೇಶವರಾಯನ**
**ಸಲೆ ನಂಬಿದವರಿಗೆ ಮುಕುತಿಯಿತ್ತುದಿಲ್ಲವೆ? ॥೫॥**

ಭಾವ– ಹೃದಯಪೂರ್ವಕ ಹರಿದಾಸರನ್ನು ಭಜಿಸಿದರೆ ಹಣೆಯ ಬರಹವನ್ನು ಮೀರಿ ಸದ್ಗತಿ ಪಡೆಯಬಹುದು ಎಂಬ ಆಶಯದಿಂದ ಕೂಡಿದೆ ಈ ಕೀರ್ತನೆ.

ಅರ್ಥ– ವೈಷ್ಣವರ = ಹರಿದಾಸರ, ಭಾಗವತರ

೧. ಶಬರ = ಬೇಡ
ಬಟ್ಟೆ = ದಾರಿ
ಪಥ = ದಾರಿ
ವೈಷ್ಣವನು = ವಿಷ್ಣು ಭಕ್ತನಾದ ನಾರದ
ಕಾಪಥಕ = ಅಡ್ಡ ದಾರಿ ಹಿಡಿದವನು, ದುರ್ಮಾರ್ಗಿ

೨. ಅಜಾಮಿಳ = ಬ್ರಾಹ್ಮಣನಾಗಿ ಹುಟ್ಟಿ, ಮಾಡಬಾರದ ಅನಾಚಾರ ಮಾಡಿ, ಸಾಯುವ ವೇಳೆಯಲ್ಲಿ ಅಕಸಿಕವಾಗಿ ತನ್ನ ಮಗ ನಾರಾಯಣನನ್ನು 'ನಾರಗಾ' ಎಂದು ಕರೆದದ್ದರಿಂದ ಅವನಿಗೆ ಮುಕ್ತಿ ದೊರಕಿತೆಂದು ಕಥೆ.
ಕಿಂಚಿತ್ತು = ಸ್ವಲ್ಪ
ಅಂಚಿಗೆ = ತುದಿಗೆ (ವೈಕುಂಠಕ್ಕೆ)

೩. ಬಾಲಕ = ಧ್ರುವ (ಉತ್ತಾನಪಾದ ಮತ್ತು ಸುನೀತಿಯ ಮಗನಾದ ಧ್ರುವ ಮಲತಾಯಿ ಸುರುಚಿಯಿಂದ ಅವಮಾನಗೊಂಡು, ಕಾಡಿನಲ್ಲಿ ತಪಸ್ಸು ಮಾಡಿ ಪರಮಾತ್ಮ ಕೃಪೆಗೆ ಪಾತ್ರವಾದ ಕಥೆ)



೪. ದಶಕಂಠನನುಜ = ರಾವಣನ ತಮ್ಮನಾದ ವಿಭೀಷಣ
ಶಶಿರವಿ = ಚಂದ್ರಸೂರ್ಯ

೫. ಕಾಲನ = ಯಮನ
ಗಸಣೆ (<ಘರ್ಷಣೆ) = ಇಕ್ಕಟ್ಟು, ತೊಂದರೆ
ಸಲೆ = ಚೆನ್ನಾಗಿ

* * * *

## ೧೬೩
## ಧನ್ಯಾಸಿ – ಛಾಪು ತಾಳ

**ಮುಟ್ಟಬೇಡ ಮುಟ್ಟಬೇಡ ಮುರಹರನ ದಾಸರನು ॥ಪ॥**
**ಕಟ್ಟು ಮಾಡಿದ ಯಮನು ತನ್ನ ದೂತರಿಗೆ ॥ಅ॥**

**ತಿರುಮಣಿ ತಿರುಚೂರ್ಣ ಶೃಂಗಾರ ಧರಿಸುವರ**
**ಸಿರಿತುಳಸಿ ವನಮಾಲೆಯಿಂದೊಪ್ಪುವವರ**
**ತಿರುಮಂತ್ರ ತೀರ್ಥಪ್ರಸಾದಕೊಳಗಾದವರ**
**ತಿರುಪತಿ ಯಾತ್ರೆಯನು ಮಾಡುವ ಮಹಾತ್ಮರ ॥೧॥**

**ಬಡವರಾಗಲಿ ಭಾಗ್ಯವಂತರಾಗಲಿ ಅವರು**
**ಕಡು ಕರ್ಮಿ ಘೋರಪಾತಕರಾಗಲಿ**
**ನಡೆನುಡಿಗೆ ಮಾಧವನ ಬಿಡದೆ ಕೊಂಡಾಡುವರ**
**ಗೊಡವೆ ಬೇಡೆಂದು ಯಮಧರ್ಮ ಸಾರಿದನು ॥೨॥**

**ವಾಸುದೇವನ ವಾಸರವನಾಚರಿಸುವವರ**
**ಬೇಸರಿಸದೆ ಹರಿಪ್ರಸಂಗ ಮಾಳ್ಪವರ**
**ಶೇಷಶಯನ ಕಾಗಿನೆಲೆಯಾದಿಕೇಶವನ**
**ದಾಸಾನುದಾಸರಿಗೆ ದಾಸರಾದವರ ॥೩॥**

ಭಾವ– ಹರಿದಾಸರು ವಿಷ್ಣುಲೋಕ (ಮುಕ್ತಿ) ಸೇರುವಂಥವರು, ಯಮಲೋಕ (ಮೃತ್ಯು) ಸೇರುವಂಥವರಲ್ಲ ಎಂಬ ಭಾವ ಚಮತ್ಕಾರಯುತವಾಗಿ ಅಭಿವ್ಯಕ್ತಗೊಂಡಿದೆ ಎನ್ನಿಸುತ್ತದೆ. ಚಾತುರ್ಯದಿಂದ ವಿಷ್ಣು ತನ್ನ ದಾಸರನ್ನು ಮುಟ್ಟಬೇಡ ಎಂದು ಯಮನಿಗೆ ನಿರೂಪ ಕಳಿಸಿದ ಎಂಬ ಶಿಥಿಲ ಧಾಟಿಗೆ ಜೋತುಬೀಳದೆ ಯಮನೇ ತನ್ನ ದೂತರಿಗೆ ಹಾಗೆ ಕಟ್ಟಪ್ಪಣೆ ಮಾಡಿದ ಎಂಬ ಸಬಲ ಧಾಟಿಯನ್ನು ಅಳವಡಿಸಿಕೊಂಡಿರುವುದು.



ಯಮನಂಥ ದಂಡಾಧಿಕಾರಿ ಬೇರೆಯವರ ಶಿಫಾರಸ್ಸನ್ನು ಅನುಷ್ಠಾನಗೊಳಿಸಬಹುದು ಅಥವಾ ಬಿಡಬಹುದು ಎಂಬ ಅನುಮಾನ ಆತಂಕಗಳು ಇರಲು ಸಾಧ್ಯ. ಆದರೆ ದಂಡಾಧಿಕಾರಿಯೇ ತನ್ನ ದೂತರಿಗೆ ಹಾಗೆ ಕಟ್ಟಪ್ಪಣೆ ಮಾಡಿದ ಎಂದರೆ 'ತಂಟೆ ಫೈಸಲ್' ಎಂದು ಕನಕದಾಸರು ತಮ್ಮ ಪೂರ್ವಾಶ್ರಮದ ಅಪಾರ ಅನುಭವದ ಆಧಾರದ ಮೇಲೆ ಇಂಥ ಯುಕ್ತಿಯುಕ್ತ ತಂತ್ರವನ್ನು ಕಲ್ಪಿಸಿಕೊಂಡು ಕೀರ್ತನೆಯನ್ನು ರಚಿಸಿದರೆಂದು ಕಾಣುತ್ತದೆ.

ಅರ್ಥ– ಮುರಹರ = ವಿಷ್ಣು
ತಿರುಮಣಿ ತಿರುಚೂರ್ಣ = ಶ್ರೀ ವೈಷ್ಣವರು ಪಂಗನಾಮ ಹಾಕಲು ಬಳಸುವ ಬಿಳಿ ಮತ್ತು ಕೆಂಪು ಪುಡಿ
ತಿರುಮಂತ್ರ = ಶ್ರೀಮಂತ್ರ ಓಂ ನಮೋ ನಾರಾಯಣಾಯ)
ವಾಸುದೇವ = ಕೃಷ್ಣ
ವಾಸರ = ವಾರ
ಶೇಷಶಯನ = ಹಾವನ್ನೇ ಹಾಸಗೆಯಾಗುಳ್ಳ ಹರಿ

* * * *

## ೧೬೪
## ಸಾವೇರಿ – ಅಟತಾಳ

ಶೇಷಶಯನ ನಿನ್ನ ಪರಮ ಭಾಗವತರ ಸಹ
ವಾಸದೊಳಿರಿಸು ಕಂಡ್ಯ ಎನ್ನದು ॥ಪ॥

ಬೇಸರಿಸದೆ ನಿನ್ನ ಹೃದಯಾಬ್ಜದೊಳಗಿರುವ
ದಾಸರೊಳಿರಿಸು ಕಂಡ್ಯ ಎನ್ನನು ॥ಅ॥

ತಂದೆಯೊಡಲನು ಸೀಳಿಸಿದವರೊಳು, ದೇ
ವೇಂದ್ರನ ತಲೆಗೆ ತಂದವರೊಳು, ದು
ರ್ಗಂಧ ಪೆಣ್ಣಿಗೆ ಚಂದನದ ಕಂಪನಿತ್ತಂಥ
ಬಾಂಧವರೊಳಗಿರಿಸು ಕಂಡ್ಯ ಎನ್ನನು ॥೧॥

ತೋಯಜವೆಂಬ ಪುಷ್ಪದ ಪೆಸರವರೊಳು
ತಾಯ ಸೊಸೆಗೆ ಮಕ್ಕಳಿತ್ತವರೊಳು
ಆಯದಿ ದ್ವಾದಶಿ ವ್ರತವ ಸಾಧಿಸಿದಂಥ
ರಾಯರೊಳಿರಿಸು ಕಂಡ್ಯ ಎನ್ನನು ॥೨॥

ಗಿಳಿನಾಯಿ ಪೆಸರಿನವರೊಳು, ಮುಗಿಲ
ಹೊಳೆಯ ಹೊಟ್ಟೆಲಿ ಹುಟ್ಟಿದವರೊಳು
ಕೆಳದಿಯ ಜರಿದು ಶ್ರೀಹರಿದಿನ ಗೆದ್ದಂಥ
ಹಳಬರೊಳಿರಿಸು ಕಂಡ್ಯ ಎನ್ನನು ॥೩॥

ಅಂಕಕ್ಕೆ ರಥವ ನಡೆಸಿದವರೊಳು, ನಿ
ಶ್ಶಂಕೆ ಧರ್ಮವ ಗೆದ್ದ ಹಿರಿಯರೊಳು



ಲಂಕೆಯ ಅನುದಿನ ಸ್ಥಿರರಾಜ್ಯವಾಳಿದ
ಕಿಂಕರರೊಳಿರಿಸು ಕಂಡ್ಯ ಎನ್ನನು ॥೪॥

ಕಾಟಿಗೆ ಕಾಸಿಲ್ಲದವರು ರಾಯರ ಪಂಕ್ತಿ
ಊಟವ ಬಯಸಿದಂತೆ ನಾ ಬೇಡಿದೆ
ನಾಟಕಧರ ನೆಲೆಯಾದಿಕೇಶವ, ನೀ
ನ್ನಾಟದೊಳಿರಿಸು ಕಂಡ್ಯ ಎನ್ನನು ॥೫॥

ಭಾವ– ಕನಕದಾಸರು 'ನನ್ನನ್ನು ನಿನ್ನ ಪರಮ ಭಾಗವತರ (ಶ್ರೇಷ್ಠ ಭಕ್ತರ) ಸಹವಾಸದಲ್ಲಿ ಇರಿಸು' ಎಂದು ದೇವರನ್ನು ಪ್ರಾರ್ಥಿಸುತ್ತಾ ಪರಂಪರೆಯ ಪ್ರಧಾನ ಭಕ್ತರನ್ನೆಲ್ಲ ಈ ಕೀರ್ತನೆಯಲ್ಲಿ ಅಡಕಗೊಳಿಸಿದ್ದಾರೆ; ಕೊನೆಯಲ್ಲಿ ತಮ್ಮ ಬೇಡಿಕೆ ಫಲಕಾರಿ ಆಗುವುದೋ ಇಲ್ಲವೋ ಎಂಬ ಅನುಮಾನದಿಂದ 'ನಿನ್ನ ಆಟ (ನಾಟಕ)'ದಲ್ಲಾದರೂ ಇರಿಸು ಎಂದು ಕೋರಿರುವುದು ಯುಕ್ತಿಯುಕ್ತವಾಗಿದೆ; ಭಕ್ತಿಯುಕ್ತವಾಗಿದೆ.

ಅರ್ಥ– ಶೇಷಶಯನ = ಹಾವಿನ ಮೇಲೆ ಮಲಗುವವನು (ವಿಷ್ಣು)
ಪರಮ ಭಾಗವತರು = ಶ್ರೇಷ್ಠ ಭಕ್ತರು
ಬೇಸರಿಸದೆ = ಬೇಸರ ಮಾಡಿಕೊಳ್ಳದೆ
ಅಬ್ಜ = ಕಮಲ

೧. ತಂದೆಯೊಡಲನು ಸೀಳಿಸಿದವರೊಳು = ತನ್ನ ತಂದೆ ಹಿರಣ್ಯಕಶ್ಯಪನ ಹೊಟ್ಟೆಯನ್ನು ನರಸಿಂಹನಿಂದ ಸೀಳಿಸಿದ ಪ್ರಹ್ಲಾದನಲ್ಲಿ
ದೇವೇಂದ್ರನ ತಲೆಗೆ ತಂದವರೊಳು = ಕೃಷ್ಣ ರುಕ್ಮಿಣಿಯರು ಮಾತುಕತೆಯಾಡುತ್ತಿದ್ದಾಗ ನಾರದ ಸ್ವರ್ಗದಿಂದ ತಂದ ಪಾರಿಜಾತ ಪುಷ್ಪವನ್ನು ಕೊಡುತ್ತಾನೆ. ಕೃಷ್ಣ ಸ್ವರ್ಗಕ್ಕೆ ಹೋಗಿ ಇಂದ್ರನನ್ನು ಸೋಲಿಸಿ ಪಾರಿಜಾತ ಪುಷ್ಪವನ್ನು ತಂದು ಸತ್ಯಭಾಮೆಗೆ ಕೊಡುವ ಕಥಾಪ್ರಸಂಗ.
ದುರ್ಗಂಧ ಪೆಣ್ಣಿಗೆ... ಬಾಂಧವರೊಳು = ಪರಾಶರ ಮಹರ್ಷಿ ದೋಣಿಯಲ್ಲಿ ಬೆಸ್ತರ ಸತ್ಯವತಿಯನ್ನು ಮೋಹಿಸಿ, ಸುತ್ತಲೂ

ಕಾವಳ ಕವಿಯುವಂತೆ ಮಾಡಿ, ಅವಳೊಡನೆ ಸಂಭೋಗಿಸುತ್ತಾನೆ. ಮತ್ಸ್ಯಗಂಧೆಯಾದ ಅವಳನ್ನು ಯೋಜನ ಗಂಧೆಯಾಗಿಸುತ್ತಾನೆ. ಅವರ ಮಗನೇ ವ್ಯಾಸ ಮುನಿ.

ಚಂದನ = ಶ್ರೀಗಂಧ

೨. ತೋಯಜವೆಂಬ ಪುಷ್ಪದ ಪೆಸರವರೊಳು = ಅಂಬರೀಷನ ಗೆಳೆಯನಾದ ಪುಂಡಲೀಕ ಅಧರ್ಮಾಚರಣೆಯಿಂದ ಪತಿತನಾಗಿ, ಮುಂದೆ ಪರಮಾತ್ಮನ ಅಪರೋಕ್ಷ ಜ್ಞಾನದಿಂದ ಕೈವಲ್ಯ ಪಡೆಯುತ್ತಾನೆ.

ತೋಯಜ = ಪುಂಡರೀಕ = ಕಮಲ

ತಾಯಸೊಸೆಗೆ ಮಕ್ಕಳಿತ್ತವರೊಳು = ಶಂತನುವಿಗೆ ಗಂಗೆ ಮತ್ತು ಸತ್ಯವತಿ ಎಂಬ ಇಬ್ಬರು ಹೆಂಡತಿಯರು. ಗಂಗೆಯ ಮಗ ಭೀಷ್ಮ; ಸತ್ಯವತಿಯ ಮಕ್ಕಳು ಚಿತ್ರಾಂಗದಾ ಮತ್ತು ವಿಚಿತ್ರ ವೀರ್ಯ. ಚಿತ್ರಾಂಗದಾ ಯುದ್ಧದಲ್ಲಿ ಹಾಗೂ ವಿಚಿತ್ರ ವೀರ್ಯ ರೋಗದಿಂದ ಸತ್ತಾಗ, ತನ್ನ ಸೊಸೆಯರಿಗೆ ಮಕ್ಕಳಾಗಿಲ್ಲವಲ್ಲ, ವಂಶದ ಸಾತತ್ಯ ಕೊನೆಗೊಳ್ಳುವುದಲ್ಲ ಎಂದು ಚಿಂತಿಸಿದ ಸತ್ಯವತಿ ಮಗನಾದ (ಮಲಮಗ) ವ್ಯಾಸರನ್ನು ಕರೆದು ತನ್ನ ಸೊಸೆಯರಿಗೆ ಗರ್ಭದಾನ ಮಾಡು ಎಂದು ಕೇಳಿಕೊಳ್ಳುತ್ತಾಳೆ. ಅದೇ ರೀತಿ ಅಂಬೆ ಅಂಬಾಲಿಕೆಯರಲ್ಲಿ ದೃತರಾಷ್ಟ್ರ ಮತ್ತು ಪಾಂಡು ಹುಟ್ಟಿದರೆ, ದಾಸಿಯೊಬ್ಬಳಿಂದ ವಿದುರ ಹುಟ್ಟುತ್ತಾನೆ.

ಆಯದಿ... ರಾಯರೊಳು = ಅಂಬರೀಷ ವಿಷ್ಣುಭಕ್ತಾಗ್ರೇಸರ. ಏಕಾದಶಿ ವ್ರತವನ್ನು ಆಚರಿಸುವವನು. ದುರ್ವಾಸ ಮುನಿ ಇವನ ವ್ರತ ಕೆಡಿಸಲು ಬಂದು, ವಿಷ್ಣುವಿನ ಚಕ್ರಾಯುಧಕ್ಕೆ ಸಿಕ್ಕಿ ಬಾಧೆಗೊಂಡು, ಕೊನೆಗೆ ಅಂಬರೀಷನ ಮೊರೆಹೊಕ್ಕು ಅದರಿಂದ ಪಾರಾಗುತ್ತಾನೆ.

ಆಯದಿ = ಪಟ್ಟು ಹಿಡಿದು.

೩. ಗಿಳಿ ನಾಯಿ ಪೆಸರಿನವರೋಳು = ಶುಕಶೌನಕರಲ್ಲಿ; ಶುಕ, ವೇದವ್ಯಾಸರ ಮಗ. ಬ್ರಹ್ಮಚಾರಿಯೂ ವಿರಾಗಿಯೂ ಆದ ಈತ ಪರಿಕ್ಷಿದ್ರಾಜನಿಗೆ ಭಾಗವತವನ್ನೂ ಗಂಧರ್ವರಿಗೆ



ಭಾರತವನ್ನೂ ಬೋಧಿಸಿದನು. ಸಂಕೀರ್ತನ ಭಕ್ತರಲ್ಲಿ ಇವನಿಗೆ ಆದ್ಯತೆ. ಶೌನಕ ಮಹರ್ಷಿ ಸೂತಪೌರಾಣಿಕನಿಂದ ಪುರಾಣಗಳನ್ನು ಕೇಳಿದವರಲ್ಲಿ ಪ್ರಮುಖ.

ಮುಗಿಲ..... ಹುಟ್ಟಿದವರೊಳು = ಗಂಗಾದೇವಿಯ ಮಗನಾದ ಭೀಷ್ಮ. ಇವನ ಮೊದಲ ಹೆಸರು ದೇವವ್ರತ. ತಂದೆ ಶಂತನು ಸತ್ಯವತಿಯನ್ನು ಕೈಹಿಡಿಯಲೋಸುಗವಾಗಿ ಆಜನ್ಮ ಬ್ರಹ್ಮಚಾರಿ ಯಾಗಿ ಉಳಿಯುತ್ತೇನೆ ಎಂದು ಭೀಷ್ಮಪ್ರತಿಜ್ಞೆ ಮಾಡಿದ್ದರಿಂದ ಇವನಿಗೆ ಭೀಷ್ಮನೆಂಬ ಹೆಸರೇ ಉಳಿಯಿತು.

ಮುಗಿಲ ಹೊಳೆ = ಆಕಾಶಗಂಗೆ

ಕೆಳದಿಯ..... ಹಳಬರೊಳು = ರುಕ್ಮಾಂಗದ ಏಕಾದಶಿ ವ್ರತವನ್ನು ತಪ್ಪದೆ ಆಚರಿಸುತ್ತಿದ್ದವನು. ವ್ರತಭಂಗ ಮಾಡಬೇಕೆಂದು ಬ್ರಹ್ಮ ಮೋಹಿನಿಯನ್ನು ಕಳಿಸಿದನೆಂದೂ, ಅವಳು ರುಕ್ಮಾಂಗದನ ಹೆಂಡತಿಯಾಗಿ ಏಕಾದಶಿ ವ್ರತಕ್ಕೆ ಅಡ್ಡಿಪಡಿಸಿದಾಗ, ರುಕ್ಮಾಂಗದ ತನ್ನ ಮಗನಾದ ಧರ್ಮಾಂಗದನನ್ನು ಬಲಿಕೊಡಲು ಮುಂದಾದನೇ ವಿನಾ ವ್ರತ ಬಿಡಲು ಒಪ್ಪಲಿಲ್ಲ. ಆಗ ವಿಷ್ಣು ಅವನ ಭಕ್ತಿಗೆ ಮೆಚ್ಚಿ ಕೈವಲ್ಯ ನೀಡಿದ.

೪. ಅಂಕಕ್ಕೆ..... ನಡೆಸಿದವರೊಳು = ಅರ್ಜುನ

ನಿಶ್ಶಂಕೆ..... ಹಿರಿಯರೊಳು = ಉರ್ವಶಿಯ ಮಗನಾದ ಆರುಂಧತಿಯ ಗಂಡನಾದ ವಶಿಷ್ಠ ಧರ್ಮಜ್ಞಾನಿಗಳಲ್ಲಿ ಶ್ರೇಷ್ಠ ಎನ್ನಿಸಿಕೊಂಡಿದ್ದಾನೆ.

ಲಂಕೆಯ..... ಕಿಂಕರರೊಳು = ರಾಮಭಕ್ತನಾದ ವಿಭೀಷಣ

ಕಿಂಕರ = ಸೇವಕ

೫. ಕಾಟಿ = ಅಂಬಲಿ, ಗಂಜಿ

ಆಟ = ನಾಟಕ

* * * *

## ೧೬೫
## ಸಾವೇರಿ – ಅಟತಾಳ

ದೇಶಾಧಿಪತಿ ನರಹರಿಯೆ ನಿನ್ನಯ ಪಾದ
ದಾಸರ ದಾಸನೆಂದೆನಿಸಬೇಕೆನ್ನ ||ಪ||

ರಜ ತಮೋಗುಣ ಪ್ರವರ್ತಕ ಮೂಲಾಂತರದಿಂ
ಯಜಮಾನತನದಹಂಕಾರವನು ಒಲ್ಲೆ
ಭುಜಚಕ್ರ ಧರಿಸಿ ಸಾತ್ತ್ವಿಕರ ಪಾದಾಂಬುಜ
ರಜಭಜಕರ ಭಜಕನೆಂದೆನಿಸೆನ್ನ ||೧||

ಸಿರಿಗಂಧ ಕುಂಕುಮ ಸಾದು ಜವ್ವಾಜಿ ಕ
ಸ್ತೂರಿ ತಿಲಕವನಿಡುವುದ ನಾನೊಲ್ಲೆ
ಸಿರಿ ಊರ್ಧ್ವಪುಂಡ್ರ ದ್ವಾದಶನಾಮವಿಡುವವರ
ಪರಿಚಾರಕರ ಪರಿಚಾರಕನೆನಿಸೆನ್ನ ||೨||

ಸ್ವಾದು ಕಲ್ಪಿತವಾದ ಭಕ್ಷ್ಯ ಭೋಜ್ಯಗಳನು
ಆದರದ ಅಮೃತಾನ್ನ ಉಣುವುದನೊಲ್ಲೆ
ಬೋಧೆಯನು ಹೇಳುವ ಕೇಳುವ ಹರಿದಾಸರ
ಪಾದ ತೀರ್ಥಪ್ರಸಾದಭುಂಜಕನೆನಿಸೆನ್ನ ||೩||

ಕಾಲ ಕರ್ಮದೊಳುಪೇಕ್ಷೆಯ ಮಾಡಿ ಹರಿಭಕುತಿ
ಶೀಲ ರಹಿತ ಬ್ರಾಹ್ಮಣನಾಗಲೊಲ್ಲೆ
ಕೀಲನರಿತು ಹರಿಭಕುತಿಯನು ಮಾಳ್ಪ ಪರಚಾಂ
ಡಾಲನ ಮನೆ ಬಾಗಿಲ ಕಾಯಿಸೆನ್ನ ||೪||



ಕ್ರೂರ ಶಾಸ್ತ್ರವನೋದಿ ಕುರಿ ಕೋಣವನೆ ಕಡಿದು
ಘೋರ ನರಕದಿ ಬೀಳುವುದನು ನಾನೊಲ್ಲೆ
ವಾರಿಜಾಕ್ಷ ನಿನ್ನ ಚರಣ ಸೇವಕರ ಮನೆಯ
ದ್ವಾರಪಾಲಕನೆಂದೆನಿಸೆನ್ನ ||೫||

ಪಟ್ಟೆ ಪಟ್ಟಾವಳಿ ದಿವ್ಯ ದುಕೂಲ ಮಿಂ
ಚಿಟ್ಟ ವಸ್ತ್ರ ಉಡುವುದನೊಲ್ಲೆ
ನೆಟ್ಟನೆ ಕಾವಿ ಕಾಷಾಯಾಂಬರಗಳನು
ಉಟ್ಟವರ ಬಂಟನೆಂದೆನಿಸೆನ್ನ ||೬||

ಅರ್ಥ ವಿಷಯಗಳ ಫಲಾಪೇಕ್ಷೆಯಿಂ ಪುಣ್ಯ
ತೀರ್ಥಯಾತ್ರೆಯ ಮಾಡಲೊಲ್ಲೆ
ದೈತ್ಯ ಮರ್ದನ ಬಾಡದಾದಿಕೇಶವ ನಿನ್ನ
ಕೀರ್ತನೆಗೈವರ ಸ್ತುತಿಕನೆನಿಸೆನ್ನ ||೭||

ಭಾವ– ಕನಕದಾಸರು ತಮ್ಮ ಬೇಕು–ಬೇಡಗಳ ಮೂಲಕ ತಮ್ಮ ಒಲವು–ನಿಲುವನ್ನು ವಿನಯಶೀಲತೆಯನ್ನು ಈ ಕೀರ್ತನೆಯಲ್ಲಿ ಕಟ್ಟಿಕೊಟ್ಟಿದ್ದಾರೆ.

ಅರ್ಥ– ನರಹರಿ = ನರಸಿಂಹ
ಭುಜಚಕ್ರ = ದಾಸರು ಭುಜದ ಮೇಲೆ ಧರಿಸುವ ಚಕ್ರದ ಮುದ್ರೆ
ಪಾದಾಂಬುಜ = ಪಾದಕಮಲ
ರಜ = ಪರಾಗ, ಧೂಳು
ಊರ್ಧ್ವ ಪುಂಡ್ರ = ಮೇಲು ಮುಖವಾಗಿ ಧರಿಸುವ ನಾಮ
ಪರಿಚಾರಕ = ಸೇವಕ
ಕೀಲನು = ಗುಟ್ಟನ್ನು, ಮರ್ಮವನ್ನು
ವಾರಿಜಾಕ್ಷ = ವಿಷ್ಣು
ಪಟ್ಟೆ ಪಟ್ಟಾವಳಿ ದಿವ್ಯ ದುಕೂಲ = ರೇಷ್ಮೆ ವಸ್ತ್ರಗಳು

ಬಂಟ = ಸೇವಕ
ಅರ್ಥ ವಿಷಯಗಳು = ಧರ್ಮ, ಅರ್ಥ, ಕಾಮ ಮೋಕ್ಷ ಎಂಬ ಪುರುಷಾರ್ಥಗಳು
ದೈತ್ಯಮರ್ದನ = ರಾಕ್ಷಸ ಸಂಹಾರಿ
ಸ್ತುತಿಕ = ಹೊಗಳುವವನು.

* * * *



## ೧೬೬
## ಕಾನಡ – ಅಟತಾಳ

**ಕ್ಷಮಿಸುವುದೆಮ್ಮ ತಪ್ಪುಗಳ ಸ್ವಾಮಿ**
**ಕ್ಷಮಶೀಲವೆಂಬ ದಾಸೋಹ ಬಿರುದಿನೊಳು ॥ಪ॥**

**ಕಮಲಜ ಹರಿ ರುದ್ರ ವಿಮಲ ಸುರರು ಸಾಧು**
**ಸಮರಲ್ಲವೆಂಬ ಶ್ರುತಿ ಸರಿಬಂತು ಸ್ವಾಮಿ ॥ಅ॥**

**ಶರಧಿಯೊಳಿರುತಿರ್ಪ ಚರಜೀವಿಗಳ ಗುಣಾ–**
**ಕರಿಸಿ ಇಷ್ಟೆಂದು ಪೇಳಲುಬಹುದು**
**ಸಿರಿವರದನ ಅಂತಃಕರಣಕೊಪ್ಪಿದ ನಿಮ್ಮ**
**ಇರವ ತಿಳಿಯಲು ನರರ ವಶವೆ ಸ್ವಾಮಿ ॥೧॥**

**ಆಢಕದೊಳಗಂಬರವನೆ ಅಳೆದು ಲೆಕ್ಕ**
**ಕೂಡಿದ ಮಿತಿಯ ಪೇಳಲು ಬಹುದು**
**ರೂಢಿಗೀಶನ ಸೇವೆ ಮಾಡಿದ ಮುಕ್ತರ**
**ಈಡಿಲ್ಲವೆಂಬುದನಿತರರರಿವರೆ ಸ್ವಾಮಿ ॥೨॥**

**ಈ ಶರೀರದೊಳಗಿಪ್ಪ ಕೇಶಗಳೆಲ್ಲವನು**
**ಬೇಸರಿಸದೆಣಿಸಿ ಹೇಳಲು ಬಹುದು**
**ಶೇಷಶಯನ ಕಾಗಿನೆಲೆಯಾದಿಕೇಶವ**
**ದಾಸರ ಮಹಿಮೆ ಕಾಣಲಿಕಾಗದು ಸ್ವಾಮಿ ॥೩॥**

ಭಾವ– ಹರಿದಾಸರ ಮಹಿಮೆಯನ್ನು ಸಾರುವ ಕೀರ್ತನೆ ಇದು. ಉಡುಪಿ ಕೃಷ್ಣ ದೇವಾಲಯ ಪ್ರವೇಶಕ್ಕೆ ಅವಕಾಶ ಕೊಡದೆ ಕನಕದಾಸರನ್ನು

ಅವಮಾನಿಸಿದ ಮಡಿವಂತರು, ಬಳಿಕ ಮತ–ಮಠಗಳಿಗೆ ಕೆಟ್ಟ ಹೆಸರು ಬರುವುದೆಂದು ತಿಳಿದು, ಕನಕದಾಸರ ಬಳಿಗೆ ಬಂದು ಕ್ಷಮೆ ಕೇಳಿದ ಪ್ರಸಂಗವಿದು ಎಂದು ಪ್ರತೀತಿ.

ಅರ್ಥ– ಕಮಲಜ = ಬ್ರಹ್ಮ

೧. ಶರಧಿ = ಸಮುದ್ರ
ಚರಜೀವಿಗಳ = ಜಲಚರಗಳನ್ನು
ಗುಣಾಕರಿಸಿ = ಗುಣಿಸಿ, ಲೆಕ್ಕಮಾಡಿ
ಸಿರಿವರದನ = ವಿಷ್ಣುವಿನ
ಇರವ = ಸ್ಥಿತಿಯನ್ನು ಅಥವಾ ಇರುವಿಕೆಯನ್ನು

೨. ಆಢಕ = ಒಂದು ಅಳತೆ
ಅಂಬರ = ಆಕಾಶ
ರೂಢಿಗೇಶ = ಭೂಮಿಗೊಡೆಯನಾದ ಪರಮಾತ್ಮನ
ಈಡಿಲ್ಲ = ಸಾಟಿ ಇಲ್ಲ, ಸಮನಿಲ್ಲ

೩. ಕೇಶ = ಕೂದಲು
ಶೇಷಶಯನ = ಹಾವನ್ನು ಹಾಸಿಗೆಯಾಗುಳ್ಳವನು (ವಿಷ್ಣು)

* * * *



## ೧೬೭
## ಮುಖಾರಿ – ಅಟತಾಳ

ತಿಳಿಯ ಬರದೆಲೆ ಮನವೆ, ತೀರ್ಥ ಯಾತ್ರೆಯ ಫಲವು ॥ಪ॥
ಸುಲಭದಲಿ ಸದ್ಗತಿಯ ಸೂರೆಗೊಂಬುವರಿಗಲ್ಲದೆ ॥ಅ॥

ನೂರೆಂಟು ತಿರುಪತಿಯ ಯಾತ್ರೆಯನು ನಾನೊಲ್ಲೆ
ವಾರದೊಂದ್ಹೊತ್ತು ಉಪವಾಸವನು ನಾನೊಲ್ಲೆ
ಸಾರ ರೇಣುವೆಯುಂಡು ಕಡೆಯ ಬಾಗಿಲ ಕಾಯ್ವ
ನೀರ ಗೌಡಿಯ ಮಗನ ಮಗನ ಮಗನೆನಿಸೆನ್ನ ॥೧॥

ಪಂಚಾನ್ನ ಪರಮಾನ್ನವಾವುದನು ನಾನೊಲ್ಲೆ
ಚಂಚಲಗೊಳಿಸುವ ಭೋಗ ಭಾಗ್ಯವ ನಾನೊಲ್ಲೆ
ಹಿಂಚದೆ ದಾಸೋಹ ಮಾಳ್ಪವರ ಮನೆಯ ಕಾಯ್ವ
ಉಂಚ ಗೌಡಿಯ ಮಗನ ಮಗನ ಮಗನೆನಿಸೆನ್ನ ॥೨॥

ಪಟ್ಟೆ ಪಟ್ಟಾವಳಿ ದುಕೂಲವನು ನಾನೊಲ್ಲೆ
ಪಟ್ಟೆ ನಾಮದ ಬರಿಯ ಪ್ರದರ್ಶನ ನಾನೊಲ್ಲೆ
ಸೃಷ್ಟಿಯೊಳು ನಿನ್ನ ಭಜಿಪ ಭಕ್ತರ ಮನೆ ಕಾಯ್ವ
ಮುಟ್ಟುಗೌಡಿಯ ಮಗನ ಮಗನ ಮಗನೆನಿಸೆನ್ನ ॥೩॥

ಮುತ್ತಿನಾಭರಣ ತಾಳಿ ಪದಕವ ನಾನೊಲ್ಲೆ
ಸತ್ತಿಗೆಯ ನೆರಳಿನಲಿ ಸಾಗುವುದ ನಾನೊಲ್ಲೆ
ನಿತ್ಯ ನಿನ್ನ ನೆನೆವರ ಮನೆಯ ಬಾಗಿಲ ಕಾಯ್ವ
ತೊತ್ತುಗೌಡಿಯ ಮಗನ ಮಗನ ಮಗನೆನಿಸೆನ್ನ ॥೪॥

**ಆಶೆ ಪಾಶಗಳೆಂಬ ಜಂಜಾಟ ನಾನೊಲ್ಲೆ**
**ದೇಶಾನುದೇಶಗಳ ತಿರುಗಾಟ ನಾನೊಲ್ಲೆ**
**ಶ್ರೀಶಾದಿಕೇಶವನ ಭಜಿಪರ ಮನೆಯ ಕಾಯ್ವ**
**ಕಸಗೌಡಿಯ ಮಗನ ಮಗನ ಮಗನೆನಿಸೆನ್ನ** ॥೫॥

ಭಾವ– ತೀರ್ಥ ಯಾತ್ರೆಯಿಂದ ಜನ್ಮ ಸಾರ್ಥಕವಾಯಿತೆಂದು ಹಿಗ್ಗುವ ಜನರನ್ನು ತುಂಬ ಸೂಕ್ಷ್ಮವಾಗಿ ವಿಡಂಬಿಸಲಾಗಿದೆ ಈ ಕೀರ್ತನೆಯಲ್ಲಿ. ಅನುಪಲ್ಲವಿಯ 'ಸುಲಭದಲಿ ಸದ್ಗತಿಯ ಸೂರೆಗೊಂಬವರಿಗಲ್ಲದೆ' ಎಂಬ ಮಾತಿನಲ್ಲಿ ಚೇಳಿನ ಕೊಂಡಿಯ ಕುಟುಕಿದೆ. ಕನಕದಾಸರು ಭಕ್ತರ ಸೇವೆಯಲ್ಲಿ, ದೀನ ದಲಿತರ ಸೇವೆಯಲ್ಲಿ ಸದ್ಗತಿಯನ್ನು ಕಾಣುವ ಆಶಯವನ್ನು ಹೊಂದಿದ್ದಾರೆ ಎಂಬುದು ಮನದಟ್ಟಾಗುತ್ತದೆ.

ಅರ್ಥ– ಸೂರೆಗೊಳ್ಳು = ಕೊಳ್ಳೆ ಹೊಡಿ, ದರೋಡೆ ಮಾಡು (ಸದ್ಗತಿ ದರೋಡೆಗೆ ದಕ್ಕುವ ವಸ್ತುವಲ್ಲ ಎಂಬ ಧ್ವನಿಯಿದೆ)

೧. ರೇಣುವೆ = ಗಂಜಿ, ಅಂಬಲಿ
ನೀರಗೌಡಿ = ನೀರನ್ನು ಹೊತ್ತು ತರುವ ಕೆಲಸದಾಳು (ಗೌಡಿ ಎನ್ನುವದಕ್ಕೆ ಆಳು ಎಂಬ ಅರ್ಥವಿದೆ)
೨. ಪಂಚಾನ್ನ = ಪಂಚಾಮೃತ
ಹಿಂಚದೆ = ಹಿಂದಾಗದೆ, ಹಿಂದೆ ಸರಿಯದೆ;
ದಾಸೋಹ ಮಾಳ್ಪವರ = ಸೇವೆ ಮಾಡುವವರ
ಉಂಚ ಗೌಡಿಯ = ಹಕ್ಕಲನ್ನು ಆರಿಸಿಕೊಂಡು ಬದುಕುವ ನಿರ್ಗತಿಕ ಹೆಣ್ಣಿನ, ಉಂಚ = ಹಕ್ಕಲು, ಕೆಳಗೆ ಬಿದ್ದ ಕಾಳುಕಡಿ
೩. ಪಟ್ಟೆ ಪಟ್ಟಾವಳಿ ದುಕೂಲ = ರೇಷ್ಮೆ ವಸ್ತ್ರಗಳು
ಮುಟ್ಟುಗೌಡಿ = ಪಾತ್ರೆಪರಟೆಗಳನ್ನು ಉಜ್ಜುವ ಆಳು
೪. ಸತ್ತಿಗೆ = ಛತ್ರಿ, ತೊತ್ತು = ಸೇವಕಿ
೫. ಶ್ರೀಶ = ಲಕ್ಷ್ಮಿಯ ಗಂಡ (ವಿಷ್ಣು), ಕಸಗೌಡಿ = ಕಸ ಹೊರಲು ನೇಮಕಗೊಂಡ ಆಳು.

* * * *



## ೧೬೮
## ಶ್ರೀ – ಝಂಪೆ

**ಬೇಡ ಬೇಡ ಎಲೆಲೆ ದುರಿತಗಳಿರಾ ನಮ್ಮ**
**ಬಾಡದಧಿಪನ ಕಿಂಕರನ ಕೂಡ ತೊಡರು** ॥ಪ॥

**ವಾರಿ ಕಲ್ಲಾನೆ ವಜ್ರದ ಮೃಗೇಂದ್ರನ ಕೂಡೆ**
**ಹೋರಿ ಹೊದುಕುಳಿಗೊಂಡು ಗೆಲಬಲ್ಲುದೆ?**
**ಭೂರಿ ಭೂತಗಳೆ ಭೂಸತಿಯ ಕಾಂತನ ನಾಮ**
**ಧಾರಿಗಳ ತೊಡರು ನಿಮಗಳವಡದು ನಾನರಿವೆ** ॥೧॥

**ಮೇಣದಹಿಕೋಟಿ ದಳ್ಳುರಿಯ ಗರುಡನ ಕೂಡ**
**ತ್ರಾಣದಿಂ ಕಾದಿ ಜಯಿಸುವುದೆ ಹೇಳಾ**
**ಕ್ಷೋಣಿಯೊಳು ಕ್ಷೀಣದೈವ ಬ್ರಹ್ಮಾಂಡ ಕೋಟಿಗಳು**
**ದಾನವಾರಿಯ ದಾಸಗಳವಡವು ನಾನರಿವೆ** ॥೨॥

**ಹುಲಿಯ ಮೀಸೆಯ ಪಾಶವಿಡಿದು ಗೋವತ್ಸಗಳು**
**ನಲಿದು ಉಯ್ಯಾಲೆನಾಡುವವೆ ಹೇಳಾ**
**ಕಲಿ ಬಾಡದಾದಿಕೇಶವರಾಯ ಚಕ್ರದಲಿ**
**ತಲೆಗಳನು ಚೆಂಡಾಡಿಸುವ ಕಾಣೊ ಬೇಡ** ॥೩॥

ಭಾವ– ದಾಸರನ್ನು ಪಾಪರಾಶಿ ಏನೂ ಮಾಡಲು ಸಾಧ್ಯವಿಲ್ಲ ಎಂಬ ಭಾವ ಈ ಕೀರ್ತನೆಯ ಪ್ರಧಾನ ಆಶಯ.

ಅರ್ಥ– ದುರಿತ = ಪಾಪ
ಕಿಂಕರ = ಸೇವಕ

೧. ವಾರಿಕಲ್ಲಾನೆ = ಆಲಿಕಲ್ಲಿನ ಆನೆ
ವಜ್ರದ ಮೃಗೇಂದ್ರ = ವಜ್ರದ ಸಿಂಹ
ಹೋರಿ = ಹೋರಾಡಿ
ಹೊದುಕುಳಿಗೊಂಡು = ನೋವು ಸಹಿಸಿ
ಭೂರಿ ಭೂತಗಳೆ = ಅಸಂಖ್ಯ ಕ್ಷುದ್ರ ಜೀವಿಗಳೆ
ಭೂಸತಿಯ ಕಾಂತ = ಭೂದೇವಿಯ ಗಂಡ (ವಿಷ್ಣು)
ನಾಮಧಾರಿಗಳು = ವೈಷ್ಣವ ಭಕ್ತರು
ತೊಡರು = ಸಂಬಂಧ; ಸಂಕೋಲೆ; ಆಭರಣ

೨. ಅಹಿ = ಸರ್ಪ
ದಳ್ಳುರಿ = ಅಗ್ನಿಜ್ವಾಲೆ
ಕ್ಷೋಣಿ = ಪ್ರಪಂಚ

೩. ಪಾಶ = ಹಗ್ಗ
ದಾನವಾರಿ (<ದಾನವ+ಅರಿ) = ರಾಕ್ಷಸರ ಶತ್ರು (ವಿಷ್ಣು)
ಗೋವತ್ಸ = ಕರುಗಳು

* * * *



# ಸಮಾಜ ಚಿಂತನೆ: ನೀತಿ ಬೋಧನೆ

Blank



## ೧೬೯
## ಪೂರ್ವಿ – ರೂಪಕ ತಾಳ

**ಸತ್ಯವಂತರ ಸಂಗವಿರಲು ತೀರ್ಥವ್ಯಾತಕೆ**
**ನಿತ್ಯ ಜ್ಞಾನಿಯಾದ ಮೇಲೆ ಚಿಂತೆಯಾತಕೆ ॥ಪ॥**

**ತಾನು ಉಣ್ಣದ ಪರರಿಗಿಕ್ಕದ ಧನವಿದ್ಯಾತಕೆ**
**ಮಾನ ಹೀನನಾಗಿ ಬಾಳ್ವ ಮನುಜನ್ಯಾತಕೆ**
**ಜ್ಞಾನವಿಲ್ಲದೆ ನೂರುಕಾಲ ಬದುಕಲ್ಯಾತಕೆ**
**ಮಾನಿನಿಯ ತೊರೆದ ಮೇಲೆ ಭೋಗವ್ಯಾತಕೆ ॥೧॥**

**ಮಾತು ಕೇಳದೆ ಮಲೆತು ನಡೆವ ಮಕ್ಕಳ್ಯಾತಕೆ**
**ಪ್ರೀತಿಯಿಲ್ಲದೆ ಎಡೆಯಲಿಕ್ಕಿದ ಅನ್ನವ್ಯಾತಕೆ**
**ನೀತಿಯರಿತು ನಡೆಯದಿರುವ ಬಂಟನ್ಯಾತಕೆ**
**ಸೋತ ಹೆಣ್ಣಿಗೆ ಓತು ನಡೆಯದ ಪುರುಷನ್ಯಾತಕೆ ॥೨॥**

**ಸನ್ನೆಯರಿತು ನಡೆಯದಿರುವ ಸತಿಯು ಯಾತಕೆ**
**ಮನ್ನಣೆಂದೆ ನಡೆಸದಿರುವ ದೊರೆಯು ಯಾತಕೆ**
**ಮುನ್ನ ಕೊಟ್ಟು ಪಡೆಯದಿನ್ನು ಬಯಸಲ್ಯಾತಕೆ**
**ಚೆನ್ನ ಆದಿಕೇಶವನಲ್ಲದ ದೈವವ್ಯಾತಕೆ ॥೩॥**

ಭಾವ– ಸುಸಂಸ್ಕೃತ ಮಾನವನ ನೀತಿನಿಯಮಗಳನ್ನು ತುಂಬ ಮಾರ್ಮಿಕವಾಗಿ–ಒಲ್ಲದ್ದನ್ನು ಅಲ್ಲಗಳೆಯುತ್ತಾ, ನಲ್ಲದೆನಿಸಿದ್ದನ್ನು ಸೊಲ್ಲಿನಿಂದ ಗುಟ್ಟು ರಟ್ಟು ಮಾಡದೆ ಬರೀ ಗಲ್ಲ ಹಿಡಿದು ಮುದ್ದಿಸಿ ಒಲವು ತೋರುತ್ತಾ–ಸಾರುವ ಧ್ವನಿಯಿಂದ ಕೂಡಿದೆ ಈ ಕೀರ್ತನೆ.

'ನೀತಿಯರಿತು ನಡೆಯದಿರುವ ಬಂಟನ್ಯಾತಕೆ'

'ಮನ್ನಣೆಂದ ನಡೆಸದಿರುವ ದೊರೆಯು ಯಾತಕೆ' ಎಂಬ ಮಾತು ಕೃಷ್ಣದೇವರಾಯನ ತರುವಾಯ ವಿಜಯನಗರದ ಅರಸರ ಅಧಿಕಾರಿಗಳ ಸೈನಿಕರ ಅಧರ್ಮ ಅನೀತಿಗಳನ್ನು ಎತ್ತಿ ತೋರಿಸುತ್ತವೆ.

ಅರ್ಥ– ತೀರ್ಥ = ಪವಿತ್ರ ಕ್ಷೇತ್ರ
ಎಡೆ = ಎಲೆ ಅಥವಾ ತಟ್ಟೆ ಅರ್ಥಾತ್ ಅಗಲು
ಸೋತ = ಮನಸೋತ, ಬಯಸಿದ
ಓತು = ಪ್ರೀತಿಸಿ
ಸನ್ನೆ = ಸಂಜ್ಞೆ

* * * *



## ೧೭೦
## ಕಾಂಬೋದಿ – ಝಂಪತಾಳ

**ಅಜ್ಞಾನಿಗಳ ಕೂಡೆ ಅಧಿಕ ಸ್ನೇಹಕ್ಕಿಂತ**
**ಸುಜ್ಞಾನಿಗಳ ಕೂಡೆ ಜಗಳವೇ ಲೇಸು ॥ಪ॥**

**ಉಂಬುಡುವುದಕಿಲ್ಲದರಸಿನೋಲಗಕಿಂತ**
**ತುಂಬಿದೂರೊಳಗೆ ತಿರಿದುಂಬುವುದೆ ಲೇಸು**
**ಹಂಬಲಿಸಿ ಹಾಳ್ಹರಟೆ ಹೊಡೆವುದಕಿಂತ– ಹರಿ**
**ಯೆಂಬ ದಾಸರ ಕೂಡೆ ಸಂಭಾಷಣೆಯೆ ಲೇಸು ॥೧॥**

**ಒಡನೆ ಹಂಗಿಸುವನೋಗರವನುಂಬುದಕಿಂತ**
**ಕುಡಿನೀರು ಕುಡಿದುಕೊಂಡಿರುವುದೇ ಲೇಸು**
**ಬಿಡದೆ ಬಾಂಧವರೊಡನೆ ಕಡಿದಾಡುವುದಕಿಂತ**
**ಅಡವಿಯೊಳಗಜ್ಞಾತ ವಾಸವೇ ಲೇಸು ॥೨॥**

**ಮಸೆಯುತಿಹ ಮತ್ಸರದ ನೆರೆಯೊಳಿರುವುದಕಿಂತ**
**ಹಸನಿಲ್ಲದ ಹಾಳುಗುಡಿಯೇ ಲೇಸು**
**ಬಿಸಜಾಕ್ಷ ಕಾಗಿನೆಲೆಯಾದಿಕೇಶವರಾಯ**
**ವಸುಮತಿಯೊಳು ನಿನ್ನ ದಾಸತ್ವವೇ ಲೇಸು ॥೩॥**

ಭಾವ– ಅಸಂಸ್ಕೃತರೊಡನೆ ಸರಸ ಆಡುವುದಕ್ಕಿಂತ ಸುಸಂಸ್ಕೃತರೊಡನೆ ವಿರಸದಿಂದ ವಾದಕ್ಕಿಳಿಯುವುದು ಲಾಭ ಎಂಬ ಆಶಯದಿಂದ ಮೂಡಿದೆ. ಸಗಣಿಯವನ ಜೊತೆ ಸರಸ ಆಡೋದ್ಕಿಂತ ಗಂಧದವನ ಜೊತೆ ಗುದ್ದಾಡೋದು ಲೇಸು– ಎಂಬ ಜನಪದ ಗಾದೆಯ ಆಶಯವನ್ನು ಇದು ಒಳಗೊಂಡಿದೆ. ಅವರು ನೀಡುವ ದೃಷ್ಟಾಂತಗಳು

ಆಳವಾದ ಜೀವನಾನುಭವದಿಂದ ಬಾಗಿ ತೂಗುತ್ತಿರುವ ಹಣ್ಣು ಹಂಪಲುಗಳು.

ಅರ್ಥ– ಓಲಗ = ಸಭಾಸ್ಥಾನ
ಓಗರ = ಅನ್ನ
ಕುಡಿನೀರು = ಕೊನೆಯ ತೊಟ್ಟಿಕ್ಕುವ ನೀರು
ಕಡಿದಾಡು = ಜಗಳವಾಡು
ಬಿಸಜಾಕ್ಷ = ಕಮಲದಂತೆ ಕಣ್ಣುಳ್ಳವನು (ವಿಷ್ಣು)
ವಸುಮತಿ = ಭೂಮಿ

* * * *



## ೧೭೧
## ಸೌರಾಷ್ಟ್ರ – ಅಟತಾಳ

**ವರಕವಿಗಳ ಮುಂದೆ ನರಕವಿಗಳ ವಿದ್ಯೆ ತೋರಬಾರದು– ಈ**
**ಧರಣಿಯ ಕಲ್ಲಿಗೆ ಶರಣೆಂದು ಪೂಜೆಯ ಮಾಡಬಾರದು ॥ಪ॥**

**ಪಾಪಿಗಳಿದ್ದಲ್ಲಿ ರೂಪುಳ್ಳ ವಸ್ತುವ ತೋರಬಾರದು– ಬಹು**
**ಕೋಪಿಗಳಿದ್ದಲ್ಲಿ ಅನುಭವಗೋಷ್ಠಿಯ ಮಾಡಬಾರದು ॥೧॥**

**ಅಡಿ ಸತ್ತ ಮಡಕೆಗೆ ಜೋಡಿಸಿ ಒಲೆಗುಂಡು ಹೂಡಬಾರದು– ಬಹು**
**ಬಡತನ ಬಂದಾಗ ನೆಂಟರ ಬಾಗಿಲ ಸೇರಬಾರದು ॥೨॥**

**ಹರಿಯ ನಿಂದಿಸಿ ಹರ ಘನನೆಂದು ನರಕಕ್ಕೆ ಬೀಳಬಾರದು– ತಾ**
**ಪರರನು ಬೈದು ಪಾತಕಕೆ ಮುನ್ನೊಳಗಾಗಬಾರದು ॥೩॥**

**ಮಡದಿ ನುಡಿಯ ಕೇಳಿ ಜಗಳಕೊಬ್ಬರ ಕೂಡೆ ಹೋಗಬಾರದು– ಬಾ**
**ಯ್ಬಡಿಕರು ಇದ್ದಲ್ಲಿ ವಸ್ತಿ ಬಿಡಾರವ ಮಾಡಬಾರದು ॥೪॥**

**ಮುಂದೆ ಭಲಾ ಎಂದು ಹಿಂದೆ ನಿಂದಿಪರನ್ನು ಕೂಡಬಾರದು– ನಮ್ಮ**
**ತಂದೆ ಬಾಡದಾದಿಕೇಶವನ ಸ್ಮರಣೆಯ ಬಿಡಬಾರದು ॥೫॥**

ಭಾವ– ನೀತಿರೂಪದಲ್ಲಿ ಜನರಿಗೆ ನೀತಿ ಹೇಳಿರುವ ರೀತಿ ಮನೋಜ್ಞವಾಗಿದೆ. ಕನಕದಾಸರ ಅಪಾರವಾದ ಜೀವನಾನುಭವ ಲೋಕಾನುಭವಗಳಿಗೆ ಹೆಗ್ಗುರುತಾಗಿದೆ. 'ಪಾಪಿಗಳಿದ್ದಲ್ಲಿ ರೂಪುಳ್ಳ ವಸ್ತುವ ತೋರಬಾರದು' ಮೊದಲಾದ ಮಾತುಗಳು ಎಲ್ಲ ಕಾಲಕ್ಕೂ ಎಲ್ಲರಿಗೂ ಬೆಳಕು ನೀಡುವ ದಾರಿ ದೀಪಗಳು

ಅರ್ಥ– ವರಕವಿ = ಶ್ರೇಷ್ಠಕವಿ (ಸೃಷ್ಟಿಕರ್ತ)
ಅಡಿ = ತಳ
ವಸ್ತಿ = ವಸತಿ
ಬಿಡಾರ = ಶಿಬಿರ, ಬಿಡದಿ

* * * *



## ೧೭೨
## ಕಾಂಬೋದಿ – ಝಂಪೆತಾಳ

ಬಾಯಿ ನಾರಿದ ಮೇಲೆ ಏಕಾಂತವೆ
ತಾಯಿ ತೀರಿದ ಮೇಲೆ ತೌರಾಸೆಯೆ ॥ಪ॥

ಕಣ್ಣು ಕೆಟ್ಟ ಮೇಲೆ ಕಡುರೂಪ ಚೆಲ್ವಿಕೆಯೆ
ಬಣ್ಣಗುಂದಿದ ಮೇಲೆ ಬಹುಮಾನವೆ
ಪುಣ್ಯ ತೀರಿದ ಮೇಲೆ ಪರಲೋಕ ಸಾಧನವೆ
ಸುಣ್ಣವಿಲ್ಲದ ವೀಳ್ಯವದು ಸ್ವಾದುಮಯವೆ ॥೧॥

ಕಿಲುಬಿನಾ ಬಟ್ಟಲೊಳು ಹುಳಿ ಕಲಸಿ ಉಣಬಹುದೆ
ಚಳಿಜ್ವರಕೆ ಚಂದನದ ಲೇಪ ಹಿತವೆ
ಮೊಲೆ ಬಿದ್ದ ಹೆಣ್ಣಿನೊಳು ಮೋಹಕ್ಕೆ ಸೊಗಸಹುದೆ
ಬೆಲೆ ಬಿದ್ದ ಸರಕಿನೊಳು ಲಾಭ ಉಂಟೆ ॥೨॥

ಪಥ್ಯ ಸೇರದ ಮೇಲೆ ನಿತ್ಯ ಸುಖವೆನಬಹುದೆ
ಸತ್ತ್ವ ತಗ್ಗಿದ ಮೇಲೆ ಸಾಮರ್ಥ್ಯವೆ
ಪೃಥ್ವಿಯೊಳು ಕಾಗಿನೆಲೆಯಾದಿಕೇಶವ ನಿನ್ನ
ಸತ್ಯವಾದ ಭಕ್ತಿ ಇರದವಗೆ ಮುಕ್ತಿಯುಂಟೆ ॥೩॥

ಭಾವ– ಭಕ್ತಿಯಿಲ್ಲದವನಿಗೆ ಮುಕ್ತಿಯಿಲ್ಲ ಎಂಬ ಭಾವ ಹಲವಾರು ದೃಷ್ಟಾಂತಗಳ ಮೂಲಕ ಅಭಿವ್ಯಕ್ತಗೊಂಡಿರುವುದು ಈ ಕೀರ್ತನೆಯ ವಿಶೇಷ. ದೃಷ್ಟಾಂತಗಳಲ್ಲಿ ಕನಕದಾಸರ ಜೀವನಾನುಭವದ ನವನೀತ ಗರಣೆಗೊಂಡಿದೆ.

ಅರ್ಥ– ಬಾಯಿ ನಾರಿದ ಮೇಲೆ = ಗುಟ್ಟು ರಟ್ಟಾದ ಮೇಲೆ, ದುರ್ವಾಸನೆ ಆವರಿಸಿದ ಮೇಲೆ
ಬಣ್ಣ = ಮಾನ, ಕಾಂತಿ
ಚಂದನ = ಶ್ರೀಗಂಧ
ಪಥ್ಯ = ಹಿತಮಿತ ಆಹಾರ, ಕಟ್ಟುಪಾಡಿನ ಆಹಾರ

* * * *



## ೧೭೩
## ಮುಖಾರಿ – ಝಂಪೆತಾಳ

ದ್ರೋಹಿಗಳ ವಿವರವನು ನಾ ಪೇಳ್ವೆನಯ್ಯ ॥ಪ॥

ಕೂಡಿದೆಡೆಯಲಿ ಕಪಟವೆಸಗುವನೆ ದ್ರೋಹಿ
ಮಾಡಿದುಪಕಾರವನು ಮರೆವವನೆ ದ್ರೋಹಿ
ಚಾಡಿ ಕೊಂಡೆಗಳನಾಡಿ ನಡೆವವನೆ ದ್ರೋಹಿ
ರೂಢಿಯೊಳು ಬಾಳುವರ ಸಹಿಸದವನೆ ದ್ರೋಹಿ ॥೧॥

ಸತಿಯಿದ್ದು ಪರಸತಿಯ ಬಯಸುವನೆ ದ್ರೋಹಿ
ಹೆತ್ತವರೊಡನೆ ಕಲಹ ಮಾಡುವನೆ ದ್ರೋಹಿ
ಯತಿಗಳನು ಒಂದೆ ಸಮ ನಿಂದಿಸುವನೆ ದ್ರೋಹಿ
ಸತಿಯನ್ನು ಪರರ ವಶ ಗೈವವನೆ ದ್ರೋಹಿ ॥೨॥

ಹೊನ್ನಿದ್ದು ಅನ್ನದಾನ ಮಾಡದವನೆ ದ್ರೋಹಿ
ತನ್ನ ಗುರು ಸತಿಯ ಬಯಸುವವನೇ ದ್ರೋಹಿ
ಸನ್ನುತಾಂಗ ಕಾಗಿನೆಲೆಯಾದಿಕೇಶವನ
ತನ್ನೊಳಗೆ ತಾ ತಿಳಿದು ಸುಖಿಸದವನೆ ದ್ರೋಹಿ ॥೩॥

ಭಾವ– ಅನೀತಿಯನ್ನು ಎತ್ತಿ ಹೇಳುವ ಕೀರ್ತನೆ ಅನುಕ್ತವಾಗಿ ನೀತಿ ಯಾವುದೆಂಬುದನ್ನು ಧ್ವನಿಸುತ್ತದೆ.

ಅರ್ಥ– ಕಪಟ = ಮೋಸ, ಕೊಂಡೆ = ಚಾಡಿ, ರೂಢಿ = ಪ್ರಪಂಚ, ಒಂದೆ ಸಮ = ಸತತವಾಗಿ

* * * *

## ೧೭೪
## ರೇಗುಪ್ತಿ – ಆದಿತಾಳ

ಸಾರಿ ದೂರಿ ಹೇಳುತೇನೆ ಕೆಟ್ಟಿ ಕಂಡ್ಯ ಬಡ್ಡಿ ಮನವೆ ॥ಪ॥
ದೂರೋ ಬುದ್ಧಿ ಮಾಡಬೇಡ ಕೈಯೊಳಿಕೊ ಕಡ್ಡಿ
ನಿನ್ನ ಕೈಯೊಳಿಕೊ ಕಡ್ಡಿ ॥ಅ॥

ಕೋಪವನ್ನೆ ಮಾಡದಿರು ಪಾಪಕೆ ಗುರಿಯಾಗದಿರು
ಶ್ರೀಪತಿಯ ನಾಮವನು ನೀ ಪಠಿಸುತಲಿರು ಮನವೆ ॥೧॥

ಅಷ್ಟ ಮದದಿ ಮೆರೆಯದಿರು ನಷ್ಟಕೆ ಗುರಿಯಾಗದಿರು
ದುಷ್ಟಸಂಗವನ್ನು ಮಾಡಿ ಭ್ರಷ್ಟನಾಗಬೇಡ ಮನವೆ ॥೨॥

ಸಿರಿಯ ಮೆಚ್ಚಿ ಮೆರೆಯದಿರು ಬರಿದೆ ಹೊತ್ತ ಕಳೆಯದಿರು
ಪರರ ನಿಂದೆಯನ್ನು ಮಾಡಿ ನರಕಿಯಾಗಬೇಡ ಮನವೆ ॥೩॥

ಕಾಯವನ್ನು ನಂಬದಿರು ಮಾಯಕೆ ಮರುಳಾಗದಿರು
ಸ್ತ್ರೀಯರನ್ನು ಕಂಡು ನೀನು ಬಯಸದಿರು ಮರುಳು ಮನವೆ ॥೪॥

ನಿನ್ನ ನಿಜವ ನಂಬದಿರು ಉನ್ನತಾಸೆ ಮಾಡದಿರು
ಚೆನ್ನಾದಿಕೇಶವನ ಪಾದವನ್ನು ನೀನು ನಂಬು ಮನವೆ ॥೫॥

ಭಾವ– ಕೋಪತಾಪ, ಪರನಿಂದೆ, ಮೊದಲಾದ ದುಷ್ಕೃತ್ಯಗಳೀಗೆ ಅಂಟಿಕೊಳ್ಳದೆ, ಸುಕೃತದ ಭಗವದ್‌ಭಕ್ತಿಯನ್ನು ಬೆಳಸಿಕೊಳ್ಳಿ ಎಂದು ಜನರಿಗೆ ಕರೆನೀಡಲಾಗಿದೆ.



ಅರ್ಥ– ದೂರೋ ಬುದ್ಧಿ = ಅಪವಾದ ಹೊರಿಸುವ ಬುದ್ಧಿ
ಅಷ್ಟಮದ = ಎಂಟು ಮದಗಳು
ಕಾಯ = ಶರೀರ

* * * *

## ೧೭೫
## ಮುಖಾರಿ – ಝಂಪೆ ತಾಳ

ಏನು ಇಲ್ಲದ ಎರಡು ದಿನದ ಸಂಸಾರ
ಜ್ಞಾನದಲಿ ದಾನಧರ್ಮವ ಮಾಡಿರಯ್ಯ ॥ಪ॥

ಹಸಿದು ಬಂದವರಿಗೆ ಅಶನವೀಯಲು ಬೇಕು
ಶಿಶುವಿಗೆ ಪಾಲ್ಬೆಣ್ಣೆಯನುಣಿಸಬೇಕು
ಹಸನಾದ ಭೂಮಿಯನು ದಾರೆಯೆರೆಯಲು ಬೇಕು
ಪುಸಿಯಾಡದಲೆ ಭಾಷೆ ನಡೆಸಲೇ ಬೇಕು ॥೧॥

ಕಳ್ಳತನಗಳ ಮಾಡಿ ಒಡಲ ಹೊರೆಯಲು ಬೇಡ
ಕುಳ್ಳಿರ್ದ ಸಭೆಯೊಳಗೆ ಕುತ್ಸಿತವು ಬೇಡ
ಒಳ್ಳೆಯವ ನಾನೆಂದು ಬಲು ಹೆಮ್ಮೆ ಪಡಬೇಡ
ಬಾಳ್ವೆ ಸ್ಥಿರವೆಂದು ನೀ ನಂಬಿ ಕೆಡಬೇಡ ॥೨॥

ದೊರೆತನವು ಬಂದಾಗ ಕೆಟ್ಟುದ ನುಡಿಯಬೇಡ
ಸಿರಿ ಬಂದ ಕಾಲಕ್ಕೆ ಬಲು ಮೆರೆಯಬೇಡ
ಸಿರಿವಂತ ಶ್ರೀ ಕಾಗಿನೆಲೆಯಾದಿಕೇಶವನ
ಚರಣ ಕಮಲವ ಸೇರಿ ಸುಖಿಯಾಗು ಮನುಜ ॥೩॥

ಭಾವ– ಅನಿತ್ಯವಾದ ಜೀವನದಲ್ಲಿ ಸ್ವಂತ ಹಿತಕ್ಕೇ ಗಂಟು ಬೀಳದೆ ಪರಹಿತದಲ್ಲಿ ಪರಮಾತ್ಮನ ಕೃಪೆಗೆ ಪಾತ್ರರಾಗಿ ಎಂಬುದು ಈ ಕೀರ್ತನೆಯ ಧೋರಣೆ.

ಅರ್ಥ್– ಅಶನ = ಅನ್ನ, ಪುಸಿ = ಸುಳ್ಳು, ಕುತ್ಸಿತ = ನಿಂದೆ

* * * *



## ೧೭೬
## ಕಾಂಬೋದಿ – ಝಂಪೆ ಥಾಳ

ಎನ್ನ ನುಡಿ ಪುಸಿಯಲ್ಲ ಈ ಜಗದೊಳು ॥ಪ॥

ಅರವಿಂದವಿಲ್ಲದಿಹ ಕೊಳವು ತಾ ಕಂಗಳವು
ಹರಿಣಾಂಕನಿಲ್ಲದಿಹ ಇರುಳು ಮರುಳು
ಸ್ವರಭೇದವಿಲ್ಲದಿಹ ಸಂಗೀತವಿಂಗೀತ
ಸರಸವಿಲ್ಲದ ಸತಿಯ ಭೋಗ ತನುರೋಗ ॥೧॥

ಪಂಥ ಪಾಡುಗಳನರಿಯದ ಬಂಟನವ ತುಂಟ
ಅಂತರವರಿಯದಾ ವೇಶಿ ಹೇಸಿ
ದಂತಿಯಿಲ್ಲದ ಅರಸು ಮುರಿದ ಕಾಲಿನ ಹೊರಸು
ಅಂತಸ್ಥವಿಲ್ಲದ ಪ್ರಧಾನಿ ಮದ್ಯಪಾನಿ ॥೨॥

ಮಾಗಿಯಲಿ ಸತಿಯನಗಲಿದ ಕಾಂತನವ ಭ್ರಾಂತ
ಪೂಗಣೆಯ ಗೆಲಿಯದಿಹ ನರ ಗೋಖುರ
ಭೋಗಿಸದೆ ಇಹಪರಕೆ ಗಳಿಸಿದರ್ಥ ಅಪಾರ್ಥ
ಕಾಗಿನೆಲೆಯಾದಿಕೇಶವನ ಭಕ್ತ ಮುಕ್ತ ॥೩॥

ಭಾವ– ಅನುಭವ ಸತ್ಯಗಳನ್ನು ಕರಿಮಣಿಗಳಂತೆ ಪೋಣಿಸಿರುವ ಕೀರ್ತನೆಯಿದು 'ಅಂತಸ್ಥವಿಲ್ಲದ ಪ್ರಧಾನಿ ಮದ್ಯಪಾನಿ' ಎಂಬ ಮಾತು ಕೃಷ್ಣದೇವರಾಯನ ತರುವಾಯ ಅಧಿಕಾರ ದಾಹದ ಅಧ್ವಾನವನ್ನು ಸೂಚಿಸುತ್ತದೆ.

ಅರ್ಥ– ಪುಸಿ = ಪೊಳ್ಳು; ಅರವಿಂದ = ಕಮಲ
ಕಂಗಳವು (<ಕಣ್ಣು+ಕಳವು) = ಆಂಧ್ಯ, ಕುರುಡು
ಹೊರಸು = ಹಗ್ಗದಿಂದ ಹೆಣೆದ ಮಂಚ

ಹರಿಣಾಂಕ = ಜಿಂಕೆಯನ್ನು ಧರಿಸಿದವನು (ಚಂದ್ರ)
ಇಂಗೀತ (<ಇಂಗು+ಗೀತ) = ಬತ್ತಿ ಹೋಗುವ ಗೀತ
ಪಂಥ ಪಾಡುಗಳು = ಜಿದ್ದಿನ ತೊಂದರೆಗಳು ಅಥವಾ ದಾರಿಯ ತೊಂದರೆಗಳು,
ವೇಶಿ = ವೇಶ್ಯೆ, ಸೂಳೆ
ದಂತಿ = ಆನೆ
ಅಂತಸ್ಥ = ಒಳಗೆ, ರಹಸ್ಯ
ಪೂಗಣೆ = ಮನ್ಮಥ
ಗೋಖುರ = ಗೊರಸು
ಅಪಾರ್ಥ (ಅಪ+ಅರ್ಥ) = ಅನ್ಯಾಯದ, ನಿಷ್ಪ್ರಯೋಜಕ ಐಶ್ವರ್ಯ

* * * *



## ೧೭೭
## ಮುಖಾರಿ – ಝಂಪೆ

**ನೇಮವಿಲ್ಲದ ಹೋಮವೇತಕೆ**
**ರಾಮನಾಮವಿರದ ಮಂತ್ರವೇತಕೆ ॥ಪ॥**

**ನೀರು ಮುಣುಗಲು ಏಕೆ ನಾರಿಯಳ ಬಿಡಲೇಕೆ**
**ವಾರಕೊಂದುಪವಾಸ ಮಾಡಲೇಕೆ**
**ನಾರಸಿಂಹನ ದಿವ್ಯ ನಾಮವನು ನೆನೆದರೆ**
**ಘೋರ ಘಾತಕವೆಲ್ಲ ತೊಲಗಿ ಹೋಗುವುದು ॥೧॥**

**ಅಂಬರವ ತೊರೆಯಲೇಕೆ ತಾಂಬೂಲ ಬಿಡಲೇಕೆ**
**ಡಂಭಕದ ವೃತ್ತಿಯಲಿ ಇರಲೇತಕೆ**
**ಅಂಬುಜನಾಭನನು ಭಾವದಲಿ ನೆನೆದರೆ**
**ಇಂಬುಂಟು ವೈಕುಂಠವೆಂಬ ಪುರದೊಳಗೆ ॥೨॥**

**ಬಂಧದೊಳಗೆ ಬಿದ್ದು ಹರಿಯನೆ ನೆನೆಯುತಿರೆ**
**ಬೆಂದು ಹೋಗುವುವು ದುರಿತಂಗಳೆಲ್ಲ**
**ಬಂದ ದುಃಖಗಳೆಲ್ಲ ನಿಲ್ಲದಲೆ ಕಳೆಯುವುವು**
**ಚೆಂದಾಗಿ ನೆಲೆಯಾದಿಕೇಶವನ ನೆನೆಯೆ ॥೩॥**

ಭಾವ– ನಿಷ್ಠೆ ನೇಮವಿಲ್ಲದ ಯಾಂತ್ರಿಕ ಆಚರಣೆಗಳು– ಬಲಿ ಮುಂತಾದ ತಾಮಸ ಆಚರಣೆಗಳು ಹೇಗೆ ತ್ಯಾಜ್ಯಾರ್ಹವೋ ಹಾಗೆಯೇ ಅರ್ಥ ರಹಿತ ಯಾಂತ್ರಿಕ ಸಾತ್ವಿಕಾಚರಣೆಗಳೂ ಸಹ– ಜರಡಿಯಲ್ಲಿ ನೀರು ತಂದಂತೆ ನಿಷ್ಫಲ ಎಂದು ಕನಕದಾಸರು ಈ ಹಾಡಿನಲ್ಲಿ ನೇರವಾಗಿ ನುಡಿದಿದ್ದಾರೆ.

ಅರ್ಥ– ಅಂಬರ = ವಸ್ತ್ರ
ಅಂಬಜುನಾಭ = ವಿಷ್ಣು
ಇಂಬು = ಆಶ್ರಯ
ದುರಿತ = ಪಾಪ

* * * *



## ೧೭೮
## ನಾದನಾಮ ಕ್ರಿಯ – ಏಕತಾಳ

ಎಲ್ಲಾರು ಮಾಡುವುದು ಹೊಟ್ಟೆಗಾಗಿ ಗೇಣುಬಟ್ಟೆಗಾಗಿ ॥ಪ॥

ವೇದಶಾಸ್ತ್ರ ಪಂಚಾಂಗವ ಓದಿಕೊಂಡು ಅನ್ಯರಿಗೆ
ಬೋಧನೆಯ ಮಾಡುವುದು ಹೊಟ್ಟೆಗಾಗಿ ಗೇಣುಬಟ್ಟೆಗಾಗಿ ॥೧॥

ಚಂಡಭಟರಾಗಿ ನಡೆದು ಕತ್ತಿ ಢಾಲು ಕೈಲಿ ಹಿಡಿದು
ಖಂಡ ತುಂಡ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥೨॥

ಅಂಗಡಿ ಮುಂಗಟ್ಟನ್ಹೂಡಿ ವ್ಯಂಗ್ಯ ಮಾತುಗಳನ್ನಾಡಿ
ಭಂಗ ಬಿದ್ದು ಗಳಿಸುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥೩॥

ಕುಂಟೆ ತುದಿಗೆ ಕೊರಡು ಹಾಕಿ ಹೆಂಟೆ ಮಣ್ಣು ಸಮನು ಮಾಡಿ
ರೆಂಟೆ ಹೊಡೆದು ಬೆಳೆಸುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥೪॥

ಬೆಲ್ಲದಂತೆ ಮಾತನಾಡಿ ಎಲ್ಲರನ್ನು ಮರುಳು ಮಾಡಿ
ಸುಳ್ಳು ಬೊಗಳಿ ತಿಂಬುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥೫॥

ಕೊಟ್ಟಣವನು ಕುಟ್ಟಿಕೊಂಡು ಕಟ್ಟಿಗೆಯನು ಹೊತ್ತುಕೊಂಡು
ಕಷ್ಟ ಮಾಡಿ ಉಣ್ಣುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥೬॥

ತಾಳ ದಂಡಿಗೆ ಶ್ರುತಿ ಮೇಳ ತಂಬೂರಿಯ ಹಿಡಿದುಕೊಂಡು
ಸೂಳೆಯಂತೆ ಕುಣಿಯುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥೭॥

**ಸಂನ್ಯಾಸಿ ಜಂಗಮ ಜೋಗಿ ಜಟ್ಟಿ ಮೊಂಡ ಬೈರಾಗಿ**
**ನಾನಾ ವೇಷಗಳೆಲ್ಲ ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥೮॥**

**ಹಳ್ಳದಲ್ಲಿ ಕುಳಿತುಕೊಂಡು ಕಲ್ಲು ದೊಣ್ಣೆ ಹಿಡಿದುಕೊಂಡು**
**ಕಳ್ಳತನವ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥೯॥**

**ಅಂದಣ ಪಲ್ಲಕ್ಕಿ ಏರಿ ಮಂದಿ ಮಾರ್ಬಲ ಕೂಡಿ**
**ಚಂದದಿಂದ ಮೆರೆಯುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥೧೦॥**

**ಉನ್ನತ ಕಾಗಿನೆಲೆಯಾದಿಕೇಶವನಾ ಧ್ಯಾನವನ್ನು**
**ಮನಮುಟ್ಟಿ ಮಾಡುವುದು ಮುಕ್ತಿಗಾಗಿ ಆನಂದಕಾಗಿ ॥೧೧॥**

ಭಾವ– ಈ ಕೀರ್ತನೆಯಲ್ಲಿ ಹೊಟ್ಟೆಬಟ್ಟೆಯ ಸಮಸ್ಯಾನಿವಾರಣೆಯೇ ಎಲ್ಲ ವೃತ್ತಿಗಳ ಪರಮಧ್ಯೇಯ ಎಂಬುದನ್ನು ಸಮಭಾವದಿಂದ ಸ್ತಿತಪ್ರಜ್ಞರಾಗಿ ವರ್ಣಿಸಿರುವ ಕನಕದಾಸರು ಆ ಹೊಟ್ಟೆ ಬಟ್ಟೆಯ ಜೊತೆಯಲ್ಲೆ ಕೊಟ್ಟೆ (ಹಣ್ಣುಕಾಯಿಗಳ ಒಳಗಿರುವ ಬೀಜ; ದೇಹದೊಳಗಿರುವ ಆತ್ಮ ಎಂಬುದು ಗೃಹೀತಾರ್ಥ)ಯನ್ನೂ ಮರೆಯಬೇಡಿ ಎಂದು ಕಿವಿ ಮಾತು ಹೇಳಿದ್ದಾರೆ. ಹೊಟ್ಟೆ ಬಟ್ಟೆಯದು ಲೌಕಿಕ ಸಮಸ್ಯೆಯಾದರೆ ಕೊಟ್ಟೆಯದು ಆಧ್ಯಾತ್ಮಿಕ ಸಮಸ್ಯೆ ಎಂಬುದನ್ನು ಸೂಚಿಸಿದ್ದಾರೆ; ಹೊಟ್ಟೆ ಬಟ್ಟೆಯ ಸಮಸ್ಯೆಯ ಮೇಲೆ ನಿಗವಿರುವಂತೆ ಕೊಟ್ಟೆಯ (ಆತ್ಮದ) ಸಮಸ್ಯೆಯ ಮೇಲೂ ನಿಗವಿರಲಿ, ಅದನ್ನು ಸಾಧಿಸಿದರೆ ಸಂತೋಷ ಸಂತೃಪ್ತಿ ಅಧಿಕ ಎನ್ನುವತ್ತ ಗಮನ ಸೆಳೆದಿದ್ದಾರೆ– ಕೊನೆಯ ನುಡಿಯ ತಿರುವಿನ ಮೂಲಕ.

ಅರ್ಥ– ಎಲ್ಲಾರು (<ಎಲ್ಲವರು) = ಎಲ್ಲರು
ಭಟರು = ಸೈನಿಕರು, ಢಾಲು = ಗುರಾಣಿ
ಕುಂಟೆ = ಹರಗುವ ಉಪಕರಣ, ರೆಂಟೆ = ನೇಗಿಲು

* * * *



## ೧೭೯
## ಹಂಸಧ್ವನಿ – ರೂಪಕ ತಾಳ

**ಸಜ್ಜನರ ಸಂಗದೊಳಗಿರಿಸೆನ್ನ ರಂಗ ॥ಪ॥**
**ದುರ್ಜನರ ಸಂಗ ನಾನೊಲ್ಲೆ ಮಂಗಳಾಂಗ ॥ಅ॥**

**ಕೂಡಿದ ಸಭೆಯಲಿ ಕುತ್ಸಿತವ ನುಡಿವನ ಸಂಗ**
**ನಾಡಿನೊಳಗನ್ಯಾಯವ ಮಾಡುವನ ಸಂಗ**
**ಬೇಡಿದರು ಕೊಡದಿರುವ ಕಡುಲೋಭಿಯ ಸಂಗ**
**ಮೂಢ ಮೂರ್ಖರ ಸಂಗ ಬಲು ಭಂಗ ಎಲೊ ರಂಗ ॥೧॥**

**ಗುರು ಸತಿಗೆ ಪರಸತಿಗೆ ಎರಡು ಬಗೆವರ ಸಂಗ**
**ಗುರು ನಿಂದೆ ಪರನಿಂದೆ ಮಾಡುವರ ಸಂಗ**
**ಪರಹಿತಾರ್ಥದ ಧರ್ಮವರಿಯದವರ ಸಂಗ**
**ಮರುಳ ಪಾಮರ ಸಂಗ ಬಲು ಭಂಗ ಎಲೊ ರಂಗ ॥೨॥**

**ಆಗಮದ ಅನ್ವಯವನರಿಯದವನ ಸಂಗ**
**ರೋಗದಲಿ ಆವಾಗಲು ಮುಲುಕುವವನ ಸಂಗ**
**ಕಾಗಿನೆಲೆಯಾದಿಕೇಶವನಂಘ್ರಿ ನೆನೆಯದಿಹ**
**ಭಾಗವತರ ಸಂಗ ಬಲು ಭಂಗ ಎಲೊರಂಗ ॥೩॥**

ಭಾವ– ದುರ್ಜನರು ಯಾರು ಎಂಬುದನ್ನು ಹೇಳುತ್ತಲೇ ಸಜ್ಜನರು ಎಂಥವರು ಎಂಬುದನ್ನು ಧ್ವನಿಸಿರುವ ಕೀರ್ತನೆ ಇದು. ನೀತಿ ಧರ್ಮದ ಎಲ್ಲೆಕಟ್ಟನ್ನು ಮೀರಿದವರು ದುರ್ಜನರು; ಅದನ್ನು ಪರಿಪಾಲಿಸುವವರು ಸಜ್ಜನರು ಎಂಬುದು ವ್ಯಕ್ತವಾಗಿದೆ.

ಅರ್ಥ– ಕುತ್ಸಿತ = ದೂಷಣೆ, ನಿಂದೆ
ಮರುಳ = ಹುಚ್ಚ
ಪಾಮರ = ಅಜ್ಞಾನಿ
ಆಗಮ = ಶಾಸ್ತ್ರ
ಭಾಗವತ =ಭಕ್ತ
ಮುಲುಕು = ಕೊರಗು, ತಿಣುಕು

* * * *



## ೧೮೦
## ಮುಖಾರಿ – ಝಂಪೆತಾಳ

ಅಹುದಾದರಹುದೆನ್ನಿ ಅಲ್ಲವಾದರಲ್ಲವೆನ್ನಿ ॥ಪ॥
ಬಹುಜನರು ನೆರೆ ತಿಳಿದು ಪೇಳಿ ಮತ್ತಿದನು ॥ಅ॥

ದೇವರಿಲ್ಲದ ಗುಡಿಯ ಪಾಳು ಬಿದ್ದಂಗಡಿಯು
ಭಾವವಿಲ್ಲದ ಭಕುತಿ ಅದು ಕುಹಕ ಯುಕುತಿ
ಹೇವವಿಲ್ಲದ ಹೆಣ್ಣು ಗಜುಗ ಬೆಳೆದ ಕಣ್ಣು
ಸೇವೆಯರಿಯದ ದಣಿಯು ಕಲ್ಲಿನಾ ಕಣೆಯು ॥೧॥

ಧರ್ಮವಿಲ್ಲದ ಅರಸು ಮುರಿದ ಕಾಲಿನ ಹೊರಸು
ನಿರ್ಮಲಿಲ್ಲದ ಮನಸು ಅದು ಕಜ್ಜಿ ತಿನಿಸು
ಶರ್ಮವಿಲ್ಲದ ಗಂಡು ಕರಿಯ ಒನಕೆಯ ತುಂಡು
ಮರ್ಮವಿಲ್ಲದ ಮಾತು ಒಡಕು ಮಡಕೆ ತೂತು ॥೨॥

ಮಕ್ಕಳಿಲ್ಲದ ಸಿರಿಯು ಕೊಳೆತ ತೆಂಗಿನ ತುರಿಯು
ಸೌಖ್ಯವಿಲ್ಲದ ಊಟ ಅದು ಕಾಳಕೂಟ
ಒಕ್ಕಲಿಲ್ಲದ ಊರು ಕೊಳೆತು ನಾರುವ ನೀರು
ಸೊಕ್ಕಿನಡೆಯುವ ಭೃತ್ಯ ಅವ ಕ್ರೂರ ಕೃತ್ಯ ॥೩॥

ಕಂಡು ಕರೆಯದ ನೆಂಟ ಮೊನೆಯು ಕೆಟ್ಟಿಹ ಕಂಟ
ಉಂಡು ನಗದಿಹ ಮೋರೆ ಅದು ಕಹಿಯ ಸೋರೆ
ದಂಡಿಗಂಜುವ ಬಂಟ ಒಡಕು ಹರವಿಯ ಕಂಠ
ಗಂಡಗಂಜದ ನಾರಿ ಅವಳೆ ಹೆಮ್ಮಾರಿ

**ಬಿಟ್ಟು ನಡೆಯುವ ಗೆಣೆಯು ಹರಕು ತೊಗಲಿನ ಮಿಣಿಯು**
**ಕೊಟ್ಟು ಪೇಳುವ ದಾತ ಅವ ಹೀನ ಜಾತ**
**ಸೃಷ್ಟಿಯೊಳು ಕಾಗಿನೆಲೆಯಾದಿಕೇಶವನಂಘ್ರಿ**
**ಮುಟ್ಟಿ ಭಜಿಸದ ನರನು ಅವನೆ ವಾನರನು ॥೫॥**

ಭಾವ– ಸಂಸ್ಕೃತಿಯ ಕೊರತೆ ಯಾವುದು ಎಂದು ಹೇಳುತ್ತಾ ಅದರ ಒರತೆಯ ಮೂಲಕ್ಕೆ ಒತ್ತುಕೊಡುವ ಲೋಕನೀತಿ ಈ ಕೀರ್ತನೆಯ ಉಸಿರು. 'ಧರ್ಮವಿಲ್ಲದ ಅರಸು ಮುರಿದ ಕಾಲಿನ ಹೊರಸು' 'ಸೊಕ್ಕಿ ನಡೆಯುವ ಭೃತ್ಯ ಅವ ಕ್ರೂರಕೃತ್ಯ' ಮೊದಲಾದ ಮಾತುಗಳು ಅಧಿಕಾರ ಐಶ್ವರ್ಯಗಳ ಮದದಲ್ಲಿ ವಿಜಯನಗರ ದುರಂತದ ಜಾರು ಬಂಡೆಯಲ್ಲಿ ಕೂತದ್ದನ್ನು ಸೂಚಿಸುತ್ತವೆ.

ಅರ್ಥ– ಹೇವ = ಹೆಜ್ಜೆ, ನಾಚಿಕೆ
ಗಜುಗ = ದುರ್ಮಾಂಸದ ಗ್ರಂಥಿ
ಕಣಿಯು = ಗಣಿಯು, ಕಾಠಿಣ್ಯದ ಆಗರ

೨. ಹೊರಸು = ಹಗ್ಗದಿಂದ ಹೆಣೆದ ಮಂಚ
ತಿನಿಸು = ನವೆ, ಕಡಿತ
ಶರ್ಮ = ಆನಂದ, ಆಶ್ರಯ
ಮರ್ಮ = ಗುಟ್ಟು
೩. ಕಾಳಕೂಟ = ವಿಷ
ನಾರುವ = ದುರ್ವಾಸನೆ ಬರುವ
ಸೊಕ್ಕಿ = ಮದವೇರಿ, ಭೃತ್ಯ = ಸೇವಕ
೪. ಕಂಟ = ತಾಳೆಗರಿಯ ಮೇಲೆ ಬರೆಯುವ ಲೆಕ್ಕಣಿಕೆ
ಮೋರೆ = ಮುಖ, ಬಂಟ = ಸೈನಿಕ, ಶೂರ
೫. ಗೆಣೆಯು = ಜೊತೆಗಾರ, ಮಿಣಿಯು = ಹಗ್ಗ
ಅಂಘ್ರಿ = ಪಾದ, ವಾನರ = ಕೋತಿ

* * * *



## ೧೮೧
## ಸಾವೇರಿ – ಮಟ್ಟೆ

**ಅಹುದಾದಡಹುದೆನ್ನಿ ಅಲ್ಲವಾದಡಲ್ಲವೆನ್ನಿ**
**ಸಹಜವಿದು ಸಜ್ಜನರ ಮನಕೆ ಸಮ್ಮತವು ॥ಪ॥**

**ಕರಿಕೆಯಿಲ್ಲದ ಬಾಳು ಕರಿವರದನ ದಯೆ ಕೇಳು**
**ಅರಿತವರಿರೆ ಮನೆಯೊಳು ಅದು ಸ್ವರ್ಗವು ಕೇಳು**
**ಕರಣಿಕರೊಳಗಣ ನಂಟು ಕಟ್ಟಿದ ಹಣವಿನ ಗಂಟು**
**ಗುರುವಿನ ವಾಕ್ಯದಿ ಭಕ್ತಿ ಇಹಪರಕದು ಮುಕ್ತಿ ॥೧॥**

**ಒಕ್ಕಲಿಗಾಗದ ಗವುಡ ಮೇಲೆರಗಿ ಕುಕ್ಕುವ ಲಗಡ**
**ಮಕ್ಕಳ ಪಡೆವುದು ಪುಣ್ಯ ನಲಿವು ನಗೆಗಳ ಪಣ್ಯ**
**ಇಕ್ಕುವ ಅನ್ನವು ಧರ್ಮ ಇಹಪರಕದು ಅತಿ ಧರ್ಮ**
**ಬಿಕ್ಕಳಿಕಿಕ್ಕಿದ ವ್ಯಾಧಿ ಯಮಪುರಕದು ಹಾದಿ ॥೨॥**

**ಕಂಡರೆ ಸೇರದ ನಾರಿ ಕೆಂಡವನುಗುಳುವ ಮಾರಿ**
**ದಂಡವ ತೆರಿಸುವ ಪುತ್ರ ಹಗೆಗಳಿಗವ ಮಿತ್ರ**
**ಉಂಡರೆ ಸೇರದ ತಾಯಿ ಉರಗನ ಮೆಕ್ಕೆ ಕಾಯಿ**
**ಹಿಂಡನಗಲಿದ ಗೋವು ಹುಲಿಗಿಕ್ಕಿದ ಮೇವು ॥೩॥**

**ಪರನಾರಿಯರೊಡನಾಟ ಗರಳವನಟ್ಟುಂಬಾಟ**
**ಬರೆದೂ ಅರಿಯದ ಲೆಕ್ಕ ಕಡೆಯಲಿ ಬಹು ದುಕ್ಕ**
**ಇರಿತಕೆ ಬೆದರುವ ಮದಕರಿ ಬಾಯ್ಕಿರಿವ ಕೋಡಗ ಮರಿ**
**ಕರೆ ಬರಲರಿಯದ ಗಂಡ ಅವ ನಾಚಿಕೆ ಭಂಡ ॥೪॥**

**ಸಮಯಕ್ಕೊದಗದ ಅರ್ಥ ಸಾವಿರವಿದ್ದರು ವ್ಯರ್ಥ**
**ಸವತಿಯರೊಳಗಣ ಕೂಟ ಎಳನಾಗರ ಕಾಟ**
**ಅಮರರಿಗೊದಗದ ಯಾಗ ಆಡಿನ ಮೇಲಣ ರೋಗ**
**ನಮ್ಮ ಆದಿಕೇಶವನ ಭಕ್ತ ಅವ ಜೀವನ್ಮುಕ್ತ** ॥೫॥

ಭಾವ– ಮನುಷ್ಯರ ಸ್ವಭಾವ–ಅಭಾವ, ನುಡಿನಡಾವಳಿಗಳ ಸಾಂದ್ರ ಪರಿಚಯದಿಂದ ಹರಳುಗೊಂಡಿರುವ ಲೋಕಾನುಭವದ ನುಡಿಮಾಲೆಯನ್ನು ಕಟ್ಟಿ ನೇತು ಹಾಕಿದಂತಿದೆ ಈ ಕೀರ್ತನೆ.

ಅರ್ಥ– ಕರಿಕೆಯಿಲ್ಲದ ಬಾಳು = ಬೆಳೆಯನ್ನು ಹಾಳು ಮಾಡುವ ಕಳೆಯಿಲ್ಲದ ಬಾಳು; ಅರೆಕೊರೆಯ ಕರೆಕರೆ ಇಲ್ಲದ ಬಾಳು.
ಕರಿವರದ = ವಿಷ್ಣು
ಕರಣಿಕ = ಶ್ಯಾನುಭೋಗ
ಲಗಡ = ಗಿಡುಗ; ಮೊಲ ಇತ್ಯಾದಿಗಳ ಮೇಲೆ ಎರಗುವ ಪಕ್ಷಿವಿಶೇಷ
ಪಣ್ಯ < ಪಣ್ಣೆಯ > ಪೀಣ್ಯ = ತೋಟ, estate.
ಉರಗ = ಹಾವು
ಗರಳ = ವಿಷ
ಮದಕರಿ = ಮದಿಸಿದ ಆನೆ

* * * *



## ೧೮೨
## ಪೂರ್ವಿ – ಆಟ

**ಅಟ್ಟು ಇಕ್ಕದವರ ಮನೆಯ** ॥ಪ॥

**ಅಟ್ಟು ಇಕ್ಕದವರ ಮನೆ ಪಾಯಸ ಕಜ್ಜಾಯವ**
**ಅಟ್ಟರೇನು ಅಡದಿದ್ದರೇನು** ॥ಅ॥

**ನಿಚ್ಚಣಿಗೆ – ದೋಟಿಗೆ ನಿಲುಕದ ಹಣ್ಣಿನ ವೃಕ್ಷ**
**ನಿಚ್ಚ ನಿಚ್ಚವು ಬಾಗಿ ಫಲವಾದರೇನು**
**ಔಚಿತ್ಯ ವಿದ್ಯೆಯನರಿಯದ ದೊರೆ ತಾನು**
**ಮೆಚ್ಚಿದರೇನು ಮೆಚ್ಚದಿದ್ದರೇನು** ॥೧॥

**ದಾರಿದ್ರ್ಯಕ್ಕೊದಗದ ದ್ರವ್ಯ ಪದಾರ್ಥದ**
**ಏರಿ ಇದ್ದರೇನು ಪರ್ವತವಿದ್ದರೇನು**
**ಶರೀರ ಸೌಖ್ಯ ಶಮನಕ್ಕಾಗದ ಹೆಣ್ಣು**
**ಊರಲಿದ್ದರೇನು ತೌರೂರಲಿದ್ದರೇನು** ॥೨॥

**ಉರಗಾದ್ರಿ ವಾಸ ನಾರಾಯಣಾದಿಕೇಶವನ**
**ಚರಣಕಮಲವನು ಸೇರಿಕೊಳ್ಳದೆ**
**ವರ–ಶಾಪವಿಲ್ಲದ ಬಣಗು ದೈವಗಳಿಗೆ**
**ಶರಣೆಂದರೇನು ಶರಣೆನದಿದ್ದರೇನು?** ॥೩॥

ಭಾವ– ಸಮೂಹ ಹಿತವನ್ನೊಲ್ಲದ ಸ್ವಾರ್ಥದ, ಲೋಭದ, ಕ್ಷುದ್ರರನ್ನು ಓಲೈಸುವುದರಿಂದ ಅಥವಾ ಆರಾಧಿಸುವುದರಿಂದ ಚಿಕ್ಕಾಸಿನ ಪ್ರಯೋಜನವಿಲ್ಲ ಎಂಬ ಭಾವ ಹಲವು ದೃಷ್ಟಾಂತಗಳಲ್ಲಿ ಮಡುಗೊಂಡು ನಿಂತಿದೆ. 'ಔಚಿತ್ಯ ವಿದ್ಯೆಯನರಿಯದ ದೊರೆ ತಾನು

ಮೆಚ್ಚಿದರೇನು ಮೆಚ್ಚದಿದ್ದರೇನು' ಎಂಬ ಮಾತು ಬಹುಶಃ ಚಾಡಿಕೋರರ ಮಾತಿಗೊಳಗಾಗಿ ಕನಕರನ್ನು ದಂಡನಾಯಕ ಪದವಿಯಿಂದ ಅಮಾನತ್ತುಗೊಳಿಸಿದ ಘಟನೆಯ ಪ್ರತಿಫಲನವೆನ್ನಿಸುತ್ತದೆ.

ಅರ್ಥ– ಅಟ್ಟು ಇಕ್ಕದವರು = ಮಾಡಿ ಬೇರೆಯವರಿಗೆ ಬಡಿಸದ ಲೋಭಿಗಳು

೧. ನಿಚ್ಚಣಿಕೆ (<ನಿಃಶ್ರೇಣಿಕಾ) = ಏಣಿ, ಇಚ್ಚಣಿಗೆ
ದೋಟಿ = ಗಳುವಿನ ತುದಿಗೆ ಕುಡಲನ್ನು ಕಟ್ಟಿ ಕಾಯಿ ಹಣ್ಣು ಎಲೆ ಕೀಳಲಿಕ್ಕೆ ಬಳಸುವ ಸಾಧನ: ಜವಳಿ (<ಜಳವಿ)
೨. ನಿಚ್ಚ (<ನಿತ್ಯ) = ಪ್ರತಿದಿನ
೩. ಉರಗಾದ್ರಿ = ತಿರುಮಲಿ (<ತಿರುಮಲೈ)
ಬಣಗು = ಕ್ಷುದ್ರ

* * * *



## ೧೮೩
## ಮೋಹನ – ಅಟತಾಳ

**ಆರು ಬಾಳಿದರೇನು ಆರು ಬದುಕಿದರೇನು**
**ನಾರಾಯಣನ ಸ್ಮರಣೆ ನಮಗಿಲ್ಲದನಕ ॥ಪ॥**

**ಉಣ್ಣಬರದವರಲ್ಲಿ ಊರೂಟವಾದರೇನು**
**ಹಣ್ಣು ಬಿಡದ ಮರಗಳು ಹಾಳಾದರೇನು**
**ಕಣ್ಣಿಲ್ಲದವಗಿನ್ನು ಕನ್ನಡಿಯಿದ್ದು ಫಲವೇನು**
**ಪುಣ್ಯವಿಲ್ಲದವನ ಪ್ರೌಢಿಮೆ ಮೆರೆದರೇನು ॥೧॥**

**ಅಕ್ಕರಿಲ್ಲದವಗೆ ಮಕ್ಕಳಿದ್ದು ಫಲವೇನು**
**ಹೊಕ್ಕು ನಡೆಯದ ನಂಟತನದೊಳೇನು**
**ರೊಕ್ಕವಿಲ್ಲದವಗೆ ಬಂಧುಗಳು ಇದ್ದರೇನು**
**ಮರ್ಕಟನ ಕೈಯೊಳಗೆ ಮಾಣಿಕ್ಯವಿದ್ದರೇನು ॥೨॥**

**ಅಲ್ಪ ದೊರೆಗಳ ಜೀತ ಎಷ್ಟು ಮಾಡಿದರೇನು**
**ಬಲ್ಪಂಥವಿಲ್ಲದವನ ಬಾಳ್ವೆಯೇನು**
**ಕಲ್ಪಕಲ್ಪಿತ ಕಾಗಿನೆಲೆಯಾದಿಕೇಶವನ**
**ಸ್ವಲ್ಪವೂ ನೆನೆಯದ ನರನಿದ್ದರೇನು ॥೩॥**

ಭಾವ– ದೇವರ ಸ್ಮರಣೆಯಿಲ್ಲದವರ ಬಾಳು ವ್ಯರ್ಥ ಎಂಬ ಆಶಯವಿದೆ. 'ಅಲ್ಪ ದೊರೆಗಳ ಜೀತ ಎಷ್ಟು ಮಾಡಿದರೇನು?' ಎಂಬ ಮಾತು ತಮ್ಮ ಪ್ರಾಮಾಣಿಕ ಸೇವೆಗೆ ಬೆಲೆಗೊಡದೆ ಚಾಡಿಕೋರರ ಮಾತಿಗೆ ಬೆಲೆಕೊಟ್ಟು ತಮ್ಮನ್ನು ಪದಚ್ಯುತಗೊಳಿಸಿದ ಕಹಿ ಅನುಭವ ಸಿಹಿರೂಪದಲ್ಲಿ ವ್ಯಕ್ತಗೊಂಡಿದೆ.

ಅರ್ಥ– ಮರ್ಕಟ = ಕಪಿ
ಬಲ್ಲಂಥ = ಛಲ, ಮಾನ
ಕಲ್ಪಕಲ್ಪಿತ = ಯುಗಯುಗಗಳನ್ನು ಸೃಜಿಸುವ

* * * *



## ೧೮೪
## ಪಂತುವರಾಳಿ – ಅಟತಾಳ

ರಾಮಾನುಜ ಮತೋದ್ಧಾರಕ
ತಾಮಸಗುಣಪಾಶಗಿರಿವಜ್ರದಂಡ ॥ಪ॥

ವ್ಯಾಸರ ತೋಳೆಂದು ನಂದಿಯ ಧ್ವಜದಲ್ಲಿ
ಹೇಸದೆ ಕಟ್ಟಿ ಪೂಜಿಪರು ನೋಡ
ವ್ಯಾಸರದೊಂದು ತೋಳಿಗೆ ಶಿವಶರಣನ
ಸಾಸಿರ ತೋಳ್ಗಳ ತರಿದ ನಮ್ಮಯ್ಯ ॥೧॥

ಹರಿ ಎಂಬ ಶಬ್ದವ ಕೇಳಿ ಪಿಟ್ಟಕ್ಕನು
ಹರನ ಹೊಟ್ಟೆಯಲ್ಲಿ ಪುಟ್ಟುವೆನೆಂಬಳು
ಹರಹರ ಎಂಬ ಶೈವರ ಏಳ್ನೂರು
ಶಿರಗಳನರಿದನು ನಮ್ಮ ತಾತಯ್ಯ ॥೨॥

ಮಸ್ತಕದೊಳು ರುದ್ರ ಪಾದದೊಳಗೆ ವಿಷ್ಣು
ಮಸ್ತಕ ಮಹಾದೇವ ಮೇಲೆಂಬರು
ಮಸ್ತಕ ಬಂದು ಪಾದಕೆ ಬಿದ್ದು ಶರಣೆಂಬ
ಮುಕ್ತಿಯ ಪಾದ ಮೇಲು ತಿಳಿದು ನೋಡಣ್ಣ ॥೩॥

ಲಿಂಗವೆ ಘನವೆಂದು ಹೆಚ್ಚಿ ಕುಣಿದಾಡುವ
ಸಂಗನ ಶರಣರೆಲ್ಲರು ಕೇಳಿರಿ
ಲಿಂಗಪ್ರಸಾದವು ಮುಟ್ಟದಂತಾಯಿತು ನಮ್ಮ
ರಂಗನ ಪ್ರಸಾದವು ಲೋಕಪಾವನವು ॥೪॥

ಧರೆಯೊಳು ವಿರಕ್ತರು ವೀರ ಪವಾಡವ
ಇರಿದು ಎಬ್ಬಿಸುವೆವೆಂದಾಡುವರು
ಹರಿಯ ನಾಮಾವಳಿಯ ಅನುಮಾನವಿಲ್ಲದೆಯೆ
ಧರಿಸಿದಲ್ಲದೆ ದೊರೆಯದು ಗತಿಯಣ್ಣ ॥೫॥

ಹರಬಂದು ಓಂಕಾರ ಗುರುವೆ ಎನ್ನುತ ಕೃಷ್ಣ
ನರಮನೆಯ ಮುಂದೆ ಭಿಕ್ಷವ ಬೇಡಲು
ಹರಿಯುಂಡ ಮೇಲೆ ಪ್ರಸಾದವ ನೀಡಲು
ಹರ ಉಂಡು ಬ್ರಹ್ಮ ಹತ್ಯೆ ಕಳಕೊಂಡ ॥೬॥

ಶಿವ ಮಹಾದೇವನು, ಧರೆಗೆ ಹರಿಯೆ ದೈವ
ಭುವನಕ್ಕೆ ಹರಿಹರರೇಕಸ್ಥರು
ಭವರೋಗ ಹರ ಕಾಗಿನೆಲೆಯಾದಿಕೇಶವನ
ವಿವರ ತಿಳಿದು ಭಜಿಸಿರೊ ಭಕ್ತ ಜನರು ॥೭॥

ಭಾವ– ಕಲಿಯುಗದ ಮಹಿಮೆ ಎಂಬ ಕೀರ್ತನೆಯಲ್ಲಿ 'ಹರಿಹರರ ಪೂಜೆ ಹಗರಣಗಳಾದವು' ಎಂಬ ಮಾತನ್ನು ಹೇಳಲಾಗಿದೆ. ಆ ಹಿನ್ನೆಲೆಯಲ್ಲಿ ಮೂಡಿದ ಕೀರ್ತನೆ ಇದು. ಎರಡೂ ಕಡೆಯ ವಾದ ಪ್ರತಿವಾದಗಳನ್ನು ದಾಖಲಿಸಿ ಕೊನೆಗೆ 'ಹರಿಹರರೇಕಸ್ಥರು' ಎಂಬ ಆರೋಗ್ಯಕರ ನಿಲುವನ್ನು ತಲುಪಿದ್ದಾರೆ ಕನಕದಾಸರು.

ಅರ್ಥ– ತಾಮಸ... ದಂಡ = ತಾಮಸಗುಣವೆಂಬ ಪರ್ವತಕ್ಕೆ ವಜ್ರಾಯುಧದಂತೆ ಇರುವ

೧. ತರಿದ = ಕತ್ತರಿಸಿದ
೨. ಪಿಟ್ಟಕ್ಕ = (ಹನ್ನೆರಡನೆ ಶತಮಾನದಲ್ಲಿದ್ದ) ಒಬ್ಬ ಶಿವಭಕ್ತೆ
೩. ಮಸ್ತಕ = ತಲೆ
೪. ಪಾವನ = ಪವಿತ್ರ
೫. ಆವಳಿ = ಗುಂಪು

* * * *



## ೧೮೫
## ಮುಖಾರಿ – ಅಟತಾಳ

ಕೇಳಿರೈ ಶಿವಶರಣರು ಹೇಳಲಂಜಿಕೆ ಆವುದು ॥ಪ॥
ಭಾಳನೇತ್ರನ ಭಕ್ತರಿಂತು ನೋಡಿಕೊಳ್ಳಿರೈ ॥ಅ॥

ಮೂರುಲಿಂಗ ತನ್ನೊಳು ಮುಖ್ಯವಾಗಿರುವಾಗ
ಬೇರೊಂದು ಲಿಂಗ ಬೆಲೆ ಮಾಡಿ ತಂದು
ತೋರುವಂಗೈಲಿಟ್ಟು ತೋಯ ಪುಷ್ಪವ ನೀಡಿ
ಯಾರ ಮನಕೊಪ್ಪಿಸುವರೀ ಶೀಲವಂತರು ॥೧॥

ಲಿಂಗವೊಂದು ತನ್ನೊಳು ಲೀನವಾಗಿರುವಾಗ
ಅಂಗಭವಿಗಳು ಕೂಡಿ ಆಡಿಕೊಂಬರು
ಅಂಗದನುಭವದರ್ಥವನರಿಯದ ಇಂತಹ
ಭಂಗಿ ಹುಚ್ಚರೆಲ್ಲ ಶಿವನ ಭಕ್ತರಹರೆ ॥೨॥

ನಾಗಲಿಂಗ ತನ್ನೊಳು ನಾಟ್ಯವಾಡುತಲಿರಲು
ಆಗಮಿಸಿದ ಲಿಂಗವ ಬೆದಕಲೇತಕ್ಕೆ
ಕಾಗಿನೆಲೆಯಾದಿಕೇಶವನೆ ನಾಗಶಯನ
ನಾಗಿರಲು ಬೇರೊಂದನರಸಲೇತಕ್ಕೆ ॥೩॥

ಭಾವ– ಕನಕದಾಸರು ಲಿಂಗವಂತರ ಇಷ್ಟಲಿಂಗ ಅನಿವಾರ್ಯವೇ ಅರ್ಥ ಪೂರ್ಣವೇ? ಎಂದು ಪ್ರಶ್ನಿಸುತ್ತ, ಅದರ ಅಗತ್ಯವಿಲ್ಲ ಎಂಬ ತಮ್ಮ ನಿಲುವನ್ನು ಶಿವಶರಣರೇ ಪರಾಮರ್ಶೆ ಮಾಡಿ ಉಚಿತ ನಿರ್ಧಾರಕ್ಕೆ ಬರಲಿ ಎಂದು ಆಶಿಸುತ್ತಾರೆ ಈ ಕೀರ್ತನೆಯಲ್ಲಿ. ಕನಕದಾಸರು ವಚನಸಾಹಿತ್ಯವನ್ನು ಆಳವಾಗಿ ಅಧ್ಯಯನ ಮಾಡಿದವರು, ಈ ಕೀರ್ತನೆಗೆ ಮೂಲ ಪ್ರಚೋದನೆ ಅಲ್ಲಮಪ್ರಭುವಿನ "ದೇಹವೇ ಪಿಂಡಿಗೆ ಜೀವವೇ

ಲಿಂಗ ಗುಹೇಶ್ವರಾ" "ಕಾಯವೇ ಪೀಠ ಮನವೇ ಲಿಂಗವಾದರೆ, ಕೊರಳಲ್ಲಿ ನಾಗವತ್ತಿಗೆ ಏಕೊ ಶರಣಂಗೆ ಗುಹೇಶ್ವರಾ" ಎಂಬ ಬೆಡಗಿನ ವಚನಗಳು ಎಂಬುದನ್ನು ಮರೆಯಬಾರದು.

ಅರ್ಥ– ಆವುದು = ಆಗುವುದು
ಭಾಳನೇತ್ರನ = ಹಣೆಗಣ್ಣನಾದ ಶಿವನ

೧. ಮೂರುಲಿಂಗ = ಅಂತರಾತ್ಮ ಲಿಂಗ, ಜೀವಾತ್ಮಲಿಂಗ, ನಾಗಲಿಂಗ (ಕುಂಡಲಿನಿ)
ತೋಯ = ನೀರು
೨. ಲೀನ = ಅಂತರ್ಗತ, ಐಕ್ಯ
ಅಂಗಭವಿಗಳು = ಭವಿಗಳು ಎಂದರೆ ಲಿಂಗವಂತರಲ್ಲದವರು; ಅಂಗಭವಿಗಳು ಎಂದರೆ ಕಟ್ಟು ಲಿಂಗದವರೆ ಹೊರತು ಹುಟ್ಟು ಲಿಂದವರಲ್ಲ ಎಂಭ ಬಾವ.
೩. ನಾಗ = ಸರ್ಪ (ಕುಂಡಲಿನಿ)
ಆಗಮಿಸಿದ = ಹೊಸದಾಗಿ ಬಂದ
ಬೆದಕು = ಬೆರಳಿನಿಂದ ಕೆದಕು
ನಾಗಶಯನ = ಹಾವನ್ನೆ ಹಾಸಿಗೆಯಾಗುಳ್ಳವನು (ವಿಷ್ಣು)

* * * *



## ೧೮೬
## ಮುಖಾರಿ – ಝಂಪೆತಾಳ

ಧರ್ಮವೆಂದೆನಿಪ ಮಾರ್ಗವನು ಬಿಟ್ಟು
ಕರ್ಮವೆಂದೆನಿಪ ಕಾನನವ ಪೊಕ್ಕು
ದುರ್ಮಾರ್ಗದಲಿ ನಡೆದವಗೆ ಘೋರವ್ಯಾಧಿ
ಕರ್ಮ ಪಾಕದಲಿ ಸಾರುತಿದೆ ಜಗದಿ ॥ಪ॥

ಹರಿಹರ ವಿಭೇದಗೈದವರಿಗೆ ದಂತಚ್ಯುತವು
ಗುರುದೈವಗಳ ನಿಂದೆ ಗೈದವಗೆ ಉನ್ಮದವು
ಪರಸತಿಯ ಕಾಮಿಸಿದವಗೆ ಪಾಂಡು ರೋಗವು
ಕೆರೆಗಳನು ಒಡೆಸಿದಾತಗೆ ಶೀತಜ್ವರವು
ಹಿರಿಯರನು ಜರೆದವಗೆ ಪೀನಾಶಿ ರೋಗವು
ಧರೆಯನಳಿಸಿದವಗೆ ಸರ್ವಾಂಗ ಪರಿಶ್ವೇತವು
ಪುರ ಅಗ್ರಹಾರ ಕೆಡಿಸಿದವಗೆ ರಾಜರೋಗವೆಂದು
ಅರಿವುದು ಸಕಲ ಜನರು ॥೧॥

ಕಥೆ ಪುರಾಣಗಳ ಹಳಿದವಗೆ ಕಾಸಶ್ವಾಸ
ಮತಭೇದವನು ಮಾಡಿದವಗೆ ಮೂಲವ್ಯಾಧಿ
ಪಿತ ಮಾತೆಯರ ಸಲಹದವಗೆ ಗಂಡಾಮಾಲೆ
ಯತಿಗಳನು ನಿಂದಿಸಿದವಗೆ ಸನ್ನಿಪಾತ– ಪರ
ಸತಿಯರಿಗೆ ಅಳುಪಿದಾತಗೆ ಮೂತ್ರಕೃಚ್ರ
ಪತಿವ್ರತೆಯರ ಪೀಡಿಸಿದವಗೆ ಅತಿಸಾರ
ಮತಿಗೇಡಿ ಮೂರ್ಖನಿಗೆ ಕ್ಷಯರೋಗ– ಇದು
ಕ್ಷಿತಿಯೊಳಗೆ ಸಿದ್ಧಾಂತ ॥೨॥

**ಶಿಶುಹತ್ಯೆ ಗೈದವಗೆ ಕುಕ್ಷಿಶೂಲೆ**
**ಪಶುಗಳನು ಮರ್ದಿಸಿದವಗೆ ಪ್ರಮೇಹವು**
**ಉಸಿರಲೇಕಿನ್ನು ಸ್ವಾಮಿದ್ರೋಹಿಗೆ ಬಹುಮೂತ್ರ**
**ಪುಸಿಯನಾಡುವ ಪುರುಷಗೆ ರಕ್ತಕಾಳಿ**
**ಹಸಿದವರಿಗನ್ನವಿಕ್ಕದವಗೆ ಆಮ್ಲಪಿತ್ತ**
**ವೃಷಭವನು ಒದ್ದವಗೆ ಬಿಗರುವಾತ**
**ಮುಸುಕುವುದು ವಿಶ್ವಾಸಘಾತಕಗೆ ನರರೋಗ**
**ಪುಸಿಯಲ್ಲವಿದು ಕೇಳಿ ಜನರು** ॥೩॥

**ಕೊಟ್ಟು ಭಾಷೆಯ ತಪ್ಪಿದವಗೆ ಉಪಜಿಹ್ವೆ**
**ಕೊಟ್ಟು ತುಪ್ಪಿದವಗೆ ಕರಕಂಪನ**
**ಕೊಟ್ಟರೂ ಕೊಡಲಿಲ್ಲವೆಂಬವಗೆ ಉದರರೋಗ**
**ಕೊಟ್ಟವರಿಗೆರಡು ಬಗೆವಗೆ ಮೇಹರೋಗ**
**ಅಷ್ಟಮದದಿಂದ ಮೆರೆವವಗೆ ಬೆರಗಿನ ರೋಗ**
**ಬಟ್ಟೆಯೊಳು ಮುಳ್ಳು ಹರಡಿದವಗೆ ನೇತ್ರವ್ಯಾಧಿ**
**ಹುಟ್ಟುವುದು ಕಂಕಣ ಕಂಟಕಗೆ ಕುಷ್ಠರೋಗ**
**ಕಟ್ಟಿಟ್ಟ ಬುತ್ತಿಯಿದು** ॥೪॥

**ಹಿಂದೆ ಮಾಡಿದ ಧರ್ಮ ಕರ್ಮ ಬಲ್ಲವರಾರು**
**ಎಂದು ಮಂದಮತಿಗಳಾಗಿ ಕೆಟ್ಟಳಿಯದಿರಿ**
**ಹಿಂದಣದೆಲ್ಲವೂ ಬಹದೆಂಬುದಕೆ ಸಾಕ್ಷಿ**
**ಇಂದು ಕಣ್ಣೆದುರೆ ಜಗದೊಳಗೆ ತೋರುತಿಹುದಿಗೊ**
**ಚಂದದಲಿ ತಾಯಿ ಮಗುವಿಗೆ ಮೊಲೆಯ ಹಾಲುಣಿಸು**
**ವಂದದಲಿ ಉಣಿಸಿದಲ್ಲದೆ ಬಿಡದು ಮರೆಯದಿರಿ**
**ಕಂದರ್ಪ ಪಿತ ಸೊಂಡೆಕೊಪ್ಪದಾದಿಕೇಶವನ**
**ಮುಂದರಿತು ಭಜಿಸಿ ಮುಕ್ತಿಯ ಪಡೆಯಿರಣ್ಣ** ॥೫॥



ಭಾವ– ದುರ್ಮಾರ್ಗದಲ್ಲಿ ನಡೆದವರಿಗೆ ತಕ್ಕ ಶಿಕ್ಷೆ ಕಟ್ಟಿಟ್ಟ ಬುತ್ತಿ ಎಂಬುದನ್ನು ಈ ಕೀರ್ತನೆ ಡಂಗುರ ಹೊಡೆದು ಸಾರುವಂತಿದೆ; ಧರ್ಮ ಮಾರ್ಗದಲ್ಲಿ ನಡೆಯಿರಿ ಎಂಬುದೇ ಈ ಕೀರ್ತನೆಯ ಆಶಯ.

ಅರ್ಥ– ಕಾನನ = ಕಾಡು

೧. ದಂತಚ್ಯುತ = ಹಲ್ಲು ನಾಶವಾಗುವುದು
ಉನ್ಮದ = ಉನ್ಮಾದ
ಪಾಂಡುರೋಗ = ಕಾಮಾಲೆರೋಗ
ಪೀನಾಶಿರೋಗ = ಮೂಗು ಕಟ್ಟಿಕೊಂಡು ಗೊರಗೊರನೆ ಉಸಿರಾಡುವಂತ ರೋಗ
ಸರ್ವಾಂಗ ಪರಿಶ್ವೇತ = ತೊನ್ನು ರೋಗ
೨. ಕಾಸಶ್ವಾಸ = ದಮ್ಮುರೋಗ, ಗೂರಲು ರೋಗ
ಮೂಲವ್ಯಾಧಿ = ಮೊಳೆರೋಗ
ಗಂಡಾಮಾಲೆ = ಗಂಟಲ ಗ್ರಂಥಿಗೆ ಬರುವ ರೋಗ, ಕೊರಳಲ್ಲಿ ಉಬ್ಬಿಕೊಳ್ಳುವ ಗಂಟು
ಸನ್ನಿಪಾತ = ಅತಿಜ್ವರದಿಂದ ಉಂಟಾಗುವ ಬುದ್ಧಿಭ್ರಮಣೆ
ಮೂತ್ರಕೃಚ್ರ = ಮೂತ್ರವಿಸರ್ಜನೆಗೆ ತೊಂದರೆ
ಅತಿಸಾರ = ಒಂದೇ ಸಮನೆ ಭೇದಿಯಾಗುವ ರೋಗ
ಕ್ಷಯರೋಗ = ಕ್ಷೀಣಿಸುವ, ಸವೆದು ಹೋಗುವ ರೋಗ
೩. ಕುಕ್ಷಿಶೂಲೆ = ಹೊಟ್ಟೆನೋವು
ಪ್ರಮೇಹ = ಗುಹ್ಯರೋಗ
ಬಹುಮೂತ್ರ = ಗಳಿಗೆಗಳಿಗೆಗೂ ಮೂತ್ರ ವಿಸರ್ಜಿಸುವ ರೋಗ
ರಕ್ತಕಾಳಿ (<ರಕ್ತಕಾಳಿಜ) = ಮೂತ್ರಪಿಂಡದ ರೋಗ (ಕಾಳಿಜ = ಕಲಿಜ = ಪಿತ್ತಕೋಶ, ಮೂತ್ರಪಿಂಡ)
ಆಮ್ಲಪಿತ್ತ = ಕೋಪಾಧಿಕ್ಯ (ಆಮ್ಲ = ಹುಳಿ)
ಬಿಗುರುವಾತ = ಬಿಗುರೋಗ, ಒದರುವ ರೋಗ (ವಾತ = ಗಾಳಿ)

೪. ಉಪಜಿಹ್ವೆ = ಕಿರುನಾಲಗೆ, ಅದು ಊದಿಕೊಳ್ಳುವ ಒಂದು ರೋಗ
ಕರಕಂಪನ = ಕೈ ಅದುರುವುದು, ಅದುರುರೋಗ
ಉದರರೋಗ = ಹೊಟ್ಟೆ ನೋವಿನ ರೋಗ
ಮೇಹರೋಗ = ಒಂದು ಬಗೆಯ ಮೂತ್ರರೋಗ
ಬೆರಗಿನ ರೋಗ = ಒಂದು ಬಗೆಯ ಭಯದಿಗಿಲಿನ ರೋಗ
ನೇತ್ರವ್ಯಾಧಿ = ಕಣ್ಣಿನ ರೋಗ
ಕುಷ್ಠರೋಗ = ಚರ್ಮ ಮಾಂಸ ಕೊಳೆತು ಕ್ಷಯಿಸುವ ರೋಗ
ಕಂಕಣ = ವಿವಾಹ
ಕಂಕಣ ಕಂಟಕರು = ವಿವಾಹಕ್ಕೆ ಅಡ್ಡಿ ಮಾಡುವವರು
ತುಪ್ಪಿದವಗೆ = ಉಗುಳಿದವನಿಗೆ
೫. ಕಂದರ್ಪ = ಮನ್ಮಥ
ಕಂದರ್ಪ ಪತಿ = ಕೃಷ್ಣ, ವಿಷ್ಣು

* * * *



## ೧೮೭
## ಸೌರಾಷ್ಟ್ರ – ಅಟತಾಳ

ಮಾಡು ದಾನ ಧರ್ಮ ಪರ ಉಪಕಾರದ ಮರೆಯದಿರೆಚ್ಚರಿಕೆ ॥ಪ॥
ಕೇಡು ನೆನೆಯಬೇಡ ನಂಬಿದವರ ಮೇಲೆ ಕೆಡುವೆ ನೀನೆಚ್ಚರಿಕೆ ॥ಅ॥

ಬಾಳು ಬದುಕು ಸಿರಿ ಇರುವಾಗ ಬಂಧುಬಳಗಗಳೆಚ್ಚರಿಕೆ
ಹಾಳು ಸಂಸಾರಕ್ಕೆ ಹಲವರ ಬಾಯ್ಗಳ ಬಡಿಯದಿರೆಚ್ಚರಿಕೆ ॥೧॥

ಮೂಢರ ಒಡನಾಡಿ ಮುಂದೆ ಕೆಡಲು ಬೇಡ ಮೋಸ ನೋಡೆಚ್ಚರಿಕೆ
ನಾಡೊಳು ಸುಜನರ ನೋಡಿ ನಡೆ ಕಂಡ್ಯ ನಟನೆ ಬೇಡೆಚ್ಚರಿಕೆ ॥೨॥

ಚೆನ್ನಾಗಿ ಬದುಕಿದೆ ಗಳಿಸಿದೆ ನಾನೆಂಬ ಹೆಮ್ಮೆ ಬೇಡೆಚ್ಚರಿಕೆ
ನಿನ್ನಾಯು ಮುಗಿಯಲು ಯಮದೂತರು ಬಂದು ಎಳೆಯುವರೆಚ್ಚರಿಕೆ ॥೩॥

ಹೆಣ್ಣು ಹೊನ್ನು ಮಣ್ಣು ನಿನ್ನನಗಲಿ ಹೋಗುವರೆಚ್ಚರಿಕೆ
ಮುನ್ನ ಮಾಡಿದ ಪುಣ್ಯ ಬೆನ್ನತ್ತಿ ಬರುವುದು ಮುಂದೆ ನೋಡೆಚ್ಚರಿಕೆ ॥೪॥

ಒಬ್ಬರಂತೆಲ್ಲರ ನೋಡು, ಸತ್ಕರ್ಮದಿ ಉಬ್ಬ ಬೇಡೆಚ್ಚರಿಕೆ
ಕಬ್ಬುಬಿಲ್ಲನ ಪಿತನ ಏಕಾಂತ ಭಾವದಿ ನೆರೆನಂಬು ಎಚ್ಚರಿಕೆ ॥೫॥

ತಿಂದೋಡಿ ಬಂಧುಬಳಗ ತಪ್ಪಿಸಿಕೊಂಬರೆಂದು ನೋಡೆಚ್ಚರಿಕೆ
ಎಂದೆಂದು ಅಗಲದ ಬಂಧು ಶ್ರೀಹರಿ ನಮಗೆಂದು ನೋಡೆಚ್ಚರಿಕೆ ॥೬॥

ಕಾಲನ ದೂತರು ಯಾವಾಗ ಎಳೆವರೊ ಕಾಣದು ಎಚ್ಚರಿಕೆ
ಬೇಲೂರು ಪುರವಾಸ ನೆಲೆಯಾದಿಕೇಶವನಾಳಾಗು ಎಚ್ಚರಿಕೆ ॥೭॥

ಭಾವ– ಜನಸಾಮಾನ್ಯರನ್ನು ದೃಷ್ಟಿಯಲ್ಲಿಟ್ಟುಕೊಂಡು ಹೇಳಿದ ಲೋಕಾನುಭವದ ಹಾಗೂ ನೀತಿಯ ಮಾತುಗಳು ಇಲ್ಲಿವೆ; ಎಚ್ಚರಿಕೆ ಎಂದು ಹೇಳುವ ಕರೆಗಂಟೆಯ ಒತ್ತು ಜನಸಾಮಾನ್ಯರ ಬದುಕು ಹಸನಾಗಬೇಕೆಂಬ ಕನಕದಾಸರ ಕಾಳಜಿಯ ಪ್ರತೀಕ

ಅರ್ಥ– ಕಬ್ಬು ಬಿಲ್ಲ = ಮನ್ಮಥ
ಕಬ್ಬು ಬಿಲ್ಲನ ಪಿತ = ವಿಷ್ಣು
ತಿಂದೋಡಿ = ತಿಂದು ಓಡುವ

* * * *



## ೧೮೮
## ಕೇದಾರ ಗೌಳ – ಅಟತಾಳ

ದಾನಧರ್ಮವ ಮಾಡಿ ಸುಖಿಯಾಗು ಮನವೆ ॥ಪ॥
ಹೀನ ವೃತ್ತಿಯಲಿ ನೀ ಕೆಡಬೇಡ ಮನವೆ ॥ಅ॥

ಎಕ್ಕನಾತಿ ಯಲ್ಲಮ್ಮ ಮಾರಿ ದುರ್ಗಿ ಚೌಡಿಯ
ಅಕ್ಕರಿಂದಲಿ ಪೂಜೆ ಮಾಡಲೇಕೆ
ಗಕ್ಕನೆಯೆ ಯಮನ ದೂತರೆಳೆದೊಯ್ಯುವಾಗ
ಶಕ್ತೇರು ಬಿಡಿಸಿಕೊಂಡಾರೇನೊ ಮರುಳೆ ॥೧॥

ಸಂಭ್ರಮದಲಿ ಒಂದ್ಹೊತ್ತು ನೇಮದೊಳಗಿದ್ದು
ತಂಬಿಟ್ಟಿನಾ ದೀಪ ಹೊರಲೇತಕೆ
ಕೊಂಬು ಹೋತು ಕುರಿ ಕೋಣಗಳನ್ನು ಬಲಿಗೊಂಬ
ದೊಂಬಿ ದೈವಗಳ ಭಜಿಸದಿರು ಮನವೆ ॥೨॥

ಚಿಗುರೆಲೆ ಬೇವಿನ ಸೊಪ್ಪುಗಳ ನಾರಸೀರೆ
ಬಗೆಬಗೆಯಿಂದ ಶೃಂಗಾರ ಮಾಡಿ
ನೆಗೆನೆಗೆದಾಡುತ ಕುಣಿಯುತಿರೆ ನಿನಗಿನ್ನು
ಮಿಗಿಲಾದ ಮುಕ್ತಿಯುಂಟೇ ಹುಚ್ಚು ಮನವೆ ॥೩॥

ದಾನಧರ್ಮ ಪರೋಪಕಾರವ ಮಾಡು
ದೀನನಾಗಿ ನೀ ಕೆಡಬೇಡವೊ
ಜ್ಞಾನವಿಲ್ಲದೆ ಹೀನ ದೈವವ ಭಜಿಸಿದರೆ
ಏನುಂಟು ನಿನಗಿನ್ನು ಎಲೆ ಹುಚ್ಚು ಮನವೆ ॥೪॥

ನರಲೋಕದಲಿ ಯಮನ ಬಾಧೆಯನು ಕಳೆಯಲು
ವರ ಪುಣ್ಯ ಕಥೆಗಳನು ಕೇಳುತಲಿ
ಸಿರಿ ಕಾಗಿನೆಲೆಯಾದಿ ಕೇಶವನ ನೆರೆ ನಂಬಿ
ಸ್ಥಿರ ಪದವಿಯನು ಪಡೆ ಹುಚ್ಚು ಮನವೆ ॥೫॥

ಭಾವ– ಗಳಿಸಿದ್ದನ್ನು ತನ್ನಲ್ಲೇ ಇಟ್ಟುಕೊಳ್ಳದೆ ಇತರರಿಗೆ ದಾನ ಮಾಡುವುದರಿಂದ ಹಾಗೂ ಹೀನದೈವಗಳಿಗೆ ಬಲಿಕೊಡಲು ವೆಚ್ಚ ಮಾಡದೆ ಜ್ಞಾನಿಯಾಗಿ ಸಾತ್ತ್ವಿಕ ಮಾರ್ಗದಲ್ಲಿ ಬದುಕುವುದರಿಂದ ಶಾಂತಿ ಲಭಿಸುತ್ತದೆ ಎಂಬ ಆಶಯವಿದೆ ಈ ಕೀರ್ತನೆಯಲ್ಲಿ; ಮೌಢ್ಯಾಚರಣೆಗಳ ವಿರೋಧಿ ನಿಲುವು ಎದ್ದು ಕಾಣುತ್ತದೆ.

ಅರ್ಥ– ಶಕ್ತೇರು (<ಶಕ್ತಿಯರು) = ಶಕ್ತಿದೇವತೆಗಳು

* * * *



## ೧೮೯
## ಕೇದಾರಗೌಳ – ಝಂಪೆ ತಾಳ

ದುರ್ಜನರ ಸಂಗ ಎಂದಿಗೂ ಒಲ್ಲೆನು ಇಂಥ
ಸಜ್ಜನರ ಸಂಗದೊಳಗಿರಿಸೆನ್ನ ರಂಗ ॥ಪ॥

ಉಂಡಮನೆಗೆರಡನು ಎಣಿಸುವಾತನ ಸಂಗ
ಕೊಂಡೆಯವ ಪೇಳಿ ಕಾದಿಸುವನ ಸಂಗ
ತಂದೆ ತಾಯನು ಬೈದು ಬಾಧಿಸುವವನ ಸಂಗ
ನಿಂದಕರ ಸಂಗ ಬಹು ಭಂಗ ರಂಗ ॥೧॥

ನಂಬಿದ ಠಾವಿನಲಿ ಕೇಡನೆಣಿಪನ ಸಂಗ
ಸಂಭ್ರಮದಿ ಜಗಳ ಕಾಯುವನ ಸಂಗ
ಹಂಬಲಿಸಿ ಭವದ ಸುಖ ಮೆಚ್ಚಿದಾತನ ಸಂಗ
ರಂಭೆಯರ ನೋಡಿ ಮೋಹಿಪನ ಸಂಗ ॥೨॥

ಕುಳಿತ ಸಭೆಯೊಳು ಕುಹಕ ಮಾಡುವಾತನ ಸಂಗ
ಬಲು ಬೇಡೆ ಕೊಡದಿರುವ ಲೋಭಿ ಸಂಗ
ಕುಲಹೀನರ ಕೂಡೆ ಸ್ನೇಹ ಬೆಳಿಪನ ಸಂಗ
ಹಲವು ಮಾತಾಡಿ ಆಚರಿಸದವನ ಸಂಗ ॥೩॥

ಗುರುಸತಿಗೆ ಪರಸತಿಗೆ ಎರಡು ಎಣಿಪನ ಸಂಗ
ಗುರುನಿಂದೆ ಪರನಿಂದೆ ಮಾಡುವನ ಸಂಗ
ಪರಹಿತಾರ್ಥದ ಧರ್ಮ ಪಡೆಯದಾತನ ಸಂಗ
ಪರಮಪಾಮರ ಸಂಗ ಬಹುಭಂಗ ರಂಗ ॥೪॥

**ಆಗಮ ಮಹಾತ್ಮೆಯನು ಅರಿಯದಾತನ ಸಂಗ**
**ಯೋಗಿಜನ ಗುರುಗಳನು ನಿಂದಿಪನ ಸಂಗ**
**ರಾಗದ್ವೇಷಾದಿಯಲಿ ಮುಳುಗೇಳುವನ ಸಂಗ**
**ಕಾಗಿನೆಲೆಯಾದಿಕೇಶವ ಬಿಡಿಸು ಈ ಭಂಗ ॥೫॥**

ಭಾವ– ದುರ್ಜನರ ಸಂಗ ವ್ಯಕ್ತಿಯ ವ್ಯಕ್ತಿತ್ವ ವಿಕಾಸಕ್ಕೆ ಅಡ್ಡಿಯಾಗುವುದು ಮಾತ್ರವಲ್ಲದೆ ಸಮಾಜದ ಅವನತಿಗೂ ಕಾರಣವಾಗುತ್ತದೆ ಎಂಬ ಭಾವನೆಯಿಂದಲೇ ಕನಕದಾಸರು ದುರ್ಜನರ ಯಾದಿಯೊಂದನ್ನು ಈ ಕೀರ್ತನೆಯಲ್ಲಿ ಅಡಕಗೊಳಿಸಿ, ಇಂಥ ಸಂಗದಿಂದ ಆಗುವ ಭಂಗವನ್ನು ತಪ್ಪಿಸು ಎಂದು ದೇವರಲ್ಲಿ ವಿನಂತಿಸಿದ್ದಾರೆ. 'ಹಲವು ಮಾತಾಡಿ ಆಚರಿಸದವನ ಸಂಗ' 'ಪರಹಿತಾರ್ಥದ ಧರ್ಮ ಪಡೆಯದಾತನ ಸಂಗ' ಎಂಬ ನುಡಿಮುತ್ತುಗಳಿಂದ ಕನಕದಾಸರ ಸಾಮಾಜಿಕ ನಿಲುವು ಒಲವುಗಳು ದೃಗ್ಗೋಚರವಾಗುತ್ತವೆ.

ಅರ್ಥ– ಉಂಡ ಮನೆಗೆರಡೆಣಿಸು = ಅಪಕಾರವೆಸಗು
ಕೊಂಡೆಯ = ಚಾಡಿ,
ಕುಲ ಹೀನರು = ಮತಿ ಹೀನರು, ಮಾನಹೀನರು
ಎರಡೆಣಿಸು = ದ್ರೋಹ ಬಗೆ
ಪರಮಪಾಮರ = ಹೆಚ್ಚು ಅಸಂಸ್ಕೃತ, ಅಸಭ್ಯಸ್ಥ, ಅಜ್ಞಾನಿ
ಆಗಮ = ಶಾಸ್ತ್ರ
ಮಹಾತ್ಮೆ (<ಮಹಾತ್ಮ್ಯ) = ಹಿರಿಮೆ
ರಾಗದ್ವೇಷಾದಿ = ಅರಿಷಡ್ವರ್ಗ

* * * *



## ೧೯೦
## ಭೈರವಿ – ತ್ರಿಪುಟ ತಾಳ

**ಸಾಧು ಸಜ್ಜನ ಸತ್ಯಗುಣಕಿದಿರುಂಟೆ**
**ಆದಿಕೇಶವನ ಪೋಲುವ ದೈವವುಂಟೆ ॥ಪ॥**

**ಸತ್ಯವ್ರತವುಳ್ಳವಗೆ ಮೃತ್ಯು ಭಯವುಂಟೆ**
**ಚಿತ್ತಶುದ್ಧಿಯಿಲ್ಲದವಗೆ ಪರಲೋಕವುಂಟೆ**
**ವಿತ್ತವನರಸುವಂಗೆ ಮುಕ್ತಿಯೆಂಬುದುಂಟೆ**
**ಉತ್ತಮರ ಸಂಗಕಿಂತಧಿಕ ಧರ್ಮವುಂಟೆ ॥೧॥**

**ಸುತಲಾಭಕಿಂತಧಿಕ ಲಾಭವುಂಟೆ**
**ಮತಿರಹಿತನೊಳು ಚತುರತೆಯುಂಟೆ**
**ಪತಿಸೇವೆಗಿಂತಧಿಕ ಸೇವೆಯುಂಟೆ**
**ಸತಿಯಿಲ್ಲದವಗೆ ಸಂಪದವೆಂಬುದುಂಟೆ ॥೨॥**

**ಪಿಸುಣಗಿನ್ನಧಿಕ ಹೀನನುಂಟೆ**
**ವಸುಧೆಯೊಳನ್ನದಾನಕೆ ಸರಿಯುಂಟೆ**
**ಅಶನವ ತೊರೆದ ಯೋಗಿಗೆ ಭಯವುಂಟೆ**
**ವ್ಯಸನಿಯಾದ ನೃಪನಿಗೆ ಸುಖವುಂಟೆ ॥೩॥**

**ಧನಲೋಭಿಗಿನ್ನಧಿಕ ಹೀನನುಂಟೆ**
**ಮನವಂಚಕ ಕಪಟಿಗೆ ನೀತಿಯುಂಟೆ**
**ಸನುಮಾನಿಸುವ ಒಡೆಯಗೆ ಬಡತನವುಂಟೆ**
**ವಿನಯವಾಗಿಹ ಸಂಗದೊಳು ಭಂಗವುಂಟೆ ॥೪॥**

**ಹರಿಭಕ್ತಿಯಿಲ್ಲದವಗೆ ಪರಲೋಕವುಂಟೆ**
**ಪರಮ ಸಾತ್ವಿಕ ಗುಣಕೆ ಪಿರಿದುಂಟೆ**
**ಪರನಿಂದೆಗಿಂತಧಿಕ ಪಾತಕವುಂಟೆ**
**ವರದಾದಿಕೇಶವನಲ್ಲದೆ ದೈವವುಂಟೆ** ॥೫॥

ಭಾವ– ಸದ್ಗುಣವುಳ್ಳವರಿಗೆ ಆಗುವ ಲಾಭವೇನು, ದುರ್ಗುಣವುಳ್ಳವರಿಗೆ ಆಗುವ ನಷ್ಟವೇನು ಎಂಬುದನ್ನು ನಾನಾರಂಗದ ನಿದರ್ಶನಗಳೊಂದಿಗೆ ತಿಳಿಯಹೇಳುವ ಕೀರ್ತನೆಯಿದು. ಅಭಿವ್ಯಕ್ತಿ ಪ್ರಶ್ನಾತ್ಮಕವಾಗಿದ್ದರೂ ಭಾವ ನೇತ್ಯಾತ್ಮಕ ರೂಪವನ್ನು ಪಡೆಯುತ್ತದೆ.

ಅರ್ಥ– ಪೋಲುವ = ಹೋಲುವ

೧. ವಿತ್ತ = ಐಶ್ವರ್ಯ
೨. ಮತಿರಹಿತ = ಬುದ್ಧಿಗೇಡಿ
೩. ಪಿಸುಣ = ಚಾಡಿಕೋರ
ವಸುಧೆ = ಭೂಮಿ
ಆಶನ = ಅನ್ನ
ವ್ಯಸನಿ = ದುಶ್ಚಟಗಳಿಗೆ ಈಡಾದವನು
೪. ಕಪಟಿ = ಮೋಸಗಾರ
ಪಿರಿದು = ದೊಡ್ಡದು

* * * *



## ೧೯೧
## ಧನ್ಯಾಸಿ – ಆದಿತಾಳ

**ಸ್ನಾನವ ಮಾಡಿರೊ ಜ್ಞಾನತೀರ್ಥದಲ್ಲಿ**
**ಮಾನವರೆಲ್ಲ ಮೌನದೊಳಗೆ ನಿಂದು** ॥ಪ॥

**ತನ್ನ ತಾನರಿತುಕೊಂಬುದೆ ಒಂದು ಸ್ನಾನ**
**ಅನ್ಯಾಯ ಮಾಡದಿರುವುದೊಂದು ಸ್ನಾನ**
**ಅನ್ನದಾನವ ಮಾಡುವುದೊಂದು ಸ್ನಾನ– ಹರಿ**
**ನಿನ್ನ ಧ್ಯಾನವೆ ನಿತ್ಯ ಗಂಗಾಸ್ನಾನ** ॥೧॥

**ಪರಸತಿಯ ಭ್ರಮಿಸದಿದ್ದರೆ ಒಂದು ಸ್ನಾನ**
**ಪರನಿಂದೆಯ ಮಾಡದಿದ್ದರೊಂದು ಸ್ನಾನ**
**ಪರೋಪಕಾರ ಮಾಡುವುದೊಂದು ಸ್ನಾನ**
**ಪರತತ್ತ್ವವನರಿತುಕೊಂಬುದೆ ಒಂದು ಸ್ನಾನ** ॥೨॥

**ಸಾಧು ಸಜ್ಜನರ ಸಂಗವೆ ಒಂದು ಸ್ನಾನ**
**ಭೇದಾಭೇದವಳಿದಡೆ ಒಂದು ಸ್ನಾನ**
**ಆದಿಮೂರುತಿ ಕಾಗಿನೆಲೆಯಾದಿಕೇಶವನ**
**ಪಾದಧ್ಯಾನವೆ ನಿತ್ಯ ಗಂಗಾ ಸ್ನಾನ** ॥೩॥

ಭಾವ– ಕನಕದಾಸರು ಕಾಶಿಗೆ ಹೋದಾಗ ಗಂಗಾನದಿಯಲ್ಲಿ ಸ್ನಾನ ಮಾಡುತ್ತಿರುವ ಜನಸಮೂಹವನ್ನು ಕಂಡು, 'ಜ್ಞಾನತೀರ್ಥದಲ್ಲಿ ಸ್ನಾನ ಮಾಡಿದರೆ ಒಳ್ಳೆಯದು' ಎಂಬ ಭಾವದ ಈ ಕೀರ್ತನೆಯನ್ನು ಕಟ್ಟಿ ಹಾಡಿದ್ದಾರೆ. ಅಂದರೆ ಯಾಂತ್ರಿಕ ಸ್ನಾನದಿಂದ

ಯಂತ್ರವಾಹಕನ ದರುಶನವಾಗುವುದಿಲ್ಲ ಎಂಬುದು ಇಂಗಿತ ಭಾವ.

ಅರ್ಥ– ಪರತತ್ತ್ವ = ಪಾರಮಾರ್ಥಿಕ ದೃಷ್ಟಿಯ ಪರಮಾತ್ಮ ತತ್ತ್ವ

* * * *



೧೯೨

## ಧನ್ಯಾಸಿ – ಆಟತಾಳ

**ಕೇಶವನೊಲುಮೆಯು ಆಗುವ ತನಕ ಹರಿ**
**ದಾಸರೊಳಿರುತಿರು ಹೇ ಮನುಜ ॥ಪ॥**

**ಕ್ಲೇಶಪಾಶಂಗಳ ಹರಿದು ವಿಲಾಸದಿ**
**ಶ್ರೀಶನ ನುತಿಗಳ ಪೊಗಳುತ ಮನದೊಳು ॥ಅ॥**

**ಮೋಸದಿ ಜೀವರ ಘಾಸಿ ಮಾಡಿದ ಪಾಪ**
**ಕಾಶಿಗೆ ಹೋದರೆ ಹೋದೀತೆ**
**ಶ್ರೀಶನ ಭಕುತರ ದೂಷಿಸಿದಾ ಫಲ**
**ಕಾಸು ಕೊಟ್ಟರೆ ಬಿಟ್ಟೀತೆ**
**ಭಾಷೆಯ ಕೊಟ್ಟು ನಿರಾಶೆಯ ಗೈದ ಫಲ**
**ಕ್ಲೇಶಗೊಳಿಸದೆ ಇದ್ದೀತೆ**
**ಭೂಸುರಸ್ವವ ಹ್ರಾಸ ಮಾಡಿದ ಫಲ**
**ಏಸೇಸು ಜನುಮಕು ಬಿಟ್ಟೀತೆ ॥೧॥**

**ಜೀನನ ವಶದೊಳು ನಾನಾ ದ್ರವ್ಯವಿರೆ**
**ದಾನಧರ್ಮಕೆ ಮನಸಾದೀತೆ**
**ಹೀನ ಮನುಜನಿಗೆ ಜ್ಞಾನವ ಬೋಧಿಸೆ**
**ಹೀನ ವಿಷಯ ಅಳಿದ್ಹೋದೀತೆ**
**ಮಾನಿನಿ ಮನಸದು ನಿಧಾನವಿರದಿರೆ**
**ಮಾನಾಭಿಮಾನಗಳುಳಿದೀತೆ**
**ಭಾನುಪ್ರಕಾಶನ ಭಜನೆಯ ಮಾಡದ**
**ಹೀನಗೆ ಮುಕುತಿಯು ದೊರಕೀತೆ ॥೨॥**

ಸತ್ಯಧರ್ಮಗಳ ನಿತ್ಯವು ಬೋಧಿಸೆ
ತೊತ್ತಿನ ಮನಸಿಗೆ ಸೊಗಸೀತೆ
ತತ್ವದ ಅರ್ಥವ ವಿಚಿತ್ರದಿ ಪೇಳೆ
ಕತ್ತೆಯ ಚಿತ್ತಕೆ ಹತ್ತೀತೆ
ಪುತ್ಥಳಿ ಬೊಂಬೆಯ ಚಿತ್ರದಿ ಬಣ್ಣಿಸಿ
ಮುತ್ತುಕೊಟ್ಟರೆ ಮಾತನಾಡೀತೆ
ಕತ್ತುರಿ ತಿಲಕವನೊತ್ತಿ ಫಣೆಯೊಳಿಡೆ
ಅರ್ತಿಯ ತೋರದೆ ಇದ್ದೀತೆ ॥೩॥

ನ್ಯಾಯವ ಬಿಟ್ಟನ್ಯಾಯವ ಪೇಳುವ
ನಾಯಿಗೆ ನರಕವು ತಪ್ಪೀತೆ
ಬಾಯಿ ಕೊಬ್ಬಿನಲಿ ಬಯ್ಯುವ ಮನುಜಗೆ
ಘಾಯವಾಗದೆ ಬಿಟ್ಟೀತೆ
ತಾಯಿತಂದೆಗಳ ನೋಯಿಸಿದವನಿಗೆ
ಮಾಯದ ಮರಣವು ತಪ್ಪೀತೆ
ಮಾಯಾಜಾಲವ ಕಲಿತ ಮನುಜನಿಗೆ
ಕಾಯ ಕಷ್ಟವು ಬಿಟ್ಟೀತೆ ॥೪॥

ಸಾಧು ಸಜ್ಜನರ ನೋಯಿಸಿದ ಮಾಯಾ
ವಾದಿಗೆ ನರಕವು ತಪ್ಪೀತೆ
ಬಾಧಿಸಿ ಪರರರ್ಥವ ದೋಚುವವಗೆ
ವ್ಯಾಧಿಯು ಕಾಡದೆ ಬಿಟ್ಟೀತೆ
ಭೇದವೆಣಿಸಿ ಬಲು ಕ್ಷುದ್ರವ ಕಲಿತರೆ
ಮೋದವೆಂದಿಗು ಆದೀತೆ
ಕದ್ದು ಒಡಲ ಪೊರೆವವನ ಮನೆಯೊಳು
ಇದ್ದದ್ದು ಹೋಗದೆ ಉಳಿದೀತೆ ॥೫॥

ಅಂಗಜ ವಿಷಯಗಳನು ತೊರೆದಾತಗೆ
ಅಂಗನೆಯರ ಸುಖ ಸೊಗಸೀತೆ



ಸಂಗ ದುಃಖಗಳು ಹಿಂಗಿದ ಮನುಜಗೆ
ಶೃಂಗಾರದ ಬಗೆ ರುಚಿಸೀತೆ
ಇಂಗಿತವರಿತ ನಿಸ್ಸಂಗಿ ಶರೀರ ವ
ಜ್ರಾಂಗಿಯಾಗದೆ ತಾನಿದ್ದೀತೆ
ಮಂಗಳ ಮಹಿಮನ ಅಂಘ್ರಿಯ ಕಾಣದ
ಮಂಗಗೆ ಮುಕುತಿಯು ದೊರಕೀತೆ ॥೬॥

ಕರುಣಾಮೃತದಾಭರಣವ ಧರಿಸಿದ
ಶರಣಗೆ ಸಿರಿಯು ತಪ್ಪೀತೆ
ಕರುಣ ಪಾಶದುರವಣೆ ಹರಿದಾತಗೆ
ಶರಣರ ಕರುಣವು ತಪ್ಪೀತೆ
ಅರಿತು ಶಾಸ್ತ್ರವನಾಚರಿಪ ಯೋಗ್ಯಗೆ
ಗುರು ಉಪದೇಶವು ತಪ್ಪೀತೆ
ವರ ವೇಲಾಪುರದಾದಿಕೇಶವನ
ಸ್ಮರಿಸುವನಿಗೆ ಮೋಕ್ಷ ತಪ್ಪೀತೆ ॥೭॥

ಭಾವ– ಭಗವತ್ಕೃಪೆ ಒದಗುವ ತನಕ ಸತ್ಸಂಗದಲ್ಲಿದ್ದು ಸಾಧನಾ ನಿರತನಾಗ ಬೇಕೆಂಬ ಆಶಯವಿದೆ ಈ ಕೀರ್ತನೆಯಲ್ಲಿ. 'ಭೇದವೆಣಿಸಿ ಬಲು ಕ್ಷುದ್ರವ ಕಲಿತರೆ ಮೋದವೆಂದಿಗು ಆದೀತೆ' ಎಂಬ ಮಾತು ಭೇದವಾದಿಗಳ ಸಂಕುಚಿತತೆ ಸಂತೋಷಕೆ ಮಾರಕ ಎಂಬ ಸತ್ಯವನ್ನು ಸೂಚಿಸುತ್ತದೆ. 'ತತ್ವದ ಅರ್ಥವ ವಿಚಿತ್ರದಿ ಪೇಳೆ ಕತ್ತೆಯ ಚಿತ್ತಕೆ ಹತ್ತೀತೆ' ಎಂಬ ಮಾತಿನಲ್ಲಿ ಮುಂಡಿಗೆಗಳ ಮೂಲಕ ಹೇಳಿರುವ ಅನುಭಾವ, ಪಾಂಡಿತ್ಯದ ಹೊರೆಹೊತ್ತು ಸಾಗುವ ಕರ್ಮಠರಿಗೆ ಹಿಡಿಸುವುದಿಲ್ಲ ಎಂಬ ಕಟಕಿಯೂ ಕಣ್ಮಿಟುಕಿಸಿರುವುದನ್ನು ಕಾಣಬಹುದು.

ಅರ್ಥ– ಕ್ಲೇಶಪಾಶ = ದುಃಖಗಳ ಬಂಧನ
ಶ್ರೀಶ = ವಿಷ್ಣು
ಭೂಸುರ = ಬ್ರಹ್ಮಜ್ಞಾನಿ

ಸ್ತವ = ಸ್ತುತಿ
ಹ್ರಾಸ = ನಾಶ
ಭಾನು = ಸೂರ್ಯ
ಭಾನುಪ್ರಕಾಶ = ಭಗವಂತ
ಅರ್ತಿ = ಪ್ರೀತಿ
ಕಾಯ = ಶರೀರ
ಮೋದ = ಸಂತೋಷ
ಅಂಗಜ = ಕಾಮ
ಆಂಘ್ರಿ = ಪಾದ
ಉರವಣೆ = ಆಧಿಕ್ಯ

* * * *



## ೧೯೩
## ನಾದನಾಮ ಕ್ರಿಯೆ – ಏಕತಾಳ

ಧರೆಯ ಭೋಗವನ್ನು ನಂಬಿ
ಹರಿಯ ಮರೆದು ಕೆಡಲು ಬೇಡ
ಧರೆಯ ಭೋಗ ಕನಸಿನಂತೆ ಕೇಳು ಮಾನವ ॥ಪ॥

ತಿರುಕನೋರ್ವನೂರ ಮುಂದೆ
ಮುರುಕು ಧಮಶಾಲೆಯಲ್ಲಿ
ಒರಗಿರುತ್ತಲೊಂದು ಕನಸು ಕಂಡನೆಂತೆನೆ
ಪುರದ ಅರಸು ಸತ್ತನವಗೆ
ವರ ಕುಮಾರರಿಲ್ಲದಿರಲು
ಕರಿಯ ಕೈಲಿ ಕುಸುಮ ಮಾಲೆಯಿತ್ತು ಪುರದೊಳು ॥೧॥

ಬಿಡಲದಾರ ಕೊರಳಿನಲ್ಲಿ
ತೊಡರಿಸಲ್ಕೆ ಅವರ ಪಟ್ಟ
ದೊಡೆಯರನ್ನು ಮಾಳ್ಪೆವೆಂದು ಬಿಟ್ಟರಲ್ಲಿಯೆ
ಒಡನೆ ತನ್ನ ಕೊರಳಿನಲ್ಲಿ
ತೊಡರಿಸುವುದ ಕಂಡು ತಿರುಕ
ಪೊಡವಿಯಾಣ್ಮನಾದೆನೆಂದು ಹಿಗ್ಗುತಿದ್ದನು ॥೨॥

ಪಟ್ಟಗಟ್ಟಲಾಗ ನೃಪರು
ಕೊಟ್ಟರವಗೆ ಕಪ್ಪಗಳನು
ನೆಟ್ಟನವನು ರಾಜ್ಯವಾಳ್ದ ಕನಸಿನಲ್ಲಿಯೆ
ಪಟ್ಟದರಸಿಯೊಳಗೆ ಸುಖವ
ಪಟ್ಟು ಮನದಿ ಹರುಷಗೊಳಲು
ಪುಟ್ಟಿದವು ಹೆಣ್ಣು ಗಂಡು ಮಕ್ಕಳಾಗಲೆ ॥೩॥

**ಓಲಗದೊಳಗಿರುತ ತೊಡೆಯ**
**ಮೇಲೆ ಮಕ್ಕಳಾಡುತಿರಲು**
**ಲೀಲೆಯಿಂದ ಚಾತುರಂಗ ಬಲವ ನೋಡುತ**
**ಲೋಲನಾಗಿ ನೆನೆದು ಮನದಿ**
**ಪೇಳೆ ಮಂತ್ರಿಗಳಿಗೆ ಆಗ**
**ಬಾಲೆಯರನು ನೋಡಿ ಮದುವೆ ಮಾಳ್ಪೆನೆಂದನು ॥೪॥**

**ನೋಡಿ ವರಗಳೆನುತ ಕಳುಹೆ**
**ನೋಡಿ ಬಂದೆವೆನಲು ಜೀಯ**
**ಮಾಡೆ ಮದುವೆ ಮಂಟಪವನು ರಚಿಸಿರೆಂದನು**
**ಗಾಢ ಸಂಭ್ರಮದೊಳು ಕೂಡಿ**
**ಮಾಡಿದನವ ಮದುವೆಗಳನು**
**ರೂಢಿ ಪಾಲರೆಲ್ಲ ಕೇಳಿ ಮೆಚ್ಚುವಂದದಿ ॥೫॥**

**ಧನದ ಮದವು ರಾಜ್ಯ ಮದವು**
**ವನಿತೆ ಮದವು ಸುತರ ಮದವು**
**ಕನಸಿನಲ್ಲಿ ಕಂಡು ತಿರುಕ ಹಿಗ್ಗುತಿದ್ದನು**
**ಅನಿತರೊಳಗೆ ನೃಪರ ದಂಡು**
**ಮನೆಯ ಮುತ್ತಿದಂತೆ ಕಂಡು**
**ಕನಸಿನಲ್ಲೆ ದಿಗಿಲುಗೊಂಡು ಕಣ್ಣು ತೆರೆದನು ॥೬॥**

**ಮೆರೆಯುತಿದ್ದ ಭಾಗ್ಯವೆಲ್ಲ**
**ಹರಿದು ಹೋಯಿತೆಂದು ತಿರುಕ**
**ತಿರಿವುದಕ್ಕೆ ನಾಚುತಿದ್ದ ಮರುಳನಂದದಿ**
**ಸಿರಿಯು ಕನಸಿನಂತೆ ಕೇಳು**
**ಅರಿತು ಆದಿಕೇಶವನ್ನ**
**ಹರುಷದಿಂದ ಭಜಿಸೆ ನಿತ್ಯ ಸುಖವನೀವನು ॥೭॥**



ಭಾವ– ‘ಸಿರಿಸಂಪತ್ತು ಸ್ವಪ್ನದಂತೆ ಕ್ಷಣಭಂಗುರ’ ಎಂಬ ಆಶಯವನ್ನೊಳಗೊಂಡಿದೆ ಈ ಕೀರ್ತನೆ. ‘ಗೋವಿನ ಹಾಡು’ ಹೇಗೆ ಮನೆಮನೆಯ ಮಾತಾಗಿ ಜನಮನದಲ್ಲಿ ಗುನುಗುನಿಸುತ್ತಿದೆಯೋ ಹಾಗೆ ಕನಕದಾಸರ ‘ತಿರುಕನ ಕನಸು’ ಮನೆಮನೆಯ ಮಾತಾಗಿದೆ; ಜನ ಮನದ ಉಸಿರಾಗಿ ಬೆರೆತು ಹೋಗಿದೆ. ಇದಕ್ಕೆ ಕಾರಣ ಸಾಮಾನ್ಯ ಜನರಿಗೆ ಮುಟ್ಟುವ, ಅವರ ಎದೆಗದವನ್ನು ತಟ್ಟುವ ಸರಳ ಸುಂದರ ಸಂವಹನ ಮೋಡಿ; ದಿನಗಟ್ಟಲೆಯ (ಸಾಮಾನ್ಯ) ನುಡಿ ‘ಪಡಿ’ಯಿಂದಲೇ ಹೆಚ್ಚುಗಟ್ಟಲೆಯ (ವಿಶೇಷ) ರಸಗವಳವನ್ನು ಅಟ್ಟು ಉಣಬಡಿಸಿರುವ ಜಾನಪದ ನೆಲೆಗಟ್ಟಿನ ರೂಢಿಗತ ಗಾರುಡಿಗತನ.

ಅರ್ಥ– ಒರಗಿರುತ್ತ = ಮಲಗಿರುತ್ತ
ಕರಿ = ಆನೆ
ತೊಡರಿಸಲ್ಕೆ = ತೊಡಿಸಲು (ತೊಡರು ಎಂಭುದಕ್ಕೆ ಆಭರಣ ಎಂಬ ಅರ್ಥವಿದೆ; ಆಭರಣದಂತೆ ತೊಡಿಸಲು ಎಂಬುದು ಇಲ್ಲಿ ಗೃಹೀತಾರ್ಥ)
ಪೊಡವಿಯಾಣ್ಮ = ರಾಜ್ಯದ ಒಡೆಯ (ರಾಜ)
ರೂಢಿಪಾಲರು = ರಾಜರು
ಮರುಳ = ಹುಚ್ಚ, ಭ್ರಾಂತ

* * * *

## ೧೯೪
## ಮುಖಾರಿ – ಝಂಪೆ ತಾಳ

ಮರೆಯದಿರು ಮರೆಯದಿರು ಎಲೆ ಮಾನವ– ನಿನ್ನ
ಸಿರಿಯ ಹವಣೇನು ಹೇಳೆಲೊ ಮಂಕು ಜೀವ ||ಪ||

ಸಿರಿಯೊಳಗೆ ಮಾಧವನೊ ಹಿರಿಯರೊಳು ಬ್ರಹ್ಮನೋ
ದುರುಳ ರಾವಣನ ಸಂಪದವೊ ನಿನಗೆ
ದುರಿಯೋಧನನಂತೆ ಮಕುಟವರ್ಧನನೊ– ನಿನ್ನ
ಸಿರಿಯ ಹವಣೇನು ಪೇಳೆಲೊ ಮಾನವ ||೧||

ಬಲುಹಿನಲಿ ವಾಲಿಯೋ ಚೆಲುವಿಕೆಗೆ ಕಾಮನೋ
ಸಲುಗೆಯಲಿ ನಾರದನೊ ಹೇಳು ನೀನು
ಕಲಿಗಳೊಳು ಭೀಷ್ಮ ದ್ರೋಣಾಚಾರ್ಯ ಫಲಗುಣನೊ
ಕುಲದಲ್ಲಿ ವಸಿಷ್ಠನೊ ಹೇಳೆಲೊ ಮಾನವ ||೨||

ತ್ಯಾಗದಲಿ ಕರ್ಣನೋ ಭೋಗದಲಿ ಸುರಪನೋ
ಭಾಗ್ಯದಲಿ ದಶರಥನೊ ಹೇಳು ನೀನು
ರಾಗದಲಿ ತುಂಬುರನೊ ಯೋಗದಲಿ ಸನಕನೊ
ಹೀಗ್ಯಾರ ಹೋಲುವೆ ಹೇಳೆಲೊ ಮಾನವ ||೩||

ಯತಿಗಳಲ್ಲಗಸ್ತ್ಯನೋ ಜೊತೆಯಲ್ಲಿ ಹನುಮನೋ
ವ್ರತಕೆ ಶುಕಮುನಿಯೇನೊ ಹೇಳು ನೀನು
ಶ್ರುತಿಪಾಠ ವಿಬುಧರೊಳು ಸೂತನೋ– ನಿನ್ನ ಶುಭ
ಮತಿಯ ಹವಣೇನು ಹೇಳೆಲೊ ಮಾನವ ||೪||



ವಿದ್ಯೆಯಲಿ ಸುರಗುರುವೊ ಬುದ್ಧಿಯಲಿ ಮನುಮುನಿಯೊ
ಶ್ರದ್ಧೆಯಲಿ ನೀನಾರ ಹೋಲ್ವೆ ಹೇಳು
ಸಿದ್ಧರೊಳು ನವಕೋಟಿಯೊಳೊಬ್ಬನೊ ನೀನು
ಕ್ಷುದ್ರ ಮಾನವ ನಿನ್ನ ಸಿರಿಯ ಹವಣೇನು ||೫||

ಗೆಲ್ಲು ಸೋಲಿನ ಮಾತು ಸಲ್ಲದೆಲವೋ ನಿನಗೆ
ಎಲ್ಲವನು ಬಿಡು ಗರ್ವ ನಿನಗೇತಕೊ
ಬಲ್ಲೆಯಾದರೆ ಆದಿ ಕೇಶವನ ನಾಮವನು
ಸೊಲ್ಲು ಸೊಲ್ಲಿಗೆ ತುತಿಸಿ ಸುಖಿಯಾಗಿ ಬಾಳು ||೬||

ಭಾವ– ತನ್ನ ಬಿಟ್ಟರೆ ಇಲ್ಲ ಎಂದು ಅಹಂಕಾರದಿಂದ 'ಮೆರೆದು ಮೆಕ್ಕೆಕಾಯಿ ತಿನ್ನು'ವ ಮದೋನ್ಮತ್ತ ಮಾನವರಿಗೆ, ಒಣಜಂಭ ತರವಲ್ಲವೆಂದು ತಿಳಿ ಹೇಳಲು, ವಿವಿಧ ರಂಗಗಳಲ್ಲಿ ಉತ್ತುಂಗ ಸ್ಥಾನಮಾನ ಪಡೆದ, ಶಕ್ತಿ ಸಾಮರ್ಥ್ಯ, ಸಂಪತ್ತುಗಳಲ್ಲಿ 'ಎತ್ತಿದಕೈ'ಯಾಗಿರುವ, ಅದ್ಭುತ ಸಾಧನೆ ಸಿದ್ಧಿಗಳಲ್ಲಿ ಉತ್ಕೃಷ್ಟರೆನಿಸಿದ ಪೌರಾಣಿಕ ಲೋಕದ ಘಟಾನುಘಟಿಗಳ 'ಜಾತ್ರೆಯನ್ನೇ' ಜರುಗಿಸಿದ್ದಾರೆ ಕನಕದಾಸರು– ಅಹಂಕಾರದಿಂದ ಮೆರೆಯುವವರ 'ಕೊಳಗೊಂಡ ಗರ್ವರಸ ಸೋರಿ ಹೋಗುವಂತೆ!'

ಅರ್ಥ– ಸುರಪ = ದೇವೇಂದ್ರ
ಶ್ರುತಿಪಾಠ ವಿಬುಧ = ವೇದ ಪಾರಂಗತ
ಸುರುಗುರು = ಬೃಹಸ್ಪತಾಚಾರ್ಯ
ತುತಿಸಿ = ಸ್ತುತಿಸಿ

* * * *

## ೧೯೫
## ಕಲ್ಯಾಣಿ – ಅಟತಾಳ

**ಕಲಿ ಹೆಚ್ಚಿ ಬಂದಿತಲ್ಲ, ರಂಗಯ್ಯ, ಕಾಯೆನ್ನ ಸಿರಿಯ ನಲ್ಲ॥ಪ॥**

**ಬಲು ಘೋರ ಪಾತಕದಿ ಇಳೆಯು ತಲ್ಲಣಗೊಂಡು**
**ಕಳವಳಿಸುತಿದೆ ಕಾಲ ವಿಪರೀತದಿ ॥ಅ॥**

**ಅತ್ತೆಯ ಸೊಸೆ ಬೈವಳು– ಪುತ್ರರು ತಮ್ಮ**
**ಹೆತ್ತ ತಾಯಿಯ ಬಿಡುವರು**
**ಉತ್ತಮ ಗರತಿಗೆ ಅಪವಾದ– ಅವಿವೇಕಿಗಳು**
**ಎತ್ತ ನೋಡಲು ಹೆಚ್ಚಿ ಹೆದರಿಸಿತು**
**ನ್ಮತ್ತತನದಲಿ ಮನೆಯ ರಚಿಸುವರು**
**ಭಕ್ತಿಯೆಂಬುದ ಬಯಸದಿರುವರು**
**ಕತ್ತಲಾಯಿತು ಕಲಿಯ ಮಹಿಮೆ ॥೧॥**

**ನಿತ್ಯನೇಮವು ನಿಂತಿತು– ಹೋಯಿತಲ್ಲ**
**ಜಾತಿಗೈಶ್ವರ್ಯ ಭೋಗಭಾಗ್ಯ**
**ದಾತರಾದವರಿಗೆ ಧಾರಣೆ ಪಾರಣೆ**
**ಜಾತಿನೀತಿಗಳೆಲ್ಲ ಒಂದಾಗಿ**
**ಪಾತಕದಿ ಮನವೆರಗಿ ಮೋಹಿಸುತ**
**ಮಾತಾಪಿತೃ ಗುರುದೈವ ದ್ರೋಹದಿ**
**ಭೂತಳವು ನಡುನಡುಗುತಿಹುದು ॥೨॥**

**ಬಿನ್ನಣ ಮಾತುಗಳು ಮತ್ತೆ ಮತ್ತೆ**
**ಘನ್ನ ಮತ್ಸರ ಕ್ರೋಧಗಳು**
**ಅನ್ಯಾಯದಿಂದ ಅರ್ಥವ ಗಳಿಸುವರು**



**ತನ್ನ ಕಾಂತನ ಬಿಟ್ಟು ಸ್ತ್ರೀಯರು**
**ಅನ್ಯರಿಗೆ ಮನವೆರಗಿ ಮೋಹಿಪರು**
**ಬಣ್ಣಗೆಟ್ಟಿತು ವರ್ಣ ತಪ್ಪಿತು ಪ್ರ**
**ಸನ್ನ ಶ್ರೀ ನೆಲೆಯಾದಿ ಕೇಶವನೆ ॥೩॥**

ಭಾವ– ಐಶ್ವರ್ಯ ಸ್ಥಾನಮಾನಗಳ ಅಮಲಿನಲ್ಲಿ ಜನ ನೀತಿನಿಯಮಗಳನ್ನು ಗಾಳಿಗೆ ತೂರಿ ಹಗ್ಗವೂಗುದಾರವಿಲ್ಲದ ಗೂಳಿಗಳಂತೆ ಬದುಕಬಯಸಿದ ಸಮಾಜ ಸ್ಥಿತ್ಯಂತರದ ಒಂದು ನೋಟ ಈ ಕೀರ್ತನೆಯಲ್ಲಿ ಇಣಿಕಿ ಹಾಕಿದೆ.

ಅರ್ಥ– ಕಲಿ = ಕಲಿಗಾಲ (ಕಲಿತದ್ದು ಯಾವುದೋ ಅದು ಕಲಿ ಅಂದರೆ ವಿದ್ಯೆ ಎಂಬ ಅರ್ಥವೂ ಆಗುತ್ತದೆ)
ಸಿರಿಯ ನಲ್ಲ = ಲಕ್ಷ್ಮಿಯ ಗಂಡ (ವಿಷ್ಣು)
ದಾತ = ಒಡೆಯ
ಧಾರಣೆ = ನಿಗ್ರಹ
ಪಾರಣೆ = ಉಪವಾಸದ ಬಳಿಕ ಮಾಡುವ ಊಟ
ಭೂತಳ = ಭೂಮಂಡಲ
ಬಿನ್ನಣ = ಬೆಡಗು, ವೈಯ್ಯಾರ
ಗನ್ನ (<ಘನ) = ಮಹಾ
ಬಣ್ಣ = ಮಾನ, ಗೌರವ;
ವರ್ಣ = ಕಾಂತಿ, ಹೊಳಪು

* * * *

## ೧೯೬
## ಕಾಂಬೋದಿ – ಜಂಪೆತಾಳ

ಕಲಿಯುಗದ ಮಹಿಮೆಯನು ಕಂಡಷ್ಟು ಪೇಳುವೆನು ॥ಪ॥
ಜಲಜನಾಭನ ಕೃಪೆಯ ಪಡೆದವರು ಕೇಳಿ ॥ಅ॥

ಸತ್ಯಧರ್ಮಗಳೆಲ್ಲ ಎತ್ತ ಪೋದವೊ ಕಾಣೆ
ಉತ್ತಮರ ಜೀವನಕೆ ದಾರಿಯಿಲ್ಲ
ನಿತ್ಯದಲಿ ಕಳವು ವ್ಯಭಿಚಾರವುಳ್ಳವರೆಲ್ಲ
ಅರ್ಥ ಸಂಪನ್ನರಾಗನುಭವಿಸುತಿಹರು ॥೧॥

ಅತ್ತೆಯೇ ಸೊಸೆಯಾಗಿ ಸೊಸೆಯು ಅತ್ತೆಯು ಆಗಿ
ಪುತ್ರ ಪಿತನಾಗಿ ಪಿತ ಪುತ್ರನಾಗಿ
ಮತ್ತೆ ಗಂಡನಿಗೆ ಹೆಂಡತಿಯೆ ಗಂಡಳು ಆಗಿ
ವರ್ತಿಸುವರಯ್ಯ ತಮಗೆದುರಿಲ್ಲವೆಂದು ॥೨॥

ವಾವೆವರಸೆಯು ತಪ್ಪಿ ವೈರಿ ವರ್ಗವು ಹೆಚ್ಚಿ
ದೇವ ಬ್ರಾಹ್ಮಣ ಗುರು ಹಿರಿಯರನು ಜರಿದು
ಕೇವಲಾಧಮರೆಲ್ಲ ಸಿರಿ ಮದದಿ ಸೊಕ್ಕಿದರು
ಕಾವರಾರೈ ಸಾಧು ಸಜ್ಜನರನೀಗ ॥೩॥

ವೇದ ವಿಪ್ರರು ತಮ್ಮ ವೃತ್ತಿ ಸ್ವಾಸ್ಥ್ಯವ ಕಳೆದು
ಆಧಾರವಿಲ್ಲದೆ ತಿರಿದು ತಿಂಬುವರು
ಕಾದುವ ಶೂರರಿಗೆ ಕಾಸು ಕೊಡುವವರಿಲ್ಲ
ಮೇದಿನಿಗೆ ಬೀಳ್ವ ಮಳೆ ಖಂಡಮಂಡಲವು ॥೪॥



ಅನ್ನವಸ್ತ್ರಗಳಿಂದ ಚೆನ್ನಾಗಿ ಬಾಳುವರ
ಭಿನ್ನ ತಂತ್ರವ ಮಾಡಿ ಕೆಡಿಸುತಿಹರು
ಗನ್ನಗತಕವ ಮಾಳ್ಪ ಗ್ರಾಮಣ್ಯಗಳ ಕಲಿತು
ಕುನ್ನಿಗಳು ಹೆಚ್ಚಿದರು ಕ್ರೂರ ಫಣಿಯಂತೆ ॥೫॥

ಆಳಿದೊಡೆಯಂಗೆರಡು ಬಗೆಯುವಾತಗೆ ಒಳ್ಳೆ
ಮಾಳಿಗೆಯ ಮನೆ ತುರುವು ಧನಧಾನ್ಯವು
ವೇಳೆವೇಳೆಗೆ ಬರುವ ಹೆಂಡತಿಯ ಲೆಕ್ಕಿಸದೆ
ಸೂಳೆಯನು ನೆಚ್ಚಿ ಕಾಲವ ಕಳೆವರಯ್ಯ ॥೬॥

ಸೇರಿ ದ್ರೋಹವ ಮಾಳ್ಪ ಕ್ರೂರಕರ್ಮಿಗಳ ಮತ
ಪೂರೈಸಿ ಕೊಡುವರರಸುಗಳೆಲ್ಲರು
ಧಾರಿಣಿಯ ಭಾರವನು ತಾಳಲಾರದೆ ದೇವಿ
ಶ್ರೀರಾಮ ರಾಮೆಂದು ಶಿರವ ತೂಗುವಳು ॥೭॥

ಉತ್ತಮ ಪತಿವ್ರತೆಯು ಪತಿ ನೀನೆ ಗತಿಯೆನಲು
ಮುತ್ತೈದೆಗುಡುವುದಕೆ ವಸ್ತ್ರವಿಲ್ಲ
ಮತ್ತೆ ವ್ಯಭಿಚಾರಿಣಿಗೆ ತೊಡಿಗೆ ಬಂಗಾರಗಳು
ವರ್ತನೆಯಿದೇನಯ್ಯ ಕಲಿಯುಗದ ಮಹಿಮೆ ॥೮॥

ಪತಿವ್ರತೆಯರೆಂಬುವರು ಶತಸಹಸ್ರಕೊಬ್ಬರು
ಮಿತಿಮಿರಿ ಇಹರಯ್ಯ ಇತರ ಜನರು
ಮತಿಗೆಟ್ಟು ಮನಸೋತು ಅನ್ಯ ಪುರುಷರ ಕೂಡಿ
ಗತಿಗೆಟ್ಟು ಹೋಗುವರು ಮೂರು ತೊರೆದು ॥೯॥

ಹರಿಹರರ ಪೂಜೆಗಳು ಹಗರಣಗಳಾದವು
ಉರಿ ಮಾರಿ ಚಾಮುಂಡಿ ಶಕ್ತಿಗಳಿಗೆ
ಕುರಿ ಕೋಣ ನೈವೇದ್ಯ ಧೂಪದೀಪಗಳಿಂದ
ಪರಮ ಭಕ್ತಿಯ ಸಲಿಸಿ ಪೂಜಿಸುವರಯ್ಯ ॥೧೦॥

**ನಡೆವ ಕಾರ್ಯಗಳೆಲ್ಲ ನುಡಿಯಲೆನ್ನಳವಲ್ಲ**
**ಒಡೆಯ ನೀನೇ ಬಲ್ಲೆ ಕಲಿಯುಗದ ಮಹಿಮೆ**
**ತಡವ ಮಾಡಲಿ ಬೇಡ ತಾಳಲಾರದು ಲೋಕ**
**ಮೃಡನ ವೈರಿಯ ಪೆತ್ತ ಆದಿಕೇಶವನೆ ॥೧೧॥**

ಭಾವ– ರಕ್ಕಸ ತಂಗಡಿ ಯುದ್ಧದಲ್ಲಿ ವಿಜಯನಗರ ಸಾಮ್ರಾಜ್ಯ ಪತನವಾದ ಮೇಲೆ ಮುಸಲ್ಮಾನರ ಕಾರುಬಾರು ಅಬ್ಬರ ಆವುಟಗಳಲ್ಲಿ ತಬ್ಬಿಬ್ಬುಗೊಂಡ ಸಾಧು ಸಜ್ಜನರು ದಿಕ್ಕಾಪಾಲಾದಂತೆಯೇ ಸ್ಥಾನಮಾನ ಐಶ್ವರ್ಯಾಕಾಂಕ್ಷೆಯ ಐಹಿಕ ಸುಖಾಪೇಕ್ಷೆಯ ಜನ ನ್ಯಾಯನೀತಿಗಳನ್ನು ತೊರೆದು ಸ್ವೇಚ್ಛೆಯಾಗಿ ವರ್ತಿಸತೊಡಗಿದ ಸಂಕ್ರಮಣ ಸ್ಥಿತಿಯ ಚಿತ್ರಣವಿದು ಎನ್ನಿಸುತ್ತದೆ. ಈ ಕೀರ್ತನೆಯ ಹಲವಾರು ನುಡಿಗಳಲ್ಲಿ ಈ ಅನಿಸಿಕೆಗೆ ಪೂರಕವಾದ ಅಂಶಗಳಿರುವುದನ್ನು ಗಮನಿಸಬಹುದು.

ಅರ್ಥ– ಜಲಜನಾಭ = ಹೊಕ್ಕುಳಲ್ಲಿ ಕಮಲವುಳ್ಳವನು (ವಿಷ್ಣು)
ವಾವೆ = ಸಂಬಂಧ
ವರಸೆ = ಮದುವೆಗೆ ಅನುಕೂಲವಾದ ಸಂಬಂಧ (ಉದಾಹರಣೆಗೆ ಚಿಕ್ಕಪ್ಪದೊಡ್ಡಪ್ಪನ ಮಕ್ಕಳನ್ನು ಮದುವೆಯಾಗುವಂತಿಲ್ಲ. ಅಂಥದಕ್ಕೆ ವರಸೆ ಇಲ್ಲ ಎಂದು ಹೇಳುತ್ತಾರೆ.)
ವಿಪ್ರರು = ಬ್ರಾಹ್ಮಣರು
ಮೇದಿನಿ = ಭೂಮಂಡಲ
ಖಂಡಮಂಡಲ = ಅರ್ಧಂಬರ್ಧ, ಅಲ್ಲಿಷ್ಟು ಇಲ್ಲಿಷ್ಟು
ಗನ್ನಗತಕ (<ಘನ್ನಘಾತಕ) = ಮಹಾಮೋಸ
ಗ್ರಾಮಣ್ಯ = ಕೀಳು ತಂತ್ರ, ಸಣ್ಣತನ
ಕುನ್ನಿ = ನಾಯಿ, ಕ್ಷುಲ್ಲಕ ವ್ಯಕ್ತಿ
ಎರಡು ಬಗೆ = ದ್ರೋಹ ಮಾಡು, ಧಾರಿಣಿ = ಭೂಮಿ
ಮೂರು ತೊರೆದು = ಘನತೆ, ಮಾನ ಮರ್ಯಾದೆ ಬಿಟ್ಟು
ಹಗರಣ = ಜಗಳ, ಕಾದಾಟ
ಮೃಡ = ಈಶ್ವರ, ಮೃಡನ ವೈರಿ = ಮನ್ಮಥ

* * * *



## ೧೯೭
## ಮುಖಾರಿ – ಅಟತಾಳ

**ಏಕೆ ನಡುಗಿದೆ ತಾಯೆ ಭೂಮಿ ನಡುರಾತ್ರಿಯೊಳು– ಜಗ ॥ಪ॥**
**ದೇಕ ಪೊಡವಿಗೊಡೆಯನ ರಾಣಿ ಪರಮ ಕಲ್ಯಾಣಿ ॥ಅ॥**

**ಗುರು ಹಿರಿಯರನು ಕಂಡು ಮುರುಕಿಸುವ ಮೋರೆಯಲಿ**
**ಅರೆಮತಿಯ ಕೊಂಕು ಮಾತುಗಳನಾಡಿ**
**ಚರಣಕೆರಗದ ಮನುಜರಿರಬಾರದೆಂದೆನುತ**
**ಮರ ಮುರಿದು ಒರಗಿ ಸಾಯಲಿ ಎಂದು ನಡುಗಿದೆಯ ॥೧॥**

**ಉತ್ತಮರ ಹೊಟ್ಟೆಯಲಿ ಬಗಳೊ ಶ್ವಾನವು ಹುಟ್ಟಿ**
**ಹೆತ್ತವರ ನಿರ್ಬಂಧಕೊಳಗು ಮಾಡಿ**
**ಅತ್ತೆ ಮಾವರ ಕೀರ್ತಿಯ ಕೊಂಡಾಡುವಧಮರ**
**ಹೊತ್ತು ಇರಲಾರೆನೆನುತ ಮತ್ತೆ ನಡುಗಿದೆಯ ॥೨॥**

**ಕಳ್ಳತನವನು ಕಲಿತು ಕಾಲೋಚಿತವ ಕೇಳ್ದು**
**ಸುಳ್ಳು ಮಾತುಗಳಾಡಿ ಒಡಲ ಪೊರೆದು**
**ಕೊಳ್ಳಿ ದೆವ್ವಗಳಂತೆ ಅಲೆದಾಡುತಿರುವಂಥ**
**ಸುಳ್ಳು ಮನುಜರ ಹೊರಲಾರೆನೆಂದು ನಡುಗಿದೆಯೆ ॥೩॥**

**ಕಲಿಯುಗದಿ ಮುರಹರನ ಸ್ಮರಣೆಯನು ಮಾಡದೆಯೆ**
**ಸಲೆ ಭಕ್ತಿಯಿಂ ವೇದ ಶಾಸ್ತ್ರವನೋದದೆ**
**ಲಲನೆಯರ ಮೇಲೆ ಕಣ್ಣಿಡುವ ಹೊಲೆಯರನು ನಾ**
**ನೊಲಿದು ಹೊರಲಾರೆನೆಂದು ನಡುಗಿದೆಯ ॥೪॥**

**ಧರೆಯೊಳಗೆ ಕರ್ಮಿಗಳು ಹೆಚ್ಚಿ ಕವಿತ್ವವ ಕಲಿತು**
**ನರಕುರಿಗಳೆಲ್ಲರು ನಡೆಗೆಟ್ಟರೆಂದು**
**ಗುರುವೆ ಕೇಳಯ್ಯ ಕನಕಪ್ರಿಯ ತಿರುಪತಿಯ**
**ಗಿರಿಯಾದಿಕೇಶವನೆ ಒಲಿದು ನಿಲ್ಲಿಸಿದ ॥೫॥**

ಭಾವ– ಭೂಕಂಪವನ್ನು ವಸ್ತುವನ್ನಾಗಿ ಮಾಡಿಕೊಂಡು ರಚಿತವಾದ ಮೊಟ್ಟ ಮೊದಲ ಕೀರ್ತನೆ ಇದು; ಕನ್ನಡ ಸಾಹಿತ್ಯದಲ್ಲೇ ಮೊದಲನೆಯದು ಎನ್ನಬಹುದು. ಸಮಾಜದಲ್ಲಿ ಅಜ್ಞಾನದ, ಅವಿನಯದ, ಮೋಸ ವಂಚನೆಯ, ಅಧಾರ್ಮಿಕತೆಯ, ಲಂಪಟತನದ ಪ್ರವೃತ್ತಿ ಹೆಜ್ಜೆ ಇಡುತ್ತಿರುವುದನ್ನು ಗಮನಿಸಿದ ಕನಕದಾಸರು, ಅದನ್ನು ದಾಖಲು ಮಾಡಲು ನೆಲನಡುಗನ್ನು ನೆಲೆಗಟ್ಟು ಮಾಡಿಕೊಂಡಿರುವುದನ್ನು ಗಮನಿಸಬಹುದು. ಭೂದೇವಿ ವಿಷ್ಣುವಿನ ಪತ್ನಿಯಾದುದರಿಂದ ಮುನಿಸಿಕೊಂಡವಳನ್ನು ರಮಿಸಿ ಯಥಾಸ್ಥಿತಿಗೆ ತಂದ ಎಂದು ಕೀರ್ತನೆ ಮುಕ್ತಾಯಗೊಳ್ಳುತ್ತದೆ.

ಅರ್ಥ– ಮುರುಕಿಸುವ = ಕಿವುಚಿಕೊಳ್ಳುವ
ಮುರಹರ = ವಿಷ್ಣು

* * * *



## ೧೯೮
## ಪೂರ್ವಿ– ಮಟ್ಟ

**ಪೋಗದೋ ಛಳಿ ಪೋಗದೋ ॥ಪ॥**

**ಹಳೆಯ ಹಚ್ಚಡ ಸಕಲಾತಿ ಚಿಮ್ಮುರಿ ಟೊಪ್ಪಿಗೆ**
**ಬಿಳಿಯ ಕಂಬಳಿ ಪೊದ್ದರೆ ಪೋಗದೋ**
**ನಳಿನಾಕ್ಷಿಯ ತನ್ನ ತೊಡೆಯ ಮೇಗಡೆ ಇಟ್ಟು**
**ಕಳಸಕುಚದ ಮೇಲೆ ಕೈಯಿಕ್ಕಿದಲ್ಲದೆ ॥೧॥**

**ಬಡನಡುವಿನ ಬಟ್ಟಕುಚದ ಕಾಮಿನಿರನ್ನೆ**
**ಬೆಡಗಿನಲಿ ನಗುತ ನಲ್ಲನ ಬಳಿಗೆ ಬರಲು**
**ಒಡನೆಯೆ ಮೋಹದಿಂ ಪಿಡಿದೆತ್ತಿ ಲಲನೆಯ**
**ನಡುಮಂಚದ ಮೇಲೆ ಕೆಡಹಿಕೊಂಡಲ್ಲದೆ ॥೨॥**

**ಛಳಿಗಾರದೆ ವಿಷ್ಣು ಛಳಿಗಾರದೆ ಶಿವ**
**ಫಳಿಲನೆ ಗಂಗೆಯ ಬೀಸಾಡಲು**
**ಛಳಿಯ ಕಾರಣವೇನು ನೆಲೆಯಾದಿ ಕೇಶವ**
**ತಿಳಿದು ನೀ ಹೇಳಯ್ಯ ಛಳಿಯ ವಿವರವನು ॥೩॥**

ಭಾವ– ಹೆಣ್ಣಿನಾಲಿಂಗನ ಸುಖವಿಲ್ಲದೆ ಛಳಿ ಹೋಗದು ಎಂಬ ಭಾವವಿದೆ ಈ ಕೀರ್ತನೆಯಲ್ಲಿ. ಜ್ಞಾನಶಕ್ತಿ ಕನ್ನೆಯನ್ನು ಈ ರೀತಿ ರೂಪಕದಲ್ಲಿ ಹೇಳಿರಬಹುದೆ ಎಂದನ್ನಿಸುತ್ತದೆ. ಅಂತೂ ಇದನ್ನು ಪ್ರಾಯದಲ್ಲಿದ್ದಾಗಲೇ ಬರೆದಿರಬಹುದು– ಪ್ರೇಮಕಾಮಗಳ ಕಾವಿದ್ದಾಗಲೇ ದಾಸರಾಗುವುದಕ್ಕೆ ಮೊದಲೇ ಅವರು ಕವಿಯಾಗಿ ಸಾಹಿತ್ಯಕೃಷಿಯಲ್ಲಿ ತೊಡಗಿರಬೇಕು ಎಂಬುದಕ್ಕೆ ಪೂರಕ ಇದು.

ಅರ್ಥ– ಹಚ್ಚಡ = ದುಪ್ಪಟಿ
ಸಕಲಾತಿ = ಹಣ್ಣೆಯ ಬಟೆ
ಚಿಮ್ಮುರಿ = ತಲೆಯುಡುಗೆ
ನಳಿನಾಕ್ಷಿ = ಕಮಲಾಕ್ಷಿ
ಕುಚ = ಮೊಲೆ
ಬಟ್ಟ = ದುಂಡಾದ
ಬೆಡಗಿನಲಿ = ಸುಂದರವಾಗಿ
ಆರದೆ = ತಡೆದುಕೊಳ್ಳಲು ಸಾಧ್ಯವಾಗದೆ

* * * *

# ವೈಚಾರಿಕತೆ

**Blank**



## ೧೯೯
## ಪಂತುವರಾಳಿ – ರೂಪಕ

ಆವ ಕರ್ಮವೊ ಇದು ಆವ ಧರ್ಮವೊ
ಆವ ಕರ್ಮವೆಂದರಿಯೆ, ಹಾರುವರಿವರು ಬಲ್ಲರೆ ॥ಪ॥

ಸತ್ತವನು ಎತ್ತ ಪೋದ
ಸತ್ತು ತನ್ನ ಜನ್ಮಕೆ ಪೋದ
ಸತ್ತವನು ಉಣ್ಣುವನೆಂದು
ನಿತ್ಯ ಪಿಂಡವಿಕ್ಕುತೀರಿ ॥೧॥

ಎಳ್ಳು ದರ್ಭೆ ಕೈಲಿ ಪಿಡಿದು
ಪಿತರ ತೃಪ್ತಿ ಪಡಿಸುತೀರಿ
ಎಳ್ಳು ಮೀನು ನುಂಗಿ ಹೋಯಿತು
ದರ್ಭೆ ನೀರೊಳು ಹರಿದು ಹೋಯಿತು ॥೨॥

ಎಡಕೆ ಒಂದು ಬಲಕೆ ಒಂದು
ಎಡಕೆ ತೋರಿಸಿ ಬಲಕೆ ತೋರಿಸಿ
ಕಡು ಧಾವಂತ ಪಡಿಸಿ
ಕಟಿಯ ಹಸ್ತದೊಳಗೆ ಪಿಡಿಸುತೀರಿ ॥೩॥

ಮಂತ್ರಾಕ್ಷತೆಯ ಕೈಗೆ ಕೊಟ್ಟು
ಮೋಕ್ಷವನ್ನು ಹಾರೈಸುವಿರಿ
ಮಂತ್ರವೆಲ್ಲೊ ಅಕ್ಷತೆಯೆಲ್ಲೊ
ಮೋಕ್ಷವೆಲ್ಲೊ ಮರ್ತ್ಯವೆಲ್ಲೊ ॥೪॥

**ಹೇಳುವವನು ಅವಿವೇಕಿ**
**ಕೇಳುವವನು ಅಜ್ಞಾನಿ**
**ಹೇಳುವ ಕೇಳುವ ಇಬ್ಬರ ಸೊಲ್ಲ**
**ಆದಿಕೇಶವಮೂರ್ತಿ ಬಲ್ಲ** ॥೫॥

ಭಾವ– ಗಯಾ ಕ್ಷೇತ್ರದಲ್ಲಿ ಪಿಂಡ ಇಕ್ಕುವವರನ್ನು ಕಂಡು ಹಾಡಿದ ಕೀರ್ತನೆ ಇದು. ಅರ್ಥರಹಿತ ಆಚಾರಗಳನ್ನು ನಿಶಿತಮತಿಯಿಂದ ಗೇಲಿ ಮಾಡುವ ಕನಕದಾಸರ ವೈಚಾರಿಕ ನಿಲುವನ್ನು ಉಳಿದ ದಾಸರಲ್ಲಿ ಕಾಣುವುದು ತುಂಬ ಅಪರೂಪ.

ಅರ್ಥ– ಪಿಂಡ = ಕೂಳು
ಕಟಿ = ಸೊಂಟ
ಸೊಲ್ಲು = ಮಾತು, ಉಸಿರು

* * * *



## ೨೦೦
## ಪೂರ್ವಿ – ಮಟ್ಟೆ ತಾಳ

**ಮಗನಿಂದೆ ಗತಿಯುಂಟೆ ಜಗದೊಳಗೆ**
**ನಿಗಮಾರ್ಥ ತತ್ತ್ವವಿಚಾರದಿಂದಲ್ಲದೆ?** ॥ಪ॥

**ತ್ರಿಗುಣರಹಿತ ಪರಮಾತ್ಮನ ಧ್ಯಾನದಿ**
**ಹಗಲಿರುಳು ನಿತ್ಯಾನಂದದಿಂದ**
**ತೆಗೆದು ಪ್ರಪಂಚವಾಸನೆಯ ಬಿಟ್ಟವರಿಗೆ**
**ಮಗನಿದ್ದರೇನು ಇಲ್ಲದಿದ್ದರೇನು?** ॥೧॥

**ಲಲನೆಯರು ಪುರುಷರು ತಮತಮ್ಮ ಕಾಮದ**
**ಸಲುವಾಗಿ ಕೂಡೆ ಶೋಣಿತ ಶುಕ್ಲದಿ**
**ಮಿಳಿತವಾದ ಪಿಂಡ ತನ್ನ ಪೂರ್ವಕರ್ಮದಿಂದ**
**ನೆಲಕೆ ಬೀಳಲು ಅದು ಸಲಹಿ ರಕ್ಷಿಪುದೆ?** ॥೨॥

**ಪರಮ ದುಷ್ಟನಾಗಿ ಮರೆತು ಸ್ವಧರ್ಮವ**
**ಗುರು ಹಿರಿಯರ ಸಾಧುಗಳ ನಿಂದಿಸಿ**
**ಬೆರೆದನ್ಯ ಜಾತಿಯ ಪರನಾರಿಯ ಕೂಡಿ**
**ಸುರೆ ಕುಡಿದು ಜೂಜಾಡಿ ನರಕಕ್ಕೆ ಬೀಳುವ** ॥೩॥

**ಸತ್ಯನೊಬ್ಬ ಮಗ ಶಾಂತನೊಬ್ಬ ಮಗ ದು–**
**ರ್ವೃತ್ತಿ ನಿಗ್ರಹನೊಬ್ಬ ಸಮಚಿತ್ತನೊಬ್ಬನು**
**ಉತ್ತಮರೀ ನಾಲ್ಕು ಮಕ್ಕಳಿದ್ದ ಮೇಲೆ**
**ಹೆತ್ತರೇನು ಇನ್ನು ಹೆರದಿದ್ದರೇನಯ್ಯ?** ॥೪॥

**ಸುತರಿಲ್ಲದವಗೆ ಸದ್ಗತಿ ಇಲ್ಲವೆಂತೆಂಬ**
**ಕೃತಕ ಶಾಸ್ತ್ರವು ಲೌಕಿಕಭಾವಕೆ**
**ಕ್ಷಿತಿಯೊಳು ಕಾಗಿನೆಲೆಯಾದಿಕೇಶವ ಜಗ**
**ತ್ಪತಿಯ ಭಜಿಪಗೆ ಸದ್ಗತಿಯಿರದೆ ಹೋಹುದೆ? ॥೫॥**

ಭಾವ- ಪುತ್ರನಿಲ್ಲದೆ ಪರಗತಿಯಿಲ್ಲ (ಅಪುತ್ರಸ್ಯ ಗತಿರ್ನಾಸ್ತಿ) ಎಂಬ ಸಾಂಪ್ರದಾಯಕ ನಂಬಿಕೆಯನ್ನು ಮೊದಲ ಬಾರಿಗೆ ಪ್ರಶ್ನಿಸಿ ಅದರಲ್ಲಿ ಹುರುಳಿಲ್ಲವೆಂಬುದನ್ನು ಕನಕದಾಸರು ಈ ಕೀರ್ತನೆಯಲ್ಲಿ ಜಾಲಾಡಿದ್ದಾರೆ. ಬಹುಶಃ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಇಂಥ ನಂಬಿಕೆಯ ಬೇರನ್ನು ಜಗ್ಗಿಸಿ ಅಲುಗಾಡಿಸಿ ಅಲ್ಲಗಳೆದವರಲ್ಲಿ ಇವರೇ ಅಗ್ರಗಣ್ಯರು ಎನ್ನಬಹುದು. ಇಪ್ಪತ್ತನೆಯ ಶತಮಾನದಲ್ಲಿ ಮಹಾಕವಿ ಕುವೆಂಪು ಅಧ್ಯಾತ್ಮ ಹಾಗೂ ವೈಚಾರಿಕತೆಯನ್ನು ತನ್ನ ಉಸಿರಾಟ (ಉಚ್ಛ್ವಾಸ ನಿಶ್ವಾಸ) ಮಾಡಿಕೊಂಡಿದ್ದ ಹಾಗೆ ಹದಿನಾರನೆಯ ಶತಮಾನದಲ್ಲಿ ಕನಕದಾಸರು ಮಾಡಿಕೊಂಡಿದ್ದರು ಎಂಬುದು ಅವರ ಸಾಹಿತ್ಯಾಧ್ಯಯನದಿಂದ ಅರಿವಿಗೆ ಬರುತ್ತದೆ.

ಅರ್ಥ- ನಿಗಮ = ವೇದ
ತ್ರಿಗುಣ = ಸತ್ತ್ವಗುಣ, ರಜೋಗುಣ, ತಮೋಗುಣ
ಶೋಣಿತ = ರಕ್ತ, ಋತುಸ್ರಾವ
ಶುಕ್ಲ = ವೀರ್ಯ

* * * *



## ೨೦೧
## ಶಂಕರಾಭರಣ - ಆದಿತಾಳ

**ತೀರ್ಥ ಪೀಡಿದವರೆಲ್ಲ ತಿರುನಾಮಧಾರಿಗಳೆ- ಜನ್ಮ ॥ಪ॥**
**ಸಾರ್ಥಕವಿಲ್ಲದವರೆಲ್ಲ ಭಾಗವತರೆ ॥ಅ॥**

**ಮೂಗ್ಹಿಡಿದು ನೀರೊಳಗೆ ಮುಳುಗಿ ಜಪತಪ ಮಾಡಿ**
**ನಿಗಮಾಗಮ ಪುರಾಣಗಳನೋದಿ ತಿಳಿದು**
**ಬಾಗಿ ಪರಸ್ತ್ರೀಯರನು ಬಯಸಿ ಕಣ್ಣಿಡುವಂಥ**
**ಯೋಗ ಭ್ರಷ್ಟರೆಲ್ಲ ದೇವ ಬ್ರಾಹ್ಮಣರೆ? ॥೧॥**

**ಪಟ್ಟೆ ನಾಮವ ಬಳಿದು ಪಾತ್ರೆ ಕೈಯಲಿ ಹಿಡಿದು**
**ಗುಟ್ಟಿನಲಿ ಜಪಿಸುವ ಗುರುತರಿಯದೆ**
**ಕೆಟ್ಟ ಕೂಗನು ಕೂಗಿ ಹೊಟ್ಟೆಯನು ಹೊರೆವಂಥ**
**ಪೊಟ್ಟೆಗುಡುಮಗಳೆಲ್ಲ ಪರಮ ವೈಷ್ಣವರೆ? ॥೨॥**

**ಲಿಂಗಾಂಗದೊಳಗಿರುವ ಚಿನ್ಮಯವ ತಿಳಿಯದೆ**
**ಅಂಗಲಿಂಗದ ನೆಲೆಯ ಗುರುತರಿಯದೆ**
**ಜಂಗಮ ಸ್ಥಾವರದ ಹೊಲಬನರಿಯದ ಇಂಥ**
**ಭಂಗಿಮುಕ್ಕಗಳೆಲ್ಲ ನಿಜ ಲಿಂಗವಂತರೆ? ॥೩॥**

**ಅಲ್ಲಾ ಖುದಾ ಎಂಬ ಅರ್ಥವನು ತಿಳಿಯದೆ**
**ಮುಲ್ಲ ಶಾಸ್ತ್ರದ ನೆಲೆಯ ಮುನ್ನರಿಯದೆ**
**ಪೊಳ್ಳು ಕೂಗನು ಕೂಗಿ ಬಗುಳಿ ಬಾಯಾರುವಂಥ**
**ಕಳ್ಳ ಸುಳ್ಳರಿಗೆಲ್ಲ ವೀರ ಸ್ವರ್ಗವುಂಟೆ? ॥೪॥**

**ವೇಷ ಭಾಷೆಯ ಕಲಿತು ಗೋಸಾಯಿ ಉಡೆದೊಟ್ಟು**
**ಆಸೆಯನು ತೊರೆಯದೆಯೆ ತಪಕೆ ಕುಳಿತು**
**ವಾಸನೆಯ ಗುರುತಿನಾ ಹೊಲಬನರಿಯದ ಇಂಥ**
**ವೇಷಧಾರಿಗಳೆಲ್ಲ ಸಂನ್ಯಾಸಿಗಳೆ? ॥೫॥**

**ಆರು ಚಕ್ರದ ನೆಲೆಯ ಅಷ್ಟಾಂಗ ಯೋಗದಲಿ**
**ಮೂರು ಮೂರ್ತಿಯ ಮೂರು ಕಡೆಯೊಳಿರಿಸಿ**
**ಮಾರ ಪಿತನಹ ಕಾಗಿನೆಲೆಯಾದಿ ಕೇಶವನ**
**ಸಾರಿ ಭಜಿಸಿದವರಿಗೆ ಕೊರೆವ ಕೊರತೆಯುಂಟೆ? ॥೬॥**

ಭಾವ– ಯಾವುದೇ ಮತಧರ್ಮದ ಅಂತಃಸತ್ತ್ವವನ್ನು–ತತ್ತ್ವವನ್ನು ಆಮೂಲಗ್ರವಾಗಿ ಅರಿತುಕೊಳ್ಳದೆ, ಬರಿಯ ಸೋಗಲಾಡಿತನದ ಶುಷ್ಕ ವಿಚಾರಗಳಲ್ಲಿ ನಿರತರಾದ ಡಂಭಾಚಾರದ ಕಪಟಿಗಳನ್ನು ಮುಖಮೋರೆ ನೋಡದೆ ಈ ಕೀರ್ತನೆಯಲ್ಲಿ ಜಾಲಾಡಲಾಗಿದೆ. ಕನಕದಾಸರು ಹೇಗೆ ಕಾಪಟ್ಯದ, ಮೌಢ್ಯದ, ಕಂದಾಚಾರಗಳ ಕಡು ವಿರೋಧಿ ಎಂಬುದು ಇದರಿಂದ ತಿಳಿಯುತ್ತದೆ. ವೈಚಾರಿಕತೆಯ ಎದೆಗಾರಿಕೆಯುಳ್ಳ ಕನಕದಾಸರಂಥ ಮಾಸಾಳಿಗೆ ಮತಧರ್ಮಗಳ 'ತೊಳ್ಳೆನಡುಕ'ದ ಏಸಾಳು ಯಾವ ಲೆಕ್ಕ?

ಅರ್ಥ– ತಿರುನಾಮಧಾರಿ = ವೈಷ್ಣವರು
ಭಾಗವತ =ಭಕ್ತ
ನಿಗಮ = ವೇದ
ಆಗಮ = ಶಾಸ್ತ್ರ
ಪೊಟ್ಟೆ = ಹೊಟ್ಟೆ
ಗುಡುಮ = ಗುಡಾಣ (ಮಣ್ಣಿನ ದೊಡ್ಡ ಬಾನಿ)
ಜಂಗಮ = ಚಲಿಸುವ (ಚರ)
ಸ್ಥಾವರ = ಚಲಿಸದ (ಅಚರ)
ಭಂಗಿ = ಗಾಂಜ
ಮುಕ್ಕು = ತಿನ್ನು, ಸೇವಿಸು



ಗೋಸಾಯಿ = ಬೈರಾಗಿ
ಉಡೆ + ತೊಟ್ಟು = ಬಟ್ಟೆಯುಟ್ಟು
ವಾಸನೆ = ಹಿಂದಿನ ಜನ್ಮದ ಕರ್ಮ ಅಥವಾ ಆಶೆಯ ಮೂಲ
ಆರುಚಕ್ರ = ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧ, ಆಜ್ಞಾ
ಅಷ್ಟಾಂಗಯೋಗ = ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ
ಮೂರು ಮೂರ್ತಿ = ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣರಾದ ಬ್ರಹ್ಮ ವಿಷ್ಣು ಮಹೇಶ್ವರ

* * * *

## ೨೦೨
## ಮಧ್ಯಮಾವತಿ – ಝಂಪೆ ತಾಳ

**ಕುಲ ಕುಲ ಕುಲವೆನ್ನುತಿಹರು ॥ಪ॥**
**ಕುಲವ್ಯಾವುದು ಸತ್ಯ ಸುಖವುಳ್ಳ ಜನರಿಗೆ ॥ಅ॥**

**ಕೆಸರೊಳು ತಾವರೆ ಪುಟ್ಟಲು ಅದ ತಂದು**
**ಬಿಸಜನಾಭನಿಗರ್ಪಿಸಲಿಲ್ಲವೆ**
**ಹಸುವಿನ ಮಾಂಸದೊಳುತ್ಪತ್ತಿ ಕ್ಷೀರವ**
**ವಸುಧೆಯೊಳಗೆ ಭೂಸುರರುಣಲಿಲ್ಲವೆ ॥೧॥**

**ಮೃಗಗಳ ಮೈಯಲಿ ಪುಟ್ಟಿದ ಕತ್ತುರಿಯ**
**ತೆಗೆದು ಪೂಸುವರು ದ್ವಿಜರೆಲ್ಲರು**
**ಒಗೆಯಿಂದ ನಾರಾಯಣನ್ಯಾವ ಕುಲ**
**ಅಗಜವಲ್ಲಭನ್ಯಾತರ ಕುಲದವನು ॥೨॥**

**ಆತ್ಮ ಯಾವ ಕುಲ ಜೀವ ಯಾವ ಕುಲ**
**ತತ್ತ್ವೇಂದ್ರಿಯಗಳ ಕುಲ ಪೇಳಿರಯ್ಯ**
**ಆತ್ಮಾಂತರಾತ್ಮ ನೆಲೆಯಾದಿಕೇಶವನು**
**ಆತನೊಲಿದ ಮೇಲೆ ಯಾತರ ಕುಲವಯ್ಯ ॥೩॥**

ಭಾವ– ವ್ಯಾಸರಾಯರ ಶಿಷ್ಯನಾದ ಮೇಲೆ ಶ್ರೇಷ್ಠಕುಲ ಸಂಜಾತರು ಎಂದು ತಾವೇ ನಂಬಿಕೊಂಡಿದ್ದ ಕೆಲ ಮಡಿವಂತರು ಕನಕದಾಸರನ್ನು ನೀನು ಯಾವ ಕುಲ ಎಂದು ಕೇಳಿ ಕೇಳಿ ಮನನೋಯಿಸುತ್ತಿದ್ದಾಗ, ಕುಲದಲ್ಲಿ ಮೇಲು ಕೀಳು ಎಂದು ನಂಬಿದ್ದ ಕರ್ಮಠ ಕಮಠಾವತಾರಿಗಳಿಗೆ ಕನಕದಾಸರು ಕೊಟ್ಟ ಉತ್ತರವೇ ಕೀರ್ತನೆಯ ರೂಪ ತಾಳಿದೆ.



ಅರ್ಥ– ಬಿಸಜನಾಭ = ವಿಷ್ಣು
ವಸುಧೆ = ಭೂಮಿ
ಭೂಸುರರು = ಬ್ರಹ್ಮಜ್ಞಾನಿಗಳು
ದ್ವಿಜರು = ಬ್ರಾಹ್ಮಣರು
ಒಗೆಯಿಂದ = ಹುಟ್ಟಿನಿಂದ
ಅಗಜವಲ್ಲಭ = ಪಾರ್ವತಿಯ ಗಂಡ (ಶಿವ)

* * * *

## ೨೦೩
## ಪಂತುವರಾಳಿ – ಅಟತಾಳ

**ಕುಲಕುಲವೆಂದು ಹೊಡೆದಾಡದಿರಿ ನಿಮ್ಮ**
**ಕುಲದ ನೆಲೆಯನೇನಾದರು ಬಲ್ಲಿರ ॥ಪ॥**

**ಹುಟ್ಟದ ಯೋನಿಗಳಿಲ್ಲ ಮೆಟ್ಟದ ಭೂಮಿಗಳಿಲ್ಲ**
**ಅಟ್ಟು ಉಣ್ಣದ ವಸ್ತುಗಳಿಲ್ಲ**
**ಗುಟ್ಟು ಕಾಣಿಸ ಬಂತು ಹಿರಿದೇನು ಕಿರಿದೇನು**
**ನೆಟ್ಟನೆ ಸರ್ವಜ್ಞನ ನೆನೆ ಕಂಡ್ಯ ಮನುಜ**

**ಜಲವೆ ಸಕಲ ಕುಲಕ್ಕೆ ತಾಯಲ್ಲದೆ**
**ಜಲದ ಕುಲವನೇನಾದರು ಬಲ್ಲಿರ**
**ಜಲದ ಬೊಬ್ಬುಳಿಯಂತೆ ಸ್ಥಿರವಲ್ಲವೀ ದೇಹ**
**ನೆಲೆಯನರಿತು ನೀ ನೆನೆ ಕಂಡ್ಯ ಮನುಜ ॥೨॥**

**ಹರಿಯೆ ಸರ್ವೋತ್ತಮ ಹರಿಯೆ ಸರ್ವೇಶ್ವರ**
**ಹರಿಮಯವೆಲ್ಲವೆನುತ ತಿಳಿದು**
**ಸಿರಿ ಕಾಗಿನೆಲೆಯಾದಿಕೇಶವರಾಯನ**
**ಚರಣ ಕಮಲವ ಕೀರ್ತಿಸುವನೆ ಕುಲಜ ॥೩॥**

ಭಾವ– ಮೇಲು ಕುಲ ಮತ್ತು ಕೀಳು ಕುಲ ಎಂದು ಭೇದ ಕಲ್ಪಿಸುತ್ತಾ ಹಾರಾಡುತ್ತಿದ್ದ ಮೌಢ್ಯಾಂಧರ ಕಿರುಕುಳವನ್ನು ವೈಯಕ್ತಿಕವಾಗಿ ಸಹಿಸಿ ಸಹಿಸಿ ಸತ್ತು ಸುಣ್ಣವಾದ ಕನಕದಾಸರು ಅಂಥವರ ಕಣ್ಣು ತೆರೆಸಲು ಈ ಕೀರ್ತನೆ ಕಟ್ಟಿದ್ದಾರೆ; ಕುಲಾಂಧ ಬಲಿಗಳನ್ನು



ಮೆಟ್ಟಿದ್ದಾರೆ. ಕುಲಜ (ಶ್ರೇಷ್ಠ) ಯಾರು ಎಂಬುದನ್ನು ಅಂತ್ಯದ ಸಾಲಿನಲ್ಲಿ ಸಾರಿದ್ದಾರೆ.

ಅರ್ಥ– ಸಕಲ ಕುಲ = ಎಲ್ಲ ಜೀವರಾಶಿ
ಕುಲಜ = ಶ್ರೇಷ್ಠ

* * * *

## ೨೦೪
## ಕಲ್ಯಾಣಿ – ಅಟತಾಳ

ದಾಸ ಪಟ್ಟವೋ ಸನ್ಯಾಸ ಪಟ್ಟವೋ ॥ಪ॥
ಆಸೆಯಿಂದ ನೆಲೆಯಾದಿಕೇಶವನ್ನ ನೆನೆಯದವಗೆ ॥ಅ॥

ಮಂಡೆ ಬೋಳು ಮಾಡಿ ನಾಮ
ದುಂಡೆಯನ್ನು ಬರೆದು ಕೆಡಿಸಿ
ಕಂಡ ಕಂಡವರನು ಕೂಡಿ
ಭಂಡಜನ್ಮ ಹೊರೆಯುವವಗೆ ॥೧॥

ಅವರವರ ಕೈಯ ನೋಡಿ ಹ
ಲವು ಕೆಲವು ಮಾತನಾಡಿ
ಹಲವು ಹಂಬಲಿಸಿ ದಿನವ
ಕಳೆದು ಉಳಿದು ಬಾಳುವಗೆ ॥೨॥

ಬೆಂದ ಸಂಸಾರವೆಂಬ
ಬಂಧನದೊಳಗೆ ಸಿಲುಕಿಕೊಂಡು
ಚೆಂದಾದಿಕೇಶವನ್ನ
ಒಂದು ಬಾರಿ ನೆನೆಯದವಗೆ ॥೩॥

ಭಾವ– ಬೂಟಾಟಿಕೆಯ ದಾಸರನ್ನು ತರಾಟೆಗೆ ತೆಗೆದುಕೊಂಡಿರುವ ಕೀರ್ತನೆ ಇದು. ದಾಸಕೂಟದಲ್ಲಿದ್ದ ಮೂವರಲ್ಲಿ ಸಂಸಾರವಂದಿಗ ದಾಸರೆಂದರೆ ಪುರಂದರರೊಬ್ಬರೇ.

ಅರ್ಥ– ಮಂಡೆ = ತಲೆ

* * * *



## ೨೦೫
## ಕೇದಾರಗೌಳ – ಅಟತಾಳ

ಬಂದಿದೆ ದೂರು ಬರಿದೆ ಪಾಂಡವರಿಗೆ ॥ಪ॥
ಕೊಂದವರಿವರು ಕೌರವರನೆಂಬಪಕೀರ್ತಿ ॥ಅ॥

ಮುನ್ನಿನ ವೈರದಿ ಕಡು ಸ್ನೇಹವ ಮಾಡಿ
ಉನ್ನತ ಲೆತ್ತ ಪಗಡೆಯಾಡಿಸಿ
ತನ್ನ ಕುಹಕದಿಂದ ಕುರುಬಲವ ಕೊಂದವನು
ಘನ್ನಘಾತಕ ಶಕುನಿಯೊ ಪಾಂಡವರೊ ॥೧॥

ಮರಣ ತನ್ನಿಚ್ಛೆಯೊಳುಳ್ಳ ಗಾಂಗೇಯನು
ಧುರದೊಳು ಷಂಡನ ನೆಪದಿಂದಲಿ
ಸರಳ ಮಂಚದ ಮೇಲೆ ಮಲಗಿ ಮೊಮ್ಮಗನ
ಕೊರಳ ಕೊಯ್ದವನು ಭೀಷ್ಮನೊ ಪಾಂಡವರೊ ॥೨॥

ಮಗನ ನೆಪದಿ ಕಾಳಗವ ಬಿಸುಟು ಸುರ
ನಗರಿಗೈದಲು ವೈರಾಗ್ಯದಲಿ
ಜಗವರಿಯಲು ಕುರುವಂಶಕ್ಕೆ ಕೇಡನು
ಬಗೆದು ಕೊಂದವನು ದ್ರೋಣನೊ ಪಾಂಡವರೊ ॥೩॥

ತೊಟ್ಟ ಬಾಣವ ತೊಡಲೊಲ್ಲದೆ ಮಾತೆಗೆ
ಕೊಟ್ಟ ಭಾಷೆಗೆ ಐವರ ಕೊಲ್ಲದೆ
ನೆಟ್ಟನೆ ರಣಮುಖದಲಿ ತನ್ನ ಪ್ರಾಣವ
ಬಿಟ್ಟು ಕೊಂದವನು ಕರ್ಣನೊ ಪಾಂಡವರೊ ॥೪॥

**ಮಥನಿಸಿ ಸೂತತನವ ಮಾಡಿ ರಣದೊಳು**
**ಅತಿಹೀನಗಳೆಯುತ ರವಿಸುತನ**
**ರಥದಿಂದಿಳಿದು ಪೋಗಿ ಕೌರವಬಲವನು**
**ಹತ ಮಾಡಿದವನು ಶಲ್ಯನೊ ಪಾಂಡವರೊ** ॥೫॥

**ಜಲದೊಳು ಮುಳುಗಿ ತಪವ ಮಾಡಿ ಬಲವನು**
**ಛಲದಿಂದೆಬ್ಬಿಸಿ ಕಾದುವೆನೆನುತ**
**ಕಲಿ ಭೀಮಸೇನನ ನುಡಿಗೇಳಿ ಹೊರವಂಟು**
**ಕುಲವ ಕೊಂದವನು ಕೌರವನೊ ಪಾಂಡವರೊ** ॥೬॥

**ಕವುರವ ಪಾಂಡವರಿಗೆ ಭೇದ ಪುಟ್ಟಿಸಿ**
**ಪವುಜೊಡ್ಡಿ ಕುರುಕ್ಷೇತ್ರದಿ ಕಾದಿಸಿ**
**ಸವುಶಯವಿಲ್ಲದೆ ಕುರುಬಲವ ಕೊಂದವನು**
**ಹಿವುಸಕನಾದಿಕೇಶವನೊ ಪಾಂಡವರೊ** ॥೭॥

ಭಾವ– ಕೌರವರ ನಾಶಕ್ಕೆ ಆ ಪಕ್ಷದವರು ಕಾರಣರೇ ವಿನಾ ಪಾಂಡವರಲ್ಲ ಎಂಬ ಹೊಸ ನೋಟವನ್ನು ಈ ಕೀರ್ತನೆಯಲ್ಲಿ ನೀಡಿದ್ದಾರೆ ಕನಕದಾಸರು; ಅವರ ತಲಸ್ಪರ್ಶಿಯಾದ ವಿಚಾರದ ಆಲೋಢನೆಗೆ ಹೆಗ್ಗುರುತು ಇದು ಎನ್ನಬಹುದು.

ಅರ್ಥ– ದೂರು = ಅಪವಾದ
ಘನ್ನಘಾತಕ = ಮಹಾದುಷ್ಟ
ಗಾಂಗೇಯ = ಗಂಗೆಯ ಮಗ (ಭೀಷ್ಮ)
ಧುರದೊಳು = ಯುದ್ಧದಲ್ಲಿ
ಷಂಡ = ಶಿಖಂಡಿ
ಸರಳ = ಬಾಣ
ಕಾಳಗವ ಬಿಸುಟು = ಯುದ್ಧ ಮಾಡುವುದನ್ನು ಬಿಟ್ಟು
ರಣಮುಖ = ಯುದ್ಧಭೂಮಿ, ರಣಾಂಗಣ
ಮಥನಿಸಿ = ಸಂಘರ್ಷಕ್ಕಿಳಿದು



ಸೂತ = ಸಾರಥಿ
ರವಿಸುತ = ಕರ್ಣ
ಕವುರವ = (<ಕೌರವ) = ದುರ್ಯೋಧನ
ಪವುಜು (ಪೌಜು) = ಸೈನ್ಯ
ಸವುಶಯ (<ಸಂಶಯ) = ಅನುಮಾನ
ಹಿವುಸಕ (<ಹಿಂಸಕ) = ಪೀಡಕ, ಹಿಂಸಿಸುವವನು

* * * *

## ೨೦೬
## ಸಾವೇರಿ – ಏಕತಾಳ

ಗೋವಿಂದ ಗೋವಿಂದ ಎನ್ನಲರಿಯದೆ– ವೃಥಾ
ನೋವಿಂದ ಭಂಗವ ಪಡುವುದುಚಿತವೆ? ||ಪ||

ಕ್ಷೀಣ ಶಾಸ್ತ್ರಾರ್ಥವನು ಪರಿಗ್ರಹಿಸಿ ನಿಖಿಲ ಕುರಿ
ಕೋಣಗಳ ತಲೆಚೆಂಡ ಕುಟ್ಟಿಸುತ
ಪ್ರಾಣ ಹತ್ಯವ ಮಾಳ್ಪುದಾವ ಸತ್ಕರ್ಮ– ನಾರಾ
ಯಣನ ನಾಮಸ್ಮರಣೆ ಮಾಡು ಮನವೆ ||೧||

ಖಂಡವನು ಕೊಯ್ದು ಕೊಡಬೇಡ ದಳ್ಳುರಿಯಗ್ನಿ
ಕುಂಡವನು ಹೊಕ್ಕು ಹೊರಡುವುದುಚಿತವೆ
ಭಂಡರಂದದಿ ಬತ್ತಲೆಯೆ ಬರುವುದಾವಾಟ
ಪುಂಡರೀಕಾಕ್ಷನ ನೆನೆ ಕಂಡ್ಯ ಮನವೆ ||೨||

ಕುಟ್ಟಿಕೊಳ್ಳದಿರಿ ಜಟ್ಟಿ ಗುಂಡಿನಲಿ, ಶಸ್ತ್ರವನು
ಚಿಟ್ಟಿ ಕೊಳ್ಳದಿರಿ, ಬೆನ್ನಲಿ ಸಿಡಿಯನು
ಕಟ್ಟಿ ತೂಗಿಸಿಕೊಳ್ಳದಿರಿ ಕರಟಕದಂತೆ
ಗುಟ್ಟಿನಲಿ ಗೋಪಾಲಕನ ಸ್ಮರಿಸು ಮರುಳೆ ||೩||

ತೊಗಲ ಬಿಲ್ಲೆಗಳ ಕೊರಳಲ್ಲಿ ಕಟ್ಟಿಕೊಂಡು
ಹಗಲಿರುಳು ಅನ್ನಪಾನಕೆ ಹೋಗದೆ
ಮೃಗವೈರಿಯಂತೇಕೆ ಕಿಸುಕೆಲೆವ ರಂಪಾಟ
ಜಗದಾಧಿಪತಿಯ ನಾಮ ಸ್ಮರಿಸು ಮರುಳೆ ||೪||



ಉತ್ತಮರು ಸುರೆಯನೀಂಟುವರೆ ತರಹರಿಸಿ ಮದೋ
ನ್ಮತ್ತರಾಗಿ ಅಸಭ್ಯ ಶಬ್ದವ ನುಡಿವರೆ
ಸತ್ತ ಹೆಣದಂತೆ ಬಿದ್ದಿಹುದಾವ ನೀತಿ ಪುರು
ಷೋತ್ತಮನ ನಾಮ ಸ್ಮರಣೆಯ ಮಾಡು ಮನವೆ ||೫||

ವೇದೋಕ್ತ ಪೂಜೆಯಲಿ ತೃಪ್ತಿಪಟ್ಟರೆ ನೀವು
ಅದರಿಂದ ಫಲವೇನು ಪೇಳಿರಯ್ಯ
ನಾದವನು ಕೇಳ್ದ ಹರಿಣದಂದದಿ ಕೆಡದೆ ಮಧು
ಸೂದನನ ನಾಮ ಸ್ಮರಣೆಯ ಮಾಡು ಮರುಳೆ ||೬||

ನಿಂದಾಪವಾದ ಘಟಿಸುವುದ್ಯೆಸೆ ಇದರಿಂದ
ಮುಂದೆ ಮುಕ್ತಿಯು ನಿಮಗೆ ಸಾಧ್ಯವಹುದೆ
ತಂದೆ ಶ್ರೀ ಕಾಗಿನೆಲೆಯಾದಿಕೇಶವ ನಾಮ
ಒಂದೇ ವೈಕುಂಠಪದವನ್ಯೆದಿಪುದಯ್ಯ ||೭||

ಭಾವ– ಎಲ್ಲ ರಾಜಸ–ತಾಮಸ ಮಾರ್ಗದ ಅಥವಾ ವಾಮಾಚಾರ ಮಾರ್ಗದ ಸಾಧನೆಗಿಂತಲೂ ಸಾತ್ತ್ವಿಕ ಮಾರ್ಗದ ಹರಿನಾಮ ಸ್ಮರಣೆಯ ಸಾಧನೆಯೇ ಶ್ರೇಷ್ಠವೆಂಬುದು ಈ ಕೀರ್ತನೆಯ ಆಶಯ. ಆಗಿನ ಸಮಾಜದಲ್ಲಿ ವಿವಿಧ ಗ್ರಾಮದೇವತೆಗಳಿಗೆ ಪ್ರಾಣಿಗಳ ಬಲಿ ಕೊಡುತ್ತಿದ್ದುದನ್ನೂ, ವಾಮಾಚಾರದ ಘೋರ ಆಚರಣೆಗಳನ್ನೂ ಹೆಸರಿಸಿ ಅಲ್ಲಗಳೆಯುತ್ತಾ ಹೋಗುವ ರೀತಿ ಕನಕದಾಸರ ಮೌಢ್ಯ ವಿರೋಧಿ ನಿಲುವನ್ನು, ಸಮಾಜಸುಧಾರಣೆಯ ಕಾಳಜಿಯನ್ನು ಸೂಚಿಸುತ್ತದೆ. ಅಧ್ಯಾತ್ಮ ಪ್ರಜ್ಞೆಯಷ್ಟೇ ಅವರ ಸಾಮಾಜಿಕ ಪ್ರಜ್ಞೆ ಪ್ರಖರವಾಗಿರುವುದನ್ನು ಗಮನಿಸಬಹುದು.

ಅರ್ಥ– ಕ್ಷೀಣ ಶಾಸ್ತ್ರ = ಕ್ಷುದ್ರಶಾಸ್ತ್ರ
ಪುಂಡರೀಕಾಕ್ಷ = ಕಮಲದಂತೆ ಕಣ್ಣುಳ್ಳವನು (ಶ್ರೀಹರಿ)
ಚಿಟ್ಟಿಕೊಳ್ಳು = ಚುಚ್ಚಿಕೊಳ್ಳು

ಸಿಡಿ = ಕಬ್ಬಿಣದ ಕೊಕ್ಕೆಯನ್ನು ಬೆನ್ನು ಹುರಿಗೆ ಚುಚ್ಚಿಕೊಂಡು ಬೊಂಬಿನ ಮೇಲೆ ತೂಗಾಡುವುದು (ಸಿಡಿಯೆತ್ತು ಎಂಬ ಕನ್ನಡದ ನುಡಿಗಟ್ಟು ಇಂಥ ಆಚರಣೆಯಿಂದಲೇ ಮೂಡಿದ್ದು)
ಕರಟಕ = ನಳ್ಳಿ, ಏಡಿ
ಗೋಪಾಲಕ = ಕೃಷ್ಣ
ಮೃಗವೈರಿ = ಸಿಂಹ
ಕಿಸುಕೆಲೆವ = ಅಬ್ಬರಿಸಿ ಅರಚುವ
ಸುರೆ = ಹೆಂಡ
ವೇದೋಕ್ತ ಪೂಜೆ = ಅಥರ್ವಣ ವೇದೋಕ್ತವಾದ ಮಾಯಾಮಾಟ ಮುಂತಾದ ವಾಮಾಚಾರದ ವಿಧಿ ವಿಧಾನಗಳು
ಹರಿಣ = ಜಿಂಕೆ
ಮಧುಸೂದನ = ವಿಷ್ಣು
ಐದಿಪುದು = ತಲುಪಿಸುವುದು

೧. ಕುರಿಕೋಣ... ಕುಟ್ಟಿಸುತ = ಪ್ರಾಣಿ ಬಲಿ ಕೊಡುವಾಗ ಬಂಡುಗುಡಲಿನಿಂದ ಕೊರಳನ್ನು ಕತ್ತರಿಸುವುದು ಒಂದು ವಿಧವಾದರೆ, ಒನಕೆಯಿಂದ ತಲೆ ಚಚ್ಚಿ ಸಾಯಿಸುವುದು ಇನ್ನೊಂದು ವಿಧ. ಕನಕದಾಸರು ಆಗ ಚಾಲ್ತಿಯಲ್ಲಿದ್ದ ಒನಕೆಯಿಂದ ಕುಟ್ಟಿ ಸಾಯಿಸುವ ಆಚರಣೆಯೊಂದನ್ನಿಲ್ಲಿ ದಾಖಲಿಸಿದ್ದಾರೆ.
೨. ಖಂಡವನು... ಬೇಡ = ಕತ್ತಿಯಿಂದ ಮೈಗೆ ಕೈಗೆ ಹೊಡೆದುಕೊಂಡು ರಕ್ತ ಸುರಿಯುವಂತೆ ಮಾಡುವ, ಮಾಂಸದ ತುಂಡು ಕೆಳಗೆ ಬೀಳುವಂತೆ ಮಾಡುವ ಘೋರ ಕೃತ್ಯ.
ಅಗ್ನಿಕುಂಡ..... ಉಚಿತವೆ = ಗ್ರಾಮದೇವತೆ ಜಾತ್ರೆಗಳಲ್ಲಿ ಬಾಯಿಬೀಗ ಚುಚ್ಚಿಸಿಕೊಂಡು ಕೊಂಡ (<ಕುಂಡ) ಹಾಯುವ ಪದ್ಧತಿ ಈಗಲೂ ಅಲ್ಲಲ್ಲಿ ಇದೆ.
ಭಂಡ... ಆವಾಟ = ಬೆತ್ತಲೆ ಸೇವೆಯ ಆಚರಣೆ
೩. ಕುಟ್ಟಿ... ಶಸ್ತ್ರವನು = ಹಿರೇ ಮೈಲಾರದಲ್ಲಿ ಇಂದಿಗೂ ಕಣಕಾಲ ಮೀನ ಖಂಡಕ್ಕೆ ಗೂಟವನ್ನು ಹೊಡೆಸಿಕೊಳ್ಳುವ ಆಚರಣೆ



ಇದೆ. ಅಂಥ ಆಚರಣೆಯೊಂದನ್ನು ದಾಸರು ಇಲ್ಲಿ ದಾಖಲಿಸಿದ್ದಾರೆ.
ಚಿಟ್ಟಿ..... ಸಿಡಿಯನು = ಬೆನ್ನು ಹುರಿಗೆ ಕಬ್ಬಿಣದ ಕೊಂಡಿ ಸಿಕ್ಕಿಸಿ ಅಂತರಿಕ್ಷದಲ್ಲಿ ತೂಗಾಡುವಂಥ ಭಯಾನಕ ಆಚರಣೆ.
೪. ತೊಗಲ... ಕಟ್ಟಿಕೊಂಡು = ಬಹುಶಃ ಗೊರವಯ್ಯಗಳ ಆಚರಣೆಯನ್ನು ಕುರಿತದ್ದು; ಅವರು ಶಿವನ ನಾಯಿಗಳೆಂದು ಭಾವಿಸಿ ಮರದ ದೋಣಿಯಲ್ಲಿ ನಾಯಿಯಂತೆ ಬಾಯಿ ಹಾಕಿ ಅನ್ನ ತಿನ್ನುವ ಪದ್ಧತಿ ಇದೆ.
೬. ನಾದವನು..... ಹರಿಣದಂದದಿ = ಬೇಟೆಗಾರರು ಜಿಂಕೆಯನ್ನು ಮರುಳು ಮಾಡಲು ಬಳಸುವ ನಾದವೈಖರಿಯಿಂದ, ಅದು ಬಲೆಗೆ ಬೀಳುತ್ತದೆ ಎಂಬ ನಂಬಿಕೆ.

* * * *

## ೨೦೭
## ಆರಭಿ – ಆದಿತಾಳ

**ಕಣಿಯ ಹೇಳಲು ಬಂದೆ ನಾರಾಯಣನಲ್ಲದೆ ಇಲ್ಲವೆಂದು– ಮಿಕ್ಕ**
**ಬಣಗು ದೈವದ ಗೊಡವೆ ಬೇಡ ನರಕ ತಪ್ಪದು ॥ಪ॥**

**ಎಕ್ಕನಾತಿಯರು ಕಾಟಿ ಜಕ್ಕಿ ಜಲಕನ್ಯೆಯರು**
**ಸೊಕ್ಕಿನಿಂದ ಸೊಂಟ ಮುರುಕ ಬೈರೇದೇವರು**
**ಮಿಕ್ಕ ಮಾರಿ ಮಸಣಿ ಚೌಡಿ ಮೈಲಾರಿ ಮೊದಲಾದ**
**ಠಕ್ಕು ದೈವದ ಗೊಡವೆ ಬೇಡ ನರಕ ತಪ್ಪದು ॥೧॥**

**ಸುತ್ತಣವರ ಮಾತ ಕೇಳಿ ಗುತ್ತಿಯ ಎಲ್ಲಮ್ಮಗೊಲಿದು**
**ಬತ್ತಲೆಯೆ ದೇವರೆದುರು ಬರುವುದು ನೋಡಿರೊ**
**ಮತ್ತೆ ಬೇವಿನುಡಿಗೆಯ ಅರ್ತಿಯಿಂದುಟುಗೊಂಡು**
**ಮುಕ್ತಿ ಕಾಂಬೆವೆಂಬ ಮೌಢ್ಯ ಬೇಡಿರೊ ॥೨॥**

**ತೂಳದವರ ಮಾತ ಕೇಳಿ ಖೂಳರೆಲ್ಲ ಕೂಡಿಕೊಂಡು**
**ಹಾಳು ಮಾಡಿ ಕೈಯಲ್ಲಿದ್ದ ಹೊನ್ನು ಹಣಗಳ**
**ಬಾಳುತಿಪ್ಪ ಕೋಣ ಕುರಿಯ ಏಳ ಬೀಳ ಕೊರಳ ಕೊಯ್ದು**
**ಬೀಳ ಬೇಡಿ ನರಕಕೆಂದು ಹೇಳ ಬಂದೆನೊ ॥೩॥**

**ಹೊಳ್ಳದ ಬಿಚ್ಚೇರು ಸಹಿತ ಸುಳ್ಳರೆಲ್ಲ ಕೂಡಿಕೊಂಡು**
**ಬೆಳ್ಳನ ಬೆಳತನಕ ನೀರ ತಡಿಯಲಿ ಕುಳಿತು**
**ಗುಳ್ಳೆ ಗೊರಜೆ ಕೂಡಿ ತಿಂದು ಕಳ್ಳುಕೊಡನ ಬರಿದು ಮಾಡುವಂಥ**
**ಪೊಳ್ಳುದೈವದ ಗೊಡವೆ ಬೇಡ ನರಕ ತಪ್ಪದು ॥೪॥**



**ಪೊಡವಿಗಧಿಕ ವಿಜಯನಗರದೊಡೆಯ ಕಟ್ಟೆ ವೆಂಕಟೇಶ**
**ಕಡು ಚೆಲ್ವ ಕಟ್ಟಾಣಿ ಕನಕನೊಡೆಯ**
**ಬಡದಾದಿ ಕೇಶವನ ಪಾದ ಬಿಡದೆ ಭಜಿಸಿರೊ**
**ಜಡದೈವಗಳ ಇಂಥ ಪೂಜೆ ಬೇಡ ಕಾಣಿರೋ ॥೫॥**

ಭಾವ– ಕಣಿ ಹೇಳುವ ಕೊರವಂಜಿಯ ಮುಖೇನ ಕನಕದಾಸರು ಹರಿ ಸರ್ವೋತ್ತಮತ್ವವನ್ನು ಎತ್ತಿ ಹಿಡಿದಿರುವುದು ಇಲ್ಲಿ ಕಂಡುಬರುತ್ತದೆ. ಜೊತೆಗೆ ಆ ಕಾಲದಲ್ಲಿ ರೂಢಿಯಲ್ಲಿದ್ದ ತಾಮಸ ಆಚರಣೆಗಳನ್ನು ದಾಖಲು ಮಾಡಿ, ಅವುಗಳಿಂದ ಮುಕ್ತರಾಗಿ ಹೊರ ಬನ್ನಿ ಎಂದು ಜನಸಾಮಾನ್ಯರಿಗೆ ಕರೆ ನೀಡಿರುವುದು ಹೆಚ್ಚು ಗಮನಾರ್ಹ.

ಅರ್ಥ– ಬಣಗು = ಕ್ಷುದ್ರ
ಎಕ್ಕನಾತಿ = ನಾಥಪಂಥೀಯರು, ಎಲ್ಲಮ್ಮನ ಭಕ್ತರು
ಜಕ್ಕಿ = ಯಕ್ಷಿ
ಕಾಟಿ = ಕಾಡುದೇವತೆ (ಊರುಗೊಲ್ಲರು ಕಾಡುಗೊಲ್ಲರು ಕಾಟಪ್ಪ ಎಂಬ ದೇವರನ್ನು ಪೂಜಿಸುವುದನ್ನು ಗಮನಿಸಬಹುದು)
ಮಾರಿ = ಗ್ರಾಮದೇವತೆ
ಮಸಣಿ = ಚಾಮುಂಡಿ
ಅರ್ತಿ = ಪ್ರೀತಿ
ತೂಳದವರು = ದೇವರು ಮೈದುಂಬಿದವರು
ಹೊಳ್ಳದ = ಪೊಳ್ಳುತನದ
ಬಿಚ್ಚೇರು = ಭಿಕ್ಷೆಯವರು
ಬೆಳ್ಳನ ಬೆಳತನಕ = ಬೆಳ್ಳಗೆ ಬೆಳಗಾಗುವ ತನಕ
ಗುಳ್ಳೆ ಗೊರಜೆ = ಕಡಲೆಕಾಯಿ ಬೀಜ ಮೊದಲಾದ ಕುರುಕುತಿನಿ
ಪೊಡವಿ = ಭೂಮಿ
ಕಟ್ಟಾಣಿ = ಶ್ರೇಷ್ಠ ಮುತ್ತು
ವಿಜಯನಗರದೊಡೆಯ ಕಟ್ಟೆ ವೆಂಕಟೇಶ = ಕನಕದಾಸರು ಹೆಸರಿಸಿರುವ ಇದು ಹಂಪೆಯಲ್ಲಿ ಎಲ್ಲಿದೆ ಎಂಬುದು ಗೊತ್ತಿಲ್ಲ ಎಂದು

ಡಾ॥ ಎಂ.ಚಿದಾನಂದಮೂರ್ತಿಯವರು ತಮ್ಮ 'ಹೊಸತು ಹೊಸತು' ಗ್ರಂಥದಲ್ಲಿ ಹೇಳಿದ್ದಾರೆ. ಆದರೆ ಹಂಪೆಯಲ್ಲಿ 'ಗುಂಡ್ಲುಕೆರೆ' ಎಂಬಲ್ಲಿ ಒಂದು ಚಿಕ್ಕ ವೆಂಕಟೇಶನ ದೇವಸ್ಥಾನವಿದೆ. ಅದನ್ನೇ ಅವರು ಕಟ್ಟೆ ವೆಂಕಟೇಶ ಎಂದು ಕರೆದಿರುವುದು. ಏಕೆಂದರೆ 'ಕಟ್ಟೆ ಎಂಬುದಕ್ಕೆ ಕೆರೆ, ಜಲಾಶಯ ಎಂಬ ಅರ್ಥವಿದೆ.

* * * *



## ೨೦೮
## ಮುಖಾರಿ – ಅಟತಾಳ

ನೀನಾರ ಬಾಂಧವನೊ ನಿಖಿಳ ಯಾದವರೊಳಗೆ
ಮಾನಾಭಿಮಾನವೆಳ್ಳನಿತಿಲ್ಲ ಕೃಷ್ಣ ॥ಪ॥

ದೇವಕೀದೇವಿಯುದರದಿ ಜನಿಸಿ ಬಾಲ್ಯದಲಿ
ಓವಿ ಮೊಲೆ ಕುಡಿಸಿದಳ ಅಸುವ ಸೆಳೆದು
ಮಾವ ಕಂಸನ ಕೊಂದು ಮನುಜ ವೇಷದಲಿ ಗಾಂ–
ಡೀವಿಯ ಮನೆಯ ಬಂಡಿ ಬೋವನಾದೆ ॥೧॥

ಸುರನದಿಯ ಸುತನು ಪಾಂಡವರಿಗಾಪ್ತನು ನಿನಗೆ
ಪರಮಭಕ್ತನು ಸ್ವಯಿಚ್ಛಾ ಮರಣಿಯು
ಧುರದೊಳಗೆ ಪೂರ್ವ ವೈರದ ಶಿಖಂಡಿಯ ತೋರಿ
ಶರಮಂಚದೊಳುಪಾಯದಲಿ ಮಲಗಿಸಿದೆ ॥೨॥

ಸೋದರತ್ತೆಯ ಸೊಸೆಯ ಮಗ ನಿನಗೆ ಭಾವಿಸಲು
ಸೋದರಳಿಯನು ಮೂರು ಲೋಕವರಿಯೆ
ಸಾಧಿಸಿಯೆ ಅಸಮ ಚಕ್ರವ್ಯೂಹವನು ರಚಿಸಿ
ಸೋದರನ ಷಡುರಥರ ಕೈಲಿ ಕೊಲ್ಲಿಸಿದೆ ॥೩॥

ಕುರುಪತಿಯ ಮೈದುನನ ಕೊಲ್ಲ ಬಗೆದವನ ಸಂ
ಗರದೊಳೇರಿಸಿ ನುಡಿದ ನುಡಿಯ ಕೇಳಿ ಮೈ
ಗರೆಯೆ, ರವಿ ಮಂಡಲಕೆ ಚಕ್ರದಿ ಮರೆಯ ಮಾಡಿ
ನರನ ಕೈಯಿಂದ ಸೈಂಧವನ ಕೊಲ್ಲಿಸಿದೆ ॥೪॥

**ಶಪಥದಲಿ ರಣದೊಳರಸನ ಹಿಡಿವೆನೆಂಬವಗೆ**
**ತಪಸಿಗಳ ತಂದು ತತ್ತ್ವ ಬೋಧಿಸಿ**
**ಕಪಟವರಿಯದ ನೃಪನ ಕೈಯೊಳನೃತವ ನುಡಿಸಿ**
**ಉಪಮೆಯಲಿ ಶಸ್ತ್ರ ಪಂಡಿತನ ಕೊಲ್ಲಿಸಿದೆ ॥೫॥**

**ಯಮಳರನು ಪಡೆದ ತಾಯಿಗೆ ಸಹೋದರನ ಭೂ**
**ರಮಣರೊಳಗಗ್ಗಳೆಯನತಿ ಧೈರ್ಯನು**
**ಸಮರದಲಿ ರವಿಸುತನ ರಥಕೆ ಸುತನ ಮಾಡಿ**
**ಯಮಸುತನ ಕೈಲಿ ಮಾವನ ಕೊಲ್ಲಿಸಿದೆ ॥೬॥**

**ಜನವರಿಯದಂತೆ ಜೀವನದೊಳಡಗಿರ್ದವಗೆ**
**ಮನಕೆ ಖತಿಗೊಳಿಸಿ ಬರ ಸೆಳೆದು ನಗುತ**
**ಅನುವರದೊಳಾಯತದ ತೊಡೆಯ ಸನ್ನೆಯ ತೋರಿ**
**ಅನಿಲಜನ ಕೈಲಿ ಕೌರವನ ಕೊಲ್ಲಿಸಿದೆ ॥೭॥**

**ಉರಿಯೊಳಗೆ ಜನಿಸಿದಂಗನೆಯ ನಿಜಸುತರು ಮಂ**
**ದಿರದೊಳೈವರು ನಿದ್ರೆಗೈಯುತಿರಲು**
**ನರವೃಕೋದರ ಧರ್ಮನಂದರನಗಲಸಿಯೆ**
**ಗುರು ಸುತನ ಕೈಲಿ ಬಾಲಕರ ಕೊಲ್ಲಿಸಿದೆ ॥೮॥**

**ಈ ವಿಧದೊಳವರ ಸುರಲೋಕದಲಿ ನೆಲೆಗೊಳಿಸಿ**
**ಭಾವ ಮೈದುನರೈವರನು ರಕ್ಷಿಸಿ**
**ಭೂವಲಯದೊಳು ಕೀರ್ತಿಯನು ಪಡೆದೆಸೆವ ನಮ್ಮ**
**ದೇವ ನೆಲೆಯಾದಿಕೇಶವ ವೆಂಕಟೇಶ ॥೯॥**

ಭಾವ– ಕೃಷ್ಣನ ಕಾರುಬಾರನ್ನೆಲ್ಲ ಜಾಲಾಡಿರುವ ಈ ಕೀರ್ತನೆ ಒಂದು ರೀತಿಯಲ್ಲಿ ನಿಂದಾಸ್ತುತಿ ರೂಪದ್ದು ಎನ್ನಿಸಿದೆ.

ಅರ್ಥ– ನಿಖಿಲ = ಸಕಲ, ಎಳ್ಳನಿತಿಲ್ಲ = ಕೊಂಚವೂ ಇಲ್ಲ



೧. ಓವಿ... ಸೆಳೆದು = ಪ್ರೀತಿಯಿಂದ ಹಾಲು ಕುಡಿಸಿದ ಪೂತನಿಯನ್ನು ಕೊಂದು,
ಗಾಂಡೀವಿ = ಅರ್ಜುನ
ಬಂಡಿಬೋವ = ರಥದ ಸಾರಥಿ

೨. ಸುರನದಿಯ ಸುತನು = ಭೀಷ್ಮ
ಶಿಖಂಡಿ = ದ್ರುಪದನ ಹಿರಿಯ ಮಗ. ಇವನು ಮೊದಲು ಹೆಣ್ಣಾಗಿದ್ದು ಆಮೇಲೆ ಯಕ್ಷನ ಕೃಪೆಯಿಂದ ಗಂಡಸಾದನೆಂದು ಕಥೆ.

೩. ಸೋದರತ್ತೆಯ ಸೊಸೆಯ ಮಗ = ಕುಂತಿಯ ಸೊಸೆಯಾದ ಸುಭದ್ರೆಯ ಮಗ ಅಭಿಮನ್ಯು.
ಷಡುರಥರು = ದುರ್ಯೋದನ, ದುಶ್ಯಾಸನ, ಕರ್ಣ, ಜಯದ್ರಥ, ದ್ರೋಣ, ಅಶ್ವತ್ಥಾಮ–ಆರು ಮಂದಿ.

೪. ಕುರುಪತಿಯ ಮೈದುನನ = ದುರ್ಯೋಧನನ ತಂಗಿ ದುಶ್ಶಲೆಯ ಗಂಡನಾದ ಜಯದ್ರಥನನ್ನು
ಕೊಲ್ಲಬಗೆದವನ = ಅರ್ಜುನನ
ಸಂಗರದೊಳು = ಯುದ್ಧರಂಗದಲ್ಲಿ
ಮೈಗರೆಯೆ = ಅವಿತುಕೊಳ್ಳಲು
ಸೈಂಧವನ = ಜಯದ್ರಥನ

೫. ಶಪಥದಲಿ... ಎಂಬವಗೆ = ಧರ್ಮರಾಯನನ್ನು ಸೆರೆ ಹಿಡಿಯುವೆನೆಂದ ದ್ರೋಣನಿಗೆ
ಅನೃತ = ಸುಳ್ಳು
ಶಸ್ತ್ರ ಪಂಡಿತ = ದ್ರೋಣಾಚಾರ್ಯ

೬. ಯಮಳರನು ಪಡೆದ ತಾಯಿಗೆ = ನಕುಲ ಸಹದೇವರನ್ನು ಪಡೆದ ಮಾದ್ರೀದೇವಿಗೆ
ಸಹೋದರನ = ಸೋದರ ಶಲ್ಯನ
ಸೂತ = ಸಾರಥಿ
ಯಮಸುತ = ಧರ್ಮರಾಯ

೭. ಜೀವನ = ನೀರು, ಅನುವರ =ಯುದ್ಧ
ಅನಿಲಜ = ವಾಯುಪುತ್ರನಾದ ಭೀಮ

೮. ಉರಿಯೊಳಗೆ ಜನಿಸಿದಂಗನೆಯ = ಅಗ್ನಿಸಂಭೂತೆಯಾದ ದ್ರೌಪದಿಯ

ನಿಜಸುತರ = ಮಕ್ಕಳು (ಪ್ರತಿವಿಂದ್ಯ, ಸುತಸೋಮ, ಶ್ರುತಕೀರ್ತಿ, ಶತಾನೀಕ, ಶ್ರುತಸೇನ)

ನರ = ಅರ್ಜುನ

ವೃಕೋದರ = ಭೀಮ

ಗುರುಸುತ = ಅಶ್ವತ್ಥಾಮ

* * * *



# ಕೃಷ್ಣಲೀಲೆ

Blank



## ೨೦೯
## ಆನಂದಭೈರವಿ – ಅಟತಾಳ

ಮಗನೆಂದಾಡಿಸುವಳು ಮೊಗ ನೋಡಿ ನಗುವಳು ॥ಪ॥
ಜಗದುದ್ಧಾರನ ಮೊಗ ಮೊಗದೊಳಿರಿಸಿಕೊಂಡು ॥ಅ॥

ಕಾಲಲಂದುಗೆ ಗೆಜ್ಜೆ ತೋಳ ಮಣಿಯು ದಂಡೆ
ಫಾಲದ ಅರಳೆಲೆಯು ಕುಣಿಯೆ
ನೀಲದುಡುಗೆಯುಟ್ಟ ಬಾಲನೆ ಬಾರೆಂದು
ಪಾಲುಣಿಸುವ ಪುಣ್ಯವೆಂತು ಪಡೆದಳಯ್ಯ ॥೧॥

ಬಣ್ಣ ಸರವಲ್ಲಾಡೆ ವರ ರನ್ನ ನೇವಳದ
ಹೊನ್ನ ಗಂಟೆಯು ಘಣ ಘಣರೆನಲು
ಪನ್ನಗಶಯನನೆ ಕುಣಿಯೊಮ್ಮೆ ಕುಣಿಯೆಂದು
ಕುಣಿಸಿ ನಗುವ ಪುಣ್ಯವೆಂತು ಪಡೆದಳಯ್ಯ ॥೨॥

ಪೊಡವಿಯ ಈರಡಿ ಮಾಡಿದ ದೇವನ
ಕುಡಿಬೆರಳನೆ ಕರದಲಿ ಪಿಡಿದು
ಅಡಿಯಿಡು ಮಗನೆ ಮೆಲ್ಲಡಿಯಿಡು ಎನುತಲಿ
ನಡೆಗಲಿಸುವ ಪುಣ್ಯವೆಂತು ಪಡೆದಳಯ್ಯ ॥೩॥

ಕುಕ್ಷಿಯೊಳು ಈರೇಳು ಜಗವನ್ನು ಸಲಹುವನ
ರಕ್ಷಿಪರು ಉಂಟೆ ತ್ರೈಜಗದೊಳಗೆ
ಪಕ್ಷಿವಾಹನ ನೀನು ಅಂಜಬೇಡ ಎನುತಲಿ
ರಕ್ಷೆ ಇಡುವ ಪುಣ್ಯವನೆಂತು ಪಡೆದಳಯ್ಯ ॥೪॥

**ಶಂಖ ಚಕ್ರ ಗದಾ ಪದುಮಧಾರಕನ**
**ಪಂಕಜ ಮಿತ್ರ ಶತಕೋಟಿ ತೇಜನ**
**ಸಂಖ್ಯೆಯಿಲ್ಲದಾಭರಣಗಳ ತೊಡಿಸಿಯ**
**ಲಂಕರಿಸುವ ಪುಣ್ಯವೆಂತು ಪಡೆದಳಯ್ಯ ॥೫॥**

**ಸಾಗರಶಯನನ ಭೋಗೀಶನ ಮೇಲೆ**
**ಯೋಗ ನಿದ್ರೆಯೊಳಿಪ್ಪ ದೇವನನು**
**ಆಗಮ ನಿಗಮಗಳರಸಿ ಕಾಣದ ವಸ್ತುವನು**
**ತೂಗಿ ಪಾಡುವ ಪುಣ್ಯವೆಂತು ಪಡೆದಳಯ್ಯ ॥೬॥**

**ಪನ್ನಗ ಶಯನನ ಉನ್ನಂತ ಮಹಿಮನ**
**ಸನ್ನುತ ಭಕುತರ ಸಲಹುವನ**
**ಪನ್ನಗಾರಿ ವಾಹನ ದೇವರ ದೇವನಹ**
**ಚೆನ್ನಾದಿಕೇಶವನನೆಂತು ಪಡೆದಳಯ್ಯ ॥೭॥**

ಭಾವ– ಜಗದುದ್ಧಾರಕನಾದ ಕೃಷ್ಣನಿಗೆ ಹಾಲುಣಿಸಿ, ಕುಣಿಸಿ, ನಡೆಗಲಿಸಿ, ರಕ್ಷೆ ಇರಿಸಿ, ಅಲಂಕರಿಸಿ, ತೂಗುತ್ತಾ ಜೋಗುಳ ಹಾಡಿ ಸಾಕುವ ಪುಣ್ಯವನ್ನು ಯಶೋದೆ ಹೇಗೆ ಪಡೆದಳು ಎಂದು ಬೆರಗಿನಿಂದ ಕೇಳುತ್ತಾ ಅವನ ಮಹಿಮಾತಿಶಯಗಳನ್ನು ಕೊಂಡಾಡುವ ಆಶಯವುಳ್ಳ ಈ ಕೀರ್ತನೆ ಕೃಷ್ಣನಷ್ಟೇ ಸುಂದರ, ಕಲಾತ್ಮಕ.

ಅರ್ಥ– ಫಾಲ = ಹಣೆ
ಅರಳೆಲೆ = ಅರಳಿ ಎಲೆಯಾಕಾರದ ಆಭರಣ
ಉಡುಗೆ = ವಸ್ತ್ರ
ನೇವಳ = ಉಡಿದಾರ
ಪನ್ನಗಶಯನ = ಸರ್ಪವನ್ನು ಹಾಸಿಗೆಯಾಗುಳ್ಳವನು
ಪೊಡವಿ = ಭೂಮಿ
ಈರಡಿ = ಎರಡು ಅಡಿ, ಎರಡು ಹೆಜ್ಜೆ
ಕುಕ್ಷಿ = ಹೊಟ್ಟೆ



ಈರೇಳು = ಹದಿನಾಲ್ಕು
ಪಕ್ಷಿವಾಹನ = ಗರುಡನನ್ನು ವಾಹನವಾಗಿ ಇಟ್ಟುಕೊಂಡವನು
ಪಂಕಜ ಮಿತ್ರ = ಕಮಲಸಖನಾದ ಸೂರ್ಯ
ಭೋಗೀಶ = ಆದಿಶೇಷ
ಆಗಮ = ಶಾಸ್ತ್ರ
ನಿಗಮ = ವೇದ
ಪನ್ನಗ = ಹಾವು
ಉನ್ನಂತ = ಶ್ರೇಷ್ಠ
ಪನ್ನಗಾರಿ = ಹಾವಿನ ವೈರಿಯಾದ ಗರುಡ

* * * *

## ೨೧೦
## ಆನಂದ ಭೈರವಿ – ಅಟತಾಳ

**ಬಾಲಕನೆಂದೆತ್ತಿಕೊಂಡೆನೆ – ಗೋಪಾಲ ಕೃಷ್ಣನ**
**ಬಾಲಕನೆಂದೆತ್ತಿಕೊಂಡೆನೆ ॥ಪ॥**

**ಬಾಲಕನೆಂದೆತ್ತಿಕೊಂಡರೆ– ವಾರೆ ಮಾಡಿ ಮೋರೆ ನೋಡಿ**
**ಶ್ರೀ ಲತಾಂಗಿಯರ ಲೋಲ– ಮಾರನಾಟವಾಡಿ ಪೋದನೆ ॥ಅ॥**

**ಹೊತ್ತರೆದ್ದು ಮನೆಗೆ ಬಂದನೆ– ಯಶೋದೆ ಕೇಳೆ**
**ಎತ್ತಿಕೊಂಡು ಮುತ್ತು ಕೊಟ್ಟೆನೆ**
**ಎತ್ತಿಕೊಂಡು ಮುತ್ತು ಕೊಟ್ಟರೆ**
**ಮುತ್ತಿನ್ಹಾರ ಕೊರಳಿಗ್ಹಾಕಿ**
**ಚಿತ್ತಜಾತ ಕೇಳಿಯಲ್ಲಿ**
**ಬತ್ತಲೆ ನಿಂದೆತ್ತು ಎಂದನೆ ॥೧॥**

**ಗಂಡನಂತೆ ಮನೆಗೆ ಬಂದನೆ– ಯಶೋದೆ ಕೇಳೆ**
**ಮಿಂಡನಂತೆ ಕಣ್ಣು ಹೊಡೆದನೆ**
**ಪುಂಡಪೋಕರನ್ನು ಮೀರಿ**
**ದುಂಡು ಕುಚಗಳನ್ನು ಪಿಡಿದು**
**ದಿಂಡುರುಳಿಸಿ ಒಂದುಸರಲಿ**
**ಬಂಡನುಂಡು ಹಾರಿ ಪೋದನೆ ॥೨॥**

**ಏಸು ಮೋಸ ಕಲಿತ ಜಾಣನೆ– ಯಶೋದೆ ಕೇಳೆ**
**ವಾಸುದೇವ ಮಾಯಕಾರನೆ**
**ಹಾಸು ಮಂಚದ ಹಾಸಿಗೆಯಲಿ**
**ತೋಷದಿಂದ ಬಾಚಿ ಸೆಳೆದು**



**ಶೇಷನನ್ನು ಪೂಜಿಸೆಂದ**
**ಶ್ರೀಶ ಬಾಡದಾದಿ ಕೇಶವ ॥೩॥**

ಭಾವ– ಸತಿಪತಿ ಭಾವದ ಭಗವದನುಸಂಧಾನ ಈ ಕೀರ್ತನೆಯಲ್ಲಿ ಕೃಷ್ಣನ ತುಂಟಾಟಗಳ ಮೂಲಕ ಅಭಿವ್ಯಕ್ತವಾಗಿದೆ.

ಅರ್ಥ– ಮಾರ = ಮನ್ಮಥ
ಚಿತ್ತಜಾತ = ಮನ್ಮಥ
ಕೇಳಿ = ಕ್ರೀಡೆ
ಬಂಡು = ಮಧು
ತೋಷ = ಆನಂದ
ಶೇಷ = ಸರ್ಪ (ಇಲ್ಲಿನ ರೂಪಕಾರ್ಥ ಶಿಷ್ನ),
ಒಂದುಸುರು (<ಒಂದು+ಉಸಿರು) = ಬೇಗ, ತಡೆರಹಿತ

* * * *

## ೨೧೧
## ಮೋಹನ – ಝಂಪೆ

ಎಂಥ ಟವಳಿಗಾರನಮ್ಮ ॥ಪ॥

ನಂದ ಗೋಪ್ಯಮ್ಮ ಕೇಳೆ– ನಿನ್ನ ಮಗ
ಎಂಥ ಟವಳಿಗಾರನಮ್ಮ ॥ಅ॥

ಹಣವ ಕೊಟ್ಟೇನೆಂದು
ಗುಣದಿಂದ ಎನ್ನ ತಂದ
ಹಣವ ಕೇಳಿದರಲ್ಲಿ– ಹಣವೆ?
ತಡೆಯಲಾರದ ತಲ್ಲಣವೆ?
ಕುದುರೆ ಮೇಲಿನ ಪಲ್ಲಣವೆ?
ಇಲ್ಲ, ಬಾಯಿಗಿಟ್ಟ ಬೊಕ್ಕಣವೆ?– ಹೋಗೆನುತಾನೆ ॥೧॥

ಕೊಪ್ಪಾನೆ ಕೊಟ್ಟೇನೆಂದು
ಒಪ್ಪಿಸಿ ಎನ್ನ ತಂದ
ಕೊಪ್ಪಾನ ಕೇಳಿದರಲ್ಲಿ– ಕೊಪ್ಪ?
ಊರಮುಂದಿನ ತಿಪ್ಪ?
ಕೇರಿಯೊಳಗಿನ ಕೆಪ್ಪ?
ಕೆರೆಯೊಳಗಿನ ಹುಳಿಸೊಪ್ಪ?– ಹೋಗೆನುತಾನೆ ॥೨॥

ಬಳೆಯ ಕೊಟ್ಟೇನೆಂದು
ಬಲು ಮಾತಿನಲಿ ತಂದ
ಬಳೆಯ ಕೇಳಿದರಲ್ಲಿ– ಬಳೆಯೆ?
ಊರ ಮುಂದಿನ ಗಳೆಯೆ?



ಗದ್ದೆಯೊಳಗಿನ ಕಳೆಯೆ?
ಕೈಕಾಲ ಹಿಡಿದು ಸೆಳೆಯೆ?– ಹೋಗೆನುತಾನೆ ॥೩॥

ವಾಲೆಯ ಕೊಟ್ಟೇನೆಂದು
ಒಲವಿನಿಂದ ತಂದ
ವಾಲೆಯ ಕೇಳಿದರಲ್ಲಿ– ವಾಲೆ?
ಕನ್ನಡಿಯ ಕಪೋಲೆ?
ಹೇಳು ಸುವ್ವಿ ಸುವ್ವಾಲೆ?
ನಿನ್ನ ಕಾಲಿಗೆ ಸಂಕೋಲೆ?– ಹೋಗೆನುತಾನೆ ॥೪॥

ಕಡಗವ ಕೊಟ್ಟೇನೆಂದು
ಸಡಗರದಿಂದ ತಂದ
ಕಡಗ ಕೇಳಿದರಲ್ಲಿ– ಕಡಗ?
ಅಂಬರದ ಗುಡುಗ?
ಮುಂಗೈ ಮೇಲಿನ ಗಿಡುಗ?
ಎತ್ತಿನ ಮ್ಯಾಲಿನ ಧಡಗ?– ಹೋಗೆನುತಾನೆ ॥೫॥

ಬುಗುಡಿಯ ಕೊಟ್ಟೇನೆಂದು
ರಗಡು ಕಿವಿಹಿಂಡಿ ತಂದ
ಬುಗುಡಿ ಕೇಳಿದರಲ್ಲಿ– ಬುಗುಡಿ?
ಪಾಂಡವರಾಡಿದ ಪಗಡಿ?
ಮೂಗಿಂದ ಸುರಿವ ನೆಗಡಿ?
ಛಿ! ನೀನೆಂಥ ಧಗಡಿ?– ಹೋಗೆನುತಾನೆ ॥೬॥

ಆದಿಕೇಶವನ ಮೇಲೆ
ಆಣೆಯಿಟ್ಟು ಕರೆತಂದ
ಆಣೆ ಎಲ್ಲಹುದೆಂದು ತೋರ್ದ
ಆನಂದದಿಂದಲಿ ಬೆರೆದ

**ಬೀದಿಗೆ ಬಂದು ಕರೆದ**
**ಹೀಂಗೆ ಧರೆಯೊಳು ಮೆರೆದ– ಶ್ರೀ ಕೃಷ್ಣರಾಯ ॥೭॥**

ಭಾವ– ಜಾನಪದ ನೆಲೆಗಟ್ಟಿನಿಂದ ಹೋದ ಕನಕದಾಸರು ಕೃಷ್ಣನ ತುಂಟತನವನ್ನು ಜಾನಪದ ಸತ್ತ್ವಸಮನ್ವಿತವಾದ ಧಾಟಿಧೋರಣೆಯಿಂದಲೇ, ಕೀಟಲೆ ಮಾಡಿ ಗೋಳು ಹುಯ್ದುಕೊಂಡು ಸತಾಯಿಸುವ ಕಾದಲರ ತಂತ್ರದಿಂದಲೇ ಈ ಕೀರ್ತನೆಯನ್ನು ಕಟ್ಟಿರುವುದು ಕಂಡುಬರುತ್ತದೆ. ಉಪ್ಪು ಹುಳಿ ಖಾರವಿಲ್ಲದ ಸಪ್ಪೆಯ ಸಾಂಪ್ರದಾಯಕ ದಾಸ ಸಾಹಿತ್ಯಕ್ಕೆ ಇಂಥ ಲವಲವಿಕೆಯ, ಜೀವಂತಿಕೆಯ ಬಾಗು ಬಳುಕುಳ್ಳ ಚೇಗು ಚೆಲುವುಳ್ಳ ರಚನೆಗಳ ಮೂಲಕ ಹೊಸ ಆಯಾಮ ದಕ್ಕುವಂತೆ ಮಾಡಿದ ಮಾಸಾಳನ್ನು ಮರೆಯುವುದು ಮೂಲೆಗುಂಪು ಮಾಡುವುದು ಅಕ್ಷಮ್ಯ ಅಪರಾಧ.

ಅರ್ಥ– ಟವಳಿಗಾರ = ಮೋಸಗಾರ.

೧. ತಲ್ಲಣ = ತಳಮಳ
ಪಲ್ಲಣ = ಜೀನು
ಬೊಕ್ಕಣ = ಕುದುರೆಯ ಬಾಯಿಗೆ ಕಟ್ಟುವ ಮೇವಿನ ಚೀಲ
೨. ಕೊಪ್ಪ (<ಕೊಪ್ಪು) = ಆಭರಣ ವಿಶೇಷ
ತಿಪ್ಪ = ತಿಪ್ಪೆ
ಕೆಪ್ಪ = ಕಿವುಡ
೩. ಊರು = ಗ್ರಾಮ, ತೊಡೆ
ಗಳೆ = ಗಣೆ (ನೆಲಕ್ಕೆ ನೆಟ್ಟ ಬಿದಿರ ಬೊಂಬು); ಊರು ಎಂಬುದಕ್ಕೆ ತೊಡೆ ಅರ್ಥ ಇಟ್ಟುಕೊಂಡರೆ ಗಳೆ ಶಿಷ್ನದ ಸಂಕೇತವಾಗುತ್ತದೆ.
೪. ವಾಲೆ (<ಓಲೆ) = ಕಿವಿಯ ಆಭರಣ
ಕಪೋಲೆ (<ಕಪೋಲವೆ?) = ಕೆನ್ನೆಯೆ
ಸಂಕೋಲೆ (<ಶೃಂಖಲೆ) = ಕೋಳ



೫. ಕಡಗ = ಆಭರಣ ವಿಶೇಷ
ಅಂಬರ = ಆಕಾಶ
ಧಡಗ = ಹೇರು
೬. ರಗಡು = ಅಧಿಕ
ಪಗಡಿ = ಪಗಡೆ
ಧಗಡಿ = ವ್ಯಭಿಚಾರಿಣಿ
೭. ಆಣಿ = ಮೊಳೆ, ಗೂಟ (ಶಿಷ್ನ)

* * * *

## ೨೧೨
## ಆನಂದ ಭೈರವಿ – ಆದಿತಾಳ

**ಬೀದಿಯೊಳು ಯಾತರಾ ನಂಟು ಬೇಡ ದಮ್ಮಯ್ಯ ॥ಪ॥**
**ಭೇದಿಸಿ ನೋಡುವರುಂಟು ಬೆಂಬತ್ತಿ ಬಾರದಿರಯ್ಯ ॥ಅ॥**

**ಕಂಡ ಕಂಡ ಠಾವಿನಲ್ಲಿ ಕಣ್ಣೆತ್ತಿ ನೋಡದಿರಯ್ಯ**
**ಕಂಡಿಯೊಳು ಕೈಸನ್ನೆ ಮಾಡದಿರಯ್ಯ**
**ಗಂಡನುಳ್ಳವಳ ಜೊತೆ ಭಂಡಾಟವ್ಯಾಕಯ್ಯ**
**ಕೊಂಡೆಗಾತಿಯರುಂಟು ದುಡುಕದಿರಯ್ಯ ॥೧॥**

**ಬೇಳುವೆಯ ಮಾತಾಡಿ ಗಾಳ ಹಾಕದಿರಯ್ಯ**
**ಬಾಳೆ ಹಣ್ಣಿಗೆ ಕೊಡಲಿ ಬೇಕೆ ದಮ್ಮಯ್ಯ**
**ಆಳುವ ಅರಸಾಗಿ ನಿನಗಾವ ಬರವಯ್ಯ**
**ಮೇಳದವರ ಬಿಟ್ಟು ಮೇರೆದಪ್ಪುವರೇನಯ್ಯ ॥೨॥**

**ನೋಡುವರು ಜನರೆಲ್ಲ ನಾಚಿಕೆ ಇಲ್ಲವೇನಯ್ಯ**
**ಜೋಡು ಕಳಸವ ಹಿಡಿಯದಿರು ಜೋಕೆ ದಮ್ಮಯ್ಯ**
**ಮಾಡುವ ದೈನ್ಯವ ಬಲ್ಲೆ ಮದ್ದೂರು ನರಸಿಂಹಯ್ಯ**
**ಕೂಡಿದ ಕನಕನಾದಿಕೇಶವ ನೀನಹುದಯ್ಯ ॥೩॥**

ಭಾವ– ಸತಿಪತಿಭಾವದ ಭಗವದನುಸಂಧಾನ ಈ ಕೀರ್ತನೆಯ ಮೂಲದ್ರವ್ಯ. ಇಲ್ಲಿ ಭಕ್ತ (ಸತಿ) ಭಗವಂತನ (ಪತಿಯ) ಬೆನ್ನು ಹತ್ತಿಲ್ಲ. ಬದಲಾಗಿ ಭಗವಂತನೇ ಭಕ್ತನ ಬೆನ್ನು ಹತ್ತಿರುವುದು ವಿಶೇಷ. ಬೆದೆಗೊಂಡ ಮದ್ದೂರ ನರಸಿಂಹಯ್ಯನಿಗೆ ಹದ್ದು ಮೀರದಿರು ಜೋಕೆ ಎಂಬ ಹುಸಿ ಸಿಟ್ಟಿನಿಂದ ವಿನಂತಿಸಿಕೊಳ್ಳುವ ಪ್ರಮದೆಯ ಮೋಜಿನ



ನಾಜೂಕುತನ ಓದುಗರ ಮೈಮನಸುಗಳನ್ನು ಅರೆಕ್ಷಣವಾದರೂ ಜುಂ ಜುಂ ಎನ್ನಿಸದೆ ಇರದು.

ಅರ್ಥ– ಕಂಡಿ = ರಂಧ್ರ
ಕೊಂಡೆಗಾತಿ =ಚಾಡಿಗಾತಿ
ಬೇಳುವೆಯ = ಬಣ್ಣದ, ಮರುಳುಗೊಳಿಸುವ;
ಗಾಳ = ಮೀನು ಹಿಡಿಯುವ ಸಾಧನ
ಬರ = ಕ್ಷಾಮ
ಮೇಳದವರು = ಅಂತಃಪುರದವರು
ಜೋಡುಕಳಸ =ಸ್ತನದ್ವಯ (ಮೋಹನ ತರಂಗಿಣಿಯ ಅನಿರುದ್ಧನ ಬೇಟೆಯ ವರ್ಣನೆ ಎಂಬ ಅಧ್ಯಾಯದಲ್ಲಿ ಬರುವ ಕಾಡುವೆಣ್ಣುಗಳ ವರ್ಣನೆಯ ಭಾಗದಲ್ಲಿ ಇಂಥದೇ ಅಭಿವ್ಯಕ್ತಿ ಇರುವುದನ್ನು ಗಮನಿಸಬಹುದು:

**"ಮದನ ಮಂದಿರದ ಬಾಗಿಲಿಗೆ ತೋರಣವ ಕ**
**ಟ್ಟಿದವೊಲು ತಳಿರುಡೆ ಮೆರೆಯೆ**
**ಹೃದಯ ಮಂಟಪ ಶಿಖರದ ಜೋಡಿಗಳಸದಂ**
**ತೆದೆಯೊಳಿರ್ದವು ಕುಚಯುಗಳ"**

* * * *

## ೨೧೩
## ಆನಂದ ಭೈರವಿ – ಅಟತಾಳ

**ಮುಟ್ಟದಿರೊ ಎನ್ನನು– ರಂಗಯ್ಯ**
**ಮುಟ್ಟದಿರೊ ಎನ್ನನು ॥ಪ॥**

**ಮುಟ್ಟದಿರೊ ಎನ್ನ ಮುಂಗೈಯ ಸೆಳವಿಗೆ**
**ಮುತ್ತೆಲ್ಲ ಸಡಲ್ಯಾವೊ ಹೇ ಮುದ್ದುರಂಗ ॥ಅ॥**

**ಅತ್ತೆಯೊಬ್ಬಳ ಕೂಡ ಆಡಿ ಬರುವುದ ಕಂಡೆ**
**ಸತ್ಯವ ಮಾಡದಿರೊ– ಹೇ ಸರಿನಂಟ**
**ನೂರೆಂಟ**
**ಬಣ್ಣದ ಬಂಟ**
**ಬಿಡು ಎನ್ನ ಗಂಟ ॥೧॥**

**ಹಡೆದವರ ತಲೆಗೆ ಮರಳು ಚೆಲ್ಲಿದಂತೆ**
**ಮಡದೇರ ಕೂಡ್ಯಾಡಿ ಕಲಿತ್ಯೆಲ್ಲೊ ಮಿರುಗ**
**ದಿಮ್ಮದಿರುಗ**
**ಸೊಕ್ಕಿಮುರುಗ**
**ಬಿಡು ಎನ್ನ ಸೆರಗ ॥೨॥**

**ಅಂಗೈಯ ನೊರೆಹಾಲು ಮುಂಗೈಯ ಮೇಲುಗಡೆ**
**ಸಿಂಗಾರವಾದುದ ಕಂಡೆ ಕಲೆಯ**
**ಕಾಗಿನೆಲೆಯ**
**ಬಟ್ಟಮೊಲೆಯ**
**ಕನಕಯ್ಯನಿಗೊಲೆಯ ॥೩॥**



ಭಾವ– ಇದರಲ್ಲಿ ಸತಿಪತಿಭಾವದ ಭಗವದನುಸಂಧಾನವಿದೆ. ಇಲ್ಲಿ ಕನಕದಾಸರೇ ನಲ್ಲೆಯಾಗಿ ನಲ್ಲನಾದ ಆದಿಕೇಶವನೊಡನೆ ಆಡಿದ ಸರಸದ ಮುನಿಸಿನ ಮಾತುಗಳಿವೆ. ನೀನು ಸ್ತ್ರೀಲೋಲ ಎನ್ನುವುದು ನನಗೆ ಗೊತ್ತು, ಬೆನ್ನ ಹತ್ತ ಬೇಡ, ಸೆರಗು ಹಿಡಿಯಬೇಡ ಎಂದು ಹುಸಿಮುನಿಸನ್ನು ವ್ಯಕ್ತಪಡಿಸುತ್ತಲೇ ಸತಾಯಿಸುತ್ತಲೇ ಕೊನೆಗೆ "ಕನಕಯ್ಯನಿಗೊಲೆಯ?" ಎಂದು ಕೇಳಿ ಕಚಗುಳಿ ಇಡುವ ರಸಿಕತನ ತೋರಿರುವುದು ಕಂಡು ಬರುತ್ತದೆ.

ಅರ್ಥ– ಸೆಳವಿಗೆ = ಎಳೆತಕ್ಕೆ

೧. ಅತ್ತೆ = ಆ ಕಡೆ
ನೂರೆಂಟ ಬಣ್ಣದ ಬಂಟ = ಹಲವಾರು ಬಣ್ಣಗಳ, ಥಳಕು ತಟವಟದ ತುಂಟ

೨. ಮಿರುಗ = ಮಿರುಗುವವನು, ಮಿಂಚುವವನು
ದಿಮ್ಮದಿರುಗ = ಅಪ್ಪಾಳೆತಿಪ್ಪಾಳೆ ಆಡಿಸುವ, ತಿರುಗುವ
ಸೊಕ್ಕಿ = ಮದದಿಂದ ತುಂಬಿ
ಮುರುಗ = ಬೆಡಗುಗಾರ, ಬಿನ್ನಾಣಗಾರ, ಸೊಗಸುಗಾರ

೩. ಬಟ್ಟ = ಬಟುವಾದ, ದುಂಡಗಿನ
ಒಲೆಯ = ಒಲಿಯುವುದಿಲ್ಲವೆ?

* * * *

## ೨೧೪
## ಕಲ್ಯಾಣಿ – ಏಕತಾಳ

**ನೋಡು ನೋಡು ಗೋಪಿ ನಿನ್ನ ಮಗನ ಲೂಟಿಯ ॥ಪ॥**
**ಮಾಡುತಾನೆ ಮನೆಗೆ ಬಂದು ಬಹಳ ಚೇಷ್ಟೆಯ ॥ಅ॥**

**ಮಾನಿನೀಯರೊಳಗೆ ಪೋಕಾಟವೇನಿದು**
**ಮಾನವನ್ನು ಕಳೆದ ಪರಿಯ ಹೇಳತೀರದು ॥೧॥**

**ಪಿಡಿದ ಸೆರಗ ಬಿಡನು ಇನ್ನೇನ ಮಾಡಲಿ**
**ತಡೆಯಲಾರೆವಮ್ಮ ಕೇಳೆ ಇವನ ಹಾವಳಿ ॥೨॥**

**ಇನ್ನು ಚನ್ನಕೇಶವ ಕದಳಿ ರಂಗನ**
**ಬನ್ನಣೇಯ ಮಾತ ಕೇಳಿ ಬಿಡುವೆ ಪುರುಷನ ॥೩॥**

ಭಾವ– ಗೋಪಿಕಾಸ್ತ್ರಿಯೊಬ್ಬಳು ಗೋಪಿದೇವಯಾದ ಯಶೋದೆಗೆ ಶ್ರೀಕೃಷ್ಣನ ಉಪಟಳದ ದೂರನ್ನು ಸಲ್ಲಿಸುವ ರೂಪದಲ್ಲಿದೆ ಈ ಕೀರ್ತನೆ.

ಅರ್ಥ– ಗೋಪಿ = ಗೊಲ್ಲತಿಯಾದ ಯಶೋದೆ.
ಮಾನಿನೀಯ (<ಮಾನಿನಿಯ) = ಸ್ತ್ರೀಯ
ಪೋಕಾಟ = ಪೋಲಿ ಆಟ
ಬನ್ನಣೇಯ (<ಬನ್ನಣೆಯ) = ವರ್ಣನೆಯ (ಬಣ್ಣನೆ ಎಂಬುದು ಅಕ್ಷರಪಲ್ಲಟದಿಂದ ಬನ್ನಣೆ ಆಗಿದೆ)
ಕದಳಿ = ಯಾವ ಊರು ಎಂಬುದು ಸ್ಪಷ್ಟವಾಗುವುದಿಲ್ಲ. ಇದು ಕದ್ರಿ ಇರಬಹುದೆ?

* * * *



## ೨೧೫
## ಭೈರವಿ – ಅಟತಾಳ

**ನೆರೆದು ಗೋಪಿಯರೆಲ್ಲರು– ಕೃಷ್ಣಯ್ಯನ**
**ಕರವ ಪಿಡಿದುಕೊಂಡು**
**ಭರದಿಂದ ಬಂದು ಯಶೋದೆಗೆ ಚಾಡಿಯ**
**ಅರುಹಿದರತಿ ವೇಗದಿ ॥ಪ॥**

**ಬಲು ಕಳ್ಳ ನಿನ್ನ ಮಗ– ಯಶೋದೆ ಕೇಳೆ**
**ಹಾಲು ಕರೆಯುತಿರಲು**
**ತೊಲೆಗೆ ನಿಚ್ಚಣಿಕೆಯನೆ ಹಾಕದೆ ಸುರಿದನು**
**ನೆಲುವಿನ ಪಾಲ್ಕೊಸರ ॥೧॥**

**ಅಮ್ಮಯ್ಯ ಇಲ್ಲ ಕಾಣೆ– ಇವಳು ಎನ್ನ**
**ಸುಮ್ಮನೆ ದೂರುವಳೆ**
**ಹಮ್ಮಿಂದ ನಾನವಳ ಅಟ್ಟಕ್ಕೆ ನೆಗೆಯಲು**
**ಬೊಮ್ಮ ಜಟ್ಟಿಗನೇನಮ್ಮ ॥೨॥**

**ಮತ್ತೆ ಮುತ್ತಿನಂಥ– ನಿನ್ನೀ ಮಗ**
**ಹತ್ತಿ ಗವಾಕ್ಷದಿಂದ**
**ಎತ್ತಿಟ್ಟ ಬೆಣ್ಣೆಯನೆಲ್ಲವ ಮೆದ್ದನು**
**ಹೆತ್ತ ಮಕ್ಕಳಿಗಿಲ್ಲದಂತೆ ॥೩॥**

**ಗಡಿಗೆ ಬೆಣ್ಣೆ ಮೆಲ್ಲಲು– ಎನ್ನ ಹೊಟ್ಟೆ**
**ಮಡುವು ಭಾವಿಯೇನೆ**
**ಹುಡುಗರಿಗರಿಯದೆ ಎತ್ತಿಟ್ಟ ಬೆಣ್ಣೆಯ**
**ಹೊಡೆದರವರ ಮಕ್ಕಳು ॥೪॥**

**ಮರೆತು ಮಂಚದ ಮೇಲೆ– ನಾ ಮಲಗಿರಲು**
**ಹರಿವ ಹಾವನೆ ತಂದು**
**ಅರಿಯದಂತೆ ಬಂದು ಮುಸುಕಿನೊಳಗಿಟ್ಟು**
**ಸರಸರ ಪೋದನಮ್ಮ** ॥೫॥

**ಹರಿದಾಡುವ ಹಾವನು– ನಾ ಹಿಡಿಯಲು**
**ತರಳ ನಾ ತಡೆಗಾರನೆ**
**ಹರಕೆಯ ಹೊತ್ತುದನೊಪ್ಪಿಸದಿರಲು**
**ಗುರುತು ತೋರಲು ಬಂತೇನೊ** ॥೬॥

**ಹಸುಮಗು ನೋಡಿದರೆ– ತಾಟಕನಿವ**
**ಮೊಸರು ಕಡೆಯುತಿರಲು**
**ಮಿಸುಕದೆ ಬಂದು ಕಕ್ಕಸ ಕುಚಗಳ**
**ಮುಸುಕಿನೊಳಗೆ ಹಿಡಿದ** ॥೭॥

**ಕೇಳು ಕೇಳೆಲೆ ಅವ್ವ– ಇವಳ ಬೇ**
**ತಾಳನಂತಿರುವಳು**
**ಬಾಲಕ ನಾನವಳುದ್ದಕೆ ನೆಗೆವೆನೆ**
**ಜೋಲುವ ತೊಗಲಿಗಾಗಿ** ॥೮॥

**ಮಕ್ಕಳು ಪಡೆದವರು– ಇಲ್ಲದ ಕಳ**
**ವಿಕ್ಕಬಹುದೆ ಕೃಷ್ಣಗೆ**
**ಸಿಕ್ಕ ತಪ್ಪುಸಮೇತ ಎಳೆತಂದರೆ**
**ತಕ್ಕ ಬುದ್ಧಿಯ ಹೇಳುವೆ** ॥೯॥

**ಅಣುಘನರೂಪ ಕಾಣೆ– ನಿನ್ನೀ ಮಗ**
**ಚಿನುಮಯ ರೂಪ ಕಾಣೆ**
**ಘನ ಮಹಿಮನು– ಇಂಗಳಗೊಂದಿಯ**
**ಚೆನ್ನಕೇಶವರಾಯ ಕಾಣೆ** ॥೧೦॥



ಭಾವ– ಕೃಷ್ಣನ ಬಾಲಲೀಲೆಗಳಿಗೆ ಸಂಬಂಧಿಸಿದ ಸಂವಾದರೂಪದ ಕೀರ್ತನೆಯಿದು. ಗೋಪಿಕಾಸ್ತ್ರೀಯರು, ಕೃಷ್ಣ, ಯಶೋದೆ ಇವರ ಮಧ್ಯೆ ಜರುಗುವ ಉತ್ತರ ಪ್ರತ್ಯುತ್ತರಗಳ ಸರಸಗುಣ ರಸಿಕಗುಣ ಚಿತ್ತಾಕರ್ಷಕ.

ಅರ್ಥ– ಭರದಿಂದ = ರಭಸದಿಂದ
ಅರುಹಿದರು = ಹೇಳಿದರು

೧. ನಿಚ್ಚಣಿಕೆ = ಏಣಿ
ಸುರಿದನು = ಸೊರ್‍ರ ಸೊರ್‍ರನೆ ಕುಡಿದನು
ನೆಲುವು = ಹಾಲು ಮೊಸರನ್ನಿಡಲು ಜಂತೆಗೆ ನೇತುಕಟ್ಟಿರುವ ಹಗ್ಗದ ಇಲಕೆ (ತೆಕ್ಕೆ)
೨. ಹಮ್ಮು = ಹುಮ್ಮಸ್ಸು, ಅಹಂ
ಬೊಮ್ಮ ಜಟ್ಟಿಗ = ಬ್ರಹ್ಮ ರಾಕ್ಷಸ
೩. ಮೆದ್ದನು = ತಿಂದನು
೪. ಮಡುವು = ಆಳವಾದ ನೀರಿರುವ ಜಾಗ (ಕೊಳ)
೫. ಮುಸುಕು = ಹೊದಿಕೆ, ಯೋನಿ (ಹೊಂಬಾಳೆ ಮುಸುಕು ಒಡೆದಿದೆ ಎಂಬ ಪ್ರಯೋಗ ಗಮನಿಸಿ)
೬. ತಡೆಗಾರ = ಹಾವಾಡಿಗ, ಮಂತ್ರ ಮಾಟಗಾರ
ಗುರುತು ತೋರಲು = ಫಲಿತಾಂಶ ತೋರಿಸಲು, ನೆನಪು ಮಾಡಲು
೭. ತಾಟಕ = ತುಂಟ, ಪೋಲಿ
ಕಕ್ಕಸ (<ಕರ್ಕಷ) = ಗಟ್ಟಿಯಾದ, ಬಿರಿಯುವಂತಿದ್ದ
ಕುಚಗಳ = ಎದೆಗಳ
೮. ಬೇತಾಳ = ಅಸ್ಥಿಪಂಜರ, ಪಿಶಾಚಿ
ಜೋಲುವ ತೊಗಲು = ಇಳಿಬಿದ್ದ ಮೊಲೆ
೯. ಕಳವಿಕ್ಕು = ಕಳ್ಳತನ ಹೊರಿಸು

೧೦. ಇಂಗಳಗೊಂದಿ = ಕಾಗಿನೆಲೆಗೆ ಸಮೀಪವಿರುವ ಊರು. ಬಾಡದ ಬಳಿಯ ಚೆನ್ನಾಪುರದಲ್ಲಿದ್ದ ಚೆನ್ನಕೇಶವನನ್ನು– ಮುಸ್ಲಿಂ ದಾಳಿಗೆ ಹೆದರಿ– ಹೊತ್ತು ತಂದ ಕನಕದಾಸರು ಇಂಗಳಗೊಂದಿಯಲ್ಲಿ ಪ್ರತಿಷ್ಠಾಪಿಸಿದರು ಎಂದು ಪ್ರತೀತಿ. ಆ ಗುಡಿಯನ್ನು ಈಗಲೂ ನೋಡಬಹುದು.

* * * *



## ೨೧೬
## ಶಂಕರಾಭರಣ – ಛಾಪುತಾಳ

ಸೈಯವ್ವ ಇದು ಸೈಯೆ, ಗೋಪಿ, ಸೈಯವ್ವ ಇದು ಸೈಯೆ ॥ಪ॥
ಸೈಯೆ ಗೋಪಿ, ನಿನ್ನ ಮಗರಾಮನಿಗೆ ಒಳ್ಳೆ ಬುದ್ಧಿ ಕಲಿಸಿದ್ದೀಯೆ ॥ಅ॥

ಸಂಜೆಯ ವೇಳೆಗೆ ಬಂದು– ಸಟೆಯಲ್ಲ– ಮನೆಯ ಒಳಗಡೆ ನಿಂದು
ಕುಂಜರಗಮನೆ ಬಾರೆಂದು ಎನ್ನ ಮುಂಗುರುಳ ತಿದ್ದಿದ
ಗಂಜಿ ಶಲ್ಯವ ಎನಗೆ ಮುಸುಕಿಟ್ಟು ಮುದ್ದಾಡಿ ಕಡೆಗೆ
ಕಂಜಲೋಚನೆ ಕುಚದ ಗಂಟು ಬಿಚ್ಚೆಂದ ನೋಡು ॥೧॥

ಬಿಟ್ಟ ಮಂಡೆಯಲಿ ಗಂಡ ಮೈಮರೆತು ಮಲಗಿಹುದ ಕಂಡು
ಜುಟ್ಟನ್ನು ಬಿಚ್ಚಿ ಮಂಚದ ನುಲಿಗೆ ಬಿಗಿದು ಕಟ್ಟಿದ
ಕೊಟ್ಟಿಗೆ ಸುಡುತಿದೆ ಏಳೆಂದು ಬೊಬ್ಬೆಯಿಟ್ಟುದ ಕೇಳಿ
ಥಟ್ಟನೇಳಲು ಗಂಡ, ಜುಟ್ಟು ಕಿತ್ತು ಹೋಯಿತಮ್ಮ ॥೨॥

ಅಡವಿ ಜಟ್ಟಿಂಗನ ಮಾಡಲಿಕೆ ಒಳ್ಳೆ ಸಡಗರ ಸಂಭ್ರಮದಿಂದ
ಹೆಡಗೆ ತುಂಬ ಹೋಳಿಗೆ ಮಾಡಿ ಕೊಡ ನೀರು ತರಲು ಹೋದೆನೆ
ಕಡೆಗೊಂದು ಹೋಳಿಗೆ ಬಿಡದೆ ಕೊಡದುಪ್ಪ ಹಾಲ್ಕೊಸರು ಪಾಯಸ
ಕಡು ಘಟಿಂಗ ತುಡುಗು ತಿಂದು ಮೀಸಲಳಿದು ಎಡೆಗೆಡಿಸಿ ಹೋದನೆ ॥೩॥

ಊರೊಳಿಂತಾಯ್ತೆಂದು ಸಾರಿದೆವೆ ನಾರೇರು
ಅಡವಿಯಲಿ ಕೂಡಿದೆವೆ ಹಲವಾರು ಹೆಂಗಸರು
ನೂರಾರು ಗೆಳತೇರು ಉಳಿದ ಹಾಲನು ಮಾರಿ
ದಾರಿ ಹಿಡಿದು ಬರುವಾಗೊಂದು ಕೊಳವ ಕಂಡೆವೆ ನೋಡು ॥೪॥

ಓರಗೆ ಹೆಂಗಳು ನಾವು ನೀರಾಟವಾಡಲಿಕೆ
ಸೀರೆ ಕುಬಸವ ದಡದೊಳಿಟ್ಟು ಕೊಳಕೆ ಧುಮುಕಿದೆವೆ
ಚೋರ ನಿನ್ನ ಮಗ ಸೀರೆಕುಬುಸವನೆಲ್ಲ ತಕ್ಕೊಂಡು ಹೋಗಿ
ತೋರದುಂಚ ಕಡಹದ ಮರನೇರಿ ನೋಡುತ ಕುಂತನೆ ||೫||

ನೆಟ್ಟನೆ ನೀರಾಟವಾಡಿ ನಾಲ್ಕೂ ದಿಕ್ಕಿನಲಿ ನಾವು ಅಡರಿದೆವೆ
ಇಟ್ಟಲ್ಲಿ ಸೀರೆಕುಬಸಗಳಿಲ್ಲ ಕೆಟ್ಟೆವಯ್ಯಯ್ಯೋ
ಕಿಟ್ಟನ ಕೈಚಳಕವೆಂದು ನಾವಷ್ಟದಿಕ್ಕುಗಳ ನೋಡಿದೆವೆ
ತುಟ್ಟತುದಿ ಕೊಂಬೆಯಲಿ ಕುಂತಿರುವ ಪುಟ್ಟನ್ನ ಕಂಡೆವೆ ||೬||

ಮುಂದೆ ಹಸ್ತದಿ ಮುಚ್ಚಿಕೊಂಡು ಕೃಷ್ಣನಿಗೆ ಗೋಗರೆದು ಕೇಳಲು
ವಂದನೆ ಮಾಡಿದರೆ ನಿಮಗೆ ಸೀರೆ ಕುಬಸವ ಕೊಡುವೆನೆಂದ
ಒಂದು ಕರದಿ ಮುಗಿವೆವೆಂದರೆ ಎರಡು ಕರದಿ ಮುಗಿಯಿರೆಂದ
ಬಂಧನಕ್ಕೊಳಗಾದೆವೆಂದು ವಿಧಿಯಿಲ್ಲದೆ ಮುಗಿದೆವೆ ||೭||

ಪುಷ್ಪಗಂಧಿಯರೆ ಒಪ್ಪಿತವಾಗಲಿಲ್ಲ ನನ್ನ ಮನಕೆ
ಚಪ್ಪಾಳೆ ಇಕ್ಕುತ ಮರದ ಸುತ್ತ ತಿರುಗಿರೆಂದ
ತಪ್ಪದು ಎಷ್ಟೊತ್ತಾದರು ಬಿಡನೆಂದು ಜಯಜಯವೆನುತ
ಚಪ್ಪಾಳೆ ಇಕ್ಕುತ ಮರದ ಸುತ್ತಲೂ ತಿರುಗಿದೆವೆ ||೮||

ಪಗಡೆಕಾಯಿ ಕುಚದ ದಗಡಿಯರೆ ಪುಗಡಿ ಹಾಕಿರಿ ಎನ್ನೆದುರು
ತೆಗೆದು ಕೊಡುವೆ ನಿಮ್ಮ ವಸ್ತ್ರಗಳ ಬಗೆಬಗೆಯಿಂದ
ಜಗದೊಳು ನಗೆಗೇಡಾದೆವು ಇನ್ನು ನುಡಿದು ಫಲವಿಲ್ಲೆಂದು
ಪುಗಡಿ ಹಾಕಿದೆವೆ ನಾವು ಛೀ ಛೀ ಎನ್ನುತಲಿ ||೯||

ಕಡೆಯಾಟ ಕಮಲನೇತ್ರಯರೆ ಎಡೆಯಾಗಿ ಹೋಗಿ ನಿಲ್ಲಿರಿ
ಓಡಿಬಂದರೊಂಟಿಯಾಗಿ ಹಿಡಿದು ನೋಡಿ ಕೊಡುವೆ ಎಂದ
ಕೋಡಗ ಕೊರವಂಗೆ ಸಿಕ್ಕಿ ಆಡಿದಂತೆ ನಾವಾಡಿದೆವೆ
ಓಡಿ ಬಂದೊಬ್ಬೊಬ್ಬರಿಗೂ ಹಿಡಿದು ಸವರಿ ವಸ್ತ್ರವನಿತ್ತನೆ ||೧೦||



ತಂಡತಂಡದ ನಮಗೆ ಬಣ್ಣಬಣ್ಣದ ಬಳೆಯನಿಟ್ಟು
ಮಂಡೆ ಬಾಚಿ ಕುರುಳ ತಿದ್ದಿ ಕುಂಕುಮವಿಟ್ಟನೆ
ಪುಂಡ ನಿನ್ನಣುಗ ನೆಲೆಯಾದಿಕೇಶವರಾಯ
ಬಂಡು ಮಾಡಿ ಬಳಲಿಸಿ ಕೊನೆಗೆ ರಮಿಸಿ ಕಳಿಸಿಕೊಟ್ಟನೆ ||೧೧||

ಭಾವ– ಘಟಿಂಗ ಪುಂಡ ತಂಟೆಕೋರ ಹಾಗೂ ರಸಿಕ ಶ್ರೀಕೃಷ್ಣನ ಬಗೆಗೆ ಗೊಲ್ಲತಿಯರು ಯಶೋದೆಗೆ ದೂರು ಹೇಳುವ ಮಾದರಿಯ ಕೀರ್ತನೆಯಿದು. ಭಗವದನುಸಂಧಾನದ ನಿಂದಾಸ್ತುತಿ ನಮೂನೆಯೂ ಹೌದು.

ಅರ್ಥ– ಗೋಪಿ = ಸಾಕು ತಾಯಿ ಯಶೋದೆ

೧. ಸಟೆ = ಸುಳ್ಳು
ಕುಂಜರಗಮನೆ = ಆನೆಯ ನಡಿಗೆಯ ಗಂಭೀರೆ
ಕಂಜಲೋಚನೆ = ಕಮಲದಂಥ ಕಣ್ಣುಳ್ಳವಳು
ಕುಚ = ಸ್ತನ
೨. ನುಲಿ = ಹಗ್ಗ, ಹುರಿ;
೩. ಜಟ್ಟಿಂಗ = ಗೊಲ್ಲರ ಗ್ರಾಮದೇವರು
ತುಡುಗು = ಕಳ್ಳತನ
೪. ಓರಗೆ = ಸಮಾನ ವಯಸ್ಸಿನ
ಕುಬಸ (<ಕುಪ್ಪುಸ) = ರವಕೆ
ತೋರ = ದಪ್ಪ
ಉಂಚ = ಎತ್ತರವಾದ
ಕಡಹ = ಸ್ನಾನಘಟ್ಟ
೫. ಅಡರು = ಹತ್ತು
ಕಿಟ್ಟ = ಕೃಷ್ಣ
ಪುಟ್ಟ = ಮುದ್ದು ಬಾಲಕ

೬. ದಗಡಿ = ಜಾರೆ
ಪುಗಡಿ ಹಾಕು = ಪಲ್ಟಿ ಹೊಡಿ, ಲಾಗ ಹಾಕು, ಅಪ್ಪಾಳೆ ತಿಪ್ಪಾಳೆ ಆಡು
೭. ಎಡೆ = ಗುಂಪು
ಕೋಡಗ = ಕೋತಿ
ಕೊರವ = ಕೊರಮ
೮. ಅಣುಗ = ಪ್ರೀತಿಪಾತ್ರ ಮಗ
ಬಂಡು = ದಂಗೆ

* * * *



## ೨೧೬
## ಶಂಕರಾಭರಣ – ಏಕತಾಳ

ಇಂದು ಸೈರಿಸಿರಿ ಶ್ರೀಕೃಷ್ಣನ ತಪ್ಪ ॥ಪ॥
ಮುಂದಕೆ ನಿಮ್ಮ ಮನೆಗೆ ಬಾರನಮ್ಮ ॥ಅ॥

ಮಗುವು ಬಲ್ಲುದೆ ಇಷ್ಟು ಬೆಣ್ಣೆಯ ಕದ್ದರೆ
ಬಿಗಿಯಬಹುದೇ ಶ್ರೀ ಚರಣವನು
ಅಗಣಿತ ಮಹಿಮನ ಅಂಜಿಸಲೇಕಮ್ಮ
ಬಗೆಯಬಾರದೆ ನಿಮ್ಮ ಮಕ್ಕಳಂತೆ ॥೧॥

ಹಸುಮಗುವನು ಕಂಡು ಮುದ್ದಿಸಲೊಲ್ಲದೆ
ಹುಸಿಗ ಕಳ್ಳನೆಂದು ಕಟ್ಟುವಿರಿ
ವಸುಧೆಯೊಳಗೆ ನಾನೊಬ್ಬಳೆ ಪಡೆದೆನೆ ನಿಮ್ಮ
ಹಸುಮಗುವಿನಂತೆ ಭಾವಿಸಬಾರದೆ ॥೨॥

ಎಷ್ಟು ಸಾರಿಯು ನಾ ಬೇಡವೆಂದರೆ ಕೇಳ
ದುಷ್ಟ ಮಕ್ಕಳ ಕೂಡೆ ಒಡನಾಟವ
ಕಟ್ಟಿದ ನೆಲುವಿನ ಬೆಣ್ಣೆಯನೀವೆನು
ಬಿಟ್ಟು ಕಳುಹಿರಮ್ಮ ಆದಿಕೇಶವನ ॥೩॥

ಭಾವ– ತಾಯಿಯಾದ ಯಶೋಧೆ ಗೋಪಿಕಾಸ್ತ್ರೀಯರ ಎದುರು ತನ್ನ ಮಗ ಕೃಷ್ಣನನನ್ನು ಕ್ಷಮಿಸಿ ಬಿಟ್ಟು ಕಳಿಸಿ ಎಂದು ಕೇಳಿಕೊಳ್ಳುವ ತಾಯ್ತನದ ಕೋರಿಕೆ ರೂಪದಲ್ಲಿದೆ ಈ ಕೀರ್ತನೆ.

ಅರ್ಥ– ಹುಸಿಗ = ಸುಳ್ಳುಗಾರ
ವಸುಧೆ = ಪ್ರಪಂಚ
ಹಸುಮಗು = ಎಳೆಯಮಗು
ನೆಲುವು = ಹಾಲುಮೊಸರು ಇಡಲು ಜಂತೆಗೆ ನೇತುಕಟ್ಟಿರುವ ಹಗ್ಗದ ಸಾಧನ.

* * * *



## ೨೧೮
## ಹಿಂದುಸ್ತಾನಿ – ಛಾಪು ತಾಳ

ಗೊಲ್ಲರಾ ಮನೆಯ ಪೊಕ್ಕು
ಗುಲ್ಲು ಮಾಡುವುದೇನಲ– ಬಲು
ಲಲ್ಲೆ ಮಾಡುವುದೇನಲ ॥ಅ॥

ಹಾಲು ಮೊಸರು ಘೃತವು ನೆಲುವಿನ
ಮೇಲೆ ಇಟ್ಟ ಬೆಣ್ಣೆಯ
ಬಾಲಕರಿಗಿಲ್ಲದಲೆ ಸುರಿದು
ಹಾಲುಗಡಿಗೆಯನೊಡೆದೆಲ ॥೧॥

ಸಣ್ಣ ಮಕ್ಕಳ ಕಣ್ಣ ಮುಚ್ಚಿ
ಹುಣ್ಣಿಮೆ ಬೆಳದಿಂಗಳಲಿ
ಬಣ್ಣ ಬಣ್ಣದ ಮಾತನಾಡಿ
ಸಣ್ಣ ಕೆಲಸಕ್ಕೆಳೆದೆಲ ॥೨॥

ಸುದತಿಯೊಬ್ಬಳು ದಧಿಯ ಮಥಿಸುತ
ಒದಗಿದ ಬೆಣ್ಣೆಯ ತೆಗೆಯಲು
ಮದನಕದನಕೆ ಕೆಡಹಿ ಮಾನಿನಿ
ಒದರಿದರು ನೀ ಬಿಡೆಯಲ ॥೩॥

ಕಿಟ್ಟ ನಾನಿನಗೆಷ್ಟು ಹೇಳಲಿ
ದುಷ್ಟ ಬುದ್ಧಿಯ ಬಿಡೆಯಲ
ಇಷ್ಟು ಹರಳಿಸಿ ರಟ್ಟು ಯಾತಕೆ
ಬಿಟ್ಟು ಮಧುರೆಗೆ ಪೋಗೆಲ ॥೪॥

**ಕೇಶವ ವಿಠ್ಠಲ ನಿನ್ನನು**
**ಕೂಸು ಅಂದವರ್ಯಾರಲೊ– ಹಸು**
**ಗೂಸು ಅಂದವರ್ಯಾರಲೊ**
**ದೇಶದೊಳಗೆ ವಾಸವಾಗಿಹ ಬೇಲೂರು ಚೆನ್ನಕೇಶವ ॥೫॥**

ಭಾವ– ಕೃಷ್ಣನ ಕೀಟಲೆ, ಪೋಲಿತನಗಳನ್ನು ಸಹಿಸದೆ, ಇಲ್ಲಿಂದ ಮಧುರೆಗಾದರೂ ಹೋಗಿಬಿಡು, ಇಲ್ಲಯ ಜನ ನೆಮ್ಮದಿಯಿಂದ ಇದ್ದಾರು– ಎಂದು ಯಶೋಧೆ ಬುದ್ಧಿ ಹೇಳುವ ಆಶಯವನ್ನೊಳಗೊಂಡಿದೆ ಈ ಕೀರ್ತನೆ.

ಅರ್ಥ– ಗುಲ್ಲು = ಗಲಾಟೆ, ಪುಕಾರು
ಲಲ್ಲೆ = ಗದ್ದಲ
ಘೃತ = ತುಪ್ಪ
ಸುರಿದು = ಸೇವಿಸಿ
ಸಣ್ಣ ಕೆಲಸ = ಕೆಟ್ಟ ಕೆಲಸ
ಸುದತಿ = ಹೆಣ್ಣು
ದಧಿ = ಮೊಸರು
ಮದನ = ಮನ್ಮಥ
ಕದನ = ಜಗಳ
ಮದನಕದನ = ಸಂಭೋಗ ಕ್ರೀಡೆ
ಮಾನಿನಿ = ಹೆಣ್ಣು
ಒದರಿದರು = ಕೂಗಿದರು, ಚೀರಿದರು
ಕಿಟ್ಟ = ಕೃಷ್ಣ
ಹರಳಿಸಿ= ಕಾಮಿಸಿ
ರಟ್ಟು = ಬಯಲು, ಪ್ರಕಟ

* * * *



## ೨೧೯
## ಪೂವಿ – ಅಟತಾಳ

**ಊರಿಗೆ ಬಂದರೆ ದಾಸಯ್ಯ– ನಮ್ಮ**
**ಕೇರಿಗೆ ಬಾ ಕಂಡ್ಯ ದಾಸಯ್ಯ ॥ಪ॥**

**ಕೈಲಿ ಕೋಲು ಕೊಳಲು ದಾಸಯ್ಯ**
**ಕಲ್ಲಿಗೆ ವರವಿತ್ತೆ ದಾಸಯ್ಯ**
**ಮಲ್ಲನ ಮರ್ದಿಸಿ ಮಾವನ ಮಡುಹಿದ**
**ನೀಲ ಮೇಘಶ್ಯಾಮ ದಾಸಯ್ಯ ॥೧॥**

**ಕೊರಳೊಳು ವನಮಾಲೆ ದಾಸಯ್ಯ– ಬಲು**
**ಗಿರಿಯನು ನೆಗಹಿದೆ ದಾಸಯ್ಯ**
**ಇರುಳು ಹಗಲು ನಿನ್ನ ಕಾಣದೆ ಇರಲಾರೆ**
**ಮರುಳು ಮಾಡುವಂಥ ದಾಸಯ್ಯ ॥೨॥**

**ಆದಿನಾರಾಯಣ ದಾಸಯ್ಯ**
**ಮೋದದೊಂದು ಸಾಸಿರ ನಾಮದ ದಾಸಯ್ಯ**
**ಮೇದನಿಯೊಳು ಪುಟ್ಟಿ ಗೋವ್ಗಳ ಕಾಯ್ದ**
**ಆದಿಕೇಶವರಾಯ ದಾಸಯ್ಯ ॥೩॥**

ಭಾವ– ದಾಸಯ್ಯನ ರೂಪಕದಲ್ಲಿ ಹೆಣ್ಣೊಬ್ಬಳು ಕೃಷ್ಣನಿಗೆ ಕರೆಕೊಡುವ ಆಶಯವನ್ನು ಈ ಕೀರ್ತನೆ ಒಳಗೊಂಡಿದೆ.

ಅರ್ಥ– ಮಡುಹಿದ = ಕೊಂದ
ಮರ್ದಿಸಿ = ಸಂಹರಿಸಿ

ನೀಲಮೇಘಶ್ಯಾಮ = ಕೃಷ್ಣ
ನೆಗಹು = ಎತ್ತು
ಮೋದ = ಸಂತೋಷ
ಮೇದಿನಿ = ಭೂಮಿ

* * * *



## ೨೨೦
## ಶಂಕರಾಭರಣ – ಆಟ

ಹಣ್ಣು ಕೊಂಬುವ ಬನ್ನಿರಿ– ಹರಿದಾಸರು
ಹಣ್ಣು ಕೊಂಬುವ ಬನ್ನಿರಿ ॥ಪ॥

ಚಿನ್ನ ಬಾಲಕೃಷ್ಣನೆಂಬ
ಕನ್ನೆಗೊನೆ ಬಾಳೆಹಣ್ಣು ॥ಅ॥

ಸುತ್ತೇಳು ಲೋಕದಿ ಸುರರು ಬಿತ್ತಿದ ಹಣ್ಣು
ಭಕ್ತರ ಬಾಯೊಳು ನೆನೆವ ಹಣ್ಣು
ಅರ್ತಿಯುಳ್ಳವರೆಲ್ಲ ಕೊಳ್ಳಿ ಬೇಕಾದರೆ
ನಿತ್ಯ ಮಾಧವನೆಂಬ ಅಚ್ಚ ಮಾವಿನ ಹಣ್ಣು ॥೧॥

ಅಜನ ಪಡೆದ ಹಣ್ಣು ಗಜವ ಕಾಯ್ದ ಹಣ್ಣು
ನಿಜಮುನಿಗಳಿಗೆ ತೋರಿಸಿದ ಹಣ್ಣು
ತ್ರಿಜಗವಂದಿತ ಪಾಲ್ಗಡಲೊಡೆಯನ ಹಣ್ಣು
ಸುಜನ ಭಕ್ತರೆಲ್ಲ ಕೊಳ್ಳ ಬನ್ನಿರಿ ಹಣ್ಣು ॥೨॥

ತುರುವ ಕಾಯ್ದ ಹಣ್ಣು ಉರಗನ ತುಳಿದ ಹಣ್ಣು
ಕರೆದರೆ ಕಂಬದೊಳು ಓಯೆಂಬ ಹಣ್ಣು
ಮರುಗುವ ಧ್ರುವನಿಗೆ ಪಟ್ಟಗಟ್ಟಿದ ಹಣ್ಣು
ಕರುಣಾಳು ಕಾಗಿನೆಲೆಯಾದಿಕೇಶವ ಹಣ್ಣು ॥೩॥

ಭಾವ– ಹಣ್ಣಿನ ರೂಪಕದಲ್ಲಿ ಭಕ್ತರ ಮುಂದಿಟ್ಟು ಗುಣಗಾನ ಮಾಡಿದ್ದಾರೆ ಕನಕದಾಸರು.

ಅರ್ಥ– ಕನ್ನೆಗೊನೆ = ಮೀಸಲಳಿಯದ ಗೊನೆ, ಎಂಜಲಾಗಿರದ ಗೊನೆ.

೧. ಅರ್ತಿ = ಪ್ರೀತಿ
೨. ಅಜ = ಬ್ರಹ್ಮ
೩. ತುರು = ಗೋವು
ಕರೆದರೆ..... ಹಣ್ಣು = ನರಸಿಂಹ

* * * *



## ೨೨೧
## ಮುಖಾರಿ – ಝಂಪೆತಾಳ

ಕೊಕೊಕೋ ಎನ್ನಿರೊ ಕುಂಭಿನಿಯವರೆಲ್ಲ
ಕೊಕೊಕೋ ಎನ್ನಿರೊ– ನಮ್ಮ ॥ಪ॥

ಗೋಕುಲದೊಳಗೊಬ್ಬ ಕಳ್ಳ ಬರುತಾನೆಂದು
ಕೊಕೊಕೊ ಎನ್ನಿರೊ ॥ಅ॥

ಹೊದ್ದಿ ಮೊಲೆಯನುಂಡವಳಸುವನೆ ಕೊಂದ
ಮುದ್ದುಗಾರ ಕಳ್ಳ ಕೊಕೊಕೋ ಎನ್ನಿರೊ
ಕದ್ದುಕೊಂಡೊಯ್ವ ರಕ್ಕಸರನೆಲ್ಲರ ಕಾಲ
ಲೊದ್ದೊರಸಿದ ಕಳ್ಳ ಕೊಕೊಕೋ ಎನ್ನಿರೊ
ಹದ್ದು ಹಗೆಯ ಹಾಸಿಗೆಯ ಮೇಲೊರಗಿದ
ಮುದ್ದುಗಾರ ಕಳ್ಳ ಕೊಕೊಕೋ ಎನ್ನಿರೊ
ಅರ್ಧದೇಹನ ಕೈಯ ತಲೆಯ ಕಪಟದಿಂದ
ಕದ್ದು ಬಿಸುಟ ಕಳ್ಳ ಕೊಕೊಕೋ ಎನ್ನಿರೊ ॥೧॥

ಕೆಂಜಾಜಿಯ ಮಣಿ ಮಲ್ಲಿಗೆ ದಂಡೆಯ
ರಂಜೆ ಕದ್ದ ಕಳ್ಳ ಕೊಕೊಕೋ ಎನ್ನಿರೊ
ಗುಂಜಿಯ ದಂಡೆಯ ಕಲ್ಲಿಯ ಚೀಲದ
ಮಂಜು ಮೈಯ್ಯ ಕಳ್ಳ ಕೊಕೊಕೋ ಎನ್ನಿರೊ
ಅಂಜದೆ ಗೊಲ್ಲರ ಹಳ್ಳಿಯೊಳಗೆ ಹಾಲ
ನೆಂಜಲಿಸಿದ ಕಳ್ಳ ಕೊಕೊಕೋ ಎನ್ನಿರೊ
ಸಂಜೆ ಬೈಗಿನಲ್ಲಿ ಕರೆಯುವ ಸತಿಯರ
ಅಂಜಿಸಿದ ಕಳ್ಳ ಕೊಕೊಕೋ ಎನ್ನಿರೊ ॥೨॥

**ಕೇಸರಿ ಎಂಬ ರಕ್ಕಸರನೆಲ್ಲರ ಕೊಂದ**
**ವೇಷಧಾರಿ ಕಳ್ಳ ಕೊಕೊಕೋ ಎನ್ನಿರೊ**
**ಮೋಸದಿ ಬಲಿಯ ದಾನವ ಬೇಡಿ ಅನುದಿನ**
**ಬೇಸರಿಸಿದ ಕಳ್ಳ ಕೊಕೊಕೋ ಎನ್ನಿರೊ**
**ಮೀಸಲ ಅನ್ನವ ಕೂಸಾಗಿ ಸವಿದುಂಡ**
**ವೇಷಧಾರಿ ಕಳ್ಳ ಕೊಕೊಕೋ ಎನ್ನಿರೊ**
**ಸಾಸಿರ ನಾಮಕ್ಕೆ ಹೆಸರಾದ ಚಪ್ಪನ್ನ**
**ದೇಶ ದಾರಿಗಳ್ಳ ಕೊಕೊಕೋ ಎನ್ನಿರೊ** ॥೩॥

**ಆಕಳೊಳಾಡಿ ಪರಲೋಕಕೆ ನಡೆದಂಥ**
**ಆಕೆವಾಳ ಕಳ್ಳ ಕೊಕೊಕೋ ಎನ್ನಿರೊ**
**ಭೂಕಾಂತೆಯ ಸೊಸೆಯರನೆತ್ತಿ ಬಲುಹಿಂದ**
**ನೂಕಿ ತಂದ ಕಳ್ಳ ಕೊಕೊಕೋ ಎನ್ನಿರೊ**
**ಗೋಕುಲದೊಳು ಪುಟ್ಟಿ ಗೊಲ್ಲರೆಲ್ಲರ ಕೈಲಿ**
**ಸಾಕಿಸಿಕೊಂಡ ಕಳ್ಳ ಕೊಕೊಕೋ ಎನ್ನಿರೊ**
**ಸಾಕಾರನಾಗಿ ಈ ಲೋಕವನೆಲ್ಲವ**
**ಆಕ್ರಮಿಸಿದ ಕಳ್ಳ ಕೊಕೊಕೋ ಎನ್ನಿರೋ** ॥೪॥

**ಕ್ಷೀರವಾರಿಧಿ ವೈಕುಂಠನಗರಿಯನು**
**ಸೇರಿಸಿದ ಕಳ್ಳ ಕೊಕೊಕೋ ಎನ್ನಿರೊ**
**ದ್ವಾರಾವತಿಯನು ನೀರೊಳು ಬಚ್ಚಿಟ್ಟ**
**ಊರುಗಳ್ಳ ಬಂದ ಕೊಕೊಕೋ ಎನ್ನಿರೊ**
**ದ್ವಾರಕೆಯಾಳುವ ಉಭಯದಾಸರ ತನ್ನ**
**ಊರಿಗೊಯ್ದ ಕಳ್ಳಕೊಕೊಕೋ ಎನ್ನಿರೊ**
**ಕಾರಣಾತ್ಮಕ ಕಾಗಿನೆಲೆಯಾದಿಕೇಶವ**
**ಕ್ಷೀರ ಬೆಣ್ಣೆಯ ಕಳ್ಳ ಕೊಕೊಕೋ ಎನ್ನಿರೊ** ॥೫॥

ಭಾವ– ನಿಂದಾಸ್ತುತಿ ರೂಪದಲ್ಲಿರುವ ಈ ಕೀರ್ತನೆಯ ತಂತ್ರ ಮೋಹಕವಾಗಿದೆ. ಹುಡುಗರನ್ನು ಗುಂಪು ಕೂಡಿಸಿ, ಕೃಷ್ಣ ಬಂದಾಗ ಗುಲ್ಲೆಬ್ಬಿಸಿ ಎಂದು



ಕರೆಕೊಟ್ಟ ರೀತಿಯಲ್ಲಿದೆ– ಆಳುವ ಪಕ್ಷದ ನಾಯಕನ ವಿರುದ್ಧ ಜನರನ್ನು ಎತ್ತಿ ಕಟ್ಟುವ ವಿರೋಧಪಕ್ಷದ ಕುತಂತ್ರದ ಹಾಗೆ.

ಅರ್ಥ– ಕೊಕೊಕೊ ಎನ್ನು = ಗುಲ್ಲೆಬ್ಬಿಸು, ಲೇವಡಿ ಮಾಡು.

೧. ಹೊದ್ದಿ = ತಬ್ಬಿಕೊಂಡು
ಅಸು = ಪ್ರಾಣ
ಒರಸಿದ = ನಾಶ ಮಾಡಿದ
ಹದ್ದುಹಗೆಯ = ಆದಿಶೇಷನ
ಒರಗಿದ = ಮಲಗಿದ
ಅರ್ಧದೇಹನ = ಶಿವನ (ಶಿವನ ಕೈಗೆ ಅಂಟಿಕೊಂಡ ಬ್ರಹ್ಮ ಕಪಾಲವನ್ನು ಕಾಣದ ಹಾಗೆ ಕಿತ್ತು ಬಿಸಾಡಿದ ಪ್ರಸಂಗ)

೨. ದಂಡೆಯ = ಹಾರದ
ರಂಜೆ = ಭೂಷಣ, ಅಲಂಕಾರ;
ಗುಂಜೆ = ಗುಲಗಂಜಿ
ಕಲ್ಲಿಯ ಚೀಲ = ಗಟ್ಟಿದಾರದಲ್ಲಿ ಗಂಟು ಹಾಕುತ್ತಾ ಹೆಣೆದ ಕಂಡಿಗಳನ್ನುಳ್ಳ (ಕಣ್ಣುಳ್ಳ) ಚೀಲ.
ಮಂಜುಮೈಯ = ನೀಲಿಬಣ್ಣದ ದೇಹ
ಬೈಗು = ಸಾಯಂಕಾಲ

೩. ಬೇಸರಿಸಿದ = ಬೇಸರ ಮಾಡಿಕೊಂಡ (ಅಂದರೆ ಬಲಿಯ ಬಗೆಗಿನ ಪ್ರೀತಿ ಅನುಕಂಪದಿಂದ)
ಮೀಸಲು ಅನ್ನ = ದೇವರ ನೈವೇದ್ಯಕೆಂದು ಕಾದಿರಿಸಿದ ಅನ್ನ
ಚಪ್ಪನ್ನ = ಐವತ್ತಾರು
ದಾರಿಗಳ್ಳ = ರಾಜಮಾರ್ಗದ ದರೋಡೆಕೋರ

೪. ಆಕಳು =ಹಸು
ಆಕೆವಾಳ = ಶೂರ
ಭೂಕಾಂತೆಯ = ಭೂದೇವಿಯ

ಸೊಸೆಯರನು = ಮಗ ನರಕಾಸುರನ ಹೆಂಡತಿಯರನ್ನು
ಬಲುಹಿಂದ = ಸಾಮರ್ಥ್ಯದಿಂದ, ಬಲಾತ್ಕಾರದಿಂದ
ಸಾಕಾರವಾಗಿ = ಸಗುಣ ರೂಪದಲ್ಲಿ

೫. ಕ್ಷೀರವಾರಿಧಿ = ಹಾಲಿನ ಸಮುದ್ರ
ದ್ವಾರಾವತಿ..... ಬಂದ = ಜರಾಸಂಧ ಆಗಾಗ್ಗೆ ದಂಡೆತ್ತಿ ಬಂದು ಕಿರುಕುಳ ಕೊಡುತ್ತಿದ್ದುದರಿಂದ ಪಟ್ಟಣವನ್ನು ಸಮುದ್ರ ಮಧ್ಯದಲ್ಲಿ ಕಟ್ಟಿಸಿದ ಎಂದು ಕಥಾ ಪ್ರತೀತಿ.
ದ್ವಾರಕೆಯಾಳುವ ಉಭಯದಾಸರ = ಅಲ್ಲಿದ್ದ ಎರಡು ವಿಷ್ಣು ದೇವಾಲಯಗಳ ವಿಗ್ರಹದ್ವಯಗಳನ್ನು ಕೊಂಡೊಯ್ದು ಎಂದರ್ಥವೆ? (ಅಸ್ಪಷ್ಟ)

* * * *



## ೨೨೨
## ಕಲ್ಯಾಣಿ – ಆದಿತಾಳ

**ಬಂದದೊಂದು ಚೆಂದ ಸಾಲದೆ ಗೋಪಿಯ ಕಂದ ॥ಪ॥**

**ವಿಕಟ ಪೂತನಿಯ ಕೊಂದು**
**ಶಕಟಾಸುರನ ಪಾದದಿ ತುಳಿದು**
**ಧಿಕಿಟ ಧಿಕಿಟ ಎನ್ನುತಲಿ**
**ಕುಕಿಲಿರಿದು ಕುಣಿಯುತ ಮನೆಗೆ ॥೧॥**

**ಗೋವರ್ಧನ ಪರ್ವತವನೆತ್ತಿ**
**ಗೋವುಗಳ ಕಾಯ್ದು ತನ್ನ**
**ಮಾವ ಕಂಸನ ಕೊಂದು**
**ಕಾವನ ಜನಕ ಪಾಡುತ ಮನೆಗೆ ॥೨॥**

**ಫಾಲನೇತ್ರ ಚಂದ್ರಶೇಖರನ**
**ಸುಲಭದಿಂದ ಬಾಧೆಯ ಬಿಡಿಸಿ**
**ಪಾಲಿಸುವ ಕರುಣದಿಂದ**
**ಬೇಲಾಪುರದ ಚೆನ್ನ ಕೇಶವ ॥೩॥**

ಭಾವ– ಶ್ರೀಕೃಷ್ಣನ ಲೀಲೆಗಳನ್ನು ಸ್ತುತಿಸುವ ಕೀರ್ತನೆ ಇದು.

ಅರ್ಥ– ವಿಕಟ = ದುಷ್ಟ, ಕೆಟ್ಟ
ಕುಕಿಲಿರಿದು = ಕೇಕೆ ಹಾಕುತ್ತಾ
ಕಾವನ ಜನಕ = ಮನ್ಮಥನ ತಂದೆ (ಕೃಷ್ಣ)
ಫಾಲನೇತ್ರ = ಹಣೆಗಣ್ಣನಾದ ಶಿವ

ಚಂದ್ರಶೇಖರ = ಚಂದ್ರನನ್ನು ಧರಿಸಿದವನು ಶಿವ
ಸುಲಭ..... ಬಿಡಿಸಿ = ಕೈಗಂಟಿದ ಬ್ರಹ್ಮಕಪಾಲದಿಂದ ಪಾರು ಮಾಡಿ
ಬೇಲಾಪುರ = ಬೇಲೂರು

* * * *



## ೨೨೩
## ಮುಖಾರಿ – ಛಾಪು

ನೆನೆಯೋ, ಎಲೆ ಮನವೆ, ನವನೀತ ಕೃಷ್ಣನ ॥ಪ॥
ನೆನೆಯೋ ಗೋಪೀತನಯ ಕಂಸನ ಮನೆಯ ಕೊಂಡಾತನ ॥ಅ॥

ತರಳ– ಚೆಲುವ ಮುಂಗುರುಳ
ಹುಲಿಯುಗುರ ಕೊರಳ
ಉಂಗುರಗಳ ಬೆರಳ
ಕಾಲಿಗೆ ಕಟ್ಟಣಿಳ
ನಿಲುವುತಿಹ ದುರುಳ
ತನದಲಿ ತುರುಗಳ ಕಾಯ್ದವನ ॥೧॥

ವಿಷವನುಣಿಸಿ ತಲ್ಲಣಿಸುವ
ಹುರಿತ ಸಹೊಸವ (ದುರಿತ ಸಹವಾಸವ?)
ಆದರಾವಿ ದಾಸವ (ಅದರ ವಿಲಾಸವ?)
ನೋಡಿದರೆ ಶಿಸುವಾಗಿ
ಬಲು ಅಸುರರ ಗೆಲಿದವನ ॥೨॥

ಸಲಯ ಕಾಳಿಂಗನ
ತಲೆಪಿಡಿದ ಕಂಗೊಲೆಯ
ಮೊರೆ ಕೇಳಿ ಬಲಿಯ
ಅವನ ಕೋಮಲೆಯ ಕಿವಿಗೆ ಪೂಮಾಲೆಯಾದ ನೀಟುಗಾಯ
ನೆಲೆಯಾದಿಕೇಶವನ ॥೩॥

ಭಾವ– ಶ್ರೀ ಕೃಷ್ಣನ ಲೀಲೆಗಳನ್ನು ಕೊಂಡಾಡುವ ಕೀರ್ತನೆ ಇದು.

ಅರ್ಥ– ನವನೀತ = ಬೆಣ್ಣೆ
ನೀಟುಗಾಯ (<ನೀಟು+ಕಾಯ) = ಸುಂದರ

* * * *



## ೨೨೪
## ಆನಂದ ಭೈರವಿ – ಅಟತಾಳ

ಆನೆ ಬಂದಿದೆ ಇದಿಗೊ ಮದ್ದಾನೆ ॥ಪ॥
ಜ್ಞಾನಿಗಳೊಳಾಡುವ ಮದ್ದಾನೆ ॥ಅ॥

ದೇವಕಿಯೊಳು ಪುಟ್ಟಿದಾನೆ– ವಸು
ದೇವನ ಪೆಸರೊಳ್ಳೈತಂದ ಮದ್ದಾನೆ
ಶ್ರೀ ವಾಸುದೇವನೆಂಬಾನೆ– ಗೋಪಿ
ದೇವಿಯ ಗೃಹದೊಳಾಡುವ ಪುಟ್ಟಾನೆ ॥೧॥

ನೀಲವರ್ಣದ ನಿಜದಾನೆ– ಸ್ವರ್ಣ
ಮಾಲೆಗಳಿಟ್ಟು ಮೆರೆವ ಚಲುವಾನೆ
ಶ್ರೀಲೋಲನೆನಿಪ ಪಟ್ಟದಾನೆ– ದುಷ್ಟ
ಕಾಳಿಂಗನ ಪೆಡೆಯ ಮೆಟ್ಟಿ ತುಳಿದಾನೆ ॥೨॥

ಬಾಲೇಂದು ಮುಖದ ಮರಿಯಾನೆ– ಕದ್ದು
ಪಾಲನ್ನು ಕುಡಿದ ಮರಿಯಾನೆ
ಕೈಲಿ ಗಿರಿಯನೆತ್ತಿದಾನೆ
ಕಾಳ್ಗಿಚ್ಚನ್ನು ನುಂಗಿದ ಪಟ್ಟದಾನೆ ॥೩॥

ಧೇನುಕಾಸುರನ ಕೊಂದಾನೆ
ತನಗೆ ಜೋಡಿಲ್ಲದಿಹ ನಿಜದಾನೆ
ಮಾನವರಿಗೆಲ್ಲ ಸಿಲ್ಕದಾನೆ
ಶೌನಕಾದಿಗಳೊಂದಿಗಿಪ್ಪಾನೆ ॥೪॥

**ಮಲ್ಲರೊಡನೆ ಗೆಲಿದಾನೆ– ಕಡು**
**ಖುಲ್ಲ ಕಂಸನ ಕೆಡಹಿದಾನೆ– ವಿದ್ಯೆ ಸಾಂದೀಪ**
**ರಲಿ ಕಲಿತ ಮರಿಯಾನೆ**
**ಸಲೆ ಭಕ್ತರ ಕಾವ ಪುಟ್ಟಾನೆ ॥೫॥**

**ತರಳೆ ರುಕ್ಮಿಣಿಯ ತಂದಾನೆ– ಬಹು**
**ಕರುಣದಿಂ ಪಾಂಡವರ ಪೊರೆದಾನೆ**
**ವರ ವೇಲಾಪುರದೊಳಿಪ್ಪಾನೆ**
**ಸಿರಿಯಾದಿಕೇಶವನೆಂಬ ಮದ್ದಾನೆ ॥೬॥**

ಭಾವ– ಆನೆಯ ರೂಪಕದಲ್ಲಿ ಶ್ರೀಕೃಷ್ಣನ ಲೀಲಾವಿನೋದಗಳನ್ನು ಕಟ್ಟಿ ಕೊಡುವ ಶಿಶುಗೀತೆಯಂತೆ ಮೇಲ್ನೋಟಕ್ಕೆ ಕಂಡರೂ ಪ್ರೌಢರಾದವರೂ ಸಹ ಹಾಡಿ ಸಂತೋಷಿಸುವಂಥ ಕೀರ್ತನೆ.

ಅರ್ಥ– ಬಾಲೇಂದು = ಬಾಲಚಂದ್ರ
ಅಸುರ =ರಾಕ್ಷಸ
ಸಲೆ = ಚೆನ್ನಾಗಿ
ವೇಲಾಪುರ = ಬೇಲೂರು
ಸಿಲ್ಕದ = ಸಿಲುಕದ, ಸಿಕ್ಕದ

* * * *



## ೨೨೫
## ಕಲ್ಯಾಣಿ – ತ್ರಿಪುಟ ತಾಳ

**ಆನೆಯ ನೋಡಿರಯ್ಯ ನೀವೆಲ್ಲರು**
**ಆನಂದ ಪಡೆಯಿರಯ್ಯ ॥ಪ॥**

**ತಾನು ತನ್ನವರೆಂಬ ಮಾನವರ ಸಲಹಿದ ॥ಅ॥**

**ಪಾಂಡು ಚಕ್ರೇಶನ ಸುತರಿಗೊಲಿದಾನೆ**
**ಗಂಡುಗಲಿ ಮಾಗಧನ ಒರಸಿದಾನೆ**
**ಹಿಂಡು ಗೋವಳರೊಳಗೆ ಹಿರಿಯನ ಕಳೆಯದಾನೆ**
**ಲಂಡರಿಗೆ ಎದೆಗೊಡುವ ಪುಂಡಾನೆ ॥೧॥**

**ಬಾಲಕನ ನುಡಿಗೇಳಿ ಖಳನ ಸೀಳಿದಾನೆ**
**ಪಾಲುಂಡು ವಿದುರನ ಸಲಹಿದಾನೆ**
**ಲೋಲಾಕ್ಷಿ ಮಾನಭಂಗಕ್ಕಕೊದಗಿದಾನೆ**
**ಖೂಳ ಶಿಶುಪಾಲನನು ಸೀಳಿದಾನೆ ॥೨॥**

**ಅಜಮಿಳನಿಗೆ ನಿಜಪದವಿಯ ಕೊಟ್ಟಾನೆ**
**ಕುಜನರೆಲ್ಲರನು ಒರಗಿಸಿದಾನೆ**
**ಅಜಪಿತ ಕಾಗಿನೆಲೆಯಾದಿಕೇಶವಾನೆ**
**ತ್ರಿಜಗವಲ್ಲಭ ತಾನು ಭಜಕರ ವಶವಾನೆ ॥೩॥**

ಭಾವ– ಶಿಶುಗೀತದ ಧಾಟಿಯಲ್ಲಿ ಕೃಷ್ಣಸ್ತುತಿಯ ಕೀರ್ತನೆ ಇದು.

ಅರ್ಥ– ಒರಸು = ನಾಶಮಾಡು

ಹಿಂಡು ಗೋವಳರೊಳಗೆ ಹಿರಿಯ = ಬಲರಾಮ (ಬಲರಾಮನನ್ನು ಕದ್ದೊಯ್ಯಲು ಬಂದ ಅಸುರನಿಗೆ ಅವಕಾಶ ಕೊಡದೆ ಬಲ ರಾಮನನ್ನು ಕೃಷ್ಣ ಉಳಿಸಿಕೊಂಡದ್ದರ ಪ್ರಸ್ತಾಪವಿಲ್ಲಿದೆ)

ಖಳ = ಹಿರಣ್ಯಕಶ್ಯಪ

ಲೋಲಾಕ್ಷಿ =ದ್ರೌಪದಿ

ಒರಗಿಸು = ಸಾಯಿಸು

ಅಜಪಿತ = ಬ್ರಹ್ಮನ ತಂದೆ (ವಿಷ್ಣು)

ವಲ್ಲಭ = ಗಂಡ, ಒಡೆಯ

* * * *



## ೨೨೬
## ನಾದನಾಮಕ್ರಿಯೆ – ಆದಿತಾಳ

ಆನೆ ಬರುತಾದೆ ನೋಡಮ್ಮ ಮದ್ದಾನೆ ಬರುತಾದೆ ॥ಪ॥

ಆನೆ ಬರುತಾದೆ ಎಲ್ಲರು ನೋಡಿರಿ ಒಂ
ದಾನೆಯ ಕೊಂದ ಮದ್ದಾನೆ
ಏನೆಂದು ಪೇಳಲಿ ಎಲ್ಲ ದಿಕ್ಕುಗಳಲಿ
ತಾನೇ ತಾನಾಗಿ ಮದ ಸೊಕ್ಕಿದಾನೆ ॥ಅ॥

ನೀರ ಮುಳುಗಿ ಖಳನ ಕೊಂದು ವೇದ ತಂದು
ಬರಮದೇವಗಿತ್ತ ಮದ್ದಾನೆ
ಕ್ರೂರ ಚಿತ್ರಗುಪ್ತನೊಡನೆ ಕಾರುಬಾರಿಗಿಳಿದ
ಜಾರ ಕೃಷ್ಣನೆಂಬ ಸೊಕ್ಕಿದಾನೆ ॥೧॥

ದಶದಿಕ್ಕಿನೊಳು ಘಂಟೆ ಘಣಿರೆಂದು ಬರುತ್ತಿದೆ
ಕುಸುಮಶರನ ಪೆತ್ತ ಮದ್ದಾನೆ
ದಶಕಂಠನ ಕೊಂದು ಅನುಜಗೆ ಪಟ್ಟಗಟ್ಟಿದ
ದಶರಥಸುತನೆಂಬ ಮದ ಸೊಕ್ಕಿದಾನೆ ॥೨॥

ಗಂಧ ಕಸ್ತೂರಿ ಬೊಟ್ಟು ಗಮಕದಿಂದಲಿ ಇಟ್ಟು
ಗೊಂದಲಗಡಿಬಿಡಿ ಸುರಲೋಕ ಅಮ್ಮಮ್ಮ
ಬೆಂಬಿಡದೆ ದೈತ್ಯರನು ಕೊಂದ ಗುಣ ಸಂಪನ್ನ
ಸುಂದರ ಕೃಷ್ಣನೆಂಬ ಮದ ಸೊಕ್ಕಿದಾನೆ ॥೩॥

ಸಾವಿರ ತೋಳವನ ಸರಸದಿಂದಲಿ ಕಡಿದ
ಭುವನ ರಕ್ಷಕನಾದ ಮದ್ದಾನೆ

**ಯೌವನದ ಗೋಪಿಯರ ಕಣ್ಮಣಿ ಎನಿಪ ವಸು**
**ದೇವಸುತನೆಂಬ ಮದ ಸೊಕ್ಕಿದಾನೆ ॥೪॥**

**ಗರುಡವಾಹನವೇರಿ ಧಿಮಕೆಂದು ಬರುತಾನೆ**
**ಸರುವ ಲೋಕರಕ್ಷಕನೆಂಬ ಮದ್ದಾನೆ**
**ಉರೆ ಪೂತನಿಯ ಹೀರಿ ಮಾವ ಕಂಸನ ಕೊಂದ**
**ಸಿರಿಯಾದಿಕೇಶವನೆಂಬ ಮದ ಸೊಕ್ಕಿದಾನೆ ॥೫॥**

ಭಾವ- ಆನೆಯ ರೂಪದಲ್ಲಿ ಶ್ರೀಕೃಷ್ಣನ ಲೀಲೆಗಳನ್ನು ವರ್ಣಿಸುವ ಕೀರ್ತನೆ ಇದು.

ಅರ್ಥ- ಬರಮದೇವ = ಬ್ರಹ್ಮ
ಕುಸುಮಶರ = ಮನ್ಮಥ
ದಶಕಂಠ = ರಾವಣ
ಅನುಜ = ತಮ್ಮ
ಗಮಕ = ಸೊಗಸು, ಗಾಂಭೀರ್ಯ
ಸಾವಿರ ತೋಳವನು = ಬಾಣಾಸುರ
ಉರೆ = ವಿಶೇಷವಾಗಿ
ಭುವನ = ಪ್ರಪಂಚ

* * * *



# ದಶಾವತಾರ ಲೀಲೆಗಳು

**Blank**



## ೨೨೮
## ಪರಜು ಆದಿತಾಳ

**ರಂಗನೆಂಥವನೆಂಥವನೆಲೆ ತಂಗಿ**
**ರಂಗನಂತರಂಗ ಹಲವಂಗ ತಿಳಿಯದು ಬ್ರಹ್ಮಾದಿಗಳಿಗೆ ॥ಪ॥**

**ಆಗಮವ ತಂದಿಹನೆ– ರಂಗ**
**ಬೇಗದಿ ಗಿರಿಯ ಪೊತ್ತಿಹನೆ**
**ಮೂಗಿಂದ ಭೂಮಿಯನೆತ್ತಿದನೆ– ಕಂದ**
**ಕೂಗಲು ಕಂಬದಿ ಬಂದ ಕಾಣಕ್ಕ ॥೧॥**

**ಧರೆಯ ಈರಡಿ ಮಾಡಿದನೆ– ಭೂ**
**ಸುರರಿಗೆ ದಾನವ ನೀಡಿದನೆ**
**ನೆರೆದ ಕಪಿ ಹಿಂಡು ಕೂಡಿದನೆ– ಫಣಿ**
**ಶಿರದಲಿ ಕುಣಿಕುಣಿದಾಡಿದನಕ್ಕ ॥೨॥**

**ಉಟ್ಟದ್ದು ಬಿಟ್ಟು ತಾ ನಿಂತಿಹನೆ– ರಂಗ**
**ದಿಟ್ಟಾದ ಕುದುರೆಯನೇರಿದನೆ**
**ದುಷ್ಟರನೆಲ್ಲ ಅಳಿದಿಹನೆ– ನಮ್ಮ**
**ಬಿಟ್ಟಾದಿಕೇಶವರಾಯ ಕಾಣಕ್ಕ ॥೩॥**

ಭಾವ– ವಿಷ್ಣು ಮಹಿಮೆಯನ್ನು ಅವನ ದಶಾವತಾರಗಳ ಮೂಲಕ ಈ ಕೀರ್ತನೆಯಲ್ಲಿ ಕಂಡರಿಸಲಾಗಿದೆ. ಮೊದಲನೆಯ ನುಡಿಯಲ್ಲಿ ನಾಲ್ಕು, ಎರಡನೆಯ ನುಡಿಯಲ್ಲಿ ನಾಲ್ಕು ಹಾಗೂ ಮೂರನೆಯ ನುಡಿಯಲ್ಲಿ ಎರಡು– ಒಟ್ಟು ಹತ್ತು ಅವತಾರಗಳನ್ನು ಪುಟ್ಟ ಚರಣಗಳಲ್ಲಿ ಭಟ್ಟಿ ಇಳಿಸಿದ್ದಾರೆ ಕನಕದಾಸರು.

ಅರ್ಥ– ಹಲವಂಗ = ಹತ್ತಾರು ಬಗೆ, ನಿಗೂಢ
ಕಂದ = ಪ್ರಹ್ಲಾದ
ಈರಡಿ = ಎರಡು ಹೆಜ್ಜೆ
ಫಣಿ = ಸರ್ಪ
ಬಿಟ್ಟ (<ವಿಟ್ಟ) = ವಿಷ್ಣು
ಆಗಮ =ವೇದ

೧. ಆಗಮವ ತಂದಿಹನೆ = ಮತ್ಸ್ಯಾವತಾರ
ಬೇಗದಿ ಗಿರಿಯ ಪೊತ್ತಿಹನೆ = ಕೂರ್ಮಾವತಾರ
ಮೂಗಿಂದ... ನೆತ್ತಿದನೆ = ವರಾಹಾವತಾರ
ಕಂದ... ಕಾಣಕ್ಕ = ನರಸಿಂಹಾವತಾರ
೨. ಧರೆಯ... ಮಾಡಿದನೆ = ವಾಮನಾವತಾರ
ಭೂಸುರರಿಗೆ... ನೀಡಿದನೆ = ಪರಶುರಾಮಾವತಾರ
ನೆರೆದ.... ಕೂಡಿದನೆ = ರಾಮಾವತಾರ
ಫಣಿ ಶಿರದಲಿ.... ಅಕ್ಕ = ಕೃಷ್ಣಾವತಾರ
೩. ಉಟ್ಟದ್ದು... ನಿಂತಿಹನೆ = ಬೌದ್ಧಾವತಾರ
ದಿಟ್ಟಾದ.... ನೇರಿದನೆ = ಕಲ್ಕ್ಯವತಾರ

* * * *



## ೨೨೮
## ಪೂರ್ವಿ – ಅಟತಾಳ

**ಗೋವಿಂದ ಹರಿ ಗೋವಿಂದ ॥ಪ॥**
**ಗೋವಿಂದ ಪರಮಾನಂದ ಮುಕುಂದ ॥ಅ॥**

**ಮಚ್ಛ್ಯಾವತಾರದೊಳಾಳಿದನೆ– ಮಂದ**
**ರಾಚಲ ಬೆನ್ನೊಳು ತಾಳಿದನೆ**
**ಅಚ್ಛ ಸೂಕರನಾಗಿ ಬಾಳಿದನೆ– ಮದ**
**ಹೆಚ್ಚಿ ಹಿರಣ್ಯಕನ ಸೀಳಿದನೆ ॥೧॥**

**ಕುಂಭಿನಿ ದಾನವ ಬೇಡಿದನೆ– ಕ್ಷಾತ್ರ**
**ರೆಂಬುವರನು ಹತ ಮಾಡಿದನೆ**
**ಅಂಬುಧಿಗೆ ಶರ ಹೂಡಿದನೆ– ಕಮ**
**ಲಾಂಬಕ ಗೊಲ್ಲರೊಳಾಡಿದನೆ ॥೨॥**

**ವಸುದೇವನುದರದಿ ಪುಟ್ಟಿದನೆ– ಪಲ್**
**ಮಸೆವ ದನುಜರೊಡೆಗುಟ್ಟಿದನೆ**
**ಎಸೆವ ಕಾಳಿಂಗನ ಮೆಟ್ಟಿದನೆ– ಬಾ**
**ಧಿಸುವರ ಯಮಪುರಕಟ್ಟಿದನೆ ॥೩॥**

**ಪೂತನಿಯ ಮೈ ಸೋಕಿದನೆ– ಬಲು**
**ಘಾತದ ಮೊಲೆಯುಂಡು ತೇಕಿದನೆ**
**ಘಾತಕಿಯನತ್ತ ನೂಕಿದನೆ– ಗೋಪ**
**ವ್ರಾತ ಗೋಗಳನೆಲ್ಲ ಸಾಕಿದನೆ ॥೪॥**

**ಸಾಧಿಸಿ ತ್ರಿಪುರರ ಗೆಲಿದವನೆ– ಮ್ಲೇಚ್ಛರ**
**ಭೇದಿಸೆ ಹಯವೇರಿ ಕೆಲೆದವನೆ**
**ಸಾಧುಸಂತರೊಡನೆ ನಲಿದವನೆ– ಬಾಡ**
**ದಾದಿಕೇಶವ ಕನಕಗೊಲಿದವನೆ ॥೫॥**

ಭಾವ– ಭಗವಂತನ ದಶಾವತಾರ ಲೀಲೆಗಳನ್ನು ಹಾಡಿಕೊಂಡು ಕುಣಿಯುವ, ತಾಳಲಯಕ್ಕೆ ಮಣಿಯುವ ಧಾಟಿಯಲ್ಲಿ ರಚಿತವಾಗಿರುವ ಈ ಕೀರ್ತನೆಯ ಆಶಯ ಭಕ್ತಿಯೇ. ಭಕ್ತಿಯಿಂದ ಹಾಡುತ್ತಾ ತಾವು ಕುಣಿಯುವುದಲ್ಲದೆ ನೋಡುವ ಜನರನ್ನೂ ಕುಣಿಯುವಂತೆ ಮಾಡುವ ಮೋಡಿಗಾರ ಕನಕದಾಸರು ಠಾಕಣದ ಕುದುರೆಯಂತೆ ಕುಪ್ಪಳಿಸುವ ಲಯವನ್ನು ಕೀರ್ತನೆಗೆ ಆವಾಹಿಸಿದ್ದಾರೆ. ಆದಿಪ್ರಾಸವಷ್ಟೇ ಅಲ್ಲದೆ ಅಂತ್ಯ ಪ್ರಾಸವನ್ನು ಸೊಗಸಾಗಿ ತಂದಿರುವುದನ್ನು ಗಮನಿಸಬೇಕು. ಒಂದನೆಯ ನುಡಿಯಲ್ಲಿ ಆಳಿದನೆ, ತಾಳಿದನೆ, ಬಾಳಿದನೆ, ಸೀಳಿದನೆ ಎಂಬ ಮಾತುಗಳು ಎರಡನೆಯ ನುಡಿಯಲ್ಲಿ ಬೇಡಿದನೆ, ಮಾಡಿದನೆ, ಹೂಡಿದನೆ, ಆಡಿದನೆ ಎಂಬ ಮಾತುಗಳು ಮೂರನೆಯ ನುಡಿಯಲ್ಲಿ ಪುಟ್ಟಿದನೆ, ಕುಟ್ಟಿದನೆ, ಮೆಟ್ಟಿದನೆ, ಅಟ್ಟಿದನೆ ಎಂಬ ಮಾತುಗಳು ನಾಲ್ಕನೆಯ ನುಡಿಯಲ್ಲಿ ಸೋಕಿದನೆ, ತೇಕಿದನೆ, ನೂಕಿದನೆ, ಸಾಕಿದನೆ ಎಂಬ ಮಾತುಗಳು ಐದನೆಯ ನುಡಿಯಲ್ಲಿ ಗೆಲಿದವನೆ ಕೆಲೆದವನೆ, ನಲಿದವನೆ, ಒಲಿದವನೆ ಎಂಬ ಮಾತುಗಳು ಅರ್ಥಾನುಸಾರಿಯಾಗಿ ಸಹಜವಾಗಿ ಬಂದಿರುವುದನ್ನು ಗಮನಿಸಬಹುದು.

ಅರ್ಥ– ಆಳಿದನೆ = ಮುಳುಗಿದವನೆ, ಸೂಕರ = ವರಾಹ
ಕುಂಭಿನಿ = ಭೂಮಿ, ಅಂಬುಧಿ = ಸಮುದ್ರ
ಕಮಲಾಂಬಕ = ಕೃಷ್ಣ, ಉದರ = ಹೊಟ್ಟೆ
ದನುಜ = ರಾಕ್ಷಸ, ವ್ರಾತ = ಸಮೂಹ
ಗೋಪವ್ರಾತ = ಗೋಪಾಲಕರ ಸಮೂಹ

* * * *



## ೨೨೯
## ಆನಂದಭೈರವಿ – ಅಟತಾಳ

**ನಿನ್ನ ನಾನೇನೆಂದೆನೊ– ರಂಗಯ್ಯ ರಂಗ**
**ನಿನ್ನ ನಾನೇಂದೆನೊ ॥ಪ॥**

**ನಿನ್ನ ನಾನೇನೆಂದೆ ನಿಗಮಗೋಚರ ಸ್ವಾಮಿ**
**ಪನ್ನಗಶಯನ ಪಾಲ್ಗಡಲೊಡೆಯನೆ ರಂಗ ॥ಅ॥**

**ಧೀರ ಸೋಮಕ ವೇದಚೋರ ಖಳನನು ಸೀಳಿ**
**ವಾರಿಧಿಗಿಳಿದು ಪರ್ವತವನೆತ್ತಿ**
**ಧಾರಿಣಿಯನು ಕದ್ದ ದನುಜದಲ್ಲಣನಾದ**
**ನಾರಸಿಂಹ ನಿನಗೆ ನಮೊ ಎಂದೆನಲ್ಲದೆ**
**ನೀರ ಪೊಕ್ಕವನೆಂದೆನೆ– ಬೆನ್ನಲಿ ಘನ್ನ**
**ಭಾರ ಪೊತ್ತವನೆಂದೆನೆ– ಮಣ್ಣನಗೆದು**
**ಬೇರ ಮೆದ್ದವನೆಂದೆನೆ– ರಕ್ಕಸನೊಳು**
**ಹೋರಿ ಹೊಯ್ದನೆಂದು ಹೊಗಳಿದೆನಲ್ಲದೆ ॥೧॥**

**ಧರೆಯ ದಾನವ ಬೇಡಿ ನೆಲನ ಈರಡಿ ಮಾಡಿ**
**ಪರಶು ಪಿಡಿದು ಕ್ಷತ್ರಿಯರ ಸವರಿ**
**ಚರಣದಿ ಪಾಷಾಣ ಪೆಣ್ಣು ಮಾಡಿ ಪೂತನಿಯ**
**ಕೊಂದ ಯಾದವ ಪತಿ ಶರಣೆಂದೆನಲ್ಲದೆ**
**ತಿರುಕ ಹಾರುವನೆಂದೆನೆ– ಹೆತ್ತ ತಾಯ**
**ಶಿರವ ತರಿದನೆಂದೆನೆ– ವನವಾಸಕೆ**
**ಭರದಿ ಚರಿಸಿದನೆಂದೆನೆ– ಪೂತನಿಯನು**
**ಸರಕು ಮಾಡದೆ ಕೊಂದ ಹರಿಯೆಂದೆನಲ್ಲದೆ ॥೨॥**

ಚಿತ್ತಜಕೋಟಿ ಲಾವಣ್ಯ ಮುಪ್ಪುರದ
ಉತ್ತಮಸ್ತ್ರೀಯರ ವ್ರತವಳಿದು
ಮತ್ತೆ ಕಲ್ಕಿಯಾಗಿ ಮಧುಪರ ಮಡುಹಿದ
ಹತ್ತವತಾರದ ಹರಿಯೆಂದೆನಲ್ಲದೆ
ಬತ್ತಲೆ ನಿಂತವನೆಂದೆನೆ- ತೇಜಿಯನೇರಿ
ಒತ್ತಿ ನಡೆದವನೆಂದೆನೆ- ಬಾರಿಬಾರಿಗೆ
ಸತ್ತು ಹುಟ್ಟುವನೆಂದೆನೆ- ಆದಿಕೇಶವ
ಭಕ್ತವತ್ಸಲನೆಂದು ಪೊಗಳಿದೆನಲ್ಲದೆ ॥೩॥

ಭಾವ- ನಿಂದಾಸ್ತುತಿ ರೂಪವಾದ ಈ ಕೀರ್ತನೆಯಲ್ಲಿ ದಶಾವತಾರದ ಲೀಲಾ ಚಮತ್ಕಾರಗಳ ರಸವತ್ತಾದ ವರ್ಣನೆ ಅಡಕಗೊಂಡಿರುವ ರೀತಿ ಅನನ್ಯವಾದುದು; ಮೆಲುಕು ಹಾಕುವಂಥದು. ದಾಸರಲ್ಲಿ ಕವಿ ಪ್ರತಿಭೆಯುಳ್ಳ ಕನಕದಾಸರಿಗಿದು ನೀರು ಕುಡಿದಷ್ಟು ಸುಲಭ ಸಾಧ್ಯ. ಅನ್ಯರಿಗಿದು ಶ್ರಮಸಾಧ್ಯ ಅಥವಾ ಅಸಾಧ್ಯವೆಂದರೂ ಅಸಹಜ ಎನ್ನಿಸದು, ಅಸತ್ಯ ಎನ್ನಿಸದು.

ಅರ್ಥ- ನಿಗಮ = ವೇದ, ಪನ್ನಗ = ಶೇಷ, ಸರ್ಪ; ವಾರಿಧಿ = ಸಮುದ್ರ
ಧಾರಿಣಿ = ಭೂಮಿ, ದನುಜ = ರಾಕ್ಷಸ (ದನುಜ+ತಲ್ಲಣ)
ಘನ್ನ = ಘನ, ಅಧಿಕ; ಹೋರಿ = ಹೋರಾಡಿ, ಧರೆ = ಭೂಮಿ
ಈರಡಿ (ಎರಡು+ಅಡಿ)= ಎರಡು ಹೆಜ್ಜೆ, ಪರಶು = ಕೊಡಲಿ,
ಸವರಿ = ಕತ್ತರಿಸಿ, ಮೂಲೋತ್ಪಾಟನ ಮಾಡಿ, ಪಾಷಾಣ = ಕಲ್ಲು
ಯಾದವಪತಿ = ಕೃಷ್ಣ, ತರಿದ = ಕತ್ತರಿಸಿದ
ಸರಕು ಮಾಡದೆ = ಸದ್ದು ಮಾಡದೆ, ನಿಶ್ಶಬ್ದವಾಗಿ, ಚಿತ್ತಜ = ಮನ್ಮಥ
ಮುಪ್ಪುರ = ಆಕಾಶದಲ್ಲಿರುವ ರಾಕ್ಷಸರ ಮೂರು ಪಟ್ಟಣಗಳು
ಮಧುಪರ = ಮ್ಲೇಚ್ಛರ, ಮಡುಹು = ಕೊಲ್ಲು
ಸತ್ತು ಹುಟ್ಟುವನೆಂದೆನೆ = ಒಂದಾದ ಮೇಲೆ ಒಂದು ಅವತಾರ ವೆತ್ತುವುದನ್ನು ನಿಂದಾಸ್ತುತಿರೂಪದಲ್ಲಿ ಲೇವಡಿ ಮಾಡಲಾಗಿದೆ.

* * * *



## ೨೩೦
## ದೇಶಿ - ಛಾಪು ತಾಳ

ದ್ಯಾವಿ ನಮ್ಮ ದ್ಯಾವರು ಬಂದರು ಬನ್ನೀರೆ, ನೋಡ ಬನ್ನೀರೆ ॥ಪ॥

ಕೆಂಗಣ್ಣ ಮೀನನಾಗಿ ನಮರಂಗ
ಗುಂಗಾಡು ಸೋಮನ ಕೊಂದಾನ್ಯಾ
ಗುಂಗಾಡು ಸೋಮನ ಕೊಂದು ವೇದವನು
ಬಂಗಾರದೊಡಲಿನಿಗಿತ್ತಾನ್ಯಾ ॥೧॥

ದೊಡ್ಡ ಮಡುವಿನೊಳಗೆ ನಮ ರಂಗ
ಗುಡ್ಡವ ಹೊತ್ಕೊಂಡು ನಿಂತಾನ್ಯಾ
ಗುಡ್ಡವ ಹೊತ್ಕೊಂಡು ನಿಂತು ಸುರರನು
ದೊಡ್ಡವರನ್ನ ಮಾಡ್ಯಾನ್ಯಾ ॥೨॥

ಚೆನ್ನ ಕಾಡಿನ ಹಂದಿಯಾಗಿ ನಮ ರಂಗ
ಚಿನ್ನದ ಕಣ್ಣನ ಕೊಂದಾನ್ಯಾ
ಚಿನ್ನದ ಕಣ್ಣನ ಕೊಂದು ಭೂಮಿಯ
ವನಜ ಸಂಭವಗಿತ್ತಾನ್ಯಾ ॥೩॥

ಸಿಟ್ಟಿಂದ ಸಿಂಹನಾಗಿ ನಮ ರಂಗ
ಹೊಟ್ಟೆಯ ಕರುಳ ಬಗೆದಾನ್ಯಾ
ಹೊಟ್ಟೆಯ ಕರುಳ ಹಾರವ ಮಾಡಿ
ಪುಟ್ಟಗೆ ವರವ ಕೊಟ್ಟಾನ್ಯಾ ॥೪॥

ಹುಡುಗ ಹಾರುವನಾಗಿ ನಮ ರಂಗ
ಬೆಡಗಲಿ ಮುಗಿಲಿಗೆ ಬೆಳೆದಾನ್ಯಾ

**ಬೆಡಗಲಿ ಮುಗಿಲಿಗೆ ಬೆಳೆದು ಬಲಿಯನ್ನ**
**ಅಡಿಯಿಂದ ಪಾತಾಳಕೊತ್ತ್ಯಾನ್ಮ್ಯಾ** ॥೫॥

**ತಾಯ ಮಾತನು ಕೇಳಿ ಸಾಸಿರ ತೋಳಿನ**
**ಆವಿನ ಕಳ್ಳನ ಕೊಂದಾನ್ಮ್ಯಾ**
**ಆವಿನ ಕಳ್ಳನ ಕೊಂದು ಭೂಮಿಯ**
**ಅವನಿಸುರರಿಗೆ ಇತ್ತ್ಯಾನ್ಮ್ಯಾ** ॥೬॥

**ಪಿಂಗಳ ಕಣ್ಣಿನ ಕೊಂಗಗಳ ಕೂಡಿ**
**ಛಂಗನೆ ಲಂಕೆಗೆ ಪೋದಾನ್ಮ್ಯಾ**
**ಛಂಗನೆ ಲಂಕೆಗೆ ಪೋಗಿ ನಮರಂಗ**
**ಹೆಂಗಸುಗಳ್ಳನ ಕೊಂದಾನ್ಮ್ಯಾ** ॥೭॥

**ಕರಿಯ ಹೊಳೆಯ ಬಳಿ ತುರುಗಳ ಕಾಯುತ**
**ಉರಗನ ಮಡುವ ಧುಮುಕ್ಯಾನ್ಮ್ಯಾ**
**ಉರಗನ ಹೆಡೆಮೇಲೆ ಹಾರ್‍ಹಾರಿ ಕುಣಿವಾಗ**
**ವರವ ನಾರೇರ್ಗೆ ಕೊಟ್ಟಾನ್ಮ್ಯಾ** ॥೮॥

**ಭಂಡನಂದದಿ ಕುಂಡೆಯ ಬಿಟುಗೊಂಡು**
**ಕಂಡಕಂಡಲ್ಲಿಗೆ ತಿರುಗ್ಯಾನ್ಮ್ಯಾ**
**ಕಂಡ ಕಂಡಲ್ಲಿಗೆ ತಿರುಗಿ ತ್ರಿಪುರರ**
**ಹೆಂಡಿರನೆಲ್ಲ ಕೆಡಿಸ್ಯಾನ್ಮ್ಯಾ** ॥೯॥

**ಚೆಲುವ ಹೆಂಡತಿಯ ಕುದುರೆಯ ಮಾಡಿ**
**ಒಳ್ಳೆ ರಾಹುತನಾದಾನ್ಮ್ಯಾ**
**ಒಳ್ಳೆ ರಾಹುತನಾಗಿ ಮ್ಲೇಚ್ಛರ**
**ಡೊಳ್ಳು ಹೊಟ್ಟೆಯ ಮ್ಯಾಲೊದ್ದಾನ್ಮ್ಯಾ** ॥೧೦॥



**ಡೊಳ್ಳಿನ ಮ್ಯಾಲ್ಕೈ ಭರಮಪ್ಪ ಹಾಕ್ಯಾನು**
**ತಾಳವ ಶಿವನಪ್ಪ ತಟ್ಟ್ಯಾನ್ಮ್ಯಾ**
**ಒಳ್ಳೊಳ್ಳೆ ಪದಗಳ ಹನುಮಪ್ಪ ಹಾಡ್ಯಾನು**
**ಚೆಲುವ ಕನಕಪ್ಪ ಕುಣಿದಾನ್ಮ್ಯಾ** ॥೧॥

ಭಾವ– ಕುರುಬರ ಡೊಳ್ಳಿನ ಹಾಡಿನ ಗತಿಯಲ್ಲಿ, ಆಡುನುಡಿಯ ಬಾಗು ಬಳುಕಿನಲ್ಲಿ ಮೋಡಿ ಮಾಡುವ ಬೆಡಗಿನ ನಡಗೆಯಲ್ಲಿ ಸಾಗುವ ಈ ಕೀರ್ತನೆ ವಿನೂತನ ಶೈಲಿಯ ದಶಾವತಾರಗಳ ವರ್ಣನೆಯನ್ನು ಒಳಗೊಂಡಿದೆ. ಏಕತಾನತೆಯಿಂದ ಒಣಗಿ ಹೋದಂತಾದ ಬರಡು ಭೂಮಿಗೆ ಜಾನಪದ ಸತ್ತ್ವದ ನೀರುಣ್ಣಿಸಿ ಬೆಳೆ ನಳನಳಿಸುವಂತೆ ಮಾಡಿರುವ ಕನಕದಾಸರನ್ನು ಹರಿದಾಸಸಾಹಿತ್ಯದ ಅಧ್ಯಯನಕಾರರು ಮರೆಯುವಂತಿಲ್ಲ.

ಅರ್ಥ
೧. ಗುಂಗಾಡು ಸೋಮ = ದುಷ್ಟನಾದ, ತಮ ಎಂಬ ರಾಕ್ಷಸ,
ಬಂಗಾರದೊಡಲ = ಬ್ರಹ್ಮ
ಗುಂಗಾಡು = ಸೊಳ್ಳೆ (ಮತ್ಸ್ಯಾವತಾರ)
೨. ದೊಡ್ಡಮಡು = ಸಮುದ್ರ
ಗುಡ್ಡ = ಮಂದರಪರ್ವತ (ಕೂರ್ಮಾವತಾರ)
೩. ಚೆನ್ನದ ಕಣ್ಣ = ಹಿರಣ್ಯಾಕ್ಷ
ವನಜಸಂಭವ = ಬ್ರಹ್ಮ (ವರಾಹಾವತಾರ)
೪. ಪುಟ್ಟ = ಪ್ರಹ್ಲಾದ (ನರಸಿಂಹಾವತಾರ)
೫. ಹುಡುಗ ಹಾರುವ = ಬ್ರಹ್ಮಚಾರಿ
ಅಡಿ = ಪಾದ (ವಾಮನಾವತಾರ)
೬. ಆವಿನಕಳ್ಳ = ಕಾರ್ತವೀರ್ಯಾರ್ಜುನ
ಅವನಿಸುರರು = ಬ್ರಾಹ್ಮಣರು (ಪರಶುರಾಮಾವತಾರ)
೭. ಪಿಂಗಳ = ಕಂದುಬಣ್ಣ, ಕೊಂಗ = ಕಪಿ
ಹೆಂಗಸುಗಳ್ಳ = ರಾವಣ (ರಾಮಾವತಾರ)
೮. ಕರಿಯ ಹೊಳೆ = ಕಾಳಿಂದಿ ನದಿ (ಯಮುನಾ)

ಉರಗನ ಮಡು = ಕಾಲಿಯ ಸರ್ಪವಿರುವ ಆಳವಾದ ನೀರಿರುವ ಜಾಗ,

ನಾರೇರ್ಗೆ (<ನಾರಿಯರಿಗೆ) = ಕಾಲಿಯನ ಪತ್ನಿಯರು (ಕೃಷ್ಣಾವತಾರ)

೯. ಕುಂಡೆಯ ಬಿಟುಗೊಂಡು = ಬತ್ತಲೆಯಾಗಿ; ಕುಂಡೆ = ನಿತಂಬ

ತ್ರಿಪುರರ = ರಾಕ್ಷಸರ (ಬೌದ್ಧಾವತಾರ)

೧೦. ಚೆಲುವ ಹೆಂಡತಿ = ಲಕ್ಷ್ಮಿ

ರಾಹುತ = ಕುದುರೆ ಸವಾರ

ಮ್ಲೇಚ್ಛರು = ಹಿಂದೂಧರ್ಮ ವಿರೋಧಿಗಳು (ಕಲ್ಕ್ಯಾವತಾರ)

೧೧. ಭರಮಪ್ಪ = ಬ್ರಹ್ಮ, ಶಿವನಪ್ಪ = ಈಶ್ವರ

ಹನುಮಪ್ಪ = ವಾಯುಪುತ್ರ ಆಂಜನೇಯ

ವಿ.ಸೂ: ಮ್ಯಾ ಎಂಬುದು ಕುರಿ ಅಥವಾ ಮೇಕೆಯ ಅರಚುವ ಶಬ್ದವೆಂದು ಭಾವಿಸಬಾರದು. ಇದು ಅಮ್ಮಯ್ಯ ಎಂಬ ಶಬ್ದದ ಸವೆದ ರೂಪ. ಹಳೆಯ ಮೈಸೂರಿನ ಕಡೆ ಅಮ್ಮ+ಓ=ಅಮ್ಮೋ ಎಂಬುದು ಸವೆದು ಬರಿಯ ಮೋ ಆಗಿರುವ ಹಾಗೆ ಅಮ್ಮಯ್ಯ > ಅಮ್ಯಾ > ಮ್ಯಾ ಆಗಿದೆ. ಪಲ್ಲವಿಯಲ್ಲಿ ಬನ್ನೀರೆ ಎಂದು ಹೆಂಗಸರನ್ನು ಸಂಬೋಧಿಸಿ ಹೇಳಿರುವುದರಿಂದ, ಹೆಂಗಸರಿಗೆ ಗೌರವಪೂರ್ವಕವಾಗಿ ಅಮ್ಮಯ್ಯ ಎಂದು ಕರೆಯುವುದರಿಂದ, ಪ್ರತಿಯೊಂದು ನುಡಿಯಲ್ಲಿ ಅನುರಣನಗೊಳ್ಳುವ 'ಮ್ಯಾ' ಎಂಬುದು 'ಅಮ್ಮಯ್ಯ'ನ ವಾಮನಾವತಾರ ಎಂಬುದನ್ನು ಮರೆಯಬಾರದು.

* * * *



## ೨೩೧
## ನಾದನಾಮ ಕ್ರಿಯೆ – ಅಟತಾಳ

ತಾಳಲ್ಲಲ್ಲಲ್ಲೋ ಮಾಸಾಳಲ್ಲಲ್ಲಲ್ಲೋ ॥ಪ॥

ಹೆಚ್ಚಿದ ತಮನೆಂಬ ದನುಜ ವೇದವ ಕದ್ದು
ಬಚ್ಚಿಟ್ಟು ನೀರೊಳು ಮುಳುಗಿರಲು
ಮಚ್ಚ ರೂಪದಿಂದ ಪೋಗಿ ಅವನ ಕೊಂದ
ಅಚ್ಯುತರಾಯನೆಂಬ ಮಾಸಾಳಮ್ಮ ॥೧॥

ಸಿಂಧು ಮಥನವ ಮಾಡೆ ಅಮರರೆಲ್ಲರು
ಮಂದರಗಿರಿ ನೀರೊಳು ಮುಳುಗಲು
ಚಂದದಿ ಕೂರ್ಮ ರೂಪಿನಿಂದೆತ್ತಿದ ಗೋ
ವಿಂದನೆಂಬುವ ಮಾಸಾಳಮ್ಮ ॥೨॥

ರೂಢಿಯ ಕದ್ದುಕೊಂಡೋಡುವ ದೈತ್ಯನ
ನೀಡಿ ತಿವಿದು ಕೋರೆದಾಡೆಯಿಂದ
ದೂಡಿ ಧ್ವಂಸವ ಮಾಡಿ ರೂಢಿಯ ತಂದ
ಕಾಡು ವರಾಹ ರೂಪಿ ಮಾಸಾಳಮ್ಮ ॥೩॥

ಲೇಸು ತಪ್ಪಿದನೆಂದು ಹಿರಣ್ಯಕ ತನಯನ
ಘಾಸಿ ಮಾಡಲು, ಕಂಬ ಒಡೆದುದಿಸಿ
ರೋಷದಿ ದೈತ್ಯನ ಕರುಳ ಕಿತ್ತ ನರ
ಕೇಸರಿ ರೂಪಿನ ಮಾಸಾಳಮ್ಮ ॥೪॥

ಆ ಮಹಾಸಿರಿಯ ಗರ್ವದಿ ಮುಂದರಿಯದೆ
ಭೂಮಿಯನು ಬಲಿ ತಾನಾಳುತಿರೆ

ನೇಮಿಸಿ ಎರಡೇ ಹೆಜ್ಜೆಯೊಳಳಕೊಂಡ
ವಾಮನ ರೂಪಿನ ಮಾಸಾಳಮ್ಮ ॥೫॥

ಕಾಮಧೇನುವಿಗಾಗಿ ಕಾರ್ತವೀರ್ಯಾರ್ಜುನ
ಆ ಮಹಾಮುನಿಯ ಪ್ರಾಣಕೆ ಮುನಿಯೆ
ತಾಮಸವಿಲ್ಲದೆ ಕ್ಷತ್ರಿಯರ ಸಂಹರಿಸಿದ
ರಾಮ ಭಾರ್ಗವನೆಂಬ ಮಾಸಾಳಮ್ಮ ॥೬॥

ಜನಕ ಸುತೆಯನು ಕದ್ದೊಯ್ಯಲು ಲಂಕೆಗೆ
ಗಣಿತಾತೀತ ಶರಧಿಯ ಕಟ್ಟಿ
ಘನ ಕೋಪದಿ ದಶಿಶಿರನ ಕತ್ತರಿಸಿದ
ಇನಕುಲ ರಾಮನೆಂಬ ಮಾಸಾಳಮ್ಮ ॥೭॥

ದೇವಕಿ ಬಸುರೊಳು ಬಂದು ಗೋಕುಲದಿ
ಆವ ಕಾವ ಗೊಲ್ಲರ ಸಲಹಿ
ಮಾವನ ಕೊಂದು ಮತ್ತೈವರ ಸಲಹಿದ
ದೇವ ಕೃಷ್ಣನೆಂಬ ಮಾಸಾಳಮ್ಮ ॥೮॥

ಪತಿವ್ರತೆಯರ ವ್ರತವಳಿಯಬೇಕೆನುತಲಿ
ಅತಿಶಯದಿ ತ್ರಿಪುರದ ಸ್ತ್ರೀಯರ
ನುತ ಬೌದ್ಧ ರೂಪದಿ ಬಹು ಭಂಗಪಡಿಸಿದ
ರತಿಪತಿಪಿತನೆಂಬ ಮಾಸಾಳಮ್ಮ ॥೯॥

ಖುಲ್ಲ ಮನುಜರನು ಕೊಲ್ಲಬೇಕೆನುತಲಿ
ಭಲ್ಲೆ ಹಿಡಿದು ತುರಗವನೇರಿ
ಅಲ್ಲಲ್ಲೆ ಸೊಲ್ಲಡಗಿಸಿ ವಲ್ಲಭನೆನಿಸಿದ
ಬಲ್ಲಿದ ಕಲ್ಕಿಯೆಂಬ ಮಾಸಾಳಮ್ಮ ॥೧೦॥



ಮಂಗಳ ಮಹಿಮ ಭುಜಂಗ ಶಯನ ಕಾ
ಳಿಂಗ ಮರ್ದನ ದೇವೋತ್ತುಂಗ
ಅಂಗಜಪಿತ ನೆಲೆಯಾದಿಕೇಶವ ಅಂತ
ರಂಗದೊಳಿರುವ ಮಾಸಾಳಮ್ಮ ॥೧೧॥

ಭಾವ– ಶ್ರೀ ಹರಿ ದಶಾವತಾರಗಳನ್ನೆತ್ತಿ ಎಸಗಿದ ಕಾರ್ಯವಿಶೇಷಗಳನ್ನು ಕೊಂಡಾಡಿರುವ ಕೀರ್ತನೆ ಇದು. ಆದರೆ ಶ್ರೀಹರಿ ಎಂಬ ಮಾಸಾಳನ್ನು (ಶೂರ, ಸಾಹಸಿ) ಪರಿಚಯಿಸಿರುವ ದಾಟಿ ವಿಭಿನ್ನ, ವಿಶಿಷ್ಟ. ಕಾಡಿನಲ್ಲಿ ಬೇಟೆಯಾಡುವಾಗ ಮಿಗವೊಂದು ಮೇಲೆದ್ದರೆ ಬೇಟೆಗಾರರು ಇನ್ನಿತರ ಬೇಟೆಗಾರರಿಗೆ ಅದರ ಸುಳಿವನ್ನು ಸೂಚಿಸಲು "ಅಲ್ಲಲ್ಲಲ್ಲಲ್ಯೊ" ಎಂದು ಕಾಕು ಹಾಕಿ ಕೂಗುವಂತೆ, ಕಣ್ಣಿಗೆ ಕಾಣದಂತೆ ಶರವೇಗದಲ್ಲಿ ನುಗ್ಗುತ್ತಿರುವ ಈ 'ಮಾಸಾಳು'ವಿನ ಸುಳಿವನ್ನು ನೀಡಲು ಅದೇ ಬಗೆಯ ಕಾಕಿನ ಕೂಗಿನೊಂದಿಗೆ ಕೀರ್ತನೆಯನ್ನು ಪ್ರಾರಂಭಿಸಿದ್ದಾರೆ ಕನಕದಾಸರು. (ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿ ಬೇಡರು ಮೇಲೆದ್ದ ಹಂದಿಯನ್ನು ಕಂಡು "ಅಲೆಲೆಲೊ" ಎಂದು ಉದ್ಗಾರ ತೆಗೆದಿರುವುದನ್ನು ಸ್ಮರಿಸಿಕೊಂಡರೆ ಲೇಸು)

ಅರ್ಥ– ಮಾಸಾಳು = ಸಾಹಸಿ, ಯೋಧ
ತಾಳು = ಮೂಲ, ಆಧಾರ (ಉದಾ: ಹನ್ನೆರಡು ತಾಳಿನ ಕೂರಿಗೆ)

೧. ದನುಜ = ರಾಕ್ಷಸ
ಮಚ್ಚ (<ಮತ್ಸ್ಯ) = ಮೀನು
೨. ಸಿಂಧು = ಸಮುದ್ರ, ಮಥನ = ಕಡೆತ
ಅಮರರು = ದೇವತೆಗಳು
೩. ರೂಢಿ = ಭೂಮಿ, ದೈತ್ಯ = ರಾಕ್ಷಸ
ದಾಡೆ = ಹಲ್ಲು, ದೂಡಿ = ನೂಕಿ
೪. ನರಕೇಸರಿ = ನರಸಿಂಹ
೫. ನೇಮಿಸಿ = ಮೂರು ಹೆಜ್ಜೆ ಭೂಮಿ ದಾನಮಾಡುವಂತೆ ಒಪ್ಪಿಸಿ (ಒಂದು ಹೆಜ್ಜೆಯನ್ನು ಆಕಾಶದ ಅಗಲಕ್ಕೂ, ಇನ್ನೊಂದು

ಹೆಜ್ಜೆಯನ್ನು ಭೂಮಿಯ ಅಗಲಕ್ಕೂ ಇಟ್ಟು ಮತ್ತೊಂದು ಹೆಜ್ಜೆಗೆ ತಾವಿಲ್ಲದಿದಾಗ ಬಲಿಯ ತಲೆಯ ಮೇಲಿಟ್ಟು ಪಾತಾಳಕ್ಕೆ ತುಳಿದನೆಂಬ ಕಥೆ. ಆದ್ದರಿಂದ ಭೂಮಿ ಅಳೆದದ್ದು ಎರಡೇ ಹೆಜ್ಜೆಯಿಂದ)

೬. ಮಹಾಮುನಿ = ಜಮದಗ್ನಿ
ತಾಮಸ = ತಡ
ಭಾರ್ಗವ = ಪರಶುರಾಮ

೭. ಜನಕಸುತೆ = ಸೀತೆ
ಗಣಿತಾತೀತ = ಅಳತೆಗೆ ಮೀರಿದ
ಶರಧಿ = ಸಮುದ್ರ
ದಶಶಿರ = ರಾವಣ
ಇನಕುಲ = ಸೂರ್ಯವಂಶ

೮. ಆವ = ಗೋವನ್ನು (ಆವು = ಗೋವು)

೯. ರತಿಪತಿ = ಮನ್ಮಥ
ರತಿಪತಿಪಿತ = ಕೃಷ್ಣ (ವಿಷ್ಣು)

೧೦. ಭಲ್ಲೆ = ಭರ್ಜಿ
ತುರಗ = ಕುದುರೆ
ಸೊಲ್ಲು = ಸದ್ದು, ಮಾತು
ವಲ್ಲಭ = ಗಂಡ
ಬಲ್ಲಿದ = ಶಕ್ತ

೧೧. ಭುಜಂಗ = ಸರ್ಪ
ಭುಜಂಗಶಯನ = ವಿಷ್ಣು

ಕಾಳಿಂಗ ಮರ್ದನ = ಕಾಳಿಂಗ ಸರ್ಪವನ್ನು ಕೊಂದವನು (ವಿಷ್ಣು–ಕೃಷ್ಣಾವತಾರದಲ್ಲಿ)
ಉತ್ತುಂಗ = ಶ್ರೇಷ್ಠ
ಅಂಗಜ = ಮನ್ಮಥ
ಅಂಗಜಪಿತ = ಕೃಷ್ಣ

* * * *



## ೨೩೨
## ಶ್ರೀ – ಆದಿತಾಳ

ಪರಮ ಪುರುಷ ಹರಿ ಗೋವಿಂದ– ಸಿರಿ
ವರ ನಾರಾಯಣ ಗೋವಿಂದ ॥ಪ॥

ನಿಶಿವೆಸರಸುರನ ಉಸಿರ ತೊಲಗಿಸಿದೆ
ಕುಸುಮ ಶರನ ಪಿತ ಗೋವಿಂದ
ವಸುಪೂರಿತ ಶ್ರುತಿ ಮಸುಳಿಸದೆ ತಂದೆ
ಬಿಸಜಸಂಭವನಯ್ಯ ಗೋವಿಂದ ॥೧॥

ಜತನದಿ ಮಥುಮಥನದಿ ಮಂದರ ಪರು
ವತ ಉದ್ಧರಿಸಿದೆ ಗೋವಿಂದ
ಶತಕ್ರತುವಿನ ಸಿರಿ ಗತವಾಗದ ಮುನ್ನ
ಕ್ಷಿತಿ ಪೆತ್ತನಯ್ಯ ಗೋವಿಂದ ॥೨॥

ಭೂತಳವೆರಸಿ ರಸಾತಳಕಿಳಿದಿಹ
ಪಾತಕನ ಕಂಡೆ ಗೋವಿಂದ
ಆತನೊಡನೆ ಕಾದಾತನ ಗೆಲಿದು ಮ
ಹೀಳತಳವನು ತಂದೆ ಗೋವಿಂದ ॥೩॥

ದುರುಳಾಸುರನ ನಿಡುಗರುಳ ಮಾಲೆ ಮುಂ
ಗೊರಳೊಳು ಧರಿಸಿದೆ ಗೋವಿಂದ
ಗರಳಕೊರಳನು ಬೆರಳೆತ್ತಿ ಪೊಗಳಲು
ತರಳಗೊಲಿದೆ ನೀ ಗೋವಿಂದ ॥೪॥

ವಾಮನನಾಗಿ ನಿಸ್ಸೀಮ ಬಲಿಯ ಕೈಯ
ಭೂಮಿಯನಳೆಕೊಂಡೆ ಗೋವಿಂದ
ತಾಮರಸ ಪದದಿ ಕನಕ ಗರ್ಭಯೋಗ
ವ್ಯೋಮಗಂಗೆಯ ತಂದೆ ಗೋವಿಂದ ॥೫॥

ಸುರಪಶುವಿಗೆ ಋಷಿಯನು ಕೊಂದನ ಬಹು
ಕರ ಬಲ ಮುರಿದೆಯೊ ಗೋವಿಂದ
ತರಹರಿಸದೆ ವಸುಧೆಯ ಒಡೆತನ ಭೂ
ಸುರರಿಗೆ ನೀಡಿದೆ ಗೋವಿಂದ

ತ್ರಿಣಯನ ತಾತ್ಪರ್ಯ ರಾವಣನ ಶಿರ
ರಣದೊಳುರುಳಿಸಿದೆ ಗೋವಿಂದ
ಕ್ಷಣಮೆಣಿಸದೆ ಸದ್ಗುಣವಂತ ವಿಭೀ
ಷಣಗಭಯವಿತ್ತೆ ಗೋವಿಂದ ॥೭॥

ಮಾರಣ ಕ್ರತು ಸಂಪೂರಣ ಕಂಸ ಸಂ
ಹಾರಣ ಭುಜಬಲ ಗೋವಿಂದ
ವಾರಣಪುರಪತಿ ಸಿರಿ ಭೂಭಾರೋ
ತ್ತಾರಣ ಬಲಯುತ ಗೋವಿಂದ ॥೮॥

ಕಥೆಯನು ನಿರ್ಮಿಸಿ ಪತಿವ್ರತೆಯರ ಘನ
ವ್ರತಗಳ ಕೆಡಿಸಿದೆ ಗೋವಿಂದ
ಜತೆಯಗಲದ ಪುರತ್ರಿತಯ ಗೆಲಿದು ದೇ
ವತೆಗಳ ಸಲಹಿದೆ ಗೋವಿಂದ ॥೯॥

ಜಾಜಿಯ ಮರಕತ ತೇಜಿಯನೇರಿ ವಿ
ರಾಜಿಪ ರಾವುತ ಗೋವಿಂದ
ಸೂಜಿಯ ಬೆನ್ನೊಳು ರಾಜಿಪ ತೆರದಿ ಸ
ಹಜರೊಳಡಗಿರ್ಪೆ ಗೋವಿಂದ ॥೧೦॥



ಮೇದಿನಿಗೋಸುಗ ಕಾದಿ ಕಲಹದಿ ವಿ
ರೋಧಿಗಳ ಕೊಂದೆ ಗೋವಿಂದ
ಸಾಧುಗಳಿಗೆ ಸುಖವೀಯುವ ಬಾಡದ
ಶ್ರೀಧವ ಕೇಶವ ಗೋವಿಂದ ॥೧॥

ಭಾವ– ಕುಣಿತಕ್ಕೆ ಒಗ್ಗುವ ದಾಟಿಯಲ್ಲಿ ಪರಮಾತ್ಮನ ದಶಾವತಾರ ಲೀಲೆಗಳನ್ನು ಹಾಡಿ ಕೊಂಡಾಡಿರುವ ಕೀರ್ತನೆ ಇದು.

ಅರ್ಥ– ಸಿರಿ = ಲಕ್ಷ್ಮಿ, ವರ =ಗಂಡ

೧. ನಿಶೆವೆಸರಸುರನ = ತಮನೆಂಬ ರಾಕ್ಷಸನ
ಕುಸುಮಶರನ ಪಿತ = ಕಾಮನ ತಂದೆ
ವಸು = ಐಶ್ವರ್ಯ, ಬೆಳಕು
ವಸುಪೂರಿತ ಶ್ರುತಿ = ಬೆಳಕಿನಿಂದ ಕೂಡಿದ ವೇದ
ಮಸುಳಿಸದೆ = ಕಾಂತಿಗೆಡಿಸದೆ
ಬಿಸಜಸಂಭವನ = ಬ್ರಹ್ಮನ
ಅಯ್ಯ = ತಂದೆ (ಮತ್ಸ್ಯಾವತಾರ)

೨. ಜತನದಿ = ಸೂಕ್ಷ್ಮತೆಯಿಂದ, ಎಚ್ಚರಿಕೆಯಿಂದ
ಮಧು ಮಥನದಿ = ಅಮೃತದ ಕಡೆತದಲ್ಲಿ
ಉದ್ಧರಿಸಿದೆ = ಮೇಲೆತ್ತಿದೆ
ಶತಕ್ರತು = ಇಂದ್ರ
ಕ್ಷಿತಿಪೆತ್ತನ = ಪ್ರಪಂಚ ಸೃಷ್ಟಿಸಿದ ಬ್ರಹ್ಮ (ಕೂರ್ಮಾವತಾರ)

೩. ಭೂತಳವೆರಸಿ = ಭೂಮಿಸಮೇತ
ರಸಾತಲ = ಕೆಳಗಿನ ಏಳು ಲೋಕಗಳಲ್ಲಿ ಒಂದು (ಅತಳ, ವಿತಳ, ಸುತಳ, ತಳಾತಳ, ಮಹಾತಳ, ರಸಾತಳ, ಪಾತಾಳ)
ಪಾತಕನ = ಘಾತಕನಾದ ಹಿರಣ್ಯಾಕ್ಷನನ್ನು
ಮಹೀತಳ = ಭೂಮಿ (ವರಾಹಾವತಾರ)

೪. ದುರಾಳಾಸುರನ = ದುಷ್ಟ ರಾಕ್ಷಸನ
ನಿಡು = ನೀಳವಾದ
ಗರಳಕೊರಳ = ವಿಷಕಂಠನಾದ ಈಶ್ವರ
ತರಳ = ಪ್ರಹ್ಲಾದ (ನರಸಿಂಹಾವತಾರ)

೫. ತಾಮರಸ = ಕಮಲ
ಪದದಿ = ಪಾದದಿಂದ
ಕನಕಗರ್ಭ = ಬ್ರಹ್ಮ
ಯೋಗ = ಹೊಂದಿದ, ಸೇರಿದ
ವ್ಯೋಮ = ಆಕಾಶ (ವಾಮನಾವತಾರ)

೬. ಸುರಪಶು = ಕಾಮಧೇನು
ಋಷಿಯನು ಕೊಂದನ = ಜಮದಗ್ನಿಯನ್ನು ಕೊಂದ ಸಾವಿರ ತೋಳಿನ ಕಾರ್ತವೀರ್ಯಾರ್ಜುನ
ಬಹುಕರ = ಅಧಿಕ ಕೈಗಳು
ವಸುಧೆಯ = ಭೂಮಿ
ಭೂಸುರರು = ಬ್ರಾಹ್ಮಣರು (ಪರಶುರಾಮಾವತಾರ)

೭. ತ್ರಿಣಯನ = ಮುಕ್ಕಣ್ಣನಾದ ಶಿವನ
ತಾತ್ಪರ್ಯ = ಒಲವುಳ್ಳ (ರಾಮಾವತಾರ)

೮. ಮಾರಣಕ್ರತು = ಕೃಷ್ಣನನ್ನು ಕೊಲ್ಲುವ ಹುನ್ನಾರದಿಂದ ಮಾಡಿದ ಧನುರ್ಯಾಗ ಅಥವಾ ಬಿಲ್ಲು ಹಬ್ಬ
ವಾರಣ ಪುರಪತಿ = ಹಸ್ತಿನಾವತಿಯ ದೊರೆ ದುರ್ಯೋಧನ
ಉತ್ತಾರಣ = ದಾಟಿಸುವ (ಕೃಷ್ಣಾವತಾರ)

೯. ಪುರತ್ರಿತಯ = ತಾರಕಾಸುರನ ಮಕ್ಕಳಾದ ತಾರಾಕ್ಷ, ಕಮಲಾಕ್ಷ ವಿದ್ಯುನ್ಮಾಲಿಗಳ ಮೂರು ಪಟ್ಟಣಗಳು ಅಂತರಿಕ್ಷದಲ್ಲಿ ಜೊತೆಯಾಗಿ ತಿರುಗುತ್ತವೆ ಎಂಬ ಕಥೆ (ಬೌದ್ಧಾವತಾರ)

೧೦. ಜಾಜಿಯ = ಕಾವಿಬಣ್ಣದ ಅಥವಾ ಕೆಂಬಣ್ಣದ
ಮರಕತ = ಹಸಿರು ಬಣ್ಣದ
ತೇಜಿ = ಕುದುರೆ



ರಾವುತ = ಕುದುರೆ ಸವಾರ
ಸಹಜ = ನೈಜ, ಯೋಗ್ಯ (ಕಲ್ಕ್ಯಾವತಾರ)

೧೧. ಮೇದಿನಿ = ಭೂಮಿ
ಬಾಡದ = ಬಾಡ ಗ್ರಾಮದ ಅಥವಾ ಎಂದಿಗೂ ಕಂದದ
ಶ್ರೀಧವ = ಲಕ್ಷ್ಮಿಯ ಗಂಡ

* * * *

## ೨೩೩
## ನಾದನಾಮಕ್ರಿಯೆ – ಛಾಪು ತಾಳ

ಗೋವಿಂದ ಸಲಹೆನ್ನನು– ಸದಾನಂದ
ಗೋವಿಂದ ಸಲಹೆನ್ನನು ॥ಪ॥

ಗೋವಿಂದ ಸಲಹೆನ್ನ ಕುಮುದಲೋಚನ ನಿನ್ನ
ಸೇವಕರಡಿಯ ಸೇವಕನಯ್ಯ ಗೋವಿಂದ ॥ಅ॥

ತಮನ ಸಂಹರಿಸಿ ವೇದವ ತಂದೆ ಗೋವಿಂದ
ಅಮರರಿಗಮೃತ ಪಾನವನಿತ್ತೆ ಗೋವಿಂದ
ರಮಣಿಯ ತಂದ ವರಹರೂಪಿ ಗೋವಿಂದ
ಭ್ರಮಿಸಿ ಕಂಬದೊಳುದ್ಭವಿಸಿದೆ ಗೋವಿಂದ
ಕ್ಷಮೆಯನಳೆದ ಬ್ರಹ್ಮಚಾರಿಯೆ ಗೋವಿಂದ
ಸಮರದೊಳಖಿಲ ರಾಯರ ಕೊಂದೆ ಗೋವಿಂದ
ಕಮಲಾಕ್ಷ ಕಡಲ ಕಟ್ಟಿದ ದಿಟ್ಟ ಗೋವಿಂದ
ಮಮತೆಯೊಳಿಳೆಯ ಗೋವ್ಗಳಕಾಯ್ದೆ ಗೋವಿಂದ
ರಮಣಿಯರ್ಗೊಲಿದು ಬತ್ತಲೆ ನಿಂತೆ ಗೋವಿಂದ
ವಿಮಲ ತುರಗವೇರಿ ನಡೆಸಿದೆ ಗೋವಿಂದ
ನಮಿಪರಿಗೊಲಿದೆ ಗೋವಿಂದ– ನಿಂದಿಪರಿಗೆ
ಶಮನನಂತಿಪ್ಪೆ ಗೋವಿಂದ– ಎಲ್ಲರೊಳಿಪ್ಪ
ಅಮಿತ ಮಹಿಮ ಗೋವಿಂದ– ಇಂಗಡಲೊಳು
ಗಮನ ನಿರ್ಜಿತ ಗೋವಿಂದ– ಅಚ್ಯುತ ಸರ್ವೋ
ತ್ತಮನೆ ಚಿನ್ಮಯ ಗೋವಿಂದ– ನಿಶ್ಚಲಭಕ್ತಿ
ಕ್ರಮವ ಬೋಧಿಸೊ ಗೋವಿಂದ– ಪಾಪವನೆಲ್ಲ
ಶಮನಗೊಳಿಪ ಗೋವಿಂದ– ಲಕ್ಷ್ಮೀರಮಣ
ನಮೋ ದಶಾವತಾರಿ ಗೋವಿಂದ ॥೧॥



ಮನವೆನ್ನ ಮಾತು ಕೇಳದು ಕಾಣೊ ಗೋವಿಂದ
ಮನವ ಗೆಲ್ಲುವ ಬಲ ಎನಗಿಲ್ಲ ಗೋವಿಂದ
ಕನಸಿನಂತಿಹ ದೇಹ ಸ್ಥಿರವಲ್ಲ ಗೋವಿಂದ
ಬಿನುಗು ಬುದ್ಧಿಗಳ ಬಿಡಿಸಯ್ಯ ಗೋವಿಂದ
ನೆನಹು ನಿನ್ನೊಳಗಿಟ್ಟು ನಡೆಸಯ್ಯ ಗೋವಿಂದ
ನೆನೆವ ದಾಸರ ಮನದೊಳಗಿರ್ಪ ಗೋವಿಂದ
ವನಜಲೋಚನ ನಾ ನಿನ್ನವನಯ್ಯ ಗೋವಿಂದ
ಘನ ಮಹಿಮನೆ ನಿನ್ನ ಮೊರೆಹೊಕ್ಕೆ ಗೋವಿಂದ
ಮುನಿಗಳ ಮನದೊಳು ಮಿನುಗುವ ಗೋವಿಂದ
ನಿನಗಲ್ಲದಪಕೀರ್ತಿ ಎನಗೇನೊ ಗೋವಿಂದ
ಜನನ ರಹಿತ ಗೋವಿಂದ– ನಿನ್ನಡಿಗಳ
ನೆನವು ಕೊಡೊ ಗೋವಿಂದ– ದುರ್ವಿಷಯ ವಾ
ಸನೆಯ ಬಿಡಿಸೊ ಗೋವಿಂದ– ಕುತ್ಸಿತ ಕೆಟ್ಟ
ತನವ ಬಿಡಿಸೊ ಗೋವಿಂದ– ಸದ್ಗುಣವೆಂಬ
ಧನವ ತುಂಬಿಸೊ ಗೋವಿಂದ– ಇದಕ್ಕೆ ಬಡ
ತನವೆ ನಿನಗೆ ಗೋವಿಂದ– ಸದಾ ನಿನ್ನ
ಘನ ಸ್ಮರಣೆ ಕೊಡು ಗೋವಿಂದ– ಸನಕ
ಸನಂದನಾರ್ಚಿತ ಗೋವಿಂದ ॥೨॥

ನರ ಬೊಂಬೆಗಳ ಮಾಡಿ ಕುಣಿಸುವೆ ಗೋವಿಂದ
ನರರ ನೋಡಿ ನೋಡಿ ನಗುತಿರ್ಪೆ ಗೋವಿಂದ
ಅರಿದೆನೆಂಬರಿಗಂತ್ಯ ತೋರದೊ ಗೋವಿಂದ
ಪರಮ ಪಾವನನೆಂಬ ಬಿರುದುಳ್ಳ ಗೋವಿಂದ
ಪರಮ ಪುರುಷ ಪುರುಷೋತ್ತಮ ಗೋವಿಂದ
ಪರಬ್ರಹ್ಮ ಪರಮ ಪರಾತ್ಪರ ಗೋವಿಂದ
ಮೊರೆ ಹೊಕ್ಕ ಭಕ್ತರ ಸಲಹುವ ಗೋವಿಂದ
ಕರಿರಾಜ ಕರೆಯಲೊದಗಿ ಬಂದೆ ಗೋವಿಂದ
ಗರುಡಗಮನ ಗೋವಿಂದ– ಕಿನ್ನರ ಸಿದ್ಧ
ಗರುಡ ಸನ್ನುತ ಗೋವಿಂದ– ಅಪರಿಮಿತ

**ಕರುಣಾಸಾಗರ ಗೋವಿಂದ– ಅರಿಯದಂಥ**
**ಪರಮ ಜ್ಯೋತಿಯೆ ಗೋವಿಂದ– ಗಂಗೆಯ ಪೆತ್ತ**
**ಚರಣ ನಿರ್ಮಲ ಗೋವಿಂದ– ತೆತ್ತೀಸ ಕೋಟಿ**
**ಸುರರ ಪೊರೆವ ಗೋವಿಂದ– ಶ್ರೀವೈಕುಂಠ**
**ಪುರದೊಳಗಿಹ ಗೋವಿಂದ– ಅಚ್ಯುತಾನಂತ**
**ತಿರುಪತಿ ನೆಲೆಯಾದಿ ಕೇಶವ ಗೋವಿಂದ** ॥೩॥

ಭಾವ– ಶ್ರೀ ಹರಿಯ ಲೀಲಾವಿನೋದಗಳನ್ನು, ಗುಣವಿಶೇಷಗಳನ್ನು ಕೊಂಡಾಡುವ ಸ್ತೋತ್ರರೂಪದ ಕೀರ್ತನೆ ಇದು.

ಅರ್ಥ– ಕುಮುದಲೋಚನ = ಕುಮುದದಂತೆ ಕಣ್ಣುಳ್ಳವನು (ವಿಷ್ಣು)

೧. ತಮನ... ತಂದೆ= ಮತ್ಸ್ಯಾವತಾರ
ಅಮರ... ಇತ್ತೆ = ಕೂರ್ಮಾವತಾರ
ರಮಣಿಯ... ರೂಪಿ = ವರಾಹಾವತಾರ
ಭ್ರಮಿಸಿ... ಉದ್ಭವಿಸಿದೆ = ನರಸಿಂಹಾವತಾರ
ಕ್ಷಮೆ... ಚಾರಿಯೆ = ವಾಮನಾವತಾರ
ಸಮರ... ಕೊಂದೆ = ಪರಶುರಾಮಾವತಾರು
ಕಮಲಾಕ್ಷ... ದಿಟ್ಟ = ರಾಮಾವತಾರ
ಮಮತೆ... ಕಾಯ್ದೆ = ಕೃಷ್ಣಾವತಾರ
ರಮಣಿ... ನಿಂತೆ = ಬೌದ್ಧಾವತಾರ
ವಿಮಲ... ನಡೆಸಿದೆ = ಕಲ್ಕ್ಯವತಾರ, ಶಮನ = ಯಮ, ನಾಶ
ಇಂಗಡಲು = ಹಾಲಿನ ಸಮುದ್ರ
ಗಮನ ನಿರ್ಜಿತ = ನಡಗೆಯನ್ನು ಗೆಲ್ಲದವನು
೨. ಬಿನುಗು = ಕ್ಷುಲ್ಲಕ
ವನಜ ಲೋಚನ = ಕಮಲದಂತೆ ಕಣ್ಣುಳ್ಳವನು (ವಿಷ್ಣು)
೩. ಅರಿ = ಹಗೆ, ಅಳವಡದ = ವಶವಾಗದ, ತೆತ್ತೀಸ = ಮೂವತ್ತು ಮೂರು

* * * *



## ೨೩೪
## ಸೌರಾಷ್ಟ್ರ – ಆದಿತಾಳ

**ರಾಮ ಗೋವಿಂದ ಹರೇ ಕೃಷ್ಣ ಗೋವಿಂದ**
**ದಾಮೋದರ ಹರಿ ವಿಷ್ಣು ಮುಕುಂದ** ॥ಪ॥

**ಮಚ್ಛವತಾರದೊಳಾಡಿದನೆ– ಮಂದ**
**ರಾಚಲ ಬೆನ್ನೊಳಾಂತವನೆ**
**ಅಚ್ಚ ಸೂಕರನಾಗಿ ಬಾಳಿದನೆ– ಮದ**
**ಹೆಚ್ಚಿ ಹಿರಣ್ಯಕನ ಸೀಳಿದನೆ** ॥೧॥

**ಬಲಿಯೊಳು ದಾನವ ಬೇಡಿದನೆ– ಕ್ಷಾತ್ರ**
**ಕುಲವ ಬಿಡದೆ ಕ್ಷಯ ಮಾಡಿದನೆ**
**ಜಲನಿಧಿಗೆ ಬಿಲ್ಲ ಹೂಡಿದನೆ– ಕಾಮ**
**ಗೊಲಿದು ಗೊಲ್ಲತಿಯೊಳಾಡಿದನೆ** ॥೨॥

**ಸಾಧಿಸಿ ತ್ರಿಪುರರ ಗೆಲಿದವನೆ– ಪ್ರತಿ**
**ವಾದಿಸಿ ಹಯವೇರಿ ನಲಿದವನೆ**
**ಭೇದಿಸಿ ವಿಶ್ವವ ಗೆಲಿದವನೆ– ಬಾಡ**
**ದಾದಿಕೇಶವರಾಯ ನಮಗೊಲಿದವನೆ** ॥೩॥

ಭಾವ– ದಶಾವತಾರ ಲೀಲೆಗಳನ್ನು ಅಡಕಗೊಳಿಸಿ ಕೇಶವನನ್ನು ಪ್ರಾರ್ಥಿಸಿರುವ ರೀತಿ ಹಿತವಾಗಿದೆ. ಮೊದಲನೆಯ ನುಡಿಯಲ್ಲಿ ಮತ್ಸ್ಯ, ಕೂರ್ಮ, ವರಾಹ, ನರಸಿಂಹಾವತಾರಗಳ ವರ್ಣನೆಯೂ, ಎರಡನೆಯ ನುಡಿಯಲ್ಲಿ ವಾಮನ, ಪರಶುರಾಮ, ರಾಮ, ಕೃಷ್ಣಾವತಾರಗಳ ವರ್ಣನೆಯೂ, ಮೂರನೆಯ ನುಡಿಯಲ್ಲಿ ಬುದ್ಧ ಮತ್ತು ಕಲ್ಕಿ ಅವತಾರಗಳ ವರ್ಣನೆಯೂ ಇದೆ.

ಅರ್ಥ– ಮಚ್ಛ = ಮತ್ಸ್ಯ
ಸೂಕರ = ಹಂದಿ
ಜಲನಿಧಿ = ಸಮುದ್ರ
ಕಾಮಗೊಲಿದು = ಕಾಮಭಾವನೆಯಿಂದ ಪ್ರೀತಿಸಿ
ಹಯ = ಕುದುರೆ

* * * *



## ೨೩೫
## ಪಂತುವರಾಳಿ – ಛಾಪುತಾಳ

**ಈತನೇನೆ ನಿನ್ನ ಮಗನು ॥ಪ॥**
**ಸೀತಾಪತಿ ರಘುನಾಥನೆಂಬವನು ॥ಅ॥**

**ವ್ಯಾಸನ ಜನನಿಯ ವಾಸನೆ ತಾಳ್ದನು**
**ದೇಶದೊಳಗೆ ಬಲು ಪೆಸರುಳ್ಳವನು**
**ನಾಸದೊಳೊರ್ವನ ಪೊತ್ತು ಮುರಿದು ಮು**
**ನೀಶರ ಶಾಪವ ಪಿಡಿದು ಕೊಂದಾತನು ॥೧॥**

**ಆನೆವಾಹನ ಪಿತನ ತಾಯನಳಿದೋನು**
**ಭಾನುಸುತಗೆ ಶಾಪವಿತ್ತವನು**
**ಕಾನನ ಜನನಿಯ ಕೊಂದು ಪ್ರಿಯದಲಿ ನಿ**
**ಧಾನದಿ ಶರಧಿ ಶಯನ ಮಾಡಿದಾತನು ॥೨॥**

**ಮೂಗ್ರಾಮ ಮುರಿದು ವಾಜಿಯನೇರಿದಾತನು**
**ಸಾಗ್ರದಿಂದಿಳೆಯ ಭಾಗ್ಯ ಹಿಂಗಿಸಿದ**
**ಯೊಗ್ಯದಿಂದ ಬಳಪತಿತನವನಿಗೆ**
**ಭಾಗ್ಯವಿತ್ತ ಕಾಗಿನೆಲೆಯಾದಿಕೇಶವ ॥೩॥**

ಭಾವ– ಹರಿಯ ದಶಾವತಾರ ಲೀಲೆಗಳನ್ನು ಬೇರೊಂದು ಬಗೆಯಲ್ಲಿ ವರ್ಣಿಸುವ ಕೀರ್ತನೆ ಇದು.

ಅರ್ಥ– ೧. ವ್ಯಾಸನ... ತಾಳ್ದನು = ವ್ಯಾಸನ ತಾಯಿಯಾದ ಸತ್ಯವತಿ (ಮತ್ಸ್ಯಗಂಧೆ)ಯ ವಾಸನೆ ಧರಿಸಿದವನು = ಮತ್ಸ್ಯಾವತಾರ,
ದೇಶದೊಳಗೆ... ಪೆಸರುಳ್ಳವನು = ಕೂರ್ಮಾವತಾರ,

ನಾಸ... ಮುರಿದು = ಮೂಗಿನಿಂದ ಹೊತ್ತು ಒಬ್ಬನನ್ನು (ಹಿರಣ್ಯಾಕ್ಷ) ಕೊಂದವನು = ವರಹಾವತಾರ,

ಮುನೀಶ್ವರ... ಕೊಂದಾತನು = ನರಸಿಂಹಾವತಾರ?

೨. ಆನೆವಾಹನ... ಅಳೆದೋನು = ಭಗದತ್ತನ ತಂದೆಯಾದ ನರಕಾಸುರನ ತಾಯಿಯಾದ ಭೂದೇವಿಯನ್ನು ಅಳೆದವನು= ವಾಮನಾವತಾರ (ಆನೆ ವಾಹನ = ಭಗದತ್ತ)

ಭಾನು... ವಿತ್ತವನು = ಕರ್ಣನಿಗೆ ಶಾಪ ಕೊಟ್ಟವನು = ಪರಶುರಾಮಾವತಾರ,

ಕಾನನ... ಕೊಂದು = ರಾಮಾವತಾರ? (ಪಾಠ ಅಸ್ಪಷ್ಟ).

ನಿಧಾನದಿ... ಆತನು = ಕೃಷ್ಣಾವತಾರ!

೩. ಮೂಗ್ರಾಮ ಮುರಿದು = ಮೂರು ಪಟ್ಟಣಗಳನ್ನು ಹಾಳು ಮಾಡಿ = ಬೌದ್ಧಾವತಾರ,

ವಾಜಿಯನೇರಿದಾತನು = ಕುದುರೆಯನ್ನೇರಿದಾತನು = ಕಲ್ಕ್ಯವತಾರ

* * * *



## ೨೩೬
## ಕಾಂಬೋದಿ – ಅಟತಾಳ

**ಮಗುವಿನ ಮರುಳಿದು ಬಿಡದಲ್ಲ– ಈ ||ಪ||**
**ಜಗದೊಳು ಪಂಡಿತರಿದ ಬಿಡಿಸಿ ||ಅ||**

**ನೀರನು ಕಂಡರೆ ಮುಳುಗುತಿದೆ– ತನ್ನ**
**ಮೋರೆಯ ತೋರದೆ ಆಡುತಿದೆ**
**ಧಾರಿಣಿ ಹಲ್ಲಲಿ ಎಳೆಯುತಿದೆ– ದೊಡ್ಡ**
**ಭೈರವಾಕಾರದಿ ಕೂಗುತಿದೆ ||೧||**

**ಪೊಡವಿಯ ಕೊಟ್ಟರೆ ಅಳೆಯುತಿದೆ– ತನ್ನ**
**ಕೊಡಲಿಯೊಳು ಭೂಪರ ಕಡಿಯುತಿದೆ**
**ಅಡವಿ ಕೋತಿಗಳ ಕೂಡುತಿದೆ– ಚೆಲ್ವ**
**ಮಡದಿಯರನು ಹಿಡಿದೆಳೆಯುತಿದೆ ||೨||**

**ಉಟ್ಟಿದ್ದ ವಸ್ತ್ರವ ಬಿಸುಡುತಿದೆ– ತನ್ನ**
**ದಿಟ್ಟ ತೇಜಿಯನೇರಿ ನಲಿಯುತಿದೆ**
**ಸೃಷ್ಟಿಯೊಳು ಭೂಸುರರ ಪೊರೆವ ಜಗ**
**ಜಟ್ಟಿಯಾದಿಕೇಶವ ರಾಯನಂತೆ ||೩||**

ಭಾವ– "ಮರುಳು ಮಗು"ವಿನ ರೂಪಕದಲ್ಲಿ ಹರಿಯ ದಶಾವತಾರಗಳ ಲೀಲೆಯನ್ನು ಚಿತ್ರಿಸಲಾಗಿದೆ. ಹುಚ್ಚು ಮಗುವಿನ ಅವಾಂತರ ಕೆಲಸಗಳನ್ನು ನೆರೆಹೊರೆಯವರಿಗೆ ಹೇಳಿಕೊಂಡು, ಇದನ್ನು ಅಂಕೆಯಲ್ಲಿಟ್ಟುಕೊಂಡು ಸುಧಾರಿಸುವ ಬಗೆ ಹೇಗೆ? ಎಂದು ತಂದೆ ತಾಯಿಗಳು ತಮ್ಮ ತಲೆನೋವನ್ನು ತೋಡಿಕೊಳ್ಳುವ ತಂತ್ರವನ್ನಲ್ಲಿ ಕನಕದಾಸರು ಬಳಸಿಕೊಂಡಿದ್ದಾರೆ.

ಅರ್ಥ– ೧. ನೀರನು... ಮುಳುಗುತಿದೆ– ಮತ್ಸ್ಯಾವತಾರ
ತನ್ನಮೋರೆಯ... ಆಡುತಿದೆ– ಕೂರ್ಮಾವತಾರ (ಅಂದರೆ ಮಂದರ ಪರ್ವತದಡಿ ಮುಖ ಕಾಣುತ್ತಿಲ್ಲ)
ಧಾರಿಣಿ... ಎಳೆಯುತಿದೆ = ವರಾಹಾವತಾರ
ದೊಡ್ಡ... ಕೂಗುತಿದೆ = ನರಸಿಂಹಾವತಾರ

೨. ಪೊಡವಿಯ... ಅಳೆಯುತಿದೆ= ವಾಮನಾವತಾರ
ಕೊಡಲಿ... ಕಡಿಯುತಿದೆ– ಪರಶುರಾಮಾವತಾರ
ಅಡವಿ... ಕೂಡುತಿದೆ– ರಾಮಾವತಾರ
ಚೆಲ್ವ... ಎಳೆಯುತಿದೆ– ಕೃಷ್ಣಾವತಾರ

೩. ಉಟ್ಟಿದ್ದ... ಬಿಸುಡುತಿದೆ = ಬೌದ್ಧಾವತಾರ
ದಿಟ್ಟ.... ನಲಿಯುತಿದೆ = ಕಲ್ಕ್ಯವತಾರ
ಭೂಸುರರ ಪೊರೆವ = ಬ್ರಹ್ಮಜ್ಞಾನಿಗಳನ್ನು ಕಾಪಾಡುವ

* * * *



## ೨೩೭
## ರಾಗ? – ತಾಳ?

**ಮಗುವ ತಡೆಯಬಾರದೆ ಮಾನಿನಿಯರು**
**ಸುಗುಣ ಚೆನ್ನಿಗನೆಂಬ ಸೊಬಗುಳ್ಳ ಮಗುವ ॥ಪ॥**

**ನೀರೊಳಗೆ ಪೊಕ್ಕು ತಾ ಬೀರುತಿದೆ ಮಾತುಗಳ**
**ಧರಣಿಧರ ತಳಕಿಳಿದು ಬಾರದಿದೆಕೊ**
**ಘೋರ ಪಾತಕವೆಂಬ ಬೇರ ಮೆಲ್ಲುತಲಿದೆಕೊ**
**ಬಾರಯ್ಯ ಎನೆ ಕೋಪವೇರುತಿಹ ಮಗುವ ॥೧॥**

**ಬೇಡುತಿದೆ ದಾನವನು ನೀಡುತಿದೆ ಪಾದವನು**
**ರೂಢಿಪಾಲರ ಕಂಡು ಕೊಲ್ಲುತಿದೆಕೊ**
**ಓಡುತಿದೆ ಮೃಗದೊಡನೆ ಆಡುತಿದೆ ಕಪಿಗಳೊಳು**
**ನೋಡಲ್ಕರಿ ನಾಗರ ಹಾವ ತುಳಿಯುತಿದೆಕೊ ॥೨॥**

**ಇತ್ತ ಬಾರೆಂದೆನಲು ಬತ್ತಲೆ ನಿಲ್ಲುತಿದೆಕೊ**
**ಮತ್ತೆ ತೇಜಿಯನೇರಿ ನಲಿಯುತಿದೆಕೊ**
**ಹತ್ತೆ ಬಂದವರಿಗೆ ಅರ್ತಿಯನು ನೀಡುತಿಹ**
**ನಿತ್ಯ ವೈಕುಂಠದಲಿ ನಲಿವ ಮಗುವ ॥೩॥**

ಭಾವ– ಶ್ರೀ ಹರಿಯನ್ನು ತೀಟೆಯಾಡುವ, ತಂಟೆ ಮಾಡುವ ತುಂಟ ಮಗುವನ್ನಾಗಿ ಮಾಡಿ, ಕಂಡವರು ಅಂಥ ತೀಟೆಯಾಡದಂತೆ ತಡೆಯಬಾರದೆ ಎಂದು ತಾಯಿ ಸುತ್ತಮುತ್ತಲ ಜನಕ್ಕೆ ವಿನಂತಿಸಿ ಕೊಳ್ಳುವ ಧಾಟಿಯಲ್ಲಿ, ತುಂಟಮಗುವಿನ ದಶಾವತಾರದ ತಂಟೆ–ಗಂಟೆಗಳನ್ನು ಈ ಕೀರ್ತನೆಯ ದೇಗುಲದಲ್ಲಿ ಸಾಲಾಗಿ ನೇತು ಹಾಕಿದ್ದಾರೆ ಕನಕದಾಸರು– ಬಡಿದರೆ ನಾದ ಹೊರಹೊಮ್ಮುವಂತೆ.

ಅರ್ಥ– ೧. ನೀರೊಳಗೆ... ಮಾತುಗಳ = ಮತ್ಸ್ಯಾವತಾರ
(ಮಾತುಗಳು=ವೇದಗಳು)
ಧರಣಿ... ಬಾರದಿದೆಕೊ = ಕೂರ್ಮಾತಾರ
(ಧರಣಿಧರ = ಪರ್ವತ
ಘೋರ... ಮೆಲ್ಲುತಲಿದೆಕೋ = ವರಾಹಾವತಾರ (ಹಂದಿ ಬೇರನ್ನು ಗೆಡ್ಡೆಗೆಣಸನ್ನು ತಿನ್ನುತದೆ)
ಬಾರಯ್ಯ... ಮಗುವ = ನರಸಿಂಹಾವತಾರ (ಕಂಬದಿಂದ ಬಾರ ಎಂದಾಗ)
೨. ಬೇಡುತಿದೆ... ಪಾದವನು = ವಾಮನಾವತಾರ
ರೂಢಿ... ಕೊಲ್ಲುತಿದೆಕೊ = ಪರಶುರಾಮಾವತಾರ (ರೂಢಿಪಾಲರು ರಾಜರು)
ಓಡುತಿದೆ... ಕಪಿಗಳೊಳು = ರಾಮಾವತಾರ (ಮೃಗ = ಜಿಂಕೆ)
ನೋಡಲು... ತುಳಿಯುತಿದೆಕೊ = ಕೃಷ್ಣಾವತಾರ
(ಕರಿನಾಗರ = ಕಾಳಿಂಗ ಸರ್ಪ)
೩. ಇತ್ತ... ನಿಲ್ಲುತಿದೆಕೊ = ಬೌದ್ಧಾವತಾರ
ಮತ್ತೆ... ನಲಿಯುತಿದೆಕೊ = ಕಲ್ಕ್ಯವತಾರ
ಹತ್ತೆ = ಹತ್ತಿರ
ಅರ್ತಿ = ಪ್ರೀತಿ

* * * *



## ೨೩೮
## ಭೂಪಾಳಿ – ಝಂಪೆ

ನೋಡಯ್ಯ ನಿನ್ನ ದಾಸರ ಮೇಲೆ ಕೃಪೆಗಳನು
ಮಾಡಯ್ಯ ಮನ್ಮನಕೆ ಸಂತಸವನು
ತೀಡಯ್ಯ ಭವಭಯದ ಪಾತಕಂಗಳ ದಾನ
ವಾಡ ಗುಡ್ಡದ ತಿರುಮಲೇಶ ಸರ್ವೇಶ ॥೧

ಆದಿಯಲಿ ವೇದಗಳ ಕದ್ದುಕೊಂಡೊಯ್ದವನ
ಸಾಧನಂಗೆಯ್ವೆನೆಂದಾಕ್ಷಣದೊಳು
ಪೋದನೆಲ್ಲೆನುತ ಶರನಿಧಿಯೊಳಗೆ ಪೊಕ್ಕ ಮ
ತ್ತಾ ದಿತ್ಯನಂ ಕೊಂದು ತಿಕ್ಕಿಮುಕ್ಕೆ
ನೀ ದಯಾ ಪಾತ್ರನೆಂಬುದ ಕೇಳಿ ನಾನರಿತೆ
ಭೂ–ಧರೆಯ ಸುರರ ನೀ ಸಲುಹಲಾಗ
ಪೋದ ನಿಗಮಂಗಳನು ತಂದು ಸಲೆ ರಕ್ಷಿಸಿದೆ
ಆದಿ ಮತ್ಸ್ಯಾವತಾರ ಶರಣೆಂಬೆನು ॥೧॥

ಅಮರ ದೈತ್ಯರು ಕೂಡಿ ಅಂಬುಧಿಯ ಕಡೆಯಲಿಕೆ
ಕ್ರಮದಿ ಮಂದರಕೆ ಕಟ್ಟಿದ ಶೇಷನ
ತಮತಮಗೆ ಪಿಡಿದೆಳೆಯೆ ತಲ್ಲಣಿಸಿ ಫಣಿರಾಜ
ಸಮ ವಿಷದ ಕರ್ಬೊಗೆಯನುಗುಳುತಿರಲು
ಮಮಕಾರ ತತ್ತ್ವದಲಿ ಮತ್ತೊಂದು ರೂಪಾಗಿ
ಅಮಿತಗುಣ ಮೂರ್ತಿ ನೀನಂದು ಬೇರೆ
ಸುಮತವನು ಬೆನ್ನಲ್ಲಿ ಸಲೆ ಆತು ರಕ್ಷಿಸಿದೆ
ಕಮಠಮೂರುತಿ ನಿನಗೆ ಶರಣೆಂಬೆನು ॥೨॥

ಚಿನ್ನಗಣ್ಣವನೆಂಬನೊರ್ವ ಖಳ ಭೂದೇವಿ
ಕನ್ನಿಕೆಯನೊಯ್ಯುತಿರೆ ಕನಲಿ ಮನದಿ
ಇನ್ನು ಅವನನು ಸೆಣಸಿ ಜಯಿಸುವವರನು ಕಾಣೆ
ನೆನ್ನುತಲಿ ರೋಮಗಳನುಬ್ಬೆತ್ತುತ
ತನ್ನ ಮುಂಗೋರೆಗಳ ಮಸೆದೊಡನೆ ರಕ್ಕಸನ
ಬೆನ್ನಟ್ಟಿ ಬರಸೆಳೆದು ಸದೆದೊರಗಿಸಿ
ಚೆನ್ನಾಗಿ ಧರಣಿಯನು ತಂದು ಸಲೆ ರಕ್ಷಿಸಿದೆ
ಹನ್ನೆರಡು ಪೆಸರವನೆ ಶರಣೆಂಬೆನು ॥೩॥

ಹೇಮಕಶ್ಯಪನೆಂಬ ನಾಮಜನ ಸುತನೊರ್ವ
ನಾ ಮಹಾಘನವೆಂದು ನೆನೆಯುತಿರಲು
ತಾಮಸದ ಖಳ ತನ್ನ ತನುಜನನು ಮಥಿಸುತಿರೆ
ರಾಮನನು ತೋರೆಂದು ಬಾಧಿಸುತಿರೆ
ಧೂಮಜ್ವಾಲೆಗಳೊಡನೆ ಭುಗುಭುಗಿಲು ಛಿಟಿಲೆನುತ
ಆ ಮಹಾ ರಕ್ಕಸನ ಪೊಡೆಯ ಸೀಳಿ
ಪ್ರೇಮದಲಿ ಪ್ರಹ್ಲಾದಗೊಲಿದು ಪಟ್ಟವನಿತ್ತೆ
ಸಾಮಜಾರಿಯ ವದನ ಶರಣೆಂಬೆನು ॥೪॥

ಬಲಿಯಧ್ವರದ ಸಾಲೆಗೊಂದು ವೇಷವನಾಂತು
ಸಲೆ ಬಂದು ಧರೆಯ ಮೂರಡಿಯ ಬೇಡೆ
ಒಲಿದು ಇತ್ತಪೆನೆನಲು ಧಾರೆಯನೆರೆಯಲಸುರ
ಕುಲಗುರುವು ಜುಳಿಗೆಯೊಳು ತಡೆದು ನಿಲಲು
ಸಲಿಲ ವರ್ಜಿತನಯನನನು ಮಾಡಿ ಆಕಾಶ
ನೆಲವೆರಡು ಪಾದವನ್ನಳೆದ ಬಳಿಕ
ತಲೆ ಮೇಲೆ ಇರಿಸೆನಲು ತಳತಳಿಸಿ ಅವನ ಬಾ
ಗಿಲ ಕಾಯ್ದ ವಾಮನನೆ ಶರಣೆಂಬೆನು ॥೫॥

ರೇಣುಕೆಯ ಬಸುರಿನಲಿ ಜನಿಸಿ ಪಿತನಾಜ್ಞೆಯನು
ಮಾಣಬಾರದು ಎಂಬ ಮತವ ಪಿಡಿದು



ಕ್ಷೂಣವಿಲ್ಲದೆ ತಾಯ ಶಿರವರಿದು ತಂದೆಯನು
ಪ್ರಾಣಹತ್ಯವ ಮಾಡಿದರ ಕುಲವನು
ಕ್ಷೋಣಿಗೆರಗಿಸಿ ಕಾರ್ತವೀರ್ಯಾರ್ಜುನನ ಮಡುಹಿ
ಜಾಣತನದಲಿ ಭೂದಾನಗಳ ಭೂಸುರರ
ಕಾಣುತಲೆ ಕರೆಕರೆದು ಕೊಟ್ಟೆಯ್ಯೆ ನೀನು ಪೂ
ಬಾಣಜನಕನೆ ರಾಮ ಶರಣೆಂಬೆನು ॥೬॥

ಸೀತೆಯನು ಕದ್ದು ಒಯ್ದವನ ಕೊಲ್ಲುವ ಭರದಿ
ಭೂತಳದ ಕಪಿಗಳನು ಕೂಡಿಕೊಂಡು
ಸೇತುವೆಯ ಕಟ್ಟಿ ಶರನಿಧಿ ದಾಟಿ ಬರಲಾಗ
ಭೂತಗಣ ಸಂತತಿಯು ನಡುನಡುಗುತಿರಲು
ಚೇತನದ ರಾವಣೇಶ್ವರ ಕುಂಭಕರ್ಣ ಸ–
ತ್ತ್ವಾತಿಶಯ ರಕ್ಕಸರ ಇರಿದೊರಗಿಸಿ
ಮಾತು ಲಾಲಿಸಿ ವಿಭೀಷಣಗೆ ಪಟ್ಟವನಿತ್ತ
ದಾತ ರಘುನಾಥನೇ ಶರಣೆಂಬೆನು ॥೭॥

ಶಕಟ ಕುಕ್ಕುಟ ಧೇನುಕಾಸುರರ ಪೂತನಿಯ
ಬಕ ವತ್ಸಹಕ ವೃಷಾಸುರರ ಮುಖ್ಯರ
ಪ್ರಕಟದಿಂದರಿದು ಕರಿಯನು ಸೀಳಿ ತನಗೆ ಸಂ
ಮುಖರಾದ ಮಲ್ಲರನು ಇರಿದೊರಗಿಸಿ
ಮುಕುರ ದಂತದ ಹರ್ಮ್ಯದೊಳಗಿಂದ ಕಂಸನ
ಪುಕಪುಕನೆ ತಿವಿದವನನಿರಿದೊರಗಿಸಿ
ಸಕಲವೆಸೆದಿರ್ದ ಮಧುರಾಪುರವ ಉಗ್ರಸೇ
ನಕಗಿತ್ತ ಕೃಷ್ಣನೇ ಶರಣೆಂಬೆನು ॥೮॥

ಮೂರು ಪುರದಬಲೆಯರ ವ್ರತಗಳನು ಕೆಡಿಸಲಿಕೆ
ಬೇರೊಂದು ಅಶ್ವತ್ಥ ವೃಕ್ಷವಾಗಿ
ನಾರಿಯರ ವ್ರತಭಂಗಗೆಯ್ಯಲಾ ದೆಸೆಯಿಂದ
ಊರುತ್ರಯವದು ತಿರುಗುವುದು ನಿಲ್ಲಲಾಗ

**ನೀರ ಮಸ್ತಕದಲ್ಲಿ ಧರಿಸಿದನ ಕರವಿಲ್ಲ**
**ನಾರಿಯೊಳು ನಾರಾಯಣಾಸ್ತ್ರವಾಗಿ**
**ಘೋರತನವೆತ್ತ ತ್ರಿಪುರದ ಕೀಲ ಪರಿದ ಮದ**
**ನಾರಿ ಸಖ ಬುದ್ಧನೇ ಶರಣೆಂಬೆನು ॥೯॥**

**ಮದವೆತ್ತ ರಕ್ಕಸರು ಮಹಿಯೊಳಗೆ ಹೆಚ್ಚಲು**
**ತ್ರಿದಶರಾದ್ಯಂತ ನಡನಡನೆ ನಡುಗುತಿರಲು**
**ಬೆದರಬೇಡೆನುತ ಅಭಯವನಿತ್ತು ಮುದದಿಂದವ**
**ಸುಧೆಯೊಳಗೆ ಬಂದು ಜನಿಸಿ**
**ಕುದುರೆವಾಹನನಾಗಿ ಕುಂಭಿನಿಯ ಮೇಲೆ ತನ**
**ಗಿದಿರಾದ ರಾವುತರನಿರಿದೊರಗಿಸಿ**
**ಮೊದಲ ಭಾಷೆಯನು ದಿವಿಜರಿಗಿತ್ತೆ ಬೇಗದಲಿ**
**ಚದುರ ಕಲ್ಕ್ಯವತಾರ ಶರಣೆಂಬೆನು ॥೧೦॥**

**ಇಂತು ದಶ ಅವತಾರಗಳನೆತ್ತಿ ರಕ್ಕಸರ**
**ಸಂತತಿಯನೊರಸಿ ಭೂಭಾರವಿಳುಹಿ**
**ಕಂತುಪಿತ ತಿರುವೆಂಗಳೇಶ ತಿರುಮಲೆಯೊಳಗೆ**
**ಚಿಂತಿಸುವ ಭಕ್ತರನು ಪಾಲಿಸುತಲಿ**
**ದಂತಿರಾಜನ ಪೊರೆದು ದಾನವಾಡಿಗೆ ಬಂದು**
**ನಿಂತಾದಿಕೇಶವನೆ ಶರಣೆಂಬೆನು ॥೧॥**

ಭಾವ– ದಶಾವತಾರಗಳ ಸವಿವರ ವರ್ಣನೆ ಸುಂದರ ಭಾವಭಾಷೆಯಲ್ಲಿ ಅಭಿವ್ಯಕ್ತಗೊಂಡಿರುವುದು ಈ ಕೀರ್ತನೆಯಲ್ಲಿ ಕಂಡುಬರುತ್ತದೆ. ವಾಕ್ ಸಿದ್ಧಿ ಇರುವ ಕನಕದಾಸರು ಯಾವುದೇ ಭಾವಾಭಿವ್ಯಕ್ತಿಗೆ ಕಕಮಕಗೊಂಡಂತೆ ಪರದಾಡುವುದನ್ನು ಎಲ್ಲೂ ಕಾಣುವುದಿಲ್ಲ ಎಂಬುದಕ್ಕೆ ಇದನ್ನೂ ಸೇರಿಸಿಕೊಂಡು ಬಹುತೇಕ ಕೀರ್ತನೆಗಳು ಸಾಕ್ಷಿಯಾಗಿ ನಿಲ್ಲುತ್ತವೆ.



ಅರ್ಥ– ಮನ್ಮನಕೆ (<ಮತ್+ಮನಕೆ) = ನನ್ನ ಮನಸ್ಸಿಗೆ
ತೀಡಯ್ಯ = ನಾಶಪಡಿಸಯ್ಯ, ಹೊಡೆದು ಅಟ್ಟಯ್ಯ
ದಾನವಾಡದ ಗುಡ್ಡ = ಧಾರವಾಡದ ಹೆಸರಿನ ಸಾದೃಶ್ಯಯದ ಮೇಲೆ ದಾನವಾಡ ಎಂಬ ಹೆಸರನ್ನು ಕನಕದಾಸರು ಟಂಕಿಸಿದ್ದಾರೆ. ಕಾಗಿನೆಲೆಯ ಬಳಿಯ ಕುಮ್ಮೂರು ಗುಡ್ಡದ ಮೇಲೆ ವೆಂಕಟೇಶನ ಗುಡಿಯಿದೆ. ಆ ಪ್ರದೇಶವನ್ನು ದಾನವಾಗಿ (ದೇವರಿಗೆ ಹೂದೋಟ ಇತ್ಯಾದಿಗಳನ್ನು ಮಾಡಲು) ಯಾರೋ ನೀಡಿದರು ಎಂಬ ಕಥಾ ಪ್ರತೀತಿ ಇರುವುದರಿಂದ "ದಾನವಾಡದ ಗುಡ್ಡ" ಎಂದರೆ ಕುಮ್ಮೂರಿನ ಗುಡ್ಡ ಇರಬಹುದು ಎಂದು ಊಹಿಸಬಹುದು.

೧. ಸಾಧನಂಗೆಯ್ = ಗುರಿ ಸಾಧಿಸು
ಶರನಿಧಿ = ಸಮುದ್ರ
ದಿತ್ಯನಂ = ದಿತಿಯ ಮಗ (ರಾಕ್ಷಸ)
ಮುಕ್ಕೆ = ಗಬಗಬನೆ ತಿಂದು ಇಲ್ಲವಾಗಿಸು
ಭೂ = ಭೂಮಿ
ಧರೆಯ ಸುರರು = ಬ್ರಹ್ಮಜ್ಞಾನಿಗಳು
ನಿಗಮ = ವೇದ

೨. ಅಮರ ದೈತ್ಯರು = ದೇವತೆಗಳು ಮತ್ತು ರಾಕ್ಷಸರು
ಅಂಬುಧಿ = ಸಮುದ್ರ
ಶೇಷನ = ಸರ್ಪವನ್ನು
ಫಣಿರಾಜ = ಆದಿಶೇಷ
ಆತು = ಧರಿಸಿ, ಹಿಡಿದು (<ಆಂತು)
ಕಮಠಮೂರುತಿ = ಕೂರ್ಮಾವತಾರಿ (ಕೂರ್ಮ = ಆಮೆ)

೩. ಚಿನ್ನಗಣ್ಣ = ಹಿರಣ್ಯಾಕ್ಷ (ಅಚ್ಚಗನ್ನಡದಲ್ಲಿ ಹೊಸ ಹೊಸ ಶಬ್ದಗಳನ್ನು ಟಂಕಿಸುವ ಶಕ್ತಿ ಕನಕದಾಸರಲ್ಲಿ ಅಗಾಧವಾಗಿದೆ)
ಕನಲಿ = ಕೋಪಗೊಂಡು
ಮುಂಗೋರೆಗಳ ಮಸೆದು = ಮುಂದಿನ ಕೋರೆ ಹಲ್ಲುಗಳನ್ನು ಲಟಕಟಿಸಿ ಉಜ್ಜಿ

ಸದೆದೊರಗಿಸಿ = ಒದ್ದು ಸಾಯಿಸಿ
ಹನ್ನೆರಡು ಪೆಸರವನು = ದಾಮೋದರ (ವಿಷ್ಣು)

೪. ಹೇಮ..... ನಾಮಜನ = ಹಿರಣ್ಯಕಶ್ಯಪ ಎಂಬ ಹೆಸರಿನಿಂದ ಹುಟ್ಟಿದವನ
ತನುಜ = ಮಗ
ಪೊಡೆ = ಹೊಟ್ಟೆ
ಸಾಮಜ = ಆನೆ
ಸಾಮಜಾರಿ = ಆನೆಯ ಶತ್ರು (ಸಿಂಹ)
ಸಾಮಜಾರಿವದನ = ಸಿಂಹದ ಮುಖವುಳ್ಳವನು (ನರಸಿಂಹ)

೫. ಅಧ್ವರ = ಯಜ್ಞ
ಸಾಲೆ = ಶಾಲೆ
ಅಸುರ ಕುಲಗುರು = ಶುಕ್ರಾಚಾರ್ಯ
ಜುಳಿಗೆ (<ಜುಳಿಕ) = ಕಮಂಡಲು, ಗಿಂಡಿಗಳಿಂದ ನೀರು ಹೊರಬರುವ ನಳಿಕೆ, ಬಾಯಿ
ಸಲಿಲವರ್ಜಿತ ನಯನನನು ಮಾಡಿ = (ಒಂದು) ಕಣ್ಣನ್ನು ನೀರಿಲ್ಲದಂತೆ ಬತ್ತಿಸಿ ಅಂದರೆ ಕಣ್ಣು ಕಳೆದು.

೬. ಮಾಣಬಾರದು = ಅಲಕ್ಷಿಸಬಾರದು, ತಿರಸ್ಕರಿಸಬಾರದು
ಕ್ಷೂಣವಿಲ್ಲದೆ = ಹಿಂದೆಗೆಯದೆ, ಇರುಸು ಮುರುಸುಗೊಳ್ಳದೆ
ತಂದೆಯನು..... ಕುಲವನು = ಜಮದಗ್ನಿಯನ್ನು ಕೊಂದ ಕಾರ್ತವೀರ್ಯಾರ್ಜುನನ ಕುಲ (ಕ್ಷತ್ರಿಯವಂಶ)
ಕ್ಷೋಣಿ = ಭೂಮಿ
ಭೂಸುರರು = ಬ್ರಾಹ್ಮಣರು
ಪೂಬಾಣ ಜನಕ = ಮನ್ಮಥನ ತಂದೆ (ವಿಷ್ಣು)

೭. ಇರಿದೊರಗಿಸಿ = ತಿವಿದು ಸಾಯಿಸಿ

೮. ಮುಕುರದಂತದ ಹರ್ಮ್ಯ = ಕನ್ನಡಿ ಮತ್ತು ದಂತದ ಸೌಧ

೯. ನೀರ... ಧರಿಸಿದವನ = ಶಿವನ
ಕರವಿಲ್ಲ ನಾರಿಯೊಳು = ಬಿಲ್ಲಿನ ಹೆದೆಯಲ್ಲಿ
ಕರವಿಲ್ಲ = ಕೈಬಿಲ್ಲಿನ
ಮದನಾರಿ ಸಖ = ಶಿವನ ಗೆಳೆಯ (ವಿಷ್ಣು)



೧೦. ಮಹಿ = ಭೂಮಂಡಲ
ತ್ರಿದಶ= ದೇವತೆ
ತ್ರಿದಶರಾದ್ಯಂತ = ಸಮಗ್ರ ದೇವತೆಗಳು
ಕುಂಭಿನಿ = ಭೂಮಿ
ದಿವಿಜ = ದೇವತೆ

೧೧. ಕಂತುಪಿತ = ಮನ್ಮಥನ ತಂದೆ (ವಿಷ್ಣು)
ತಿರುವೆಂಗಳೇಶ (<ತಿರುವೆಂಗಡೇಶ<ತಿರುವೆಂಕಟೇಶ) = ಶ್ರೀ ವೆಂಕಟೇಶ
ದಂತಿರಾಜ = ಗಜೇಂದ್ರ

* * * *

## ೨೩೯
## ಕಾಂಬೊದಿ – ಅಟತಾಳ

**ಏನು ಕಾರಣ ಬಾಯಿ ತೆರದಿ– ಪೇಳೆಲೊ**
**ದಾನವಾಂತಕ ಅಹೋಬಲ ನಾರಸಿಂಹನೆ ॥ಪ॥**

**ನಿಗಮ ಚೋರನ ಕೊಲಲು ತೆರೆದೆಯೋ ಈ ಬಾಯ**
**ನಗವ ಬೆನ್ನಲಿ ಹೊತ್ತು ನಡುಗಿ ತೆರೆದೆಯೊ ಬಾಯ– ಭೂ**
**ಮಿಗಳ್ಳನ ಕೊಂದು ಬಳಲಿ ತೆರೆದೆಯೊ ಬಾಯ**
**ಜಗವರಿಯೆ ಪೇರುರವಿರಿದ ಪ್ರಹ್ಲಾದ ವರದ**
**ಅಹೋಬಲ ನಾರಸಿಂಹನೆ ॥೧॥**

**ಬಲಿಯ ದಾನವ ಬೇಡಲೆಂದು ತೆರೆದೆಯೊ ಬಾಯ**
**ಛಲದಿಂದ ಕ್ಷತ್ರಿಯರ ಕೊಲಲು ತೆರೆದೆಯೊ ಬಾಯ**
**ಕುಲಸತಿಯ ಅರಸಿ ಕಾಣದೆ ತೆರೆದೆಯೊ ಬಾಯ**
**ಮಲೆತು ಮಾವನ ಕೊಂದು ನಿಂದೆ– ಇಂಥ**
**ಇಳಿಯಬಾರದ ಭೂಮಿಗಿಳಿದ ನಾರಸಿಂಹ ॥೨॥**

**ನಾರಿಯರ ಚೆಲ್ವಿಕೆಯ ನೋಡಿ ತೆರೆದೆಯೊ ಬಾಯ**
**ಏರಿ ಅಶ್ವವ ಮೆಟ್ಟಿ ಅಳಲಿ ತೆರೆದೆಯೊ ಬಾಯ**
**ಮಾರಪಿತ ಕಾಗಿನೆಲೆಯಾದಿಕೇಶವ ರಂಗ**
**ಧೀರ ಶ್ರೀನಾಥ ಭವನಾಶ ಪೇಳೋ ಪೇಳು**
**ಏತಕೆ ಅಹೋಬಲ ನರಸಿಂಹನೆ? ॥೩॥**

ಭಾವ– ಕನಕದಾಸರು ಅಹೋಬಲದ ನಾರಸಿಂಹನ ತೆರೆದ ಬಾಯನ್ನು ಕಂಡು ದಶಾವತಾರಗಳ ಹಿನ್ನೆಲೆಯಲ್ಲಿ ತಮ್ಮದೇ ಆದ ಧಾಟಿಯಲ್ಲಿ ವರ್ಣಿಸಿದ್ದಾರೆ.



ಅರ್ಥ– ದಾನವಾಂತಕ = ರಾಕ್ಷಸ ಸಂಹಾರಿ

೧. ನಿಗಮ ಚೋರ = ವೇದಗಳನ್ನು ಕದ್ದ ಸೋಮಕ (ಮತ್ಸ್ಯಾವತಾರ)
ನಗ = ಬೆಟ್ಟ (ಮಂದರ ಪರ್ವತ) (ಕೂರ್ಮಾವತಾರ)
ಭೂಮಿಗಳ್ಳ = ಹಿರಣ್ಯಾಕ್ಷ (ವರಾಹಾವತಾರ)
ಪೇರುರವಿರಿದ = ದೊಡ್ಡ ಎದೆಯನ್ನು ಸೀಳಿದ (ನರಸಿಂಹಾವತಾರ)

೨. ಬಲಿಯ... ಬಾಯ = ವಾಮನಾವತಾರ
ಛಲ... ಬಾಯ = ಪರಶುರಾಮವತಾರ
ಕುಲ... ಬಾಯ = ರಾಮಾವತಾರ
ಮಲೆತು... ನಿಂದೆ = ಕೃಷ್ಣಾವತಾರ

೩. ನಾರಿಯರ... ಬಾಯ ಬೌದ್ಧವತಾರ
ಏರಿ... ಬಾಯ = ಕಲ್ಕ್ಯವತಾರ
ಮಾರಪಿತ = ಮನ್ಮಥನ ತಂದೆ (ವಿಷ್ಣು)
ಭವನಾಶ = ಹುಟ್ಟುಸಾವನ್ನ ತಪ್ಪಿಸಿ ಮೋಕ್ಷ ನೀಡುವವನು (ವಿಷ್ಣು)

* * * *

## ೨೪೦
## – ಆದಿತಾಳ

**ನಾರಾಯಣನೆ ಈತ– ನಾರಿ ಒಳ್ಳೆಯ**
**ವರಿಗೆ ಮಾಡ್ದ ವಿಘಾತ ॥ಪ॥**

**ಪರಪರಿಯಲಿ ಪೊಗಳುವ ಗೀತ– ನಾನೆಂದ**
**ವರ ಮುರಿದ ಪ್ರಖ್ಯಾತ ॥ಅ॥**

**ಕೈಕಾಲಿಲ್ಲದೆ ಆಡ್ದಾ**
**ಮೈಮೇಲ್ಭಾರವ ಪೊತ್ತು ನೋಡ್ದಾ**
**ಕೋರೆಯಲಿ ತಿವಿದು ಹತ ಮಾಡ್ದಾ**
**ತಾಕೊ ಎಂದು ಒದರಿ ಬಗೆದು ಬೀರ್ದಾ**
**ಅರ್ತಿಯಿಂದ ಪಾತಾಳಕೆ ದೂಡ್ದಾ**
**ಮುನಿಯ ಮಗನಾಗಿ ಕ್ಷತ್ರಿಯರ ಕಾಡ್ದಾ**
**ರಾವಣಗಾಗಿ ಅಂಬುತೆಗೆದು ಹೂಡ್ದಾ**
**ಆ ಜಮುನೆ ಪೊಕ್ಕು ಮೋಜು ಮಾಡ್ದಾ**
**ದಿಗಂಬರ ವೇಷವ ತಾಳ್ದಾ**
**ದಿಗಿದಿಗಿ ಎಂದು ಅಶ್ವವೇರ್ದಾ ॥೧॥**

**ಕಳ್ಳಗಿಂತ ಮಹಾಕಳ್ಳ**
**ಕಲ್ಲನು ಮರೆ ಮಾಡಿಕೊಂಡಿಹನಲ್ಲ**
**ಭೂಮಿ ನೆಗಹುದ ಬಲ್ಲ**
**ಪುಟ್ಟ ಮಗು ಪ್ರಹ್ಲಾದಗೊಲಿದನಲ್ಲ**
**ಎರಡು ಪಾದ ಭೂಮಿ ತಾನೊಲ್ಲ**
**ಇವನ ಕೊಡಲಿಬಾಯಿಗಿದಿರಿಲ್ಲ**
**ಕೋ ಎಂದ ಲಂಕೆಗೆ ಬೆಂಕಿ ಮಲ್ಲ**



**ಕೊಂಕಲಿ ಕೊಳಲನೂದಿ ಗೊಲ್ಲ**
**ಮೈಮೇಲೆ ಗೇಣರಿವೆಯಿಲ್ಲ**
**ಇವ ಮೇಲಾದ ತೇಜಿಯನೇರಬಲ್ಲ ॥೨॥**

**ಬಿಟ್ಟ ಕಣ್ಣಲಿ ವೈರಿ ನೋಡಿ ಕೊಂದ**
**ಮೋರೆ ಮುದುರಿಕೊಂಡಿಹುದೇನು ಚಂದ**
**ದಾಡೇಲಿ ದೂಡಿ ತಂದ**
**ಕಂಬವನೊಡೆದು ಪೊಡವಿಲಿ ಮೂಡೇನೆಂದ**
**ಶುಕ್ರಗೆ ಕಣ್ಣು ಮಾಡಿದನೊಂದ**
**ಕೋಡಗಗಳ ಕೂಡಿ ವನಕ್ಕೆ ಕೇಡು ತಂದ**
**ಹಾಲ್ಮೊಸರ ಮೀಸಲು ಮುರಿದು ತಿಂದ**
**ಬತ್ತಲೆ ನಿಂದು ಹತ್ತುವೆ ಕುದುರೆ ಎಂದ**
**ಭರದಿ ಕಾಗಿನೆಲೆಯಾದಿಕೇಶವನೆಂದ ॥೩॥**

ಭಾವ– ಶ್ರೀಹರಿಯ ದಶಾವತಾರಗಳ ವಿಭಿನ್ನ ವರ್ಣನೆಯ ಕೀರ್ತನೆಯಿದು. ಒಂದೊಂದು ನುಡಿಯಲ್ಲೂ ದಶಾವತಾರಗಳ ವರ್ಣನೆ ಇದೆ; ಆದರೆ ಅಭಿವ್ಯಕ್ತಿ ವಿಧಾನದಲ್ಲಿ ಭಿನ್ನತೆಯಿದೆ. ಆದಿಪ್ರಾಸವನ್ನು ಪಾಲಿಸದೆ ಅಂತ್ಯ ಪ್ರಾಸವನ್ನು ಪಾಲಿಸಿರುವುದನ್ನು ನಾವಿಲ್ಲಿ ಕಾಣಬಹುದು. ಕನಕದಾಸರ ವ್ಯುತ್ಪತ್ತಿ ನೈಪುಣ್ಯ, ಅಭಿವ್ಯಕ್ತಿ ವೈವಿಧ್ಯ ಬೆರಗುಗೊಳಿಸುವಂಥದು.

ಅರ್ಥ– ೧. ಕೈಕಾಲಿಲ್ಲದ ಆಡ್ದಾ = ಮತ್ಸ್ಯಾವತಾರ (ಮೀನಿಗೆ ಕೈಕಾಲಿಲ್ಲ).
ಮೈ... ನೋಡ್ದಾ = ಕೂರ್ಮಾವತಾರ (ಭಾರ = ಮಂದರ ಪರ್ವತದ ಹೊರೆ)
ಕೋರೆಯಲಿ... ಮಾಡ್ದಾ = ವರಾಹಾವತಾರ
ಕೋರೆ = ಹಂದಿಯ ದಾಡೆ (ಮಾಡ್ದಾ<ಮಾಡಿದ)
ತಾಕೊ... ಬೀರ್ದಾ = ನರಸಿಂಹಾವತಾರ
ಒದರಿ = ಘರ್ಜಿಸಿ (ಬೀರ್ದಾ<ಬೀರಿದ)
ಅರ್ತಿಯಿಂದ... ದೂಡ್ದಾ = ವಾಮನಾವತಾರ

ಅರ್ತಿ = ಪ್ರೀತಿ (ದೂಡ್ದಾ<ದೂಡಿದ)
ಮುನಿಯ... ಕಾಡ್ದಾ = ಪರಶುರಾಮಾವತಾರ
ಮುನಿಯ = ಜಮದಗ್ನಿಯ (ಕಾಡ್ದಾ<ಕಾಡಿದ)
ರಾವಣ... ಹೂಡ್ದಾ = ರಾಮಾವತಾರ
ಅಂಬು = ಬಾಣ (ಹೂಡ್ದಾ<ಹೂಡಿದ)
ಆಜಮುನೆ... ಮಾಡ್ದಾ = ಕೃಷ್ಣಾವತಾರ
ಜಮುನೆ = ಯುಮುನಾ ಕಾಳಿಂದಿ (ಮಾಡ್ದಾ<ಮಾಡಿದ)

ದಿಗಂಬರ... ತಾಳ್ದಾ = ಬೌದ್ಧಾವತಾರ
ದಿಗಂಬರ = ಬರೀಬತ್ತಲೆ (ತಾಳ್ದಾ<ತಾಳಿದ)
ದಿಗಿದಿಗಿ... ಏರ್ದಾ = ಕಲ್ಕ್ಯವತಾರ
ಅಶ್ವ = ಕುದುರೆ (ಏರ್ದಾ<ಏರಿದ)

೨. ಕಳ್ಳ... ಕಳ್ಳ = ಮತ್ಸ್ಯಾವತಾರ
ಕಳ್ಳ = ಹಲಸಿನ ಬೀಜದ ಮೇಲಿನ ಉಗುರುದಪ್ಪದ ಸಿಪ್ಪೆ, ಹೆಕ್ಕಳಿಕೆ; (ಮೀನಿನ ಮೈಮೇಲೂ ಅಂಥ ಹೆಕ್ಕಳಿಕೆ ಇರುತ್ತವೆ. ಇದರಿಂದ ಕಳ್ಳ ಶಬ್ದದ ಮೂಲಕ ಮೀನನ್ನು ಧ್ವನಿಸುವ ಚಾತುರ್ಯವನ್ನು ಮೆರೆದಿದ್ದಾರೆ)
ಕಲ್ಲನು... ಇಹನಲ್ಲ = ಕೂರ್ಮಾವತಾರ
ಕಲ್ಲು = ಮಂದರಪರ್ವತ
ಭೂಮಿ... ಬಲ್ಲ = ವರಾಹಾವತಾರ
ನೆಗಹು = ಎತ್ತು
ಪುಟ್ಟ... ನಲ್ಲ = ನರಸಿಂಹಾವತಾರ
ಎರಡು... ತಾನೊಲ್ಲ = ವಾಮನಾವತಾರ
ಒಲ್ಲ = ಒಪ್ಪುವುದಿಲ್ಲ (ಮೂರು ಹೆಜ್ಜೆ ಕೇಳಿದ್ದು)
ಇವನ = ಇದಿರಿಲ್ಲ = ಪರಶುರಾಮಾವತಾರ
ಕೋ... ಮಲ್ಲ = ರಾಮಾವತಾರ
ಮಲ್ಲ = ಜಟ್ಟಿ
ಕೊಂಕಲಿ... ಗೊಲ್ಲ = ಕೃಷ್ಣಾವತಾರ
ಕೊಂಕಲಿ = ಬಾಗಿ, ಓರೆಯಾಗಿ (ಒಂದು ಕಾಲನ್ನು ಅಡ್ಡಲಾಗಿ ಇನ್ನೊಂದು ಕಾಲಿನಾಚೆ ಇಟ್ಟು ನಿಲ್ಲುವ ಭಂಗಿ)
ಮೈ... ಇಲ್ಲ = ಬೌದ್ಧಾವತಾರ
ಅರಿವೆ = ಬಟ್ಟೆ
ಇವ... ಬಲ್ಲ = ಕಲ್ಕ್ಯಾವತಾರ
ತೇಜಿ = ಕುದುರೆ



೩. ಬಿಟ್ಟ ಕಣ್ಣಲಿ ಕೊಂದ = ಮತ್ಸ್ಯಾವತಾರ (ಮೀನಿಗೆ ರೆಪ್ಪೆ ಇರುವುದಿಲ್ಲ ಆದ್ದರಿಂದ ಕಣ್ಣು ಸದಾ ಬಿಟ್ಟೇ ಇರುತ್ತದೆ)
ಮೋರೆ... ಚೆಂದ = ಕೂರ್ಮಾವತಾರ (ಮಂದರದ ಕೆಳಗೆ ಮುಖವನ್ನು ಹುದುಗಿಸಿಕೊಂಡ ಕೂರ್ಮ)
ದಾಡೇಲಿ... ತಂದ = ವರಾಹಾವತಾರ
ದಾಡೆ = ದಂಷ್ಟ್ರಾ
ಕಂಬವ... ನೆಂದ = ನರಸಿಂಹಾವತಾರ
ಪೊಡವಿ = ಭೂಮಿ
ಶುಕ್ರಗೆ... ಒಂದ = ವಾಮನಾವತಾರ (ಬಲಿ ಚಕ್ರವರ್ತಿಯ ಗುರುವಾದ ಶುಕ್ರಾಚಾರ್ಯ ತನ್ನ ಶಿಷ್ಯನಿಗೆ ಧಾರೆ ಎರೆದು ಕೊಡಬೇಡ ಎಂದು ಹೇಳುತ್ತಿದ್ದಾಗ ದರ್ಭೆಯಿಂದ ಅವನ ಒಂದು ಕಣ್ಣನ್ನು ಚುಚ್ಚಿ ಕಳೆದ ಎಂಬ ಕಥಾಪ್ರಸಂಗ)
ತಾಯಿಯ... ನೆಂದ = ಪರಶುರಾಮಾವತಾರ (ತಂದೆಯ ಅಣತಿಯಂತೆ ತಾಯನ್ನು ಕೊಂದು ಪುನಃ ಬದುಕಿಸುತ್ತಾನೆ. ಅದನ್ನು ಕಳೆದು = ಕೊಂದು, ಉಳಿಸಿದ = ಬದುಕಿಸಿದ ಎಂಬ ಮಾತುಗಳಲ್ಲಿ ಕನಕದಾಸರು ಸೂಚಿಸಿದ್ದಾರೆ)
ಕೋಡಗ = ತಂದ = ರಾಮಾವತಾರ
ಕೋಡಗ = ಕಪಿ, (ಕೋತಿ ತಾನು ಕೆಡ್ತಾ ವನವನೆಲ್ಲ ಕೆಡಿಸ್ತು ಎಂಬ ಜನಪದ ಗಾದೆಯ ಅಭಿವ್ಯಕ್ತಿ ಕ್ರಮವನ್ನು ಕನಕರು ಬಳಸಿಕೊಂಡಿದ್ದಾರೆ– ಆದರೆ ಬೇರೊಂದು ಅರ್ಥದಲ್ಲಿ. ವನಕ್ಕೆ ನೀರು ಎಂಬ ಅರ್ಥವಿದೆ. ರಾಮ ಬಾಣದಿಂದ ಸಮುದ್ರದ ನೀರನ್ನು ಬತ್ತಿಸಿದ ಎಂಬ ಕಥೆ ಕೇಡು ತಂದ ಎಂಬ ಮಾತಲ್ಲಿ ಅಭಿವ್ಯಕ್ತಿಸಲಾಗಿದೆ)

ಹಾಲ್ಮೊಸರ... ತಿಂದ = ಕೃಷ್ಣಾವತಾರ (ಮೀಸಲು ಮುರಿದ ಎಂಬುದರಲ್ಲಿ ಮೈನೆರೆದ ಹೆಣ್ಣುಗಳನ್ನು ಮೊದಲು ಅನುಭವಿಸಿದ ಎಂಬ ಅರ್ಥವೂ ಇದೆ)
ಬತ್ತಲೆ ನಿಂದು = ಬೌದ್ಧಾವತಾರ
ಹತ್ತುವೆ ಕುದುರೆ ಎಂದ = ಕಲ್ಕ್ಯವತಾರ
ಭರದಿ = ಬೇಗ

* * * *



## ೨೪೧
## ಸಾವೇರಿ – ಅಟತಾಳ

ಯಾದವಗಿರಿವಾಸನಹುದೊ ಶ್ರೀ ನಾರಸಿಂಹ
ಆದಿನಾರಾಯಣ ಅಚ್ಯುತನಹುದೊ ॥ಪ॥

ಖಳ ಸೋಮಕನ ಕೊಂದು ನೀರ ಮುಳುಗಿ ಬಂದೆ
ಇಳೆಯೊಳು ಸುರಾಸುರರೈತಂದು ಬೆರೆಯಲು
ಘಳಿಲನೆ ದೇವಜನರು ಬಂದು ನಿಲ್ಲಲು
ವ್ಯಾಳೇಶನ ಸುತ್ತಿ ಸೆಳೆವ ವೇಳೆಯಲ್ಲಿ
ಇಳಿದು ಪಾತಾಳಕ್ಕೆ ಪರುವತ ಪೋಪುದ ಕಂಡು
ನಳಿನನಾಭನೆ ನಿಮ್ಮ ನೆನೆಯಲಾ ಧ್ವನಿ ಕೇಳಿ
ತಿಳಿದು ಕೂರ್ಮರೂಪಾಗಿ ಮಂದರವನು ಪೊತ್ತು
ಉಳಿಸಿದೆ ಲೋಕವನುನ್ನತ ಪರಾಕ್ರಮಿ
ಖಳ ಹಿರಣ್ಯಕ ಬಂದು ಎದುರಾರು ತನಗೆಂದು
ಇಳೆಯ ಕದ್ದೊಯ್ದು ಪೋಗುತಿರೆ ಸುರರದ ಕಂಡು
ಘಳಲನೆ ನಿಮ್ಮನು ಕೂಗಲಾ ಮೊರೆ ಕೇಳಿ
ತಿಳಿದು ಶಾಂತ ಮೂರುತಿ ಆಗಿ ಪಾವಕ ಮೂರ್ತಿ
ಕಳ್ಳ ದೈತ್ಯರ ಸಂಹಾರವ ಮಾಡಿದೆ
ನಳಿನೋದ್ಭವನಯ್ಯ ಅಮರ ಚೆನ್ನಿಗರಾಯ ॥೧॥

ಮಠದೊಳಗೆ ಪ್ರಹ್ಲಾದ ಹರನ ನಾಮ ಸ್ಮರಿಸದೆ
ದಿಟದಿ ಹರಿಯ ನಾಮಾವಳಿಯ ನುತಿಪುದ ಕಂಡು
ಕುಟಿಲ ದಾನವ ನಿಟಲನೇತ್ರನ ಸ್ಮರಿಸೆನಲು
ಕಠಿಣ ನಿಲುವನು ಬಿಡದ ತರಳ ನಿನ್ನಯ ಗುಣವ
ಪಠಿಸಲ್ಕೆ ಪರಮ ಭಕ್ತನ ಕಾಯ ಬೇಕೆಂದು
ನಟಿಸಿ ಕಂಬದಿ ಮೂಡಿ ನಗುವ ಭಕ್ತನ ನೋಡಿ

**ಸಟೆಯಲ್ಲ ಅಜಾಂಡಗಳೊಡೆವಂತೆ ಘರ್ಜಿಸೆ**
**ಕುಟಿಲ ದಾನವನೋಡುವುದ ಕಂಡು ಎಳೆತಂದು**
**ಚಿಟಿಚಿಟಿ ಚಿಟಿರೆನ್ನಲು ಉಗುರಲಿ ಸೀಳಿ**
**ಪುಟನೆಗೆದ ಪಾದದಲಿ ಬಲಿಯ ತಲೆಯನು ಮೆಟ್ಟಿ**
**ನಟನೆಯಾಡುವ ವಿದ್ಯೆಯನೆಲ್ಲಿ ಕಲಿತೆಯೊ ಕಪಟ**
**ನಾಟಕ ಸೂತ್ರಧಾರಿ ನೀನಹುದು ಕ್ಷತ್ರಿಯರ**
**ಚಟುಲ ಛಲದಿ ಒಗೆದು ಕರುಳ ಬಗೆದು ತುಳಿದ–**
**ದಟರನು ಸಂಹರಿಸಿದ ಚೆಲುವರಾಯ ॥೨॥**

**ಅಂದು ಕೌಸಲ್ಯಾ ಗರ್ಭ ಚಂದ್ರಮನಾಗಿ ಬೆಳಗಿ**
**ಕೊಂದೆ ರಾವಣ ಕುಂಭಕರ್ಣಾದಿಗಳನೆಲ್ಲ**
**ಇಂದಿರೇಶನೆ ನಿನ್ನ ನಂಬಿದ ವಿಭೀಷಣನಿಗೆ**
**ಎಂದಿಗೂ ಪಾರವಿಲ್ಲದ ಪದವಿಯನಿತ್ತೆ**
**ಕಂದನಾಗಿ ಜನಿಸಿ ವಸುದೇವ ದೇವಕಿಯರಿಗೆ**
**ನಂದಗೋಕುಲದೊಳು ನಿಂದ ಕಂಸನ ಕೊಂದೆ**
**ಚಂದಿರನ ನೆರೆಪೋಲ್ವ ಉನ್ನತೋನ್ನತನಾಗಿ**
**ಕೊಂದು ತ್ರಿಪುರಾಸುರರ ಅವರ ಸತಿಯರ ಕೆಡೆಸಿ**
**ಒಂದೆ ನೆಗೆತಕೆ ನೆಗೆವ ಅಶ್ವವನೇರಿದೆ ವ**
**ಸುಂಧರೆಯ ಮೇಲೆ ಲೀಲೆಯಾಡುತ ಕೃತಯುಗದಿ**
**ನಿಂದು ಯಾದವಗಿರಿಯ ಮೇಲೆ ತ್ರೇತಾಯುಗದಿ**
**ಬಂದು ರಾಮನೆನಿಸಿಕೊಂಡೆ ದ್ವಾಪರ ಯುಗದಿ**
**ಬಂದು ಕೃಷ್ಣೆನಸಿಕೊಂಡೆ ಕಲಿಯುಗದೊಳು**
**ನಿಂದು ಚಲುವ ಚೆನ್ನಿಗರಾಯನಾದೆ ವರ**
**ನಂದಿಯ ಚಂದದಿಂ ರಕ್ಷಿಸಿದೆ ಎನ್ನ ಕಾಯೊ**
**ಇಂದಿರಾಪ್ರಿಯ ಬಾಡದಾದಿಕೇಶವ ರಾಯ ॥೩॥**

ಭಾವ– ಯಾದವಗಿರಿ ಅಥವಾ ಮೇಲುಕೋಟೆಯ ಚೆಲುವ ಚೆನ್ನಿಗರಾಯನ ಸನ್ನಿಧಿಯಲ್ಲಿ ಕಟ್ಟಿ ಹಾಡಿದ ಕೀರ್ತನೆಯಿದು. ದಶಾವತಾರಗಳ ವರ್ಣನೆ ಇದೆ.



ಅರ್ಥ– ೧. ಖಳಸೋಮಕನ... ಬಂದೆ = ಮತ್ಸ್ಯಾವತಾರ
ಇಳೆಯೊಳು... ಪರಾಕ್ರಮಿ = ಕೂರ್ಮಾವತಾರ
ಖಳ ಹಿರಣ್ಯಕ... ಮಾಡಿದೆ = ವರಾಹಾವತಾರ
ವ್ಯಾಳೇಶ = ಆದಿಶೇಷ
ಪಾವಕ = ಅಗ್ನಿ
ನಳಿನೋದ್ಭವನಯ್ಯ = ಬ್ರಹ್ಮನ ತಂದೆ (ವಿಷ್ಣು

೨. ಮಠದೊಳಗೆ... ಸೀಳಿ = ನರಸಿಂಹಾವತಾರ
ಪುಟನೆಗೆದು... ಮೆಟ್ಟಿ = ವಾಮನಾವತಾರ
ಕ್ಷತ್ರಿಯರ... ಸಂಹರಿಸಿದ = ಪರಶುರಾಮಾವತಾರ
ಮಠ = ಪಾಠಶಾಲೆ
ನುತಿಪುದ = ಸ್ತುತಿಸುವುದ
ನಿಟಿಲನೇತ್ರನ = ಹಣೆಗಣ್ಣನಾದ ಶಿವನ
ಅಜಾಂಡ = ಬ್ರಹ್ಮಾಂಡ
ಚಟುಲ = ತೀವ್ರ
ಅದಟರು = ಬಲಶಾಲಿಗಳು

೩. ಅಂದು... ನಿತ್ತೆ = ರಾಮಾವತಾರ
ಕಂದನಾಗಿ... ಕೊಂದೆ = ಕೃಷ್ಣಾವತಾರ
ಚಂದಿರನ... ಕೆಡಿಸಿ = ಬೌದ್ಧಾವತಾರ
ಒಂದೆ... ಸೇರಿದೆ = ಕಲ್ಕ್ಯವತಾರ
ಪಾರ = ತೀರ, ಎಲ್ಲೆ
ವಸುಂಧರೆ = ಭೂಮಿ
ಇಂದಿರಾಪ್ರಿಯ =ಲಕ್ಷ್ಮಿಯ ಗಂಡ (ವಿಷ್ಣು)

* * * *

## ೨೪೨
## ಭೂಪಾಳಿ – ಝಂಪೆ ತಾಳ

ಯಾಕೆ ನೀನಿಲ್ಲಿ ಪವಡಿಸಿದೆ ಹರಿಯೆ– ಜಗ ||ಪ||
ದೇಕ ವಿಖ್ಯಾತ ಪಶ್ಚಿಮ ರಂಗಧಾಮ ||ಅ||

ತಮನೊಡನೆ ಹೋರಿ ಬೆಟ್ಟವನು ಬೆನ್ನಲಿ ಪೊತ್ತು
ರಮಣಿ ಭೂಮಿಯನು ತಂದಾಯಾಸವೊ
ಅಮರವೈರಿಯ ಕರುಳ ಕಿತ್ತ ಕಡು ಧಾವತಿಯೊ
ಕ್ಷಮೆಯನಳೆದೀ ಪಾದಕಮಲ ನೊಂದವೊ ||೧||

ಪೊಡವಿಪಾಲಕರ ವಂಶವನು ವಪನ ಮಾಡಿ
ಕೊಡಲಿಯನು ಬಿಸುಟು ಮಲಗಿದ ಭಾವವೊ
ಮಡದಿಯನು ಕದ್ದೊಯ್ದವನ ಶಿರವನೆ ತರಿದು
ಒಡಲಿನಾಯಾಸದಲಿ ಪವಡಿಸಿದ ಪರಿಯೋ ||೨||

ಖೂಳ ಶಿಶುಪಾಲಾದಿ ಎದುರಾಂತ ವೀರರ ಕೊಂದು
ಕಾಳಿಂಗದ ಹೆಡೆಯ ತುಳಿತುಳಿದು ಮೈಯಲಸಿತೊ
ಲೀಲೆಗೋಸುಗ ಬಂದು ನಿರ್ವಾಣದಲಿ ನಿಂದು
ಆ ಲಜ್ಜೆಗಾಗಿ ತಲೆ ಬಾಗಿ ಮಲಗಿದೆಯೊ ||೩||

ನಾಲ್ಕು ಯುಗದಾಧಾರಿ ಕಡೆಗೆ ತುರಗವನೇರಿ
ಸಾಕಾಗಿ ದಣಿದು ನೀನಿಲ್ಲಿ ಮಲಗಿದೆಯೊ
ಸಾಕಾರಿಯಾಗಿ ಗೌತಮ ಮುನೀಶ್ವರನಿಗೆ
ಬೇಕೆಂದು ನೀ ಕೊಟ್ಟ ವರಕೆ ಮಲಗಿದೆಯೊ ||೪||



ಇನ್ನೆಷ್ಟು ಕಾಲ ನೀನಿಲ್ಲಿ ಮಲಗಿದ್ದರೂ
ನಿನ್ನನೆಬ್ಬಿಸುವವರನೊಬ್ಬರನು ಕಾಣೆ
ಉನ್ನಂತ ಕಾಗಿನೆಲೆಯಾದಿಕೇಶವರಾಯ
ಚೆನ್ನ ಶ್ರೀರಂಗಪಟ್ಟಣದ ರಂಗಧಾಮ ||೫||

ಭಾವ– ಕ್ಷೇತ್ರ ಪರ್ಯಟನೆ, ಕ್ಷೇತ್ರ ಸಂದರ್ಶನ ಎಲ್ಲ ಹರಿದಾಸರಲ್ಲೂ ಕಂಡು ಬರುವ ಸಾಮಾನ್ಯ ಪದ್ಧತಿ– ಕ್ಷೇತ್ರ ಮಹಿಮೆಯನ್ನು, ದೈವ ಮಹಿಮೆಯನ್ನು ಕೊಂಡಾಡುವುದು ವಾಡಿಕೆ. ಆದರೆ ಅನೇಕರು ಅಡಿಯಿಂದ ಮುಡಿಯವರೆಗಿನ ದೇವರ ಉಡಿಗೆ ತೊಡಿಗೆಗಳ, ಒಡವೆ ವಸ್ತುಗಳ, ಭಕ್ಷ್ಯಭೋಜ್ಯಗಳ ಯಾದಿರೂಪದ ವರ್ಣನೆಯ ಮಂಡಿಗೆ ಸವಿಯುವುದರಲ್ಲಿ ಮೈಮರೆಯುತ್ತಾರೆಯೋ ವಿನಾ ಕನಕದಾಸರ ಹಾಗೆ ನೇರವಾಗಿ ಎದೆಗೇ ಉಂಡಿಗೆ ಹಾಕಿ ಹೊಸ ನೋಟದ ಹರಿಕಾರರಾಗಿ ಅಮೃತದ ಊಟವನ್ನು ಉಣಬಡಿಸುವವರು ವಿರಳ. ಪ್ರಸ್ತುತ ಕೀರ್ತನೆ ಶೇಷಶಾಯಿಯಾಗಿ ಮಲಗಿರುವ ಶ್ರೀರಂಗಪಟ್ಟಣದ ರಂಗನಾಥನ ನಿಡುನಿದ್ರೆಗೆ ಕಾರಣವೇನಿರಬಹುದೆಂದು ಮೈದಡವಿ ತಲೆಸವರಿ ಸಾಂತ್ವನ ಹೇಳುವರ ಹಾಗೆ ಅಂತಃಕರಣಪೂರ್ವಕವಾಗಿ ಕೇಳುತ್ತಾ ಹೋದರೂ 'ಕಮಕ್‌ಕಿಮಕ್' ಎನ್ನದ ರಂಗನಾಥನಿಗೆ ಬುದ್ಧಿವಾದದ ಎಚ್ಚರಿಕೆಯ ಕಿವಿಮಾತೊಂದನ್ನು ಹೇಳುವ ಹೊಸ ತಿರುವಿನೊಂದಿಗೆ ಅಂತ್ಯಗೊಳ್ಳುತ್ತದೆ; ಮೂಲಾಧಾರದಿಂದ ಉನ್ಮುಖಗೊಂಡು ಹೊರಟ ಕುಂಡಲಿನೀ ಶಕ್ತಿ ಸಹಸ್ರಾರದ ಅಮೃತ ಕಲಶಕ್ಕೆ ಬಾಯಿ ಹಾಕಿ ಚಪ್ಪರಿಸುತ್ತಾ ಅಮೃತದ 'ಸವಿ'ಯನ್ನೂ ಸಂಗೀತದ 'ಧ್ವನಿ'ಯನ್ನೂ ಶ್ರೀಮನ್ ಮೌನಿಯಾಗಿ ಅನುಭವಿಸುತ್ತದೆ. ಒಳನೋಟವಿದ್ದವರಿಗೆ ಆ 'ಧ್ವನಿ'ಯ ಸೆಲೆ (ಪ್ರತಿಧ್ವನಿ) ಸೌಮ್ಯವಾಗಿದ್ದರೂ ರಮ್ಯವಾಗಿರುವುದು ಅರಿವಿಗೆ ಬರುತ್ತದೆ. ಕನಕದಾಸರ ಅಧ್ಯಾತ್ಮವಾದದ ಜೊತೆಜೊತೆಗೇ ಇರುವ ಸಮಾಜವಾದದ ನಿಲುವಿನಿಂದ ಅವರ ಸಾಹಿತ್ಯವನ್ನು ಅಧ್ಯಯನ ಮಾಡಿದವರಿಗೆ ಇಲ್ಲಿ ಬರುವ "ಇನ್ನೆಷ್ಟು ಕಾಲ ನೀನಿಲ್ಲಿ ಮಲಗಿದ್ದರೂ ನಿನ್ನನೆಬ್ಬಿಸುವವರನೊಬ್ಬರನೂ ಕಾಣೆ" ಎಂಬ ಮಾತು ಕೇವಲ ಶ್ರೀರಂಗಪಟ್ಟಣದ ರಂಗನಾಥನಿಗೆ ಹೇಳಿದ ಕಿವಿ ಮಾತಲ್ಲ, ಅಸಂಖ್ಯ ಶ್ರೀ ಸಾಮಾನ್ಯ ರಂಗನಾಥರಿಗೆ ಹೇಳಿದ

ಕಿವಿಮಾತು ಎಂಬುದು ವಿದಿತವಾಗುತ್ತದೆ– ಪು.ತಿ.ನ ಅವರು ಗರುಡನ ನೆರಳಲ್ಲಿ ಗಾಂಧೀಜಿಯ ವ್ಯಕ್ತಿತ್ವವನ್ನು ಕಂಡುಕೊಂಡ ಹಾಗೆ. ಅಂದರೆ 'ಜಾಗೃತರಾದ ಮುಂದುವರಿದವರು ಅಜಾಗೃತರಾದ ಹಿಂದುಳಿದವರನ್ನು ಅಜ್ಞಾನದ ನಿದ್ರೆಯಿಂದ ಎಚ್ಚರಗೊಳಿಸಲು ಹೋಗುವುದಿಲ್ಲ. ತಾವಾಗಿಯೇ ಏಳಬೇಕು' ಎಂಬ ಧ್ವನಿ ಅದರಲ್ಲಿ ಹುದುಗಿದೆ. ಕನಕದಾಸರ ಜೀವನ ಮತ್ತು ಸಾಹಿತ್ಯ ಅದಕ್ಕೆ ಜ್ವಲಂತ ನಿದರ್ಶನವಾಗಿದೆ.

ಅರ್ಥ– ೧. ಮೊದಲ ನುಡಿಯಲ್ಲಿ ಐದು ಅವತಾರಗಳ ಉಲ್ಲೇಖವಿದೆ.
ತಮನೊಡನೆ ಹೋರಿ = ಮತ್ಸ್ಯಾವತಾರ
ಬೆಟ್ಟವನು ಬೆನ್ನಲ್ಲಿ ಪೊತ್ತು = ಕೂರ್ಮಾವತಾರ
ರಮಣಿ ಭೂಮಿಯನು ತಂದ = ವರಾಹಾವತಾರ
ಅಮರವೈರಿಯ... ಧಾವತಿಯೊ = ನರಸಿಂಹಾವತಾರ
ಅಮರವೈರಿ = ಹಿರಣ್ಯಕಶ್ಯಪ
ಧಾವತಿ = ಆಯಾಸ, ಸುಸ್ತು
ಕ್ಷಮೆಯ... ನೊಂದವೊ = ವಾಮನಾವತಾರ
ಕ್ಷಮೆ = ಭೂಮಿ

೨. ಎರಡನೆಯ ನುಡಿಯಲ್ಲಿ ಎರಡು ಅವತಾರಗಳ ಉಲ್ಲೇಖವಿದೆ.
ಪೊಡವಿ... ಮಲಗಿದ = ಪರಶುರಾಮಾವತಾರ
ಪೊಡವಿಪಾಲಕರು = ಕ್ಷತ್ರಿಯರು
ವಪನ = ನಾಶ, ಮುಂಡನ
ಮಡದಿಯನು... ಶಿರವ ತರಿದು = ರಾಮಾವತಾರ
ತರಿದು = ಕತ್ತರಿಸಿ

೩. ಮೂರನೆಯ ನುಡಿಯಲ್ಲಿ ಎರಡು ಅವತಾರಗಳ ಪ್ರಸ್ತಾಪವಿದೆ.
ಕಾಳಿಯ... ತುಳಿದು = ಕೃಷ್ಣಾವತಾರ
ಕಾಳಿಯ = ಕಾಳಿಂಗ ಸರ್ಪ



ಲೀಲೆ... ನಿಂದು = ಬೌದ್ಧಾವತಾರ
ನಿರ್ವಾಣ = ಬೆತ್ತಲೆ
ಲಜ್ಜೆ = ನಾಚಿಕೆ

೪. ನಾಲ್ಕನೆಯ ನುಡಿಯಲ್ಲಿ ಒಂದು ಅವತಾರದ ಪ್ರಸ್ತಾಪವಿದೆ.
ನಾಲ್ಕು... ತುರಗವನೇರಿ = ಕಲ್ಕ್ಯವತಾರ
ತುರಗ = ಕುದುರೆ

* * * *

## ೨೪೩
## ಪೂರ್ವಿ – ಏಕತಾಳ

**ಅಂಬುಜದಾಕ್ಷಗೆ ಮಂಗಳ ॥ಪ॥**
**ಸರ್ವ ಜೀವರಕ್ಷಕಗೆ ಮಂಗಳ ॥ಅ॥**

**ಜಲಧಿಯೊಳಾಮ್ನಾಯ ತಂದಗೆ ಮಂಗಳ**
**ಕುಲಗಿರಿ ತಾಳ್ದಗೆ ಜಯಮಂಗಳ**
**ನೆಲನ ಕದ್ದಸುರನ ಗೆಲಿದಗೆ ಮಂಗಳ**
**ಚೆಲುವ ನರಸಿಂಹಗೆ ಶುಭಮಂಗಳ ॥೧॥**

**ವಸುಧೆಯ ಈರಡಿಗೈದಗೆ ಮಂಗಳ**
**ವಸುದಾಧಿಪರಳಿದಗೆ ಜಯಮಂಗಳ**
**ದಶಕಂಧರನನ್ನು ಗೆಲಿದಗೆ ಮಂಗಳ**
**ಪಶುಗಳ ಕಾಯ್ದಗೆ ಶುಭಮಂಗಳ ॥೨॥**

**ಪುರತ್ರಯ ವಧುಗಳ ಗೆಲಿದಗೆ ಮಂಗಳ**
**ತುರಗ ವಾಹನನಿಗೆ ಜಯಮಂಗಳ**
**ವರನೆಲೆಯಾದಿಕೇಶವನಿಗೆ ಮಂಗಳ**
**ಪರಮ ಪತ್ನಿವ್ರತಗೆ ಶುಭಮಂಗಳ ॥೩॥**

ಭಾವ– ವಿಷ್ಣುವಿನ ದಶಾವತಾರ ಲೀಲೆಗಳ ಮುಖೇನ ಮಂಗಳ ಹಾಡುವ ಆಶಯವಿದೆ.

ಅರ್ಥ– ಅಂಬುಜದಳಾಕ್ಷಗೆ = ಕಮಲದಂತೆ ಕಣ್ಣುಳ್ಳವನಿಗೆ (ವಿಷ್ಣು)



೧. ಜಲಧಿ... ಮಂಗಳ = ಮತ್ಸ್ಯಾವತಾರ
ಆಮ್ನಾಯ = ವೇದ
ಕುಲಗಿರಿ = ಮಂಗಳ = ಕೂರ್ಮಾವತಾರ
ಕುಲಗಿರಿ = ಮಂದರಪರ್ವತ
ನೆಲನ... ಮಂಗಳ = ವರಾಹಾವತಾರ
ಚೆಲುವ... ಮಂಗಳ = ನಾರಸಿಂಹಾವತಾರ
೨. ವಸುಧೆಯ... ಮಂಗಳ = ವಾಮನಾವತಾರ
ಈರಡಿ = ಎರಡು ಹೆಜ್ಜೆ
ವಸುಧಾ... ಮಂಗಳ = ಪರಶುರಾಮಾವತಾರ
ವಸುಧಾಧಿಪರು = ಕ್ಷತ್ರಿಯರು
ದಶಕಂಧರ... ಮಂಗಳ = ರಾಮಾವತಾರ
ದಶಕಂಧರ = ಹತ್ತು ತಲೆಗಳನ್ನುಳ್ಳ ರಾವಣ
ಪಶುಗಳ... ಮಂಗಳ = ಕೃಷ್ಣಾವತಾರ
೩. ಪುರತ್ರಯ... ಮಂಗಳ = ಬೌದ್ಧಾವತಾರ
ಪುರತ್ರಯ = ರಾಕ್ಷಸರ ಮೂರು ಪಟ್ಟಣಗಳು)
ತುರಗ... ಮಂಗಳ = ಕಲ್ಕ್ಯವತಾರ
ತುರಗ = ಕುದುರೆ

* * * *

## ೨೪೪
## ಪೂರ್ವಿ – ಏಕ

ಮಂಗಳಂ ಸರ್ವಜೀವ ರಕ್ಷಕಗೆ
ಮಂಗಳಂ ಅಂಬುಜದಳಾಕ್ಷಗೆ ॥ಪ॥

ಜಲಪ ಒಮ್ಮೆಗೆ ತಂದವಗೆ ಮಂಗಳಂ
ಕುಲಗಿರಿಯನು ಕಾಯ್ದವಗೆ ಮಂಗಳಂ
ನೆಲನ ಕದ್ದ ಚೋರನ ಗೆಲಿದಗೆ ಮಂಗಳಂ
ಸುಲಭ ನರಸಿಂಹನಿಗೆ ಶುಭಮಂಗಳಂ ॥೧॥

ವಸುಧೆ ಈರಡಿ ಗೈದವಗೆ ಮಂಗಳಂ
ವಸುಧೇಶ ಕುಲವನಳಿದಗೆ ಮಂಗಳಂ
ದಶಕಂಧರನನು ಗೆಲಿದಗೆ ಮಂಗಳಂ
ಪಶುಗಳ ಕಾಯ್ದವಗೆ ಮಂಗಳ ।೨॥

ಪುತ್ರಯ ವಧು ವ್ರತವಳಿದಗೆ ಮಂಗಳಂ
ತುರಗ ವಾಹನನಿಗೆ ಮಂಗಳಂ
ಗರಡು ವಾಹನ ವಾರಿಧಿ ಶಯನ
ವರ ಕಆಗಿನೆಲೆಯಾದಿಕೇಶವಗೆ ಮಂಗಳಂ ॥೩॥

ಭಾವ– ಹರಿಯ ದಶಾವತಾರಗಳ ಹಿನ್ನೆಲೆಯ ಮಂಗಳ ಹಾಡಿದು

ಅರ್ಥ– ಅಂಬುಜದಳಾಕ್ಷ = ಕಮಲದಳದಂಥ ಕಣ್ಣುಳ್ಳವನು (ವಿಷ್ಣು)
ಜಲಪ (<ಜಲ್ಪ) = ಮಾತು (ವೇದ) = ಮತ್ಸ್ಯಾವತಾರ
೧. ಕುಲ... ಮಂಗಳಂ = ಕೂರ್ಮಾವತಾರ
ನೆಲನ... ಮಂಗಳಂ = ವರಾಹಾವತಾರ



ಸುಲಭ... ಮಂಗಳಂ = ನರಸಿಂಹಾವತಾರ
೨. ವಸುಧೆ... ಮಂಗಳಂ = ವಾಮನಾವತಾರ
ವಸುಧೇಶ... ಮಂಗಳಂ = ಪರಶುರಾಮಾವತಾರ
ದಶ... ಮಂಗಳಂ = ರಾಮಾವತಾರ
ಪಶು.... ಮಂಗಳಂ = ಕೃಷ್ಣಾವತಾರ
೩. ಪುರ... ಮಂಗಳಂ = ಬೌದ್ಧಾವತಾರ
ತುರಗ... ಮಂಗಳ = ಕಲ್ಕ್ಯವತಾರ

* * * *

**Blank**



## ೨೪೫
## ಕಾಂಬೋದಿ – ಝಂಪೆತಾಳ

**ಪ್ರಾಚೀನ ಕರ್ಮವಿದು ಬಿಡಲರಿಯದು**
**ಯೋಚನೆಯ ಮಾಡಿ ಬಳಲುವುದೇಕೆ ಮನುಜ ॥ಪ॥**

**ಸೇತುವೆಯ ಕಟ್ಟಿ ಲಂಕೆಗೆ ಹಾರಿ ಹನುಮಂತ**
**ಖ್ಯಾತಿಯಿಂದಲಿ ರಾವಣನ ಕೊಲ್ಲಿಸಿ**
**ಸೀತೆಯನು ತಂದು ಶ್ರೀರಾಮನಿಗೆ ಕೊಡಲಾಗಿ**
**ಪ್ರೀತಿಯಲಿ ಕೌಪೀನ ಬಿಡಿಸಲಿಲ್ಲ ಹರಿಯು ॥೧॥**

**ಲೋಕಾದಿಲೋಕಗಳ ಚರಿಸುವ ರವಿರಥಕೆ**
**ಏಕಗಾಲಿಯು ಏಳುಕುದುರೆಗಳ ಕಟ್ಟಿ**
**ಲೋಕಲೋಕಗಳನೆಲ್ಲ ಚರಿಸುವ ಅರುಣನಿಗೆ**
**ಬೇಕೆಂದು ಚರಣಗಳ ಕೊಡಲಿಲ್ಲ ಹರಿಯು ॥೨॥**

**ಸಾಸಿರ ನಾಮದ ಒಡೆಯಾದಿಕೇಶವನ**
**ಬೇಸರಿಸದೆ ಹೆಗಲ ಮೇಲಿರಿಸಿಕೊಂಡು**
**ಆಕಾಶ ಮಾರ್ಗದಲಿ ಚರಿಸುವ ಗರುಡನಿಗೆ**
**ನಾಸಿಕದ ಕೊನೆಡೊಂಕು ತಿದ್ದಲಿಲ್ಲ ಹರಿಯು ॥೩॥**

ಭಾವ– ಪ್ರಾಚೀನ ಕರ್ಮ ಯಾರನ್ನೂ ಬಿಡುವುದಿಲ್ಲ ಎಂಬುದನ್ನು ಪೌರಾಣಿಕ ನಿದರ್ಶನಗಳೊಂದಿಗೆ ರುಜುವಾತುಪಡಿಸುವ ಕೀರ್ತನೆ ಇದು.

ಅರ್ಥ– ಕೌಪೀನ = ಲಂಗೋಟಿ, ಚಡ್ಡಿ
ಅರುಣ = ಗರುಡನ ಅಣ್ಣ, ಸೂರ್ಯನ ಸಾರಥಿ
ನಾಸಿಕ = ಮೂಗು, ಕೊಕ್ಕು

* * * *



## ೨೪೬
## ಕೇದಾರಗೌಳ – ಅಟತಾಳ

ಒಲ್ಲೆನೆಂದರಾಗುವುದೆ ಅಲ್ಲಿ ಪಡೆದು ಬಂದುದನು
ಎಲ್ಲವನುಂಡು ತೀರಸಬೇಕು ಹರಿಯೆ ॥ಪ॥

ತಂದೆತಾಯಿ ಬಸಿರಿಂದ ಬಂದ ದಿನ ಮೊದಲಾಗಿ
ಒಂದಿಷ್ಟು ಸುಖವನೆ ಕಾಣೆ ನಾ ಹರಿಯೆ
ಬಂದುದನೆಲ್ಲವನುಂಡು ತೀರಿಸದೆ ಭ್ರಮೆ
ಗೊಂಡ ಮೇಲೇನುಂಟು ಹಗೆಯ ಜೀವನವೆ ॥೧॥

ಎಮ್ಮರ್ಥ ಎಮ್ಮ ಮನೆ ಎಮ್ಮ ಮಕ್ಕಳು ಎಂಬ
ಹೆಮ್ಮೆ ನಿನಗೇತಕೊ ವ್ಯರ್ಥ ಜೀವನವೆ
ಬ್ರಹ್ಮ ಫಣೆಯೊಳು ಬರೆದ ವಿಧಿಯು ತಪ್ಪುವುದುಂಟೆ
ಸುಮ್ಮನೆ ಇರುಕಂಡ್ಯ ಹಗೆಯ ಜೀವನವೆ ॥೨॥

ಅಂತರಂಗದಲೊಂದು ಅರ್ಥ ದೇಹದಲೊಂದು
ಚಿಂತೆಯಾತಕೆ ನಿನಗೆ ಪಂಚರೆದುರು
ಕಂತುಪಿತ ಕಾಗಿನೆಲೆಯಾದಿಕೇಶವರಾಯ
ಅಂತರಂಗದಿ ನೆಲೆಗೊಳುವ ತನಕ ॥೩॥

ಭಾವ– ಕರ್ಮಫಲವನ್ನು ಅನುಭವಿಸದೆ ಇರಲು ಸಾಧ್ಯವಿಲ್ಲ ಎಂಬುದು ಇಲ್ಲಿನ ಧ್ವನಿ.

ಅರ್ಥ– ಒಲ್ಲೆ = ಬೇಡ, ವಿಧಿ = ಆಜ್ಞೆ, ಪಂಚರು = ಪಂಚೇಂದ್ರಿಯಗಳು

* * * *

## ೨೪೭
## ಕಾಂಬೋದಿ – ಝಂಪೆತಾಳ

ತನ್ನ ಪ್ರಾಪ್ತಿಯ ಫಲವ ತಾನರಿಯದೆ ॥ಪ॥
ಇನ್ನು ನುಡಿವುದು ಮೂರ್ಖತನವಲ್ಲವೆ ॥ಅ॥

ಸರಸಿಜೋದ್ಭವನು ಫಣೆಯೊಳು ಬರೆದು ನಿರ್ಮಿಸಿದ
ತೆರನೊಂದು ಬೇರುಂಟೆ ತಾನರಿಯದೆ
ಕೆರಕೊಂಡು ಕಂಡವರ ಕೂಡೆ ತಾನಾಡಿದರೆ
ನೆರೆ ದುಃಖವಿದು ಬಿಟ್ಟು ಕಡೆಗೆ ತೊಲಗುವುದೆ ॥೧॥

ಬಡತನವು ಬಂದಲ್ಲಿ ಬಾಯಿ ಬಿಟ್ಟರೆ ಮುನ್ನ
ಪಡೆದಂಥ ವಿಧಿ ಬೆನ್ನ ಬಿಡಲರಿವುದೆ
ಅಡಿಗಡಿಗೆ ಶೋಕದಲಿ ಅವರಿವರಿಗುಸುರಿದರೆ
ಬಡತನವು ತಾ ಬಿಟ್ಟು ಕಡೆಗೆ ಕದಲುವುದೆ ॥೨॥

ದೆಸೆಗೆಟ್ಟು ನಾಡದೈವಂಗಳಿಗೆ ಎರಗಿದರೆ
ನೊಸಲ ಬರೆಹವ ತೊಡೆದು ತಿದ್ದಲಳವೆ
ವಸುಧೀಶ ಕಾಗಿನೆಲೆಯಾದಿಕೇಶವನಂಘ್ರಿ
ಬಿಸಜವನು ಕಂಡು ನೀ ಸುಖಿಯಾಗು ಮನುಜ ॥೩॥

ಭಾವ– ವಿಧಿ ಬರೆಹವನ್ನು ಯಾರು ಮೀರಲಾಗುವುದಿಲ್ಲ, ಅದನ್ನು ಸದ್ದಿಲ್ಲದೆ ಸಹಿಸಿ– ಯಾರನ್ನೂ ದೂಷಿಸದೆ– ಜೀವನ ರಹಸ್ಯವನ್ನರಿತು ಸಂತೃಪ್ತ ಭಾವನೆ ಬೆಳೆಸಿಕೊಳ್ಳಬೇಕು ಎಂಬ ಭಾವವಿದೆ.

ಅರ್ಥ– ಸರಸಿಜೋದ್ಭವ = ಬ್ರಹ್ಮ, ನೊಸಲ = ಹಣೆಯ
ವಸುಧೀಶ = ಜಗದೊಡೆಯ, ಅಂಘ್ರಿ ಬಿಸಜ = ಪಾದಕಮಲ

* * * *



## ೨೪೮
## ಮೋಹನ – ಅಟತಾಳ

ಕಷ್ಟಪಟ್ಟರು ಇಲ್ಲ ಕಳವಳಿಸಿದರು ಇಲ್ಲ
ಭ್ರಷ್ಟ ಮಾನವ ನಿನ್ನ ಹಣೆಬರೆಹವಲ್ಲದೆ ಇಲ್ಲ ॥ಪ॥

ಸಿರಿವಂತನ ಸ್ನೇಹವ ಮಾಡಿ ನಡೆದರು ಇಲ್ಲ
ಪರಿಪರಿಯಲಿ ವಿದ್ಯೆಯ ಕಲಿತರಿಲ್ಲ
ನರಿಯ ಬುದ್ಧಿಯಿಂದಲಿ ನಡೆದುಕೊಂಡರು ಇಲ್ಲ
ಅರಿಯದೆ ಹಲವ ಹಂಬಲಿಸಿದರು ಇಲ್ಲ ॥೧॥

ಕೊಂಡಾಡಿ ಕಾಡಿ ನೀ ಬೇಡಿಕೊಂಡರು ಇಲ್ಲ
ಕಂಡ ಕಂಡವರಿಗೆ ಕೈ ಮುಗಿದರಿಲ್ಲ
ಗಂಡುಗತ್ತರಿಯನು ಕೊರಳಿಗಿಟ್ಟರು ಇಲ್ಲ– ಪ್ರ
ಚಂಡನಾದರು ಇಲ್ಲ, ಪರಿಹಾಸ್ಯವೆಲ್ಲ ॥೨॥

ಕಟ್ಟಾಳು ಕಡುಜಾಣನಾಗಿ ಪುಟ್ಟಿದರಿಲ್ಲ
ಬೆಟ್ಟವನು ಕಿತ್ತು ತಂದಿಟ್ಟರಿಲ್ಲ
ಸೃಷ್ಟಿಯೊಳು ಕಾಗಿನೆಲೆಯಾದಿಕೇಶವರಾಯ
ಕೊಟ್ಟವರಿಗುಂಟು ಕೊಡದವರಿಗಿಲ್ಲ ॥೩॥

ಭಾವ– ಮನುಷ್ಯ ಎಷ್ಟೇ ತಿಪ್ಪರಲಾಗ ಹಾಕಿದರೂ ಹಣೆಬರೆಹವನ್ನು ಮೀರಿ ಹೆಚ್ಚಿನದನ್ನು ಸಾಧಿಸಲಾರ ಎಂಬುದು ಈ ಕೀರ್ತನೆಯ ಆಶಯ. ಭಕ್ತಿ ಪಂಥದಲ್ಲಿ ಪ್ರಾಚೀನ ಕರ್ಮ, ಹಣೆಬರಹಗಳಿಗೆ ಹೆಚ್ಚು ಒತ್ತಿರುವುದನ್ನು ಗಮನಿಸಬಹುದು. ನಂಬುವುದೂ ಬಿಡುವುದೂ ಅವರವರಿಗೆ ಬಿಟ್ಟದ್ದು.

ಅರ್ಥ– ನರಿಯ ಬುದ್ಧಿ= ಯುಕ್ತಿ, ಕೊಂಡಾಡು = ಹೊಗಳು, ಕಟ್ಟಾಳು = ಶೂರ

* * * *

## ೨೪೯
## ಮುಖಾರಿ – ಝಂಪೆ ತಾಳ

ಆರಿಗಾದರು ಪೂರ್ವಕರ್ಮ ಬಿಡದು
ವಾರಿಜೋದ್ಭವ ಅಜಭವಾದಿಗಳ ಕಾಡುತಿಹುದು ॥ಪ॥

ವೀರಭೈರವನಂತೆ ತಾನು ಬತ್ತಲೆಯಂತೆ
ಮಾರಿ ಮಸಣಿಗಳಂತೆ ತಿರಿದು ತಿಂಬರಂತೆ
ಸೂರ್ಯ ಚಂದ್ರಮರಂತೆ ರಾಹುವಟ್ಟುಳಿಯಂತೆ
ಮೂರೆರಡು ತಲೆ ಹರಗೆ ಕೈಲಿ ಕಪ್ಪರವಂತೆ ॥೧॥

ಶಿಷ್ಟ ಹರಿಶ್ಚಂದ್ರನಿಗೆ ಮಸಣದಡಿಗೆಯಂತೆ
ಸೃಷ್ಟಿಸುವ ಬೊಮ್ಮನಿಗೆ ಶಿರ ಹೋಯಿತಂತೆ
ಅಷ್ಟದಿಕ್ಪಾಲಕರು ಸೆರೆಯಾಗಿರುವರಂತೆ
ಕಟ್ಟುಗ್ರದಿಂದ್ರನಿಗೆ ಮೈಯೆಲ್ಲ ಕಣ್ಣಂತೆ ॥೨॥

ಹನ್ನೊಂದಕ್ಷೋಹಿಣಿ ಬಲವುಳ್ಳ ಕೌರವನು
ರಣದೊಳಗೆ ತೊಡೆಮುರಿದು ಬಿದ್ದನಂತೆ
ವನಜಾಕ್ಷ ಸಿರಿಯರಸ ಬಲಿಯ ಬೇಡಿದನಂತೆ
ವನಿತೆ ಧರ್ಮಜನ ತಾಯ್ತಿರಿದುಂಡಳಂತೆ ॥೩॥

ಧರೆಗೆ ಧರ್ಮಜನಂತೆ ಕಂಕಭಟ್ಟನಂತೆ
ಶೂರ ಭೀಮನು ಬಾಣಸಿಗನಾದನಂತೆ
ವೀರ ಫಲಗುಣನಂತೆ ಕೈಯೊಳಗೆ ಬಳೆಯಂತೆ
ಕಿರಿಯ ನಕುಲ ಸಹದೇವರು ತುರುಗಾಯ್ದರಂತೆ ॥೪॥



ಹರನ ವಾಹನವಂತೆ ಹುಲ್ಲು ತಿಂಬುವುದಂತೆ
ವಿರಂಚಿ ವಾಹನವಂತೆ ಕಮಲ ಭಕ್ಷಿಪನಂತೆ
ಹರಿಯ ಹೊತ್ತಿಹನಂತೆ ಹಾವು ಭಕ್ಷಿಪನಂತೆ
ಸಿರಿಯಾದಿಕೇಶವನು ತಾ ಬೆಣ್ಣೆಗಳ್ಳನಂತೆ ॥೫॥

ಭಾವ– ಪ್ರಾಚೀನ ಕರ್ಮ ಯಾರನ್ನೂ ಬಿಡದು ಎಂಬ ಕರ್ಮಸಿದ್ಧಾಂತ. ಪೌರಾಣಿಕ ದೃಷ್ಟಾಂತಗಳೊಡನೆ ಮೈದಾಳಿರುವ ಕೀರ್ತನೆ ಇದು.

ಅರ್ಥ– ವಾರಿಜೋದ್ಭವ ಅಜ = ಕಮಲೋದ್ಭವನಾದ ಬ್ರಹ್ಮ, ಭವಾದಿಗಳು = ಈಶ್ವರನೇ ಮೊದಲಾದವರು

೧. ಅಟ್ಟುಳಿ = ತೊಂದರೆ, ಕಂಟಕ
ಮೂರೆರಡು ತಲೆ ಹರಗೆ = ಐಮೊಗದ ಶಿವನಿಗೆ (ಈಶಾನ, ಅಘೋರ, ವಾಮದೇವ, ತತ್ಪುರುಷ, ಸದ್ಯೋಜಾತ)
ಕಪ್ಪರ (<ಖರ್ಪರ) = ತಲೆಬುರುಡೆ, ಭಿಕ್ಷಾಪಾತ್ರೆ

೨. ಮಸಣ (<ಶ್ಮಶಾನ) = ಸುಡುಗಾಡು
ಬೊಮ್ಮ = ಬ್ರಹ್ಮ (ಶಿವ ಬ್ರಹ್ಮನ ಐದು ತಲೆಗಳಲ್ಲಿ ಒಂದನ್ನು ಕತ್ತರಿಸಿದ ಎಂದು ಕಥೆ)
ಮೈಯೆಲ್ಲ ಕಣ್ಣು = ಸಾಸಿರಗಣ್ಣ (ಅಹಲ್ಯೆಯನ್ನು ಕೂಡಿದ್ದರಿಂದ ಶಾಪಕ್ಕೆ ಗುರಿಯಾದದ್ದು)

೩. ವನಜಾಕ್ಷ = ಕಮಲಾಕ್ಷ, ಸಿರಿಯರಸ = ಲಕ್ಷ್ಮೀಪತಿ
ವನಿತೆ ಧರ್ಮಜನ ತಾಯಿ = ಕುಂತಿ (ಏಕಚಕ್ರನಗರದಲ್ಲಿ ಭಿಕ್ಷಾಟನೆಯ ಸ್ಥಿತಿ)

೪. ಬಾಣಸಿಗ = ಅಡಿಗೆಯವನು, ಫಲಗುಣ = ಅರ್ಜುನ
ತುರು = ದನ

೫. ಹರನ ವಾಹನ = ವೃಷಭ (ಎತ್ತು), ವಿರಂಚಿ = ಬ್ರಹ್ಮ
ವಿರಂಚಿ ವಾಹನ = ಹಂಸ, ಹರಿಯ ಹೊತ್ತಿಹನಂತೆ = ಗರುಡ

* * * *

## ೨೫೦
## ಕಾಂಬೋದಿ – ಝಂಪೆ ತಾಳ

**ಆರಿಗಾದರು ಪೂರ್ವಕಲ್ಪನೆ ತಪ್ಪದು ॥ಪ॥**
**ಬೇರೆ ಬಯಸಿದರೆ ಬರಲರಿಯದಯ್ಯ ॥ಅ॥**

**ರಾಮಚಂದ್ರನ ಸೇವೆ ಮಾಡಿ ಮೆಚ್ಚಿಸಿ ಮಹಾ**
**ತಾಮಸನ ಗರ್ವವನು ಮುರಿದು ಬಂದ**
**ರೋಮಕೋಟಿ ಲಿಂಗನೆನಿಸಿದ ಹನುಮನಿಗೆ ಹೊರಗೆ**
**ಗ್ರಾಮಗಳ ಕಾಯ್ದುಕೊಂಡಿಹುದೆ ಮನೆಯಾಯ್ತು ॥೧॥**

**ಸುರಪತಿಯ ಗೆದ್ದು ಸುಧೆಯನು ತಂದು ಮಾತೆಯ**
**ಸೆರೆಯ ಪರಿಹರಿಸಿ ಬಹು ಭಕ್ತನೆನಿಸಿ**
**ಹರಿಗೆ ವಾಹನನಾಗಿ ಹದಿನಾಲ್ಕು ಲೋಕವ**
**ಚರಿಸಿದ ಗರುಡನಿಗೆ ಮನೆ ಮರದ ಮೇಲಾಯ್ತು ॥೨॥**

**ಪೊಡವಿ ಭಾರವ ಪೊತ್ತು ಮೃಡಗೆ ಭೂಷಣನಾಗಿ**
**ಹೆಡೆಯೊಳಗೆ ಮಾಣಿಕ್ಯವಿಟ್ಟುಕೊಂಡು**
**ಬಿಡದೆ ಶ್ರೀ ಹರಿಗೆ ಹಾಸಿಗೆಯಾದ ಫಣಿಪತಿಗೆ**
**ಅಡವಿಯೊಳಗಣ ಹುತ್ತು ಮನೆಯಾಯಿತಯ್ಯ ॥೩॥**

**ಮೂರು ಲೋಕದ ಒಡೆಯ ಮುಕ್ಕಣ್ಣನೆಂಬಾತ**
**ಸಾರುತಿದೆ ಸಟೆಯಲ್ಲ ವೇದವಾಕ್ಯ**
**ಪಾರ್ವತೀ ಪತಿಯಾದ ಕೈಲಾಸದೊಡೆಯನಿಗೆ**
**ಊರ ಹೊರಗಣ ಮಸಣ ಮನೆಯಾಯಿತಯ್ಯ ॥೪॥**



**ಮೀರಲಳವಲ್ಲವೋ ಮುನ್ನ ಮಾಡಿದ್ದುದನು**
**ಯಾರು ಪರಿಹರಿಸಿಕೊಂಬವರಿಲ್ಲವೊ**
**ಮಾರ ಪಿತ ಕಾಗಿನೆಲೆಯಾದಿಕೇಶವರಾಯ**
**ಕಾರಣಕೆ ಕರ್ತ ನೀ ಕಡೆ ಹಾಯಿಸಯ್ಯ ॥೫॥**

ಭಾವ– ಪೂರ್ವಸಂಕಲ್ಪವನ್ನು ಮೀರಲು ಯಾರಿಂದಲೂ ಆಗದು ಎಂಬುದು ಈ ಕೀರ್ತನೆಯ ಆಶಯ

ಅರ್ಥ– ಪೂರ್ವಕಲ್ಪನೆ = ಪೂರ್ವ ಸಂಕಲ್ಪ

೧. ಹನುಮನಿಗೆ... ಮನೆಯಾಯ್ತು = ಸಾಮಾನ್ಯವಾಗಿ ಹನುಮಂತನ ಗುಡಿಗಳು ಊರಮುಂದೆ ಇರುತ್ತವೆ. ಆದ್ದರಿಂದಲೇ ಗ್ರಾಮಗಳನ್ನು ಕಾಯುವ ಕೆಲಸ ಎಂಬ ಕಲ್ಪನೆಯನ್ನು ಕನಕದಾಸರು ತಂದಿರುವುದು.

೨. ಸುರಪತಿ = ಇಂದ್ರ
ಸುಧೆ = ಅಮೃತ

೩. ಪೊಡವಿ = ಭೂಮಿ
ಮೃಡಗೆ = ಈಶ್ವರನಿಗೆ
ಫಣಿಪತಿ = ಆದಿಶೇಷ

೪. ಮುಕ್ಕಣ್ಣ = ಈಶ್ವರ
ಸಟೆ = ಸುಳ್ಳು

೫. ಅಳವಲ್ಲ = ಸಾಧ್ಯವಲ್ಲ
ಕಾರಣಕೆ ಕರ್ತ = ಮೂಲ ಕಾರಣ
ಮಾರಪತಿ = ಮನ್ಮಥನ ತಂದೆ (ವಿಷ್ಣು)

* * * *

## ೨೫೧
## ಪಂತುವರಾಳಿ – ಛಾಪುತಾಳ

**ನೀನೇನು ಮಾಡಲಾಪೆ**
**ನಾನು ಮುನ್ನ ಜನ್ಮ ಪಡೆದಲ್ಲದೆ ರಂಗ ॥ಪ॥**

**ನಾನಾ ಜನುಮದಿ ಬಹು ಯೋನಿ ಮುಖದಲಿ ಬಾಹ**
**ಹೀನತ್ವವನು ನೀನು ಕಳೆಯಲಾಪೆಯ**
**ನಾನು ನನ್ನದು ಎಂಬ ಅಹಂಕಾರವಿರೆ ನಿನ್ನ**
**ಧ್ಯಾನಿಸಲು ಬುದ್ಧಿಯ ಕೊಡಲಾಪೆಯ ॥೧॥**

**ಸಂಚಿತವಾಗಿರುವ ಪ್ರಾರಬ್ಧದೊಳಗೊಂದು**
**ಕಿಂಚಿತಾದರು ನೀನು ಕಳೆಯಲಾಪೆಯ**
**ಪಂಚೇಂದ್ರಿಯಂಗಳು ದೆಸೆದೆಸೆಗೆ ಎಳೆವಾಗ**
**ವಂಚನೆ ಇಲ್ಲದೆ ನೀನಡ್ಡ ಬರಲಾಪೆಯ ॥೨॥**

**ಸರಸಿಜೋದ್ಭವಗೆ ಬುದ್ಧಿಯ ಪೇಳಿ ಪಣೆಯೊಳು**
**ಬರೆದ ಬರೆಹವನು ನೀನು ತೊಡೆಯಲಾಪೆಯ**
**ಪರಬ್ರಹ್ಮ ಕಾಗಿನೆಲೆಯಾದಿಕೇಶವ ನಿನ್ನ**
**ಸ್ಮರಣೆಗೆಯ್ಯಲು ಕಾಯದಿರಲಾಪೆಯ ॥೩॥**

ಭಾವ– ಕರ್ಮಫಲವನ್ನು ಪ್ರತಿಯೊಬ್ಬರೂ– ಸಾಧುಸಂತರು, ಯೋಗಿಗಳು, ಋಷಿ– ಅನುಭವಿಸಿಯೇ ತೀರಬೇಕು. ಅದನ್ನು ಬದಲಾಯಿಸಲು ಸಾಧ್ಯವಿಲ್ಲ ಎಂಬ ಕರ್ಮಸಿದ್ಧಾಂತವೇ ಈ ಕೀರ್ತನೆಯ ಆಶಯ ಮತ್ತು ಧ್ವನಿ. 'ಪರಬ್ರಹ್ಮನಾದ ನಿನ್ನನ್ನು ಭಕ್ತ ಅನನ್ಯ ಭಕ್ತಿಯಿಂದ ಪ್ರಾರ್ಥಿಸಿದಾಗ ಅವನನ್ನು ಕಾಯದಿರಲು ನೀನು ಸಮರ್ಥನಿದ್ದೀಯಾ?' ಎಂದು ಅಂತ್ಯಗೊಳ್ಳುವ ಮಾತಿನಲ್ಲಿ ಭಕ್ತನನ್ನು ಕಾಯುವುದು ಭಗವಂತನ



ಕರ್ಮ; ಅದರಿಂದ ಅವನು ತಪ್ಪಿಸಿಕೊಳ್ಳುವುದಕ್ಕಾಗುವುದಿಲ್ಲ ಎಂಬ ಧ್ವನಿ ಇರುವುದನ್ನು ಗಮನಿಸಬಹುದು.

ಅರ್ಥ– ಆಪೆ (<ಆರ್ಪೆ) = ಶಕ್ತನಿದ್ದೀಯ?
ಮಾಡಲಾಪೆ = ಮಾಡಬಲ್ಲೆ
ಯೋನಿಮುಖ = ಜನ್ಮ
ಬಾಹ = ಬರುವ
ಸಂಚಿತ = ಹಿಂದಿನ ಜನ್ಮದ ಕರ್ಮ
ಪ್ರಾರಬ್ಧ = ಹಾಲಿ ಜನ್ಮದಲ್ಲಿ ಅನುಭವಿಸುತ್ತಿರುವ ಹಿಂದಿನ ಕರ್ಮ ಭಾಗ
ಕಿಂಚಿತ್ = ಕೊಂಚ
ಪಂಚೇಂದ್ರಿಯ = ಐದು ಜ್ಞಾನೇಮದ್ರಿಯಗಳು
ಸರಸಿಜೋದ್ಭವ = ಬ್ರಹ್ಮ
ತೊಡೆ = ಹೋಗಲಾಡಿಸು, ಅಳಿಸು

* * * *

## ೨೫೨
## ರಾಗ? – ತಾಳ?

**ಬೇಕೆಂದರೆ ಬಾರದು ಒಲ್ಲೆನೆಂದರೆ ಹೋಗದು**
**ಏಕಂಜುವಿ, ಶ್ರೀಹರಿ ಕರುಣಿಸದೆ ಒಂದೂ ಆಗದು ॥ಪ॥**

**ಸುಖವಾದಡೆ ಕಾಣುತ ಮುಖ ಕಮಲವು**
**ವಿಕಸಿತವಾಹುದು ಶ್ರೀಹರಿ ಕರುಣದಿ**
**ದುಃಖವಾದಡೆ ದುಸ್ಥಿತಿಯಲಿರಲು ಅಂ–**
**ಬಕದಲಿ ಜಲ ಪೋಗುವುದೇಕೊ?**
**ಸುಖದುಃಖ ದಿವ ರಾತ್ರಿಯ ತೆರವದರಿಂದಲಿ ನರರಂ**
**ಗಕೆ ಬಾಹುದು, ರಕ್ಷಣೆ ಮಾಡುವ ಕಾಶಿಪೀತಾಂಬರ**
**ಮಕರ ಕುಂಡಲಾಭರಣನ ನೆನೆ ಮನವೆ ॥೧॥**

**ಸಿರಿ ಬಂದರೆ ಸಿರಿಗಾನಂದವ ಮಾಡು**
**ವಿರೇತಕೆ ಮನ ನಿರ್ಮಳ ಧ್ವನಿಯಲಿ**
**ದರಿದ್ರವು ಬಂದರೆ ಧಾತುಗೆಟ್ಟು ದೇಹಾ–**
**ತುರ ಹೊಂದುವಿರೇತಕೆ ದುಗುಡದಿ**
**ಸಿರಿ ದಾರಿದ್ರ್ಯವು ಸುರತತಿಗಡರುವ**
**ತೆರನೆಂದರಿದದರಿಂದಲಿ ಮಾನ**
**ವರಿಗೆ ಬಾಹುದು, ಪರಿಹರಿಸುವ ಪರಮಾತ್ಮನೆನಿಪ**
**ಮುರವೈರಿಯ ಬಿಡದಿರು ಎಲೆ ಮನವೆ ॥೨॥**

**ಜನನವಾದರೆ ಹಾಡಿ ಹರಸಲೇತಕೆ**
**ಅನುಗತಿಯನು ಹೇಳಿದರಳಲೇಕೆ**
**ಜನನಮರಣವದೆಲ್ಲರಿಗೆ ಗತಿಬಾಹುದು ಏಕೆ**
**ಜನನ ಮರಣವನೊಂದು ಹೊರಗೆ ಮಾಡಿ ಪರ**



**ಜನದೊಳಗಿರಿಸುವ ಸುಜನೇಶ ಮುನೀಶನೆಂ**
**ದೆನಿಸುವ ಕಾಗಿನೆಲೆಯಾದಿಕೇಶವರಾಯನ**
**ಅನುಶ್ರುತಿಯನು ಬಿಡದಿರು ಎಲೆ ಮನವೆ ॥೩॥**

ಭಾವ– ಭಗವಂತನ ಇಚ್ಛೆಯಂತೆ ಎಲ್ಲವೂ ನಡೆಯುವಾಗ, 'ಹೀಗೆ ಮಾಡಬಾರದಿತ್ತು' ಎಂದು ಹಲುಬುವುದರಲ್ಲಿ ಅರ್ಥವಿಲ್ಲ, ಯಾರಿಗೆ ಏನಾಗಬೇಕು ಎಂಬುದೆಲ್ಲ ಪೂರ್ವಯೋಜಿತ ಎಂಬ ಆಶಯವಿದೆ ಇದರಲ್ಲಿ.

ಕಾಶಿಪೀತಾಂಬರ = ಹೊಳೆಯುವ ಹೊಂಬಣ್ಣದ ರೇಷ್ಮೆ ವಸ್ತ್ರ

ಅರ್ಥ– ೧. ಅಂಬಕ = ಕಣ್ಣು
೨. ಅಡರುವ = ಎರಗುವ, ಹತ್ತುವ
ಸುರತತಿ =ದೇವತೆಗಳ ಸಮೂಹ
ಮುರವೈರಿ = ಕೃಷ್ಣ
೩. ಅನುಗತಿ = ಸಾವು
ಅನುಶ್ರುತಿ = ನಾಮಸ್ಮರಣೆ

* * * *

೨೫೩
### ರಾಗ : ಕಾಂಬೋಧಿ

ಎಷ್ಟು ಮರುಗಿದರು ನಿನ್ನ ಹಣೆಯ ಬರೆಹ
ಅಷ್ಟಲ್ಲದಿಲ್ಲ ಸ್ತುತಿ ವಚನದ ಫಲ ಕಂದ ॥ಪ॥

ಅಂಬರದೊಳಾಡುವ ಪಕ್ಷಿ ತನ್ನ ವಶವಹುದೇ
ಉಂಬುವರ ಕರುಬಿದೊಡೆ ಉದರ ತುಂಬುವುದೇ
ಕಂಬಳಿಯ ಕೊಡಲು ಕನಕಾಂಬರ ತನಗಹುದೆ
ಹಂಬಲಿಸಿ ಹಲವ ಹಲುಬಿದೊಡೆ ಸಿರಿ ಬಹುದೆ ॥೧॥

ಇಲ್ಲದುದ ಬಯಸಿ ಬೇಡಿದೊಡೆ ಭಂಗಬಹುದೊ
ಬಲ್ಲೆನೆಂದೊಡೆ ಮಣಿಸದೆ ಬಿಡಳು ವಿಧಿಯು
ಬಲ್ಲಿದನು ಬಡವನಿವನೆಂದು ನೋಡರು ಸಿರಿ
ವಲ್ಲಭನ ಮಗಳ ಮೀರುವರಾರು ಕಡೆಗೆ ॥೨॥

ಸಿರಿಗೆ ಹಿಗ್ಗದೆ ಬಡತನಕೆ ಬೆಂಡಾಗದಿರು
ಸೇರಿದ ನೆಲೆಯಲಾ ಸುಖ ಸಾವಕಾಲದಲಿ
ಶರಣಜನಾಶ್ರಿತ ನೆಲೆಯಾದಿಕೇಶವನ
ಚರಣ ಕಮಲವ ಭಜಿಸಿ ಸುಖಿಯಾಗು ಮನವೇ ॥೩॥

ಭಾವ– ವಿಧಿಯನ್ನು ಮೀರಲಾಗುವುದಿಲ್ಲ ಎಂಬುದೇ ಇದರ ಆಶಯ.

ಅರ್ಥ– ೧. ಅಂಬರ = ಆಕಾಶ, ಉದರ = ಹೊಟ್ಟೆ ಕನಕಾಂಬರ = ಚಿನ್ನದ ಬಣ್ಣದ ವಸ್ತ್ರ
೨. ಸಿರಿ ವಲ್ಲಭ = ಲಕ್ಷ್ಮಿಯ ಗಂಡ (ವಿಷ್ಣು)
೩. ಚರಣ = ಪಾದ

* * * *

# ಪೌರಾಣಿಕ ವಾವೆ ವರಸೆಯ ಮುಂಡಿಗೆಗಳು

**Blank**



## ೨೫೪
## ಮೋಹನ – ಆದಿತಾಳ

ಬಾ ರಂಗ ಎನ್ನ ಮನಕೆ ಭಾವಜನಯ್ಯ ॥ಪ॥

ಭಾವಮೈದುನ ಭಾವ ಬೀಗನ ತನುಜ
ಮಾವನ ಮಡದಿಯ ಮೊಮ್ಮಗಳ ಗಂಡ ॥೧॥

ಅತ್ತೆ ಮೈದುನ ಬಾರೊ ಅತ್ತೆಯ ಮಗಳ ಗಂಡ
ಅತ್ತಿಗೆ ಮೇಲತ್ತಿಗೆ ಮಗಳ ಗಂಡ ॥೨॥

ಅಂಬುಜನಯ್ಯ ಬಾರೋ ಆದಿಮೂರುತಿ ರಂಗ
ಕಂಬದಿಂದೊಡೆದು ಬಂದ ಆದಿಕೇಶವ ರಂಗ ॥೩॥

* * * *

## ೨೫೫
## ಸಾವೇರಿ – ಆದಿತಾಳ

ರಂಗ ಬಾರೋ ರಂಗಯ್ಯ ಬಾರೊ– ನೀ ॥ಪ॥
ಬಾರದಿದ್ದರೆ ಎನ್ನ ಪ್ರಾಣ ಉಳಿಯದು ॥ಅ॥

ಅತ್ತಿಗೆ ಮೈದುನ ಬಾರೊ ಅತ್ತೆಯ ಮಗಳ ಗಂಡ
ಅತ್ತಿಗೆ ಮೇಲತ್ತಿಗೆ ನಾದಿನಿ ಸೊಸೆಯ ಗಂಡ ॥೧॥

ಮಾವನ ಅಳಿಯನೆ ಬಾರೊ ಮಾವನ ಬೀಗನ ತನುಜ
ಮಾವನ ಮಡದಿಯ ಮಗಳ ತಂಗಿಯ ಗಂಡ ॥೨॥

ಅಂಬುಧಿ ಶಯನನೆ ಬಾರೊ ಆದಿವಸ್ತುವೆ ರಂಗ
ಕಂಬದೊಳು ನೆಲಸಿದ ಆದಿಕೇಶರಾಯ ॥೩॥

* * * *



## ೨೫೬
## ಸಾವೇರಿ – ಆದಿತಾಳ

ಬಾರೊ ಬಾರಯ್ಯ ಮನೆಗೆ, ಭಾವಜನಯ್ಯ ॥ಪ॥
ಬಾರದಿದ್ದರೆ ಎನ್ನ ಮನವು ನಿಲ್ಲದೊ ರಂಗ ॥ಅ॥

ಅತ್ತಿಗೆ ಮೈದುನ ಬಾರೊ ಅತ್ತಿಗೆ ಮಗಳ ಗಂಡ
ಅತ್ತಿಗೆ ಮ್ಯಾಲತ್ತಿಗೆ ಮಗಳ ಸೊಸೆಯ ಗಂಡ ॥೧॥

ಮಾವನ ಮಗ ಬಾರೊ... ನಣುಗ
ಮಾವನ ಮಡದಿಯ ಮಗಳ ಸೊಸಿಯ ಗಂಡ ॥೨॥

ಅಂಬುಧಿಶಯನವೆ ಬಾರೊ ಆದಿ ಮೂರುತಿ ರಂಗ
ಕಂಬದೊಳು ನೆಲಸಿದ ಆದಿಕೇಶವರಾಯ ॥೩॥

* * * *

## ೨೫೭
## ಸಾರಂಗ – ತಾಳ : ಆದಿ

ಬಾರೋ ನಮ್ಮ ಮನೆತನಕ ಕಾವೇರಿ ರಂಗ
ಬಾರದಿದ್ದರೆ ಎನ್ನ ಪ್ರಾಣ ಉಳಿಯದೊ ರಂಗ ॥ಪ॥

ಅತ್ತಿಗೆಯ ಮೈದುನ ಬಾರೋ ಹೆತ್ತ ಮಗಳ ಗಂಡ
ಅತ್ತಿಗೆ ಮೇಲತ್ತಿಗೆ ಮೊಮ್ಮಗಳ ಮುದ್ದಾಡುತ ॥೧॥

ಭಾವ ಮೈದುನ ಬಾರೊ ಮಾವ ಬೀಗನ ಅನುಜ
ಮಾವನ ಮಡದಿಯ ಸೊಸೆಯ ಮಗಳ ಗಂಡ ॥೨॥

ಅಂಬುಜನಯ್ಯನೆ ಬಾರೊ ಆದಿಮೂರುತಿ ರಂಗ
ಕಂಬದೊಳೊಡೆದು ಮೂಡಿದ ಆದಿಕೆಶವ ರಂಗ ॥೩॥

[೨೫೪, ೨೫೫, ೨೫೬ ಮತ್ತು ೨೫೭ ಕೀರ್ತನೆಗಳು ಒಂದೇ ಮೂಲದವು ಎನಿಸುತ್ತದೆ; ಆದರೆ ಒದೊಂದರಲ್ಲೂ ಅಲ್ಪಸ್ವಲ್ಪ ಬದಲಾವಣೆಯ ಎಳೆ ಇದೆ ಅಷ್ಟೆ.]



## ೨೫೮
## ಶಂಕರಾಬರಣ – ಅಟತಾಳ

ಕೇಶವ ಎನ್ನಿರೊ ಕ್ಲೇಶನಾಶನನ– ತನ್ನ
ಆಸೆಪಟ್ಟವರಿಗೆ ಅಧಿಕ ಫಲವೀವನ ॥ಪ॥

ಸತಿಯ ತಮ್ಮನ ಸುತನೊಳು ಸೋದರನಾದನ– ಕೇಶವ ಎನ್ನಿರೊ
ಮತಿವಂತ ಮಾವನ ಮಗಳ ತಂದಾತನ– ಕೇಶವ ಎನ್ನಿರೊ
ಮತ ಪಿಡಿದ ಮಾತೆಯ ಮೊಮ್ಮಗನ ಕೊಂದನ– ಕೇಶವ ಎನ್ನಿರೊ
ಕ್ಷಿತಿಯುತನಾಗಿ ಕರಿಯ ಕಾಯ್ದಾತನ– ಕೇಶವ ಎನ್ನಿರೊ ॥೧॥

ದಶಮುಖನರಸಿಯ ಪೆಸರ ಶಿರವಗೆದ್ದನ– ಕೇಶವ ಎನ್ನಿರೊ
ಅಸದಳರೆನಿಪ ರನ್ನರೊಳಗೂಡಿದಾತನ– ಕೇಶವ ಎನ್ನಿರೊ
ಕುಸುಮ ಕೋದಂಡ ಗಂಡರ ಗಂಡನಾದನ– ಕೇಶವ ಎನ್ನಿರೊ
ಎಸೆವ ಬಾಣಕೆ ತನ್ನ ಎದೆಯಾಂತು ನಿಂತನ– ಕೇಶವ ಎನ್ನಿರೊ ॥೨॥

ದಾಸರ ಹೃದಯದೊಳಗೆ ನೆಲಸಿಪ್ಪನ– ಕೇಶವ ಎನ್ನಿರೊ
ದೇಶವರಿಕೆಯಲ್ಲಿ ನಯನ ಉಂಟಾದವನ– ಕೇಶವ ಎನ್ನಿರೊ
ಮೋಸದಿಂ ಮುಂದಲೆ ಪಿಡಿದು ಭಂಗಿಸಿದವನ– ಕೇಶವ ಎನ್ನಿರೊ
ದೇಶಾಧಿಪತಿ ಕಾಗಿನೆಲೆಯಾದಿಕೇಶವನ– ಕೇಶವ ಎನ್ನಿರೊ ॥೩॥

ಭಾವ– ವಿಷ್ಣು ಲೀಲೆಗಳನ್ನು ಕೊಂಡಾಡುವ ಪೌರಾಣಿಕ ವಾವೆ ವರಸೆಯ ಲಘು ಮುಂಡಿಗೆ ಇದು.

ಅರ್ಥ– ಸತಿಯು... ನಾದನ = ಲಕ್ಷ್ಮಿಯ ತಮ್ಮ ಚಂದ್ರನ ಮಗನಾದ ಬುಧನ ಜ್ಞಾನಕ್ಕೆ ಸೋದರನಾದ ಜ್ಞಾನದಾತನ

ಮತಿವಂತ... ತಂದಾತನ = ಜ್ಞಾನಿ ಜನಕನ ಮಗಳು ಜಾನಕಿಯನ್ನು ತಂದ ರಾಮನ
ಮತಪಿಡಿದ... ಕೊಂದನ = ಹಠ ಹಿಡಿದ ಕಂಸನ ತಾಯಿಯ ಮೊಮ್ಮಗನಾದ ಶಿಶುಪಾಲನನ್ನು ಕೊಂದವನ
ಕ್ಷಿತಿ... ಕಾಯ್ದಾತನ = ಮೊಸಳೆಯ ಬಾಯಿಂದ ಆನೆಯನ್ನು ಕಾಪಾಡಿದವನ
ದಶಮುಖ... ಗೆದ್ದನ = ಅಶ್ವಿನಿ ದೇವತೆಗಳು ಚವನ ಮಹರ್ಷಿಗೆ ತಾರುಣ್ಯವನ್ನು ಅನುಗ್ರಹಿಸಿದ ಕಾರಣ ಚ್ಯವನ ಪ್ರತಿಯಾಗಿ ಅವರಿಗೆ ಹವಿರ್ಭಾಗವನ್ನು ಅರ್ಪಿಸಿದ. ಇದನ್ನು ಸಹಿಸದ ಇಂದ್ರ ಚವನನ ಮೇಲೆ ವಜ್ರಾಯುದ ಎತ್ತಿದ. ಕೈ ಸ್ತಂಭನಗೊಂಡಿತು. ಆಗ ಚವನ ಹೋಮಕುಂಡದಿಂದ 'ಮಂದ' ಎಂಬ ರಾಕ್ಷಸನನ್ನು ಸೃಷ್ಟಿಸಿದ. ಇಂದ್ರ ಈ ರಾಕ್ಷಸನಿಗೆ ಹೆದರಿ ಚವನನ ಮೊರೆ ಹೊಕ್ಕ. ಮಂದ ವಿಷ್ಣುವಿನಿಂದ ಹತನಾದ ಕಥಾಸಂದರ್ಭ. (ಮುದೋದರಿ> ಮಂಡೋದರಿ)
ಅಸದಳ... ದಾತನ = ಮೋಹಿನಿಯಾಗಿ ಅಸದಳರೆನ್ನಿಸಿದ ಸುಂದೋಪ ಸುಂದರೆಂಬ ರಾಕ್ಷಸರನ್ನು ಕೂಡಿ, ನಿಮ್ಮಿಬ್ಬರಲ್ಲಿ ಯಾರು ಶೂರರೋ ಅವರನ್ನು ಮದುವೆಯಾಗುತ್ತೇನೆ ಎಂದು ಹೇಳಿ, ಅವರನ್ನು ಕೊಂದ ವಿಷ್ಣುವನ್ನು
ಕುಸುಮ... ನಾದನ = ಮನ್ಮಥ ವೈರಿಯಾದ ಶಿವನಿಗೆ ಒಡೆಯನಾದ ವಿಷ್ಣುವನ್ನು
ಎಸೆವ... ನಿಂತನ = ಹಂಸಧ್ವಜನ ಮಗ ಸುಧನ್ವನೆಸೆದ ಬಾಣಕ್ಕೆ ಎದೆಗೊಟ್ಟು ಅರ್ಜುನನನ್ನು ರಕ್ಷಿಸಿದ ಕೃಷ್ಣನನ್ನು
ದಾಸರ... ನೆಲಸಿಪ್ಪನ = ಭಕ್ತರ ಹೃದಯದಲ್ಲಿರುವನ
ದೇಶ... ಉಂಟಾದನ = ಅಜುನನಿಗೆ ಜ್ಞಾನನೇತ್ರವಿತ್ತು ವಿಶ್ವರೂಪ ತೋರಿಸಿದವನ
ಮೋಸ... ಭಂಗಿಸಿದವನ = ಬಿಲ್ಲು ಹಬ್ಬಕ್ಕೆ ಕರೆದು ಮೋಸದಿಂದ ಕೊಲ್ಲ ಬಯಸಿದ ಕಂಸನ ಮುಂದಲೆ ಹಿಡಿದು ಕೊಂದವನ
ದೇಶಾಧಿಪತಿ = ಜಗದೊಡೆಯ

* * * *



## ೨೫೯
## ಕಾಂಬೋದಿ – ಅಟತಾಳ

ವನಜ ಮುಖಿಯರ ಮನದಿಷ್ಟಾರ್ಥವನೀವನ– ಶ್ರೀ ಕೃಷ್ಣ ಎನ್ನಿರೊ
ಮನು ಮುನಿಜನರನು ಅನುದಿನರೊಳು ಪೊರೆವನ– ಶ್ರೀ ಕೃಷ್ಣ ಎನ್ನಿರೊ ॥ಪ॥

ಪಣ್ಣ ಕೊಯ್ದನನುಜಗೆ ಸಹಾಯನಾದನ– ಶ್ರೀ ಕೃಷ್ಣ ಎನ್ನಿರೊ
ಸಣ್ಣ ಸೀರೆಯ ನಲ್ವೆಣ್ಣು ರೂಪಾದನ– ಶ್ರೀ ಕೃಷ್ಣ ಎನಿರೊ
ಅಣ್ಣನ ವೈರಿಯ ಮಗನ ಕೊಂದಾತನ– ಶ್ರೀ ಕೃಷ್ಣ ಎನ್ನಿರೊ
ಬಣ್ಣಿಸಲರಿಯೆ ನಾನಿವನ ಮಹಿಮೆಯ– ಶ್ರೀ ಕೃಷ್ಣ ಎನ್ನಿರೊ ॥೧॥

ಮುತ್ತಯ್ಯನಿರೆ ಮೊಮ್ಮಗಗೆ ಪಟ್ಟಗಟ್ಟಿದನ– ಶ್ರೀ ಕೃಷ್ಣ ಎನ್ನಿರೊ
ಹೆತ್ತವಳಿರೆ ತಾಯ ಬೇರೆ ಪಡೆದಾತನ– ಶ್ರೀ ಕೃಷ್ಣ ಎನ್ನಿರೊ
ಮತ್ತೇಭಗಾಮಿನಿಗಾಗಿ ವನವಾಸ ಪೋದನ– ಶ್ರೀ ಕೃಷ್ಣ ಎನ್ನಿರೊ
ಮತ್ತೆ ಹಿರಣ್ಯಕಗೆ ಕಂಬದಲಿ ತೋರ್ದನ– ಶ್ರೀ ಕೃಷ್ಣ ಎನ್ನಿರೊ ॥೨॥

ಉಗುರು ಕೊನೆಗಳಿಂದ ನಗವನೆತ್ತಿದನ– ಶ್ರೀ ಕೃಷ್ಣ ಎನ್ನಿರೊ
ಬೊಗಸೆಗಂಗಳ ಬಾಲೆಯರ ತಂದಾತನ– ಶ್ರೀ ಕೃಷ್ಣ ಎನ್ನಿರೊ
ಮಗಳ ಗಂಡನ ಶಿರವನೆ ಛೇದಿಸಿದನ– ಶ್ರೀ ಕೃಷ್ಣ ಎನ್ನಿರೊ
ಸುಗುಣರನ್ನ ಕಾಗಿನೆಲೆಯಾದಿಕೇಶವನ– ಶ್ರೀ ಕೃಷ್ಣ ಎನ್ನಿರೊ ॥೩॥

ಭಾವ– ವಿಷ್ಣು ಮಹಾತ್ಮ್ಯೆಯನ್ನು ಸಾರುವ ಪೌರಾಣಿಕ ಘಟನೆಗಳ ವಾವೆ ವರಸೆಯ ಲಘು ಮುಂಡಿಗೆ ಇದು.

ಅರ್ಥ– ವನಜ = ಕಮಲ
ಪಣ್ಣ... ನಾದನ = ವನವಾಸದಲ್ಲಿದ್ದಾಗ ಹಣ್ಣು ಕೊಯ್ದ ಭೀಮನ ತಮ್ಮನಾದ ಅರ್ಜುನನಿಗೆ ಸಹಾಯ ಮಾಡಿದ ಕೃಷ್ಣನ

ಸಣ್ಣ... ರೂಪಾದನ = ಮೋಹಿನಿಯಾಗಿ ಅಮೃತ ಹಂಚಿದ ವಿಷ್ಣು
ಅಣ್ಣ... ಕೊಂದಾತನ = ಲಕ್ಷ್ಮಣಾಗ್ರಜ ರಾಮನ ಹಗೆ ರಾವಣನ ಮಗ ಇಂದ್ರಜಿತುವನ್ನು ಕೊಂದ ರಾಮನ
ಬಣ್ಣಿಸಲರಿಯೆ = ವರ್ಣಿಸಲು ತಿಳಿಯೆ
ಮುತ್ತಯ್ಯ... ಕಟ್ಟಿದನ = ಪ್ರಹ್ಲಾದ ಇದ್ದರೂ ಮಗ ವಿರೋಚನನ ಮಗನಾದ ಬಲಿಗೆ ಪಟ್ಟ ಕಟ್ಟಿದವನ
ಹೆತ್ತವಳಿರೆ... ಪಡೆದಾತನ = ದೇವಕಿ ಇದ್ದರೂ ಸಾಕುತಾಯಿ ಯಶೋಧೆಯನ್ನು ಪಡೆದವನ
ಮತ್ತೇಭ (<ಮತ್ತು+ಇಭ) = ಮದಿಸಿದ ಆನೆ
ಮತ್ತೇಭ... ಪೋದನ = ಮದಿಸಿದ ಆನೆಯಂಥ ವರ್ತನೆಯ ಕೈಕೆಯ ದೆಸೆಯಿಂದಾಗಿ ಕಾಡಿಗೆ ಹೋದ ರಾಮನ
ಮತ್ತೆ... ತೋರ್ದನ = ಹಿರಣ್ಯಕಶ್ಯಪನನ್ನು ಕೊಂದ ನರಸಿಂಹನ
ಉಗರು... ನೆತ್ತಿದನ = ಗೋವರ್ಧನ ಗಿರಿಯನೆತ್ತಿದ ಕೃಷ್ಣನ (ನಗ = ಬೆಟ್ಟ)
ಬೊಗಸೆ... ತಂದಾತನ = ನರಕಾಸುರನ ಬಳಿಯಿದ್ದ ಹದಿನಾರು ಸಾವಿರ ಬಾಲೆಯರನ್ನು ತಂದ ಕೃಷ್ಣನ
ಮಗಳ = ಭೇದಿಸಿದನ = ರುಕ್ಷಿಣಿಯಲ್ಲಿ ಹುಟ್ಟಿದ ಚಾರುಮತಿಯನ್ನು ಕೃತವರ್ಮನ ಮಗ ಬಲಿಗೆ ಮದುವೆ ಮಾಡಲಾಗಿತ್ತು ಅವನು ಕೃಷ್ಣನಿಂದ ಹತನಾದ ಕಥಾ ಸಂದರ್ಭ

* * * *



## ೨೬೦
## ಕೇದಾರಗೌಳ – ಅಟತಾಳ

**ಮಂದರಧರ ಪಾವನ ಇಂದಿರಾರಮಣನ– ಗೋವಿಂದ ಎನ್ನಿರೋ ॥ಪ॥**
**ನಂದನ ಕಂದ ಮುಕುಂದಾಬ್ಧಿಶಯನನ– ಗೋವಿಂದ ಎನ್ನಿರೋ ॥ಅ॥**

**ಗರಳಕಂಧರ ಸಖನನುಜನ ಕೊಂದನ– ಗೋವಿಂದ ಎನ್ನಿರೋ**
**ಸುರಮುನಿಯನುಜನ ಪಾದವ ಪಿಡಿದನ– ಗೋವಿಂದ ಎನ್ನಿರೋ**
**ಪರಮ ವೈಷ್ಣವರ ಕೈಲಿ ದಾನವ ಪಿಡಿದನ– ಗೋವಿಂದ ಎನ್ನಿರೋ**
**ಉರಗನ ಮಗಳ ಗಂಡಗೆ ಪ್ರಾಣವಿತ್ತನ– ಗೋವಿಂದ ಎನ್ನಿರೋ ॥೧॥**

**ಸತಿ ರುಕ್ಮಿಣಿ ರಾಧೆಯ ಚುಂಬಿಸಿದಾತನ– ಗೋವಿಂದ ಎನ್ನಿರೋ**
**ಅತಿಶಯದಿಂದ ಸತಿ ರೂಪ ತಾಳ್ದನ– ಗೋವಿಂದ ಎನ್ನಿರೋ**
**ಪಿತನ ಮಾತನು ಶಿರದೊಳಗಾಂತು ನಡೆದನ– ಗೋವಿಂದ ಎನ್ನಿರೋ**
**ಮತಿವಂತನಾಗಿ ಮಾತೆಯ ಶಿರವ ತರಿದನ– ಗೋವಿಂದ ಎನ್ನಿರೋ ॥೨॥**

**ಕರೆತರಿಸಿದ ಮಾವನ ಕೊಂದಾತನ– ಗೋವಿಂದ ಎನ್ನಿರೋ**
**ಧರೆಯ ಒಯ್ದನ ಕಾಯಗಳೆದನ– ಗೋವಿಂದ ಎನ್ನಿರೋ**
**ಈರೇಳು ಭುವನಗಳ ಉದರದೊಳಿಟ್ಟನ– ಗೋವಿಂದ ಎನ್ನಿರೋ**
**ಮಾರಜನಕ ಕಾಗಿನೆಲೆಯಾದಿಕೇಶವನ– ಗೋವಿಂದ ಎನ್ನಿರೋ ॥೩॥**

ಭಾವ– ವಿಷ್ಣುವಿನ ಲೀಲೆಗಳನ್ನು ಕೊಂಡಾಡುವ ಆಶಯವುಳ್ಳ ಮುಂಡಿಗೆ ಇದು.

ಅರ್ಥ– ಮಂದರಧರ = ಮಂದರಪರ್ವತವನ್ನು ಹೊತ್ತವನು (ಕೂರ್ಮಾವತಾರ)
ಇಂದಿರಾ ರಮಣ = ಲಕ್ಷ್ಮಿಯ ಗಂಡ
ನಂದನ ಕಂದ = ನಂದಗೋಪನ ಮಗ
ಅಬ್ಧಿಶಯನ = ಸಮುದ್ರವನ್ನೆ ಹಾಸಿಗೆಯಾಗುಳ್ಳವನು

೧. ಗರಳಕಂಧರ = ವಿಷಕಂಠ (ಶಿವ)
ಸಖ = ರಾವಣ, ಅನುಜ = ಕುಂಭಕರ್ಣ
ಗರಳ... ಕೊಂದನ = ಶಿವಸಖನಾದ ರಾವಣನ ತಮ್ಮ ಕುಂಭ ಕರ್ಣನನ್ನು ಕೊಂದ ರಾಮನನ್ನು
ಸುರ... ಪಿಡಿದನ = ದೇವಮುನಿ ಬೃಹಸ್ಪತಿಯ ತಮ್ಮ ಭೃಂಗಿಯ ಪಾದ ಹಿಡಿದ ವಿಷ್ಣು
ಪರಮ... ಪಿಡಿದನ = ವಿಷ್ಣು ಆರಾಧಕನಾದ ಬಲಿಯಿಂದ ದಾನ ಪಡೆದ ವಾಮನನ
ಉರಗನ... ವಿತ್ತನ = ನಾಗಕನ್ನಿಕೆ ಉಲೂಪಿಯ ಗಂಡ ಅರ್ಜುನನಿಗೆ ಪ್ರಾಣ ಕೊಟ್ಟ ಕೃಷ್ಣ

೨. ಸತಿ... ದಾತನ = ಪತ್ನಿ ರುಕ್ಮಿಣಿ ರಾಧೆಯರನ್ನು ಮುತ್ತಿಟ್ಟು ಮುದ್ದಿಸಿದ ಕೃಷ್ಣ
ಅತಿ... ತಾಳ್ದನ = ಮೋಹಿನಿ ರೂಪ ತಾಳಿ ಅಮೃತವನ್ನು ದೇವತೆಗಳಿಗೆ ಹಂಚಿದವನ
ಪಿತನ... ನಡೆದನ = ದಶರಥನ ಮಾತನ್ನುಳಿಸಲು ವನವಾಸಕ್ಕೆ ಹೋದವನ
ಮತಿ... ತರಿದನ = ತಾಯಿ ರೇಣುಕೆಯ ಶಿರ ಕಡಿದು ಮತ್ತೆ ಉಳಿಸಿದ ಜಾಣನ

೩. ಕರೆ... ದಾತನ = ಬಿಲ್ಲ ಹಬ್ಬಕ್ಕೆ ಕರೆ ಕಳಿಸಿದ ಮಾವ ಕಂಸನನ್ನೆ ಕೊಂದವನ
ಧರೆಯ... ಗಳೆದನ = ಭೂಮಿಯನ್ನು ಹೊತ್ತೊಯ್ದ ಹಿರಣ್ಯಾಕ್ಷನನ್ನು ಕೊಂದವನ
ಈರೆಳು... ಳಿಟ್ಟನ = ಹದಿನಾಲ್ಕು ಲೋಕಗಳನ್ನು ತನ್ನ ಹೊಟ್ಟೆಯಲ್ಲಿ ಅಡಗಿಸಿಕೊಂಡವನ
ಮಾರಜನಕ = ಮನ್ಮಥನ ತಂದೆ

* * * *



## ೨೬೧
## ಕೇದಾರಗೌಳ – ಆದಿತಾಳ

ಶ್ರೀರಾಮ ಎನ್ನಿರೊ ಮೂಜಗದವರೆಲ್ಲ
ಈರೇಳು ಭುವನ ತನ್ನುದರದೊಳಿಟ್ಟನ ॥ಪ॥

ಅನಿಮಿಷರಂದದಿ ವನವಾಸಕೆ ಹೋದವನ– ಶ್ರೀರಾಮ ಎನ್ನಿರೊ
ಮನಿಸಿಜ ನಾರಿಯ ಪಿತನ ಕೊಂದನ ಪಿತನ ಪೊತ್ತವನ– ಶ್ರೀರಾಮ ಎನ್ನಿರೊ
ಘನ ಕೋಡ ಕೊನೆಯಿಂದ ಧರಣಿಯ ತಾಳ್ದವನ– ಶ್ರೀರಾಮ ಎನ್ನಿರೊ
ದಿನಕರನಳಿವಿನಲಿ ಪಗೆಯ ಗೆದ್ದಾತನ– ಶ್ರೀರಾಮ ಎನ್ನಿರೊ ॥೧॥

ಗಜವನೇರಿದವನ ತಂದೆಯ ತಾಯನಳೆದವನ– ಶ್ರೀರಾಮ ಎನ್ನಿರೊ
ಭುಜಬಲದಿಂದ ಭೂಪಾಲರ ಗೆದ್ದವನ – ಶ್ರೀರಾಮ ಎನ್ನಿರೊ
ನಿಜಮುನಿಗಳ ವನದಿಂದ ತನಯರ ತಂದವನ– ಶ್ರೀರಾಮ ಎನ್ನಿರೊ
ಭುಜಗಧರನ ಕೈಯ ಆಯುಧವನು ತಂದವನ– ಶ್ರೀರಾಮ ಎನ್ನಿರೊ ॥೨॥

ಪೆಣನ ಭೋಜನ ಮಾಡಿದವರ ವಾಸವ ಹೊಕ್ಕವನ– ಶ್ರೀರಾಮ ಎನ್ನಿರೊ
ತೃಣಕೆ ಬಾಯಿತ್ತನ ಮೇಲೇರಿ ಬಪ್ಪನ– ಶ್ರೀರಾಮ ಎನ್ನಿರೊ
ಅಣುರೇಣು ತೃಣದೊಳು ಪರಿಪೂರ್ಣನಾದನ– ಶ್ರೀರಾಮ ಎನ್ನಿರೊ
ಪ್ರಣವಗೋಚರ ಕಾಗಿನೆಲೆಯಾದಿಕೇಶವನ– ಶ್ರೀರಾಮ ಎನ್ನಿರೊ ॥೩॥

ಭಾವ– ಇದೊಂದು ಮುಂಡಿಗೆ. ರಾಮನಾಮವನ್ನು ನೆನೆಯಿರಿ ಎಂದು ಹೇಳುತ್ತಾ ವಿಷ್ಣುವಿನ ಹತ್ತು ಅವತಾರಗಳ ವರ್ಣನೆಯನ್ನು ಅಡಕ ಗೊಳಿಸಿದ್ದಾರೆ ಕನಕದಾಸರು.

ಅರ್ಥ– ಈರೇಳು = ಹದಿನಾಲ್ಕು (ಮೇಲೆ ಏಳುಲೋಕ, ಕೆಳಗೆ ಏಳು ಲೋಕ)
ಭುವನ = ಪ್ರಪಂಚ

೧. ಅನಿಮಿಷರು= ದೇವತೆಗಳು, ಮೀನುಗಳು (ರೆಪ್ಪೆಗಳಿಲ್ಲದೆ ಕಣ್ಣು ಮುಚ್ಚದವರು)
ವನವಾಸ = ನೀರಿನ ವಾಸ (ವನಕ್ಕೆ ಕಾಡು ಎಂಬ ಅರ್ಥವಿರುವಂತೆಯೇ ನೀರು ಎಂಬ ಅರ್ಥವೂ ಇದೆ.
ಅನಿಮಿಷ... ಹೋದವನ = ಮೀನುಗಳಂತೆ ನೀರಿನ ವಾಸಕ್ಕೆ ಹೋದವನು = ಮತ್ಸ್ಯಾವತಾರ
ಮನಸಿಜ = ಮನ್ಮಥ
ನಾರಿಯ = ಅವನ ಹೆಂಡತಿಯಾದ ರತಿಯ
ಪಿತನ = ಅವಳ ತಂದೆ ದಕ್ಷಬ್ರಹ್ಮನ
ಕೊಂದನ = ವೀರಭದ್ರನ
ಪಿತನ = ಅವನ ತಂದೆ ಶಿವನ
ಪೊತ್ತನ = ವಿಷ್ಣು (ಶಿವ ಎಂಬುದಕ್ಕೆ ಪರ್ವತ ಎಂಬ ಅರ್ಥವುಂಟು)
ಮನಸಿಜ... ಪೊತ್ತನ = ಕೂರ್ಮಾವತಾರ
ಘನ... ತಾಳ್ದವನ = ಮುಸುಡಿ ಅಥವಾ ದಾಡೆಯ ಮೇಲೆ ಭೂಮಿ ಹೊತ್ತು ತಂದವನು = ವರಾಹಾವತಾರ
ದಿನಕರ... ಗೆದ್ದಾತನ = ನರಸಿಂಹಾವತಾರ (ಸೂರ್ಯ ಮುಳುಗುವಾಗ್ಗೆ ಹಗೆಯನ್ನು ಗೆದ್ದವನು)

೨. ಗಜವನೇರಿದವನ = ಭಗದತ್ತನ
ತಂದೆಯ = ನರಕಾಸುರನ
ತಾಯನಳೆದವನ = ಭೂದೇವಿಯನ್ನು ಅಳೆದವನು (ವಾಮನಾವತಾರ)
ಭುಜ.... ಗೆದ್ದವನ = ಪರಶುರಾಮಾವತಾರ
ನಿಜ = ತಂದವನ = ರಾಮಾವತಾರ
ಭುಜುಗಧರ = ಹಾವನ್ನು ಧರಿಸಿದವನು (ಶಿವ)
ಭುಜಗ... ತಂದವನ = ಕೃಷ್ಣಾವತಾರ (ಶಿವ ವಿಷ್ಣುವಿನ ಚಕ್ರವನ್ನು ನುಂಗಿದನೆಂದೂ ಮತ್ತೆ ವಿಷ್ಣು ಅದನ್ನು ಪಡೆದನೆಂದೂ ಕಥೆ)



೩. ಪೆಣನ... ಹೊಕ್ಕವನ = ಬೌದ್ಧಾವತಾರ (ತ್ರಿಪುರದ ಪಟ್ಟಣ ಹೊಕ್ಕವನು)
ತೃಣಕೆ.... ಬಪ್ಪನ = ಕಲ್ಕ್ಯಾವತಾರ
ತೃಣಕೆ ಬಾಯಿತ್ತನ =ಹುಲ್ಲನ್ನು ತಿನ್ನುವ ಕುದುರೆ

* * * *

## ೨೬೨
## ಶಂಕರಾಭರಣ – ಅಟತಾಳ

**ನಾರಾಯಣ ಎನ್ನಿ ನಾರದ ವರದನ**
**ನಾರಾಯಣ ಎನ್ನಿರೊ– ವೇದ**
**ಪಾರಾಯಣನಾಗಿ ಕರಿಯ ಕಾಯ್ದಾತನ**
**ನಾರಾಯಣ ಎನ್ನಿರೊ ॥ಪ॥**

**ಶಿವನೊಳು ಕೂಡಿಯೆ ಶಿವವರ್ಣನಾದನ ನಾರಾಯಣ ಎನ್ನಿರೊ**
**ಶಿವನ ತುರುಬಿನೊಳು ಶಿವನ ಕಟ್ಟಿಸಿದನ ನಾರಾಯಣ ಎನ್ನಿರೊ**
**ಶಿವನ ಹರಿಯ ಮಾಡಿದವನ ಸೊಸೆಯ ತಂದನ ನಾರಾಯಣ ಎನ್ನಿರೊ**
**ಶಿವ ದರುಶನವಾಗಿ ಶಿವನು ತಾನಾದನ ನಾರಾಯಣ ಎನ್ನಿರೊ ॥೧॥**

**ಗರುಡವಾಹನನಾಗಿ ಗಜವನು ಸಲಹಿದನ ನಾರಾಯಣ ಎನ್ನಿರೊ**
**ಗರುಡನ ಗರಿಯೊಳು ಕಡಲ ತಂದಾತನ ನಾರಾಯಣ ಎನ್ನಿರೊ**
**ಗರುಡನ ಮಾತೆಯಣ್ಣನ ಮುಖಪಡೆದನ ನಾರಾಯಣ ಎನ್ನಿರೊ**
**ಗರುಡ ಗಂಧರ್ವ ನಗರಿಯ ಮೆರೆದಾತನ ನಾರಾಯಣ ಎನ್ನಿರೊ ॥೨॥**

**ಸ್ವರ್ಣವಾಹನನಾಗಿ ಕರ್ಣಕುಂಡಲವಿಟ್ಟನ ನಾರಾಯಣ ಎನ್ನಿರೊ**
**ಸ್ವರ್ಣಪಂಕದೊಳು ಶಿವನಪ್ಪಿಕೊಂಡನ ನಾರಾಯಣ ಎನ್ನಿರೊ**
**ಸ್ವರ್ಣ ಖಚಿತವಾದ ರಥದೊಳು ಪೊಕ್ಕನ ನಾರಾಯಣ ಎನ್ನಿರೊ**
**ನಿರ್ಣಯವಿದು ಕಾಗಿನೆಲೆಯಾದಿಕೇಶವನ ನಾರಾಯಣ ಎನ್ನಿರೊ ॥೩॥**

ಭಾವ– ಇದೊಂದು ಪೌರಾಣಿಕ ಘಟನೆಗಳ, ವಾವೆವರಸೆಯ ಮುಂಡಿಗೆಯಿದು ಅರ್ಥ ಮಾಡಿಕೊಳ್ಳಲು ಪರದಾಡಬೇಕಾಗುತ್ತದೆ; ಹಿಂಗಣ್ಣು ಮುಂಗಣ್ಣು ಹೊಡೆಯಬೇಕಾಗುತ್ತದೆ.



ಅರ್ಥ– ೧. ಶಿವನೊಳು... ವರ್ಣನಾದನ = ನೀರಲ್ಲಿ (ಸಾಗರದಲ್ಲಿ) ಇದ್ದೂ ಇದ್ದೂ ನೀರಿನ (ನೀಲಿ) ವರ್ಣನಾದ ವಿಷ್ಣುವನ್ನು
ಶಿವ =ನೀರು
ಶಿವನ... ಕಟ್ಟಿಸಿದನ = ಈಶ್ವರನ ಜುಟ್ಟಿನಲ್ಲಿ ನೀರನ್ನು (ಗಂಗೆ) ಕಟ್ಟಿಸಿದ ವಿಷ್ಣುವನ್ನು
ಶಿವನ... ತಂದನ =?
ಶಿವ... ತಾನಾದನ = ಶಿವಸನ್ನಿಧಿಗೆ ಹೋಗಿ ಕೊಂಡಾಡಿ ಮಂಗಳ ಲಕ್ಷ್ಮಿಪತಿಯಾದವನ

೨. ಗರುಡ... ಸಲಹಿದನ = ಮೊಸಳೆಯ ಬಾಯಿಗೆ ಸಿಕ್ಕಿದ ಆನೆಯನ್ನು ರಕ್ಷಿಸಿದವನ
ಗರುಡನ... ತಂದಾತನ = ಗರುಡನ ರೆಕ್ಕೆಯಲ್ಲಿ ಅಮೃತ ತರುವಂಥ ಬಲವಿತ್ತವನ
ಗರುಡನ... ಪಡೆದನ = ಗರುಡನ ತಾಯಿ ವಿನತೆ ದಕ್ಷಬ್ರಹ್ಮನ ಮಗಳು. ಹರ್ಯಶ್ವ ಶಬಲಾಶ್ವ ಎಂಬ ಅಣ್ಣಂದಿರು ಅವಳಿಗೆ. ಒಮ್ಮೆ ವಿಷ್ಣುವಿಗೂ ಲಕ್ಷ್ಮಿಗೂ ವಿರಸ ಮೂಡಿ ನಿನ್ನ ಶಿರಸ್ಸು ನಾಶವಾಗಲಿ ಎಂದು ಅಂದದ್ದರಿಂದ, ಅವನ ಬಿಲ್ಲಿನಿಂದಲೇ ಬಾಣ ಚಿಮ್ಮಿ ಅವನ ಕುತ್ತಿಗೆ ಹಾರಿತೆಂದೂ, ಆಗ ದೇವತೆಗಳು ಕುದುರೆಯ ತಲೆ ಜೋಡಿಸಿ ಹಯಗ್ರೀವನಾದನೆಂದೂ ಕಥೆ. ವಿನತೆಯ ಅಣ್ಣ ಹರ್ಯಶ್ವ ಎಂದರೆ ಕುದುರೆ. ವಿನತೆಯ ಅಣ್ಣನ ಮುಖಪೆಡದನ ಎಂದರೆ ಹಯಗ್ರೀವನಾದವನ ಎಂದು ಅರ್ಥವಾಗುತ್ತದೆ.
ಗರುಡ... ಮೆರೆದಾತನ = ?

೩. ಸ್ವರ್ಣ... ಇಟ್ಟನ =ಸ್ವರ್ಣಾಂಬರನಾಗಿ ಕರ್ಣನಿಗೆ ಕರ್ಣಕುಂಡಲ ವಿಟ್ಟ ಸೂರ್ಯನಾರಾಯಣನ
ಸ್ವರ್ಣ... ಕೊಂಡನ = ?
ಸ್ವರ್ಣ... ಪೊಕ್ಕನ = ರಾವಣನ ವಧೆಗೆ ಇಂದ್ರನ ಸ್ವರ್ಣರಥದಲ್ಲಿ ಕುಳಿತು ಹೊರಟವನ

* * * *

## ೨೬೩
## ಭೈರವಿ – ರೂಪಕ ತಾಳ

**ಈತನೀಗ ವಾಸುದೇವನು ಲೋಕದೊಡೆಯ**
**ಈತನೀಗ ವಾಸುದೇವನು ॥ಪ॥**

**ಈತನೀಗ ವಾಸುದೇವನೀ ಸಮಸ್ತ ಲೋಕದೊಡೆಯ**
**ದೂತಗೊಲಿದು ತೇರನೇರಿ ತೇಜಿ ಪಿಡಿದು ನಡೆಸಿದಾತ ॥ಅ॥**

**ದನುಜೆಯಾಳ್ದನಣ್ಣನಯ್ಯನ ಪಿತನ ಮುಂದೆ ಕೌರವೇಂದ್ರ**
**ನನುಜೆಯಾಳಿದವನ ಶಿರವ ಕತ್ತರಿಸುತ– ತನ್ನ**
**ಅನುಜೆಯಾಳಿದವನ ಬೆಂಕಿ ಮುಟ್ಟದಂತೆ ಕಾಯ್ದ ರುಕ್ಮ**
**ನನುಜೆಯಾಳಿದವನ ಮೂರ್ತಿಯನ್ನು ನೋಡಿರೊ ॥೧॥**

**ನರನಸುತನರಣ್ಯದಲ್ಲಿ ಗಿರಿಯೊಳ್ನಿಂತು ತನ್ನ ರೋಷದಿ**
**ಶರಗಳನ್ನು ತೀಡುತಿಪ್ಪನ ಯೋಚಿಸಿ**
**ಭರದಲವನ ಕರೆದು ಕುರುಹು ತೋರಿ ಪತ್ರವನ್ನು ಹಾರಿಸಿದವನ**
**ಶಿರವನ್ನು ಛೇದಿಸಿದ ದೇವ ಕಾಣಿರೊ ॥೨॥**

**ಸೃಷ್ಟಿಕರ್ತಗೆ ಮಗನಾದವನಿಗಿಷ್ಟ ಭೂಷಣ ಅಶನವಾದನ**
**ಜ್ಯೇಷ್ಠ ಪುತ್ರಗೆ ವೈರಿ ತೊಡೆಯ ಛೇದಿಸೆಂದು ಬೋಧಿಸಿ**
**ಕಷ್ಟವನ್ನು ಕಳೆದು ಭಕ್ತರಿಷ್ಟವನ್ನು ಕಾದ ಉ**
**ತ್ಕೃಷ್ಟ ಮಹಿಮನಾದ ದೇವ ಕಾಣಿರೊ ॥೩॥**

**ಕ್ರೂರವಾದ ಫಣಿಪಬಾಣವನ್ನು ತರಣಿಜನೆಚ್ಚಾಗ**
**ವೀರನರನತ್ತ ಬಪ್ಪುದನ್ನು ಈಕ್ಷಿಸಿ**



**ಧಾರಿಣಿಯ ಪದದೊಳೌಕಿ ಚರಣಭಜಕ ನರನ ಕಾಯ್ದ**
**ಭಾರಕರ್ತನಾದ ದೇವನೀತ ಕಾಣಿರೊ ॥೪॥**

**ವ್ಯೋಮಕೇಶನಿಪ್ಪ ದೆಸೆಯ ಸರ್ವ ಜಗಕೆ ತೋರುತ**
**ಸಾಮಜವನೇರಿ ಬಹನ ಶಕ್ತಿಯನೀಕ್ಷಿಸಿ**
**ಪ್ರೇಮದಿಂದ ಉರವನೊಡ್ಡಿ ಡಿಂಗರಿಗನ ಕಾಯ್ದ ಸಾರ್ವ**
**ಭೌಮ ಬಾಡದಾದಿಕೇಶವನ್ನ ನೋಡಿರೊ ॥೫॥**

ಭಾವ– ಶ್ರೀಹರಿ ಮಹಾತ್ಮ್ಯವನ್ನು ಪೌರಾಣಿಕ ಘಟನೆಗಳ ಮೂಲಕ ಸಾದರಪಡಿಸುವ ಕೀರ್ತನೆಯಿದು. ವಾವೆವರಸೆಯ ಲಘು ಮುಂಡಿಗೆ ಎನ್ನಲೂಬಹುದು. ಮುಖ್ಯವಾಗಿ ಇದು ಕನಕದಾಸರ ಸಾಧಕ ಜೀವನದ ಸಂದರ್ಭದಲ್ಲಿ ಜರುಗಿದ ಘಟನೆಯಿಂದ ಉಗಮಗೊಂಡದ್ದು. ಕನಕದಾಸರ ಅಪರೋಕ್ಷಜ್ಞಾನವನ್ನು ರುಜುವಾತುಗೊಳಿಸಲು, ಆ ಮೂಲಕ ಅಸೂಯಾಪರ ಮೂಢ ಪಂಡಿತೋತ್ತಮ ಶಿಷ್ಯರ ಕಣ್ಣು ತೆರೆಸಲು ಗುರು ವ್ಯಾಸರಾಯರು ಕೈಯಲ್ಲಿ ಸಾಲಿಗ್ರಾಮವನ್ನು ಹಿಡಿದು ಮುಷ್ಟಿಯಲ್ಲಿ ಏನಿದೆ ಹೇಳಿ ಎಂದು ಎಲ್ಲರನ್ನೂ ಕೇಳಿದಾಗ 'ಈತನೀಗ ವಾಸುದೇವನು' ಎಂದು ಹೇಳುತ್ತಾ ತನ್ಮಯರಾಗಿ ಹಾಡಿದರಂತೆ. ಕುರುಬನ ಅಗಾಧ ಜ್ಞಾನವನ್ನು ಕಂಡು ಕರುಬರ ಮುಖಗಳು ಕಂದಿದವು, ಆಘಾತಗೊಂಡು ಕಂಬದಂತೆ ಕೂತರು– ಎಂಬುದು ಪುರಂದರರ ಹೆಸರಲ್ಲಿರುವ ಹಾಡಿನಲ್ಲಿ ಉಕ್ತವಾಗಿರುವದನ್ನು ಇಲ್ಲಿ ನೆನೆಸಿ ಕೊಳ್ಳಬಹುದು.

ಅರ್ಥ– ವಾಸುದೇವ = ವಸುದೇವನ ಮಗ, ಕೃಷ್ಣ
ದೂತಗೊಲಿದು = ಅರ್ಜುನನಿಗೆ ಒಲಿದು
ತೇಜಿ = ಕುದುರೆ

೧. ದನುಜೆಯಾಳ್ದನ = ಹಿಡಿಂಬೆಯನ್ನು ಆಳಿದ ಭೀಮನ
ಅಣ್ಣನ = ಧರ್ಮರಾಯನ
ಅಯ್ಯನ = ತಂದೆಯಾದ ಯಮನ

ಕೌರವೇಂದ್ರನನುಜೆಯಾಳ್ದನ = ದುರ್ಯೋಧನನ ತಂಗಿ ದುಶ್ಶಳೆಯನ್ನು ಆಳಿದ ಜಯದ್ರಥನ

ಶಿರವ ಕತ್ತರಿಸುತ = ತಲೆಯನ್ನು ಚೆಂಡಾಡಿ (ತನ್ನ ಮಗ ಅಭಿಮನ್ಯುವನ್ನು ಕೊಂದವನನ್ನು ಸಂಜೆಯೊಳಗಾಗಿ ಕೊಲ್ಲುವೆನು ಎಂದು ಅರ್ಜುನ ಶಪಥ ಮಾಡಿದನು. ಅದನ್ನು ಸುಳ್ಳು ಮಾಡಿ ಅವನೇ ಅಗ್ನಿಗಾಹುತಿಯಾಗುವಂತೆ ಮಾಡಲು ಕೌರವ ಜಯದ್ರಥನನ್ನು ಬಚ್ಚಿಟ್ಟನು. ಆಗ ಕೃಷ್ಣ ತನ್ನ ಚಕ್ರದಿಂದ ಸೂರ್ಯನಿಗೆ ಮರೆ ಮಾಡಿ ಸಂಜೆಯಾಗುವಂತೆ ಮಾಡಿದ. ಜಯದ್ರಥ ಹೊರಬಂದಾಗ ಚಕ್ರ ಸರಿಸಿ ಸೂರ್ಯ ಹೊಳೆಯುವಂತೆ ಮಾಡಿ, ಅರ್ಜುನನ ಕೈಯಿಂದ ಜಯದ್ರಥನನ್ನು ಕೊಲ್ಲಿಸಿದ ಕಥಾ ಪ್ರಸಂಗ)

ತನ್ನ ಅನುಜೆಯಾಳಿದವನ = ತನ್ನ ತಂಗಿ ಸುಭದ್ರೆಯನ್ನು ಆಳಿದ ಅರ್ಜುನನ

ರುಕ್ಮನನುಜೆಯಾಳಿದವನ = ರುಕ್ಮಾಂಗದನ ತಂಗಿಯಾದ ರುಕ್ಮಿಣಿಯನ್ನು ಆಳಿದ ಕೃಷ್ಣನ (ರುಕ್ಮಾಂಗದ ತನ್ನ ತಂಗಿಯಾದ ರುಕ್ಮಿಣಿಯನ್ನು ಶಿಶುಪಾಲನಿಗೆ ಕೊಟ್ಟು ಮದುವೆ ಮಾಡಬೇಕೆಂದಿದ್ದನು. ರುಕ್ಮಿಣಿ ಕೃಷ್ಣನಿಗೆ ಒಲಿದು ಈ ವಿಷಯವನ್ನು ಅವನಿಗೆ ಮುಟ್ಟಿಸಿದಾಗ, ಅವನು ಹಾರಿಸಿಕೊಂಡು ಹೋಗಿ ಮದುವೆಯಾದ ಕಥಾ ಪ್ರಸಂಗವಿದು)

೨. ನರನಸುತನು = ಅರ್ಜುನನ ಮಗನಾದ ಅಭಿಮನ್ಯುವು
ಗಿರಿ = ಬೆಟ್ಟ
ಶರ = ಬಾಣ
ತೀಟುತಿಪ್ಪನ = ಮಸೆಯುತ್ತಿರುವನ
ಭರದಲಿ = ಬೇಗ
ಕುರುಹು = ಗುರುತು
ಪತ್ರ = ಖಡ್ಗ, ಹಕ್ಕಿಯ ರೆಕ್ಕೆ
(ಅಭಿಮನ್ಯು ಸಾಯುವಂತೆ ಮಾಡಿದ್ದು ಏಕೆ ಎಂಬುದು ಗೊತ್ತಾಗುವುದಿಲ್ಲ. ಕೃಷ್ಣ ಮುಂದರಿತು ಹೀಗೆ ಮಾಡಿದನೆ?)

೩. ಸೃಷ್ಟಿಕರ್ತಗೆ = ಬ್ರಹ್ಮನಿಗೆ
ಮಗನಾದಗೆ = ಶಿವನಿಗೆ
ಇಷ್ಟ ಭೂಷಣ = ಅವನ ಆಭರಣವಾದ ಹಾವು
ಅಶನವಾದನ = ಆಹಾರವಾದ ವಾಯುವಿನ
ಜ್ಯೇಷ್ಠಪುತ್ರಗೆ = ಭೀಮನಿಗೆ
ವೈರಿ ತೊಡೆಯ = ದುರ್ಯೋಧನನ ತೊಡೆಯನ್ನು
ಛೇದಿಸೆಂದು = ಮುರಿ, ಕತ್ತರಿಸು ಎಂದು
ಬೋಧಿಸಿದವನು = ಕೃಷ್ಣ

೪. ಪಣಿಪ ಬಾಣ = ಸರ್ಪಾಸ್ತ್ರ
ತರಣಿಜ = ಸೂರ್ಯಪುತ್ರ ಕರ್ಣ
ಎಚ್ಚಾಗ= ಪ್ರಯೋಗಿಸಿದಾಗ
ನರನತ್ತ = ಅರ್ಜುನನ ಕಡೆ
ಧಾರಿಣಿಯ = ಭೂಮಿಯನ್ನು
ಪದದೊಳೌಕಿ = ಪಾದದಿಂದ ಒತ್ತಿ

೫. ವ್ಯೋಮಕೇಶ = ಶಿವ
ಇಪ್ಪ ದೆಸೆಯ = ಈಶಾನ್ಯ ದಿಕ್ಕಿನ ಸುಡುಗಾಡು
ಸಾಮಜವನೇರಿ = ಈಶಾನ ದಿಗ್ಗಜವಾದ ಸುಪ್ರತೀಕವನ್ನೇರಿ
ಬಹನ = ಬರುವ ಭಗದತ್ತನ
ಶಕ್ತಿಯನೀಕ್ಷಿಸಿ = ವೈಷ್ಣವಾಸ್ತ್ರವನ್ನು ನೋಡಿ
ಉರವನೊಡ್ಡಿ = ಎದೆಯನೊಡ್ಡಿ
ಡಿಂಗರಿಗನ ಕಾಯ್ದ = ಸೇವಕನಾದ ಅರ್ಜುನನನ್ನು ಕಾಪಾಡಿದ

* * * *

## ೨೬೪
## ಕಾಂಬೊದಿ – ಝಂಪೆ ತಾಳ

**ಕಾವನಯ್ಯನ ಕಳುಹು ರಮಣಿ ॥ಪ॥**
**ಕೋವಿದರು ಪಡೆದ ಬಡದಾದಿಕೇಶವನ ॥ಅ॥**

**ಚಂದ್ರವಂಶದ ರಾಯನನುಜ ಸಖನಾದವನ**
**ಚಂದ್ರವೈರಿಯ ಮೇಲೆ ಪವಳಿಸಿದನ**
**ಚಂದ್ರಮನ ಸೋದರಿಯ ಕೈಯ ಪಿಡಿದಂಥವನ**
**ಚಂದ್ರದಾಮನ ಮನೆಗೆ ಕಳುಹೆ ಕಮಲಾಕ್ಷಿ ॥೧॥**

**ಕಮಲನಾಭನ ಕಮಲ ಸಖ ಕೋಟಿತೇಜನ**
**ಕಮಲ ಕೋರಕದಿ ಜನಿಸಿದನಯ್ಯನ**
**ಕಮಲವನು ಕರದಲ್ಲಿ ಪಿಡಿದಿಹನ ಬೇಗದಲಿ**
**ಕಮಲವದನನ ಮನೆಗೆ ಕಳುಹೆ ಕಮಲಾಕ್ಷಿ ॥೨॥**

**ಬಾಲತನದಲಿ ಬಹಳ ಅಸುರರನು ಸೀಳಿದನ**
**ಲೀಲೆಯಿಂದಲಿ ಭಕ್ತರನು ಸಲುಹುತಿಹನ**
**ನೀಲ ಮೇಘ ಶ್ಯಾಮ ಭಾಗ್ಯಪುರದಲಿ ನಿಂದ**
**ಶ್ರೀಲತಾಂಗಿಯ ರಮಣ ಆದಿಕೇಶವನ ॥೩॥**

ಭಾವ– ಸತಿಪತಿಭಾವದ ಭಗವದನುಸಂಧಾನದ ಕೀರ್ತನೆ ಇದು. ಸಖಿಯೊಬ್ಬಳಿಗೆ ತನ್ನ ನಲ್ಲನಾದ ಆದಿಕೇಶವನನ್ನು ಕರೆತು ತಾ ಎಂದು ನಲ್ಲೆ (ಭಕ್ತ ಕನಕ ದಾಸರು) ಯಾದವಳು ಕರೆಕೊಡುವ ತಂತ್ರವನ್ನಿಲ್ಲಿ ಬಳಸಿಕೊಳ್ಳಲಾಗಿದೆ.

ಅರ್ಥ– ಕಾವ = ಕಾಮ, ಕಾವನಯ್ಯ = ಕಾಮನ ತಂದೆ (ವಿಷ್ಣು)
ಕೋವಿದರು = ಜ್ಞಾನಿಗಳು, ಮೇಧಾವಿಗಳು;



೧. ಚಂದ್ರವಂಶದ... ನಾದವನ = ಚಂದ್ರವಂಶದ ಅರಸನಾದ ಧರ್ಮರಾಯನ ತಮ್ಮ ಅರ್ಜುನನಿಗೆ ಸ್ನೇಹಿತನಾದವನ (ಕೃಷ್ಣ)
ಚಂದ್ರ ವೈರಿ... ಪವಳಿಸಿದನ = ಚಂದ್ರನಿಗೆ ಶತ್ರುವಾದ ಹಾವಿನ ಮೇಲೆ ಮಲಗುವವನ (ವಿಷ್ಣು)
(ಗ್ರಹಣ ಕಾಲದಲ್ಲಿ ಹಾವು ಚಂದ್ರನನ್ನು ನುಂಗುತ್ತದೆ ಎಂಬ ನಂಬಿಕೆಯಿಂದ ಹಾವನ್ನು ಚಂದ್ರವೈರಿ ಎಂದು ಕರೆಯಲಾಗಿದೆ. ಚಂದ್ರ ಗ್ರಹಣಕ್ಕೆ ವೈಜ್ಞಾನಿಕ ಸತ್ಯ ನಮಗೀಗ ಗೊತ್ತಿದೆ.)
ಚಂದ್ರಮನ... ಪಿಡಿದಂಥವನ = ಚಂದ್ರನ ಸೋದರಿಯಾದ ಲಕ್ಷ್ಮಿಯನ್ನು ಕೈಹಿಡಿದವನ (ವಿಷ್ಣು)
ಚಂದ್ರದಾಮನ = ಚಂದ್ರ ಹಾರ = ಚಿನ್ನದ ಹಾರವನ್ನು ಧರಿಸಿದವನು (ಕೃಷ್ಣ) (ಚಂದ್ರ ಎನ್ನುವುದಕ್ಕೆ ಚಿನ್ನ ಎಂಬ ಅರ್ಥವೂ ದಾಮ ಎನ್ನುವುದಕ್ಕೆ ಹಾರ ಎಂಬ ಅರ್ಥವೂ ಇದೆ)
ಕಮಲಾಕ್ಷಿ = ಕಮಲದಂತೆ ಕಣ್ಣುಳ್ಳವಳು

೨. ಕಮಲನಾಭನ = ಹೊಕ್ಕಳಲ್ಲಿ ಕಮಲವಿರುವ ವಿಷ್ಣುವನ್ನು
ಕಮಲ ಸಖ = ಸೂರ್ಯ
ಕಮಲಸಖಕೋಟಿ ತೇಜನ = ಕೋಟಿ ಸೂರ್ಯರ ತೇಜಸ್ಸುಳ್ಳ ವಿಷ್ಣುವನ್ನು
ಕಮಲ... ಅಯ್ಯನ = ಕಮಲದಲ್ಲಿ ಹುಟ್ಟಿದ ಬ್ರಹ್ಮನ ತಂದೆಯನ್ನು (ವಿಷ್ಣು)
ಕಮಲವದನ = ಕಮಲದಂತೆ ಮುಖವುಳ್ಳವನು (ವಿಷ್ಣು)

೩. ಅಸುರರು = ರಾಕ್ಷಸರು
ಭಾಗ್ಯಪುರ = ವಿಜಯನಗರ (ಭಾಗ್ಯಪುರ ಎಂಬುದೇ ಕೆಲವು ಕೀರ್ತನೆಗಳಲ್ಲಿ ಭಾಗಾನಗರ ಎಂಬ ಹೆಸರಿನಲ್ಲಿ ಬಳಕೆಯಾಗಿದೆ)
ಶ್ರೀಲತಾಂಗಿ = ಲಕ್ಷ್ಮಿ

* * * *

## ೨೬೫
## ಮಧ್ಯಮಾವತಿ – ಮಟ್ಟೆ ತಾಳ

**ಇಂದು ನೀ ಕರೆದು ತಾರೆ– ಬಾರದೆ ಶ್ರೀಗೋ**
**ವಿಂದ ತಾ ಮುನಿದಿಹರೆ– ವಿರಹ ಬೇಗೆಯಲಿ**
**ಬೆಂದು ಸೈರಿಸಲಾರೆ– ಸಖಿ, ನೀನು ತಂದು ತೋರೆ** ||ಪ||

**ನೊಂದರೂ ಮನದಾನಂದದಿಂದ**
**ನಂದನಂದನನೆಂದು ಸೈರಿಸಿ**
**ಎಂದಿಗೂ ಅಗಲಿರಲಾರೆ ಕರೆತಂದು**
**ಹೊಂದುಗೂಡಿಸೆ ಮಂದಗಮನೆ** ||ಅ||

**ಕಾಲಿಲ್ಲದಲೆ ಆಡಿದ– ವೇದ ತಂದಿತ್ತ**
**ಕಾಲಿಲ್ಲದವನ ಪೊತ್ತ– ಅಮೃತ ತಂದಿತ್ತ**
**ಕಾಲ ತೂಗಿ ನೋಡುತ್ತ– ಗಜ ಉನ್ಮತ್ತ**
**ಕಾಲಿನಿಂದಲಿ ಕೊಲುವ ರೂಪದಿ**
**ಕಾಲಿನಲಿ ರಿಪುವನು ಸೀಳಿದ**
**ಕಾಲಿನಲಿ ತಾನಳೆದ ಮೇದಿನಿ**
**ಕಾಲಿನಲಿ ನಡೆದ ಭಾರ್ಗವ**
**ಕಾಲಿನಲಿ ವನವಾಸ ಪೋದನ**
**ಕಾಲಿನಲಿ ಕಾಳಿಯನ ಮರ್ದಿಸಿದನ**
**ಕಾಲಿನಲಿ ತ್ರಿಪುರರ ಗೆಲಿದನ**
**ಕಾಲಿಗೆರಗುವೆ ತೇಜಿರೂಢನ** ||೧||

**ಎವೆಯಿಕ್ಕದೆ ನೋಡಿದ– ತಲೆಯ ತಗ್ಗಿಸಿ**
**ಕವಲು ಕೋರೆದಾಡೆಯೊಳಾಡಿದ– ಕಂಬದಿ ಮೂಡಿದ**
**ತವಕದಿಂದಲಿ ಬೇಡಿದ– ಭೂಭುಜರ ಕಡಿದ**



**ಶಿವನ ಬಿಲ್ಲನು ಮುರಿದ– ದೇವಕಿ**
**ಕುವರ ನಗ್ನ ಹಯವನೇರಿದ**
**ವಿವಿಧಾಬ್ಧಿಯೊಳಾಡಿ ಗಿರಿಧರ**
**ಸವಿದು ಬೇರನು ಬಾಲಗೊಲಿದನ**
**ಅವನಿ ಬೇಡಿ ಕೊಡಲಿ ಪಿಡಿದನ**
**ಸವರಿ ದಶಶಿರ ಬೆಣ್ಣೆ ಕದ್ದನ**
**ಯುವತಿಯರ ವ್ರತಗೆಡಿಸಿ ಕುದುರೆಯ**
**ಹವಣುಗತಿಯಲಿ ಏರಿದಾತನ** ||೨||

**ವರ ಮತ್ಸ್ಯ ನಗಧರನ– ಸೂಕರ ಸಿಂಹನ**
**ತಿರುಕ ತಾಯ್ತರಿದನ– ವರವಿತ್ತು ಶಬರಿಗೆ**
**ತುರುಗಾಯ್ದ ನಿರ್ವಾಣನ– ಅಶ್ವಾರೂಢನ**
**ಊರಿಲ್ಲದೆ ಹೊರೆ ಹೊತ್ತನ ಮುರುಥ ಕ್ರೂರನ**
**ಉರವ ಸೀಳಿದ ವಿಪ್ರ ನೃಪರರಿ**
**ಧರಣಿಜೆಯವರ ಕೃಷ್ಣ ಗಗನದಿ**
**ಪುರವ ದಹಿಸಿದ ತೇಜಿರೂಢನ**
**ಮೆರೆವ ಜಲಜ ಕೂರ್ಮ ವರಹ**
**ನರಹರಿ ದ್ವಿಜ ಕೊರಳಕೊಯ್ದವನ ನೆಲಮಗಳ ವರ**
**ಶೌರಿ ಬುದ್ಧನ ತುರಗವೇರಿದ ಆದಿಕೇಶವನ** ||೩||

ಭಾವ– 'ಶರಣ ಸತಿ ಲಿಂಗ ಪತಿ' ಎಂಬ ಭಾವದಲ್ಲಿ ಕನಕದಾಸರು ಇಲ್ಲಿ ಪತಿಯನ್ನಗಲಿದ ವಿರಹಿಣಿಯಾಗಿ ಪತಿಯನ್ನು ಕರೆತರುವಂತೆ ಸಖಿಗೆ ಬಿನ್ನವಿಸುವ ಧಾಟಿಯಲ್ಲಿ ಭಗವದನುಸಂಧಾನ ನಡೆಸಿರುವುದು ಕಾಣುತ್ತದೆ. ಎಲ್ಲ ಭಕ್ತಿಸಾಹಿತ್ಯದಲ್ಲೂ ಇದು ಕಂಡು ಬರುತ್ತದೆ. ಮೂರು ನುಡಿಗಳಿರುವ ಈ ಕೀರ್ತನೆಯಲ್ಲಿ ಒಂದನೆಯ ನುಡಿಯಲ್ಲಿ ದಶಾವತಾರಗಳ ವರ್ಣನೆ ಇದೆ. ಎರಡನೆಯ ನುಡಿಯಲ್ಲಿ ಇಮ್ಮಡಿ ದಶಾವತಾರಗಳ ವರ್ಣನೆ ಇದೆ. ಮೂರನೆಯ ನುಡಿಯಲ್ಲಿ ಮುಮ್ಮಡಿ ದಶಾವತಾರಗಳ ವರ್ಣನೆ ಇದೆ. ಒಂದೊಂದು ನುಡಿಯ ಹನ್ನೊಂದು ಸಾಲುಗಳ ಕ್ಲುಪ್ತ ಪರಿಧಿಯಲ್ಲಿ ಒಂದನೆಯ ನುಡಿಯಲ್ಲಿ ಒಪ್ಪಟ್ಟು,

ಎರಡನೆಯ ನುಡಿಯಲ್ಲಿ ಇಪ್ಪತ್ತು, ಮೂರನೆಯ ನುಡಿಯಲ್ಲಿ ಮುಪ್ಪತ್ತು ದಶಾವತಾರಗಳ ವರ್ಣನೆಯನ್ನು ಅಡಕಗೊಳಿಸಿರುವ ಆಢ್ಯತೆ ಗಮನಾರ್ಹವಾದುದು.

ಅರ್ಥ– ೧. ಕಾಲಿಲ್ಲದೆ ಆಡಿದ = ಮತ್ಸ್ಯಾವತಾರ (ಮೀನಿಗೆ ಕಾಲಿಲ್ಲ)
ಕಾಲಿಲ್ಲದವನ ಪೊತ್ತ = ಕೂರ್ಮಾವತಾರ (ಕಾಲಿಲ್ಲದವನು ಎಂದರೆ ಮಂದರ ಪರ್ವತ)
ಕಾಲ ತೂಗಿ ನೋಡುತ್ತ = ವರಾಹಾವತಾರ (ನೋಡು+ಉತ್ತ. ಉಳು ಎಂದರೆ ಬಗಿ, ಸೀಳು ಎಂದರ್ಥ)
ಕಾಲಿನಿಂದಲಿ... ರೂಪದಿ = ಸಿಂಹಾಕಾರದಲ್ಲಿ
ಕಾಲಿನಲಿ ರಿಪುವ ಸೀಳಿದ = ಕಾಲ ಮೇಲೆ ಹಾಕಿಕೊಂಡು ಬಗೆದ (ನರಸಿಂಹಾವತಾರ)
ಕಾಲಿನಲಿ... ಮೇದಿನಿ = ವಾಮನಾವತಾರ
ಕಾಲಿನಲಿ... ಭಾರ್ಗವ = ಪರಶುರಾಮಾವತಾರ
ಕಾಲಿನಲಿ... ಪೋದನ = ರಾಮಾವತಾರ
ಕಾಲಿನಲಿ... ಮರ್ದಿಸಿದನ = ಕೃಷ್ಣಾವತಾರ (ಕಾಳಿಯನ = ಕಾಳಿಂಗ ಸರ್ಪವನ್ನು)
ಕಾಲಿನಲಿ... ಗೆಲಿದನ = ಬೌದ್ಧಾವತಾರ
ಕಾಲಿ... ತೇಜಿರೂಢನ = ಕಲ್ಕ್ಯವತಾರ (ತೇಜಿ = ಕುದುರೆ)

೨. ಎವೆಯಿಕ್ಕದೆ ನೊಡಿದ = ಮತ್ಸ್ಯಾವತಾರ (ಮೀನು ಅನಿಮಿಷ ಅಂದರೆ ರೆಪ್ಪೆ ಇಲ್ಲದ್ದು)
ತಲೆಯ ತಗ್ಗಿಸಿ = ಕೂರ್ಮಾವತಾರ (ಪರ್ವತ ಹೊರಲು ಕತ್ತು ಕೂತುಕೊಳ್ಳುವುದಿಲ್ಲವೆ?)
ಕವಲು... ಆಡಿದ = ವರಾಹಾವತಾರ
ಕಂಬದಿ ಮೂಡಿದ = ನೃಸಿಂಹಾವತಾರ
ತವಕ... ಬೇಡಿದ = ವಾಮನಾವತಾರ
ಭೂಭುಜರ ಕಡಿದ = ಪರಶುರಾಮಾವತಾರ
ಶಿವನ... ಮುರಿದ = ರಾಮಾವತಾರ
ದೇವಕಿ ಕುವರ = ಕೃಷ್ಣಾವತಾರ



ನಗ್ನ = ಬೌದ್ಧಾವತಾರ
<u>ಹಯವನೇರಿದ</u> = ಕಲ್ಕ್ಯವತಾರ
ವಿವಿಧಾಬ್ಧಿಯೊಳಾಡಿ = ಮತ್ಸ್ಯಾವತಾರ (ಅಬ್ಧಿ = ಸಮುದ್ರ)
ಗಿರಿಧರ = ಕೂರ್ಮಾವತಾರ
ಸವಿದು ಬೇರನು = ವರಾಹಾವತಾರ (ವರಾಹ ಬೇರೆ ಆಹಾರದ ಜೊತೆಗೆ ಗೋಟಿಗೆಡ್ಡೆ ಇತ್ಯಾದಿ ಬೇರುಗಳನ್ನು ಗೂಟಿಕೊಂಡು ತಿನ್ನುವುದು)
ಬಾಲಗೊಲಿದನ = ನರಸಿಂಹಾವತಾರ (ಪ್ರಹ್ಲಾದನನ್ನು ಕಾಪಾಡಿದುದು)
ಅವನಿ ಬೇಡಿ = ವಾಮನಾವತಾರ (ಅವನಿ = ಭೂಮಿ)
ಕೊಡಲಿ ಪಿಡಿದನ = ಪರಶುರಾಮಾವತಾರ
ಸವರಿ ದಶಶಿರ = ರಾಮಾವತಾರ (ಸವರು = ಕತ್ತರಿಸು, ದಶಶಿರ = ರಾವಣ)
ಬೆಣ್ಣೆ ಕದ್ದನ = ಕೃಷ್ಣಾವತಾರ (ತಲೆ ಸವರಿ ಮರುಳು ಮಾಡಿ ಬೆಣ್ಣೆ ಕದ್ದವನು ಎಂಬ ಅರ್ಥವೂ ಅನ್ವಯವಾಗುತ್ತದೆ)
ಯುವತಿಯರ... ಕೆಡಿಸಿ = ಬೌದ್ಧಾವತಾರ
ಕುದುರೆಯ... ಏರಿದಾತನ = ಕಲ್ಕ್ಯವತಾರ

೩. ವರಮತ್ಸ್ಯನ = ಮತ್ಸ್ಯಾವತಾರ
ನಗಧರನ = ಕೂರ್ಮಾವತಾರ
ಸೂಕರ = ವರಾಹಾವತಾರ
ಸಿಂಹನ = ನರಸಿಂಹಾವತಾರ
ತಿರುಕ = ವಾಮನಾವತಾರ
ತಾಯ್ತರಿದನ = ಪರಶುರಾಮಾವತಾರ
ವರವಿತ್ತು ಶಬರಿಗೆ = ರಾಮಾವತಾರ
ತುರುಗಾಯ್ದ = ಕೃಷ್ಣಾವತಾರ
ನಿರ್ವಾಣನ = ಬೌದ್ಧಾವತಾರ
<u>ಅಶ್ವಾರೂಢನ</u> = ಕಲ್ಕ್ಯವತಾರ
ಊರಿಲ್ಲದೆ = ಮತ್ಸ್ಯಾವತಾರ (ಊರು = ತೊಡೆ)
ಹೊರೆ ಹೊತ್ತನ = ಕೂರ್ಮಾವತಾರ

ಮುರುಡಕ್ರೂರನ = ವರಾಹಾವತಾರ (ಮುರುಡ = ಗೂನು, ಒರಟು ಹಂದಿ)
ಉರವ ಸೀಳಿದ = ನರಸಿಂಹಾವತಾರ
ವಿಪ್ರ = ವಾಮನಾವತಾರ (ವಿಪ್ರ = ಬ್ರಾಹ್ಮಣ)
ನೃಪರರಿ = ಪರಶುರಾಮಾವತಾರ (ನೃಪರ+ಅರಿ)
ಧರಣಿಜೆಯವರ = ರಾಮಾವತಾರ (ಧರಣಿಜೆ = ಸೀತೆ, ವರ = ಗಂಡ)
ಕೃಷ್ಣ = ಕೃಷ್ಣಾವತಾರ
ಗಗನದಿ ಪುರವ ದಹಿಸಿದ = ಬೌದ್ಧಾವತಾರ
ತೇಜಿರೂಢನ = ಕಲ್ಕ್ಯವತಾರ
ಜಲಜ = ಮತ್ಸ್ಯ, ಮೀನು (ಜಲಜ ಎಂದರೆ ಕಮಲ ಎಂಬ ಅರ್ಥವಿದೆ. ಆದರೆ ಕನಕದಾಸರು ಜಲಚರವಾದ ಮೀನಿಗೂ ಜಲಜ ಎಂಬ ಶಬ್ದವನ್ನು ಬಳಸಿದ್ದಾರೆ– ಅದರ ಹುಟ್ಟು ಜಲದಲ್ಲೆ ಆದದ್ದರಿಂದ)
ಕೂರ್ಮ = ಆಮೆ
ವರಹ<ವರಾಹ = ಹಂದಿ
ನರಹರಿ = ನರಸಿಂಹ
ದ್ವಿಜ = ಹಾರುವ (ವಾಮನ)
ಕೊರಳ ಕೊಯ್ದವನು = ಪರಶುರಾಮ
ನೆಲಮಗಳ ವರ = ರಾಮ
ಶೌರಿ = ಕೃಷ್ಣ
ಬುದ್ಧನ = ಬೌದ್ಧಾವತಾರ
ಹಯವೇರಿದ = ಕಲ್ಕ್ಯವತಾರ (ಹಯ = ಕುದುರೆ)

* * * *



## ೨೬೬
## ಕೇದಾರಗೌಳ – ಆದಿತಾಳ

**ತೋರೆ ಬೇಗನೆ ಸಖಿ**
**ತೋರ ಮುತ್ತಿನ ಹಾರ ಭಾರವಾಗಿದೆ ನನಗೆ ॥ಪ॥**

**ಈರೇಳು ಲೋಕವ ಪೊರೆವ ದಯಾನಿಧಿ**
**ಬಾರನೇತಕೆ ಮನೆಗೆ ಹೇ ಸಖಿಯೆ ॥ಅ॥**

**ತರಣಿತನಯಸುತನ ಬಾಯೊಳನೃತವ**
**ಭರದಿಂದ ನುಡಿಸಿದನ**
**ತರಣಿಸುತನ ಬಾಣವೆರಗದಂದದಿ ರಥವ**
**ಧರೆಗೆ ಒತ್ತಿದ ದೇವನ**
**ತರಣಿಯ ಮರೆಮಾಡಿ ಶಿರವ ತರಿಯುವಂತೆ**
**ನರಗೆ ಸೂಚಿಸಿದಾತನ**
**ತರಣಿಯೊಡನೆ ಪಂಥವಾಡಿ ತಿರುಗಿದ**
**ತರಳನಾಳಿದನ ತೋರಿಸೆ ಹೇ ಸಖಿಯೆ ॥೧॥**

**ಗೋತ್ರಭೇದಿ ಸುತನ ಸುತನ ಸತಿಯ**
**ಮಾತುಳನಾದವನ**
**ಕತ್ತಲೆಯಲಿ ಪೋಗಿ ಕುತ್ತಿಟ್ಟವನ ಮೈಯ**
**ಸುತ್ತಿ ಬಾಧಿಸುತಿಪ್ಪನ**
**ತತ್ತ್ವವರಿತು ಸುತತ್ತ್ವ ಬೋಧಿಸಿ**
**ಉತ್ತರವಿತ್ತವನ**
**ಮುತ್ತಯ್ಯನ ತಾಯ ಪೆತ್ತ ದೇವನ ಎನ್ನ**
**ಹತ್ತಿರ ಕರೆದು ತಾರೆ, ಹೇ ಸಖಿಯೆ ॥೨॥**

**ವರಮುನಿಗಳು ಕೂಡಿ ಸರ್ವೋತ್ತಮನಾರೊ**
**ಪರಿಶೋಧಿಸಬೇಕೆಂದು**
**ಭರದಿಂದ ಭೃಗು ಮುನಿ ಬಂದು ಕೋಪಿಸೆ ಬೇಗ**
**ಚರಣವನೊತ್ತಿದನ**
**ಪರಿಪರಿಯಲಿ ದೇವ ಪರಮ ಭಕ್ತರ ಕಾವ**
**ಸುರರಿಗಭಯವಿತ್ತನ**
**ವರವೇಲಾಪುರದಾದಿ ಕೇಶವನ**
**ಮರೆಯಲಾರೆನೆ ಮನದಿ– ಹೇ ಸಖಿಯೆ** ॥೩॥

ಭಾವ– ವಿರಹಿಣಿ ತನ್ನ ಪ್ರಿಯತಮನ ಸಮಾಗಮ ಸುಖಕಾತರೆಯಾಗಿ ತನ್ನೆದೆಯ ಎಳೆತಸೆಳೆತಗಳನ್ನು ತುಡಿತ ಮಿಡಿತಗಳನ್ನು ಅದುಮಿಟ್ಟುಕೊಳ್ಳಲಾಗದೆ, "ಏನಾದರೂ– ಹೇಗಾದರೂ– ಮಾಡಿ ಆತನನ್ನು ಕರೆದು ತಾ" ಎಂದು ಸಖಿಗೆ ವಿನಂತಿಸಿಕೊಳ್ಳುವ ಧಾಟಿಯಲ್ಲಿ ಕನಕದಾಸರು ತಮ್ಮ ಆರಾಧ್ಯದೈವವಾದ ಆದಿಕೇಶವನ (ವಿಷ್ಣುವಿನ) ಸಮಾಗಮಕ್ಕಾಗಿ ಆತುರಕಾತುರದಿಂದ ಹಾತೊರೆವ ಮನಃಸ್ಥಿತಿಯಲ್ಲಿ ಕಂಡರಿಸಿದ್ದಾರೆ. ಪ್ರಿಯತಮನ ಶಕ್ತಿ ಸಾಮರ್ಥ್ಯಗಳನ್ನು ಲೀಲಾವಿನೋದಗಳನ್ನು ಬಾಯ್ತುಂಬ ಗುಣಗಾನ ಮಾಡಲು ಪೌರಾಣಿಕ ಲೋಕದ ವಾವೆ ವರಸೆಯ ಕಗ್ಗಾಡಿನ ಕಣಿವೆ ಕಂದರಗಳಲ್ಲಿ ಅಲೆದಾಡಿಸಿ, ಗಿರಿಶೃಂಗಗಳ ಶ್ರೇಣಿಶ್ರೇಣಿಗಳನ್ನು ಹತ್ತಿಸಿ ಇಳಿಸಿ ಲೋಕಚೇಷ್ಟೆಗೆ (ಚಟುವಟಿಕೆಗೆ) ಬೀಜರೂಪವಾದ ಸೂರ್ಯನ (ಪ್ರಸ್ತುತ ವಿಷ್ಣುವಿನ) ದರ್ಶನ ಮಾಡೆಂದು ಕುಂಬಿಯ ಮೇಲೆ ಕೂಡಿಸಿ ಕರೆಕೊಟ್ಟಂತಿದೆ– ಶ್ರಮದ ಸುಸ್ತು ಇಲ್ಲದೆ ವಸ್ತು (ಪರಬ್ರಹ್ಮ) ದಕ್ಕದು ಎಂದು.

ಅರ್ಥ– ತೋರ = ದಪ್ಪ, ಈರೇಳು = ಹದಿನಾಲ್ಕು

೧. ತರಣಿ ತನಯ ಸುತನ ಬಾಯೊಳು = ಸೂರ್ಯಪುತ್ರನಾದ ಯಮಧರ್ಮನ ಮಗನಾದ ಧರ್ಮರಾಯನ ಬಾಯಲ್ಲಿ

ಭರದಿಂದ ನುಡಿಸಿದ = ಬೇಗ ಹೇಳುವಂತೆ ಮಾಡಿದ ಶ್ರೀಕೃಷ್ಣನನ್ನು (ದ್ರೋಣವಧೆಗಾಗಿ ಶ್ರೀ ಕೃಷ್ಣ ಧರ್ಮರಾಯನ ಬಾಯಿಂದ "ಅಶ್ವತ್ಥಾಮೋ ಹತಃ ಕುಂಜರಃ" ಎಂದು ಹೇಳಿಸಿ, ಕುಂಜರ ಎಂಬ ಶಬ್ದ ದ್ರೋಣದ ಕಿವಿಗೆ ಕೇಳಿಸದ ಹಾಗೆ ಶಂಖ ಊದುತ್ತಾನೆ. ಮಗ ಸತ್ತನೆಂದು ಅವನು ಶಸ್ತ್ರತ್ಯಾಗ ಮಾಡಿದಾಗ ಅವನನ್ನು ಕೊಲ್ಲಿಸಿದ ಸಂದರ್ಭ)

ತರಣಿ ಸುತನ... ಒತ್ತಿದ ದೇವನ = ಸೂರ್ಯನ ಮಗನಾದ ಕರ್ಣ ಪ್ರಯೋಗಿಸಿದ ಸರ್ಪಾಸ್ತ್ರದಿಂದ ಅರ್ಜುನನನ್ನು ಪಾರು ಮಾಡಲು ರಥವನ್ನು ನೆಲಕ್ಕೆ ಒತ್ತಿದ ಶ್ರೀಕೃಷ್ಣನನ್ನು

ತರಣಿಯ ಮರೆಮಾಡಿ... ಸೂಚಿಸಿದಾತನ = ಸೂರ್ಯ ಕಾಣದ ಹಾಗೆ ಮರೆ ಮಾಡಿ ಜಯದ್ರಥನ ತಲೆ ತೆಗೆಯೆಂದು ಅರ್ಜುನನಿಗೆ ಸೂಚಿಸಿದ ಕೃಷ್ಣನನ್ನು (ಜಯದ್ರಥ ಅಭಿಮನ್ಯುವನ್ನು ಕೊಂದಿದ್ದ. ಆದ್ದರಿಂದ ತನ್ನ ಮಗನನ್ನು ಕೊಂದವನನ್ನು ಇಂದು ಸೂರ್ಯ ಮುಳುಗುವಷ್ಟರಲ್ಲಿ ಕೊಲ್ಲುತ್ತೇನೆ ಎಂದು ಅರ್ಜುನ ಶಪಥ ಮಾಡಿದ. ಇದನ್ನರಿತ ಜಯದ್ರಥ ಸೂರ್ಯಾಸ್ತದವರೆಗೂ ಕಾಣಿಸಿಕೊಳ್ಳಬಾರದೆಂದು ಬಚ್ಚಿಟ್ಟುಕೊಂಡ. ಆಗ ಶ್ರೀಕೃಷ್ಣ ತನ್ನ ಚಕ್ರದಿಂದ ಸೂರ್ಯನಿಗೆ ಮರೆ ಮಾಡಿ ಸೂರ್ಯಾಸ್ತವಾಯಿತೆಂಬ ಭ್ರಮೆಯುಂಟು ಮಾಡಿದ. ಹೊರಬಂದ ಜಯದ್ರಥ ಬಲಿಯಾದ ಕಥಾ ಸಂದರ್ಭ)

ತರಣಿಯೊಡನೆ... ತರಳನಳಿದನ = ಸೂರ್ಯನನ್ನು ಹಣ್ಣೆಂದು ಭಾವಿಸಿ ಪಂಥವೆಂಬಂತೆ ಹೋಗಿ ಅಪ್ಪಳಿಸಿ ಬಿದ್ದು ಹಿಂದಿರುಗಿದ ತರಳನನ್ನು (ಆಂಜನೇಯನನ್ನು) ಆಳಿದವನು (ಭಕ್ತನನ್ನಾಗಿಸಿಕೊಂಡ ವಿಷ್ಣು)

೨. ಗೋತ್ರಭೇದಿ = ಪರ್ವತಗಳನ್ನು ಭೇದಿಸಿದ ಇಂದ್ರ, ಸುತನ = ಅವನ ಮಗನಾದ ಅರ್ಜುನನ, ಸುತನ = ಅವನ ಮಗನಾದ ಅಭಿಮನ್ಯುವಿನ, ಸತಿಯ = ಅವನ ಹೆಂಡತಿಯಾದ ಉತ್ತರೆಯ, ಮಾತುಳನಾದವನ = ಅವಳಿಗೆ ಸೋದರ ಮಾವನಾದ ಕೀಚಕನ, ಕತ್ತಲೆಯಲ್ಲಿ ಪೋಗಿ ಕುತ್ತಿಟ್ಟನ = ರಾತ್ರಿ ಹೋಗಿ ತುಂಡು ತುಂಡು ಮಾಡಿದ ಭೀಮನ, ಮೈಯ ಸುತ್ತಿ ಬಾಧಿಸುತಿಪ್ಪನ = ಅವನ ಮೈಗೆ ಸುತ್ತಿಕೊಂಡಿರುವ ಹೆಬ್ಬಾವು ರೂಪದ ಶಾಪಗ್ರಸ್ತ ನಹುಷನ, ತತ್ತ್ವವನರಿತು = ಧರ್ಮಪರ ವಾದ ಪ್ರಶ್ನೆಗಳನ್ನು ತಿಳಿದು, ಸುತತ್ವವ ಬೋಧಿಸಿ ಉತ್ತರ

ವಿತ್ತನ = ಸೂಕ್ತ ಉತ್ತರಕೊಟ್ಟ ಧರ್ಮರಾಯನ
ಮುತ್ತಯ್ಯನ = ಅವನ ಅಜ್ಜನಾದಭೀಷ್ಮನ
ತಾಯ = ಗಂಗೆಯನ್ನು
ಪೆತ್ತ ದೇವನ = ವಿಷ್ಣುವನ್ನು

೩. ವರ = ಶ್ರೇಷ್ಠ
ಭರ = ವೇಗ (ತ್ರಿಮೂರ್ತಿಗಳಲ್ಲಿ ಸರ್ವೋತ್ತಮನು ಯಾರೆಂದು ನಿರ್ಧರಿಸಲು ಮುನಿಗಳೆಲ್ಲರೂ ಸೇರಿ ಭೃಗು ಮುನಿಗೆ ಆ ಹೊಣೆಗಾರಿಕೆಯನ್ನು ವಹಿಸಿದರು. ಅವನು ಬ್ರಹ್ಮ ಶಿವರ ಬಳಿಗೆ ಹೋಗಿ ಅವರ ದೋಷಗಳನ್ನು ಕಂಡು ಶಪಿಸಿ ವಿಷ್ಣುವಿನ ಬಳಿಗೆ ಬರುತ್ತಾನೆ. ಅವನು ಪತ್ನೀಲೋಲನಾಗಿ ಪವಡಿಸಿರುವುದನ್ನು ಕಂಡು ಸಿಟ್ಟುಗೊಂಡು ವಿಷ್ಣುವಿನ ಎದೆಗೆ ಒದೆಯುತ್ತಾನೆ. ಆಗ ವಿಷ್ಣು ಕೋಪಿಸಿಕೊಳ್ಳದೆ "ಅಯ್ಯೋ ಋಷಿಗಳ ಪಾದಕ್ಕೆ ನೋವಾಯಿತೆ!" ಎಂದು ಪಾದವನ್ನು ಒತ್ತುತ್ತಾ ಭೃಗು ಮುನಿಯ ಪಾದದಲ್ಲಿದ್ದ ಕಣ್ಣನ್ನು ಚಿವುಟಿ ಹಾಕಿದನಂತೆ. ಆ ಕಣ್ಣೇ ಆ ಋಷಿಯ ಕೋಪತಾಪಗಳಿಗೆ, ಅಬ್ಬರ ಆರ್ಭಟಗಳಿಗೆ ಕಾರಣವಾಗಿತ್ತಂತೆ)

* * * *



## ೨೬೭
## ಕಾಂಬೋದಿ – ಅಟತಾಳ

**ರಾಜವದನೆ ಸುರರಾಜನ ಪುರದೊಳು**
**ರಾಜಸುತಿಹ ಕುಜವ** ॥ಪ॥

**ರಾಜೀವ ಮುಖಿಯೆನಿಸುವ ಸಖಿಗೊಲಿದಿತ್ತ**
**ರಾಜನ ತೋರೆನಗೆ** ॥ಅ॥

**ನೆತ್ತಿಯಿಂದಿಳಿದಳ ಹೆತ್ತ ಮಗನಮೊಮ್ಮ**
**ನೆತ್ತಿದಾತನ ಪಿತನ**
**ತುತ್ತು ಮಾಡುವನ ವೈರಿಯನೇರಿ ಜಗವನು**
**ಸುತ್ತು ಬರುತಲಿಪ್ಪನ**
**ಕತ್ತಲೆಯೊಳು ಕಾದಿ ಅಳಿದಯ್ಯನ ಶಿರವ**
**ಕತ್ತರಿಸಿದ ಧೀರನ**
**ಸತ್ತ ಮಗನ ತಂದಿತ್ತವನನು ಎ**
**ನ್ನೊತ್ತಿಗೆ ಕರೆದು ತಾರೆ** ॥೧॥

**ವರುಷವೈದರ ಪೆಸರವನ ತಾಯನುಜನ**
**ಧರಿಸಿದಾತನ ಸಖನ**
**ಧುರದೊಳು ತನಗೆ ಬೆಂಬಲ ಮಾಡಿಕೊಂಡು ಭೂ**
**ವರಗೆ ತಾನೊಲಿದವನ**
**ಸುರಗಿರಿಯನು ಸುತ್ತಿ ಬಾಹನ ಸುತನ ಕೈಯಲಿ**
**ಹರಸಿ ದಾನವ ಕೊಂಡನ**
**ಧರಣಿಜಾತನ ಶಿರವರಿದು ನಾರಿಯರನು**
**ಪುರಕೆ ತಂದವನ ತೋರೆ** ॥೨॥

**ಹನ್ನೆರಡನೆಯ ತಾರೆಯ ಪೆಸರಾಕೆಯ**
**ಕನ್ನೆಯಯ್ಯನ ಮನೆಯ**
**ತನ್ನ ತಾ ಮರೆ ಮಾಡಿಕೊಂಡಿಪ್ಪರಸಿಯ**
**ಬಣ್ಣವ ಕಾಯ್ದಿಹನ**
**ಪನ್ನಗಶಯನ ಬೇಲಾಪುರದರಸನು**
**ತನ್ನ ನೆನೆವ ಭಕ್ತನ**
**ಮನ್ನಿಸಿ ಕಾಯುವ ಚೆನ್ನಾದಿಕೇಶವ ಪ್ರ**
**ಸನ್ನನ ತೋರೆನಗೆ** ॥೩॥

ಭಾವ– 'ಶರಣಸತಿ ಲಿಂಗಪತಿ' ಎಂಬ ಧಾಟಿಯ ವಿರಹಗೀತೆಯಂತಿರುವ ಈ ಕೀರ್ತನೆ ಪೌರಾಣಿಕ ವಾವೆವರಸೆಯ ಕಗ್ಗಂಟಿನ ಕಗ್ಗಾಡಿನಲ್ಲಿ ಸಾಗುವ ಮುಂಡಿಗೆಯಾಗಿದೆ. ತನ್ನ ಜ್ಞಾನ, ಪ್ರತಿಭೆ ಪಾಂಡಿತ್ಯಗಳ ಬಗೆಗೆ ಲಘುವಾಗೆಣಿಸಿ ಹೀಗಳೆಯುತ್ತಿದ್ದ ಮೇಲ್ವರ್ಗದ ಪಂಡಿತೋತ್ತಮರ ಕಣ್ಣು ತೆರೆಸಲು ವಾವೆ ವರಸೆಯ ಮುಂಡಿಗೆಯ ಹಿಟ್ಟನ್ನು ಶ್ಯಾವಿಗೆ ಒರಳಿಗೆ ಇಟ್ಟು, ಶಕ್ತಿಯಿದ್ದವರು ಕೊಂತ ಹಿಡಿದು ತಿಣಕಿಯಾದರೂ ಒತ್ತಿ ಕೆಳಗಿಳಿಯುವ ಎಳೆ ಎಳೆಯಾದ ಕೇಶವಶ್ಯಾವಿಗೆಯ ರುಚಿ ನೋಡಿ ಎಂದು ಕರೆ ಕೊಟ್ಟಂತಿದೆ.

ಅರ್ಥ– ರಾಜವದನೆ = ಚಂದ್ರಮುಖಿ
ಸುರರಾಜ = ದೇವೇಂದ್ರ
ಪುರ = ಅಮರಾವತಿ
ರಾಜಿಸುತಿಹ ಕುಜ = ಹೊಳೆಯುತ್ತಿರುವ ಪಾರಿಜಾತ ವೃಕ್ಷ
ರಾಜೀವ ಮುಖಿ = ಕಮಲ ಮುಖಿ
ಸಖಿಗೊಲಿದಿತ್ತ = ತನ್ನ ಸತಿ ರುಕ್ಮಿಣಿಗೆ ಕೊಟ್ಟ

೧. ನೆತ್ತಿಯಿಂದಿಳಿದಳ = ಗಂಗೆಯ
ಹೆತ್ತಮಗನ =ಭೀಷ್ಮನ
ಮೊಮ್ಮನ = ಮೊಮ್ಮಗನಾದ ಧರ್ಮರಾಯನು
ಎತ್ತಿದಾತನ = ಎತ್ತಿ ಆಡಿಸಿದ ಭೀಮನ



ಪಿತನ = ವಾಯುವನ್ನು
ತುತ್ತು ಮಾಡುವನ = ಸೇವಿಸುವ ಹಾವಿನ
ವೈರಿಯನೇರಿ = ಶತ್ರುವಾದ ಗರುಡನನ್ನೇರಿ
ಜಗವನು... ಇಪ್ಪನ = ಶ್ರೀಹರಿಯ
ಕತ್ತಲೆಯೊಳು ಕಾದಿಯಳಿದ = ಕತ್ತಲೆಯಲ್ಲಿ ಯುದ್ಧ ಮಾಡಿ ಸತ್ತ ಇಂದ್ರಜಿತುವಿನ
ಅಯ್ಯನ = ತಂದೆಯಾದ ರಾವಣನ
ಶಿರವ... ಧೀರನ =ರಾಮನ
ಸತ್ತ ಮಗನ ತಂದಿತ್ತವನನು = ಗುರುವಾದ ಸಂದೀಪ ಮಹರ್ಷಿಯ ಸತ್ತ ಮಗನನ್ನು ಮತ್ತೆ ತಂದುಕೊಟ್ಟ ಕೃಷ್ಣನನ್ನು

೨. ವರುಷ... ಪೆಸರವನ = ಪ್ರಜಾಪತಿ ಎನ್ನಿಸಿಕೊಂಡ ಬ್ರಹ್ಮನ
ತಾಯ = ಲಕ್ಷ್ಮಿದೇವಿಯ
ಅನುಜನ = ಚಂದ್ರನನ್ನು
ಧರಿಸಿ... ಸಖನ = ಧರಿಸಿದ ಶಿವನ ಸಖನಾದ ಶ್ರೀಹರಿಯನ್ನು
ಧುರದೊಳು... ಒಲಿದವನ = ಕುರುಕ್ಷೇತ್ರಯುದ್ಧದಲ್ಲಿ ಅರ್ಜುನನ ಸಾರಥಿಯಾಗಿ ಒಲವು ತೋರಿಸಿದ ಶ್ರೀಕೃಷ್ಣನನ್ನು
ಸುರಗಿರಿಯನು ಸುತ್ತಿ ಬಾಹನ = ಮೇರು ಪರ್ವತವನ್ನು ಸುತ್ತಿ ಬರುವ ಸೂರ್ಯನ
ಸುತನ = ಕರ್ಣನ
ಕೈಯಲಿ... ಕೊಂಡನ = ಬ್ರಾಹ್ಮಣ ವೇಷದಲ್ಲಿ ಹೋಗಿ ಕರ್ಣ ಕುಂಡಲವನ್ನು ದಾನವಾಗಿ ಪಡೆದ ಶ್ರೀಕೃಷ್ಣನ
ಧರಣಿಜಾತನ... ಪುರಕೆ ತಂದವನ = ಭೂದೇವಿಯ ಮಗನಾದ ನರಕಾಸುರನನ್ನು ಕೊಂದು ೧೬೦೦೦ ರಾಜಪುತ್ರಿಯರನ್ನು ದ್ವಾರಕೆಗೆ ತಂದ ಶ್ರೀ ಕೃಷ್ಣನ

೩. ಹನ್ನೆರಡನೆಯ ತಾರೆಯ = ಉತ್ತರಾ ನಕ್ಷತ್ರದ
ಪೆಸರಾಕೆಯ ಕನ್ನೆಯ = ಉತ್ತರಾದೇವಿಯ

ಅಯ್ಯನ ಮನೆಯ = ತಂದೆಯಾದ ವಿರಾಟನ ಮನೆಯಲ್ಲಿ
ತನ್ನ... ಅರಸಿಯ = ಅಜ್ಞಾತವಾಸದಲ್ಲಿ ಹೆಸರು ಬದಲಾಯಿಸಿ
ಕೊಂಡಿದ್ದ ದ್ರೌಪದಿಯ
ಬಣ್ಣವ ಕಾಯ್ದಿಹನ = ಮಾನ ಕಾಪಾಡಿದ ಶ್ರೀ ಕೃಷ್ಣನ
ಪನ್ನಗಶಯನ = ಶೇಷಶಾಯಿಯಾದ ವಿಷ್ಣು

* * * *



## ೨೬೮
## ಮೋಹನ – ಝಂಪೆ ತಾಳ

**ಫುಲ್ಲವದನೆ ನಿಲ್ಲಲಾರೆನೆ– ಕಾಮನ ಶರ ತಾಗಿ**
**ತಲ್ಲಣಗೊಳುತಿಹೆನೆ ॥ಪ॥**

**ಬಲ್ಲಿದ ಮಲ್ಲರನೆಲ್ಲ ಮಡುಹಿದ**
**ನಲ್ಲನ ತೋರೆನಗೆ ॥ಅ॥**

**ಮೃಗಧರ ವೈರಿ ವೈರಿಯ ಪೆಗಲೇರಿ ಬರುವಂಥ**
**ಜಗದಾಧಿಪತಿಯಾದನ**
**ಅಗಜೆಯರಸನ ನಗವ ನೆಗಪಿದನ**
**ಬಗೆಯಿಂದಪ್ಪಳಿಸಿದನ**
**ಹಗಲೆ ಮೋಹಿಸಿದನ ಮಗನನುಜರೊಳು**
**ಪಗೆಗೊಂಡಿಪ್ಪನ**
**ಮಗುವು ತಾನಾಗಿ ಮಾವನ ಮಸ್ತಕವನು**
**ಬಗೆದನ ತೋರೆನಗೆ ॥೧॥**

**ಅಂಧನೃಪಾಲನ ಕಂದರನೆಲ್ಲರ**
**ಕೊಂದೈವರ ಭಾವನ**
**ತಂದೆಗೆ ಹಿರಿಯನೆಂದೆನಿಸಿಕೊಂಡಾತನ**
**ವಂದಿಸಿದವರಣ್ಣನ**
**ಅಂದು ಸಭೆಯಲಿ ಬಯ್ದವನ ತವಕದಿ**
**ಕಂಧರ ಕಡಿದಾತನ**
**ಸಿಂಧು ಮಥನದೊಳು ಜನಿಸಿದಳ ಗಂಡ ಮು**
**ಕುಂದನ ತೋರೆನಗೆ ॥೨॥**

**ಮಂಗಳ ಜನನಿಯ ಹಿಂಗದೆ ಕದ್ದು ಜ**
**ಲಂಗಳೊಳಡಗಿಪ್ಪನ**
**ಬೆಂಗೊಂಡು ಪೋಗಿ ಅವನಂಗವ ಸೀಳಿ ವೇ**
**ದಂಗಳ ತಂದವನ**
**ಮಂಗಳ ಮಹಿಮ ಭುಜಂಗ ಶಯನ ನಾರಿ**
**ಭಂಗವ ಕಾಯ್ದವನ**
**ಹಿಂಗದೆ ಕಾಗಿನೆಲೆಯಾದಿ ಕೇಶವ ನರ**
**ಸಿಂಗನ ತೋರೆನಗೆ** ॥೩॥

ಭಾವ– ಸತಿಪತಿ ಭಾವದ ಭಗವದನುಸಂಧಾನದ ವಿರಹಿಣಿ ಗೀತೆಯಂತಿದೆ ಈ ಕೀರ್ತನೆ. ಸಖಿಯೊಬ್ಬಳಿಗೆ ತನ್ನ ಪ್ರಿಯತಮನ ಮಹಿಮಾತಿಶಯಗಳನ್ನು ವರ್ಣಿಸಿ ಹೇಳುತ್ತಾ ಅವನನ್ನು ತಂದು ಒಂದುಗೂಡಿಸು ಎಂಬ ಮನವಿಯ ತಂತ್ರವಿಲ್ಲಿದೆ.

ಅರ್ಥ– ಫುಲ್ಲವದನೆ = ಅರಳಿದ ಹೂವಿನಂಥ (ಕಮಲ) ಮುಖವುಳ್ಳವಳೆ
ಕಾಮನ ಶರ = ಮನ್ಮಥ ಬಾಣ, ತಲ್ಲಣ = ತಳಮಳ
ಮಲ್ಲರು = ಶೂರರು, ಮಡುಹಿದ = ಕೊಂದ, ನಾಶ ಮಾಡಿದ
ನಲ್ಲನ = ಪ್ರಿಯತಮನನ್ನು

೧. ಮೃಗಧರ = ಜಿಂಕೆಯನ್ನು ಧರಿಸಿದವನು (ಚಂದ್ರ)
ಮೃಗಧರವೈರಿ = ಸರ್ಪ; ಮೃಗಧರ ವೈರಿ ವೈರಿ = ಗರುಡ
ಮೃಗಧರ... ಪತಿಯಾದನ = ಗರುಡನ ಹೆಗಲೇರಿ ಬರುವ ಶ್ರೀಹರಿಯ
ಅಗಜೆ = ಪಾರ್ವತಿ, ಅಗಜೆಯರಸ = ಶಿವ
ನಗ = ಬೆಟ್ಟ, ನೆಗಪಿದನ =ಎತ್ತಿದವನ (ರಾವಣನ)
ಅಗಜೆ... ಅಪ್ಪಳಿಸಿದನ = ಕೈಲಾಸ ಪರ್ವತವನ್ನು ಅಲುಗಾಡಿಸಿದ ರಾವಣನನ್ನು ಕೊಂದ ಶ್ರೀ ಹರಿಯನ್ನು
ಹಗಲೆ ಮೋಹಿಸಿದನ = ಹಾಡು ಹಗಲೆ ಅಹಲ್ಯೆಯನ್ನು ಮೋಹಿಸಿದ ಇಂದ್ರನ



ಮಗನ = ಅರ್ಜುನನ
ಅನುಜರೊಳು = ತಮ್ಮಂದಿರಾದ ಕೌರವರಲ್ಲಿ
ಪಗೆಗೊಂಡಿಪ್ಪನ = ಹಗೆತನದಿಂದಿರುವ ಶ್ರೀಹರಿಯನ್ನು
ಮಗುವು... ತೋರೆನಗೆ = ಚಿಕ್ಕವನಿದ್ದಾಗಲೇ ಮಾವ ಕಂಸನ ತಲೆಯನ್ನು ಹೊಡೆದ ಶ್ರೀ ಕೃಷ್ಣನನ್ನು.

೨. ಅಂಧನೃಪಾಲ = ಕುರುಡು ದೊರೆ (ಧೃತರಾಷ್ಟ್ರ)
ಅಂಧ... ಭಾವನ = ಧೃತರಾಷ್ಟ್ರನ ಮಕ್ಕಳೆಲ್ಲರನ್ನು ಕೊಂದು ಐವರು ಪಾಂಡವರಿಗೆ ಭಾವ ಎನ್ನಿಸಿಕೊಂಡ ಶ್ರೀಕೃಷ್ಣನನ್ನು
ತಂದೆಗೆ... ಅಣ್ಣನ = ?
ಕಂಧರ = ಕೊರಳು
ಅಂದು... ತರಿದಾತನ = ಪಾಂಡವರು ಕೃಷ್ಣನಿಗೆ ಅಗ್ರಪೂಜೆ ಸಲ್ಲಿಸುವಾಗ ಬೈದ ಶಿಶುಪಾಲನ ಕೊರಳನ್ನು ಕತ್ತರಿಸಿದ ಕೃಷ್ಣನನ್ನು
ಸಿಂಧು = ಸಮುದ್ರ
ಸಿಂಧು... ತೋರೆನಗೆ = ಸಮುದ್ರವನ್ನು ಕಡೆದಾಗ ಹುಟ್ಟಿದ ಲಕ್ಷ್ಮಿಯ ಗಂಡನಾದ ಕೃಷ್ಣನನ್ನು ನನಗೆ ತಂದು ತೋರಿಸು

೩. ಮಂಗಳ ಜನನಿಯ = ಪವಿತ್ರವಾದ ವೇದ ಮಾತೆಯ
ಜಲಂಗಳೊಳು = ಸಮುದ್ರದ ನೀರಿನಲ್ಲಿ
ಮಂಗಳ... ತಂದವನ = ವೇದಗಳನ್ನು ಕದ್ದೊಯ್ದ ತಮನೆಂಬ ರಾಕ್ಷಸನನ್ನು ಬೆನ್ನಟ್ಟಿ ಹೋಗಿ ಕೊಂದು ವೇದಗಳನ್ನು ರಕ್ಷಿಸಿ ತಂದ ಶ್ರೀಕೃಷ್ಣನನ್ನು
ಭುಜಂಗ = ಹಾವು
ಭುಜಂಗ ಶಯನ = ಹಾವನ್ನೇ ಹಾಸಿಗೆಯಾಗುಳ್ಳವನು ( ಶ್ರೀ ಹರಿ)
ನಾರಿ ಭಂಗ = ದ್ರೌಪದಿಯ ಮಾನಭಂಗ
ಮಂಗಳ = ಕಾಯ್ದವನ = ದ್ರೌಪದಿಯ ಮಾನಭಂಗವಾಗದಂತೆ ಕಾಪಾಡಿದ ಕೃಷ್ಣನನ್ನು ತೋರೆನಗೆ

* * * *

## ೨೬೯
# ಮೋಹನ – ಆಟ

**ಹರಿಮುಖಿ ಹರಿವಾಣಿ ಹರಿವೇಣಿ ಹರಿಣಾಕ್ಷಿ**
**ಹರಿ ಮಧ್ಯೆ ಹರಿಗಮನೆ ॥ಪ॥**

**ಹರಿಯ ನಂದನ ಸಖನೆನಿಪ ಅಹೋಬಲದ**
**ಹರಿಯ ನೀ ತಂದು ತೋರೆ ॥ಅ॥**

**ಎರವಿನ ತಲೆಯವನಣ್ಣನಯ್ಯನ**
**ಪರಮ ಸಖನ ಸುತನ**
**ಹಿರಿಯಣ್ಣನಯ್ಯನ ಮೊಮ್ಮನ ಮಾವನ**
**ತರಿದೊಟ್ಟಿದನ ಹಗೆಯ**
**ಗುರುವಿನ ಮುಂದೆ ಮುಂದಿಹ ಬಾಹನ**
**ಕಿರಿಯ ಮಗನ ರಾಣಿಯ**
**ದುರುಳತನದಿ ಸೆಳೆದುಕೊಂಡನ ಕೊಂದನ**
**ತರಳೆ ನೀ ತಂದು ತೋರೆ ॥೧॥**

**ಸೋಮನ ಜನಕನ ಸತಿಯ ಧರಿಸಿದನ**
**ರೋಮ ಕೋಟಿಯೊಳಿಟ್ಟಿಹನ**
**ಕಾಮಿನಿ ಸತಿಯ ಕಂದನ ತಮ್ಮಗೊಲಿದನ**
**ಭಾಮೆ ನೀ ತಂದು ತೋರೆ ॥೨॥**

**ಶ್ರುತಿಯನುದ್ಧರಿಸಿ ಭೂಮಿಯ ಪೊತ್ತು ಅಡವಿಯ**
**ಪಥದೊಳು ತಿರುಗಿದನ**
**ಅತಿಶಯ ನರಹರಿ ವಾಮನ ರೂಪಿನ**
**ಪಿತನ ಮೋಹದ ರಾಣಿಯ**



**ಹತ ಮಾಡಿ ಸತ್ಯಕ್ಕೆ ನಿಂತು ನಗವ ಹೊತ್ತು**
**ಪತಿವ್ರತೆಯರ ಭಂಗಿಸಿ**
**ಕ್ಷಿತಿಯೊಳು ರಾವುತನಾದ ಬಾಡ**
**ದಾದಿಕೇಶವನ ತಂದು ತೋರೆ ॥೩॥**

ಭಾವ– ಸತಿ ಪತಿ ಭಾವದ ಭಗವದನುಸಂಧಾನದ ಕೀರ್ತನೆ ಇದು. ಪ್ರಿಯತಮೆಯೊಬ್ಬಳು ತನ್ನ ಪ್ರಿಯತಮನನ್ನು ಕರೆದು ತರುವಂತೆ ಸಖಿಗೆ ದಮ್ಮಯ್ಯಗುಡ್ಡೆ ಹಾಕುವ ತಂತ್ರವನ್ನು ಇಲ್ಲಿ ಅಳವಡಿಸಿ ಕೊಳ್ಳಲಾಗಿದೆ.

ಅರ್ಥ– ಹರಿ ಮುಖಿ = ಚಂದ್ರ ಮುಖಿ (ಹರಿ ಎಂದರೆ ಇಲ್ಲಿ ಚಂದ್ರ)
ಹರಿವಾಣಿ = ಶುಕವಾಣಿ ಅಥವಾ ಪಿಕವಾಣಿ (ಹರಿ ಶಬ್ದಕ್ಕೆ ಗಿಳಿ, ಕೋಗಿಲೆ ಎಂಬ ಅರ್ಥವೂ ಉಂಟು)
ಹರಿವೇಣಿ = ಸರ್ಪವೇಣಿ (ಹರಿ ಎನ್ನುವುದಕ್ಕೆ ಸರ್ಪ ಎಂಬ ಅರ್ಥವೂ ಉಂಟು)
ವೇಣಿ = ಜಡೆ
ಹರಿಣಾಕ್ಷಿ = ಜಿಂಕೆಯಂತೆ ಕಣ್ಣುಳ್ಳವಳು
ಹರಿ ಮಧ್ಯೆ = ಸಿಂಹದಂತೆ ಸಣ್ಣ ನಡುವುಳ್ಳವಳು ( ಹರಿ ಎಂಬುದಕ್ಕೆ ಸಿಂಹ ಎಂಬ ಅರ್ಥವುಂಟು)
ಹರಿಗಮನೆ = ಗಜಗಮನೆ (ಹರಿ ಎಂಬುದಕ್ಕೆ ಆನೆ ಎಂಬ ಅರ್ಥವೂ ಉಂಟು)

೧. ಎರವಿನ ತಲೆಯವನ = ಗಣಪತಿಯ (ಆನೆಯ ಬಾಡಿಗೆದಲೆ ಇರುವುದರಿಂದ)
ಎರವು = ಅನ್ಯ
ಅಣ್ಣನ = ಷಣ್ಮುಖನ
ಅಯ್ಯನ = ತಂದೆಯಾದ ಈಶ್ವರನ
ಪರಮಸಖನ = ಗೆಳೆಯನಾದ ಶ್ರೀ ಹರಿಯ
ಸುತನ = ಮನ್ಮಥನ

ಹಿರಿಯಣ್ಣನ = ಬ್ರಹ್ಮನ
ಅಯ್ಯನ = ತಂದೆಯಾದ ಶ್ರೀ ಹರಿಯ
ಮೊಮ್ಮನ = ಮೊಮ್ಮಗನಾದ ಅನಿರುದ್ಧನ (ಕೃಷ್ಣನ ಮಗನಾದ ಪ್ರದ್ಯುಮ್ನನ ಮಗ ಅನಿರುದ್ಧ)
ಮಾವನ = ಬಾಣಾಸುರನ (ಅನಿರುದ್ಧ ಬಾಣಾಸುರನ ಮಗಳು ಉಷೆಯನ್ನು ಲಗ್ನವಾಗಿರುತ್ತಾನೆ)
ತರಿದೊಟ್ಟಿದನ = ಸಂಹಾರ ಮಾಡಿದ ಕೃಷ್ಣನ
ಹಗೆಯ = ಬಲಿಯ
ಗುರುವಿನ = ಶುಕ್ರನ
ಮುಂದೆ ಮುಂದಿಹ ಬಾಹನ = ಸೂರ್ಯನ?
ಕಿರಿಯ ಮಗನ = ಸುಗ್ರೀವನ
ರಾಣಿಯ = ರುಮೆಯನ್ನು
ದುರುಳತನದಿ ಸೆಳೆದು ಕೊಂಡನ = ವಾಲಿಯ
ಕೊಂದನ = ರಾಮನ

೨. ಸೋಮ = ಚಂದ್ರನ
ಜನಕನ = ಸಾಗರನ
ಸತಿಯ = ಗಂಗೆಯ
ಧರಿಸಿದವನ = ಶಿವನ
ರೋಮ ಕೋಟಿಯೊಳಿಟ್ಟಿಹನ = ವಾಯುವಿನ
ಕಾಮಿನಿಸತಿಯ = ಅಂಜನೆಯ
ಕಂದನ = ಆಂಜನೇಯನ (ಅಂದರೆ ಇಲ್ಲಿ ಭೀಮನ ಎಂದಿಟ್ಟು ಕೊಳ್ಳಬೇಕು. ಭೀಮನೂ ವಾಯುಪುತ್ರ)
ತಮ್ಮಗೊಲಿದನ = ಭೀಮನ ತಮ್ಮನಾದ ಅರ್ಜುನನಿಗೆ ಒಲಿದ ಕೃಷ್ಣನ

೩. ಶ್ರುತಿಯನುದ್ಧರಿಸಿ = ಮತ್ಸ್ಯಾವತಾರ (ಶ್ರುತಿ=ವೇದ)
ಭೂಮಿಯ ಪೊತ್ತು = ವರಾಹಾವತಾರ
ಅಡವಿಯ ಪಥದೊಳು ತಿರುಗಿದನ = ರಾಮಾವತಾರ
ಅತಿಶಯ ನರಹರಿ = ನರಸಿಂಹಾವತಾರ (ನರ = ಮನುಷ್ಯ+ಹರಿ = ಸಿಂಹ)



ವಾಮನ ರೂಪಿನ = ವಾಮನಾವತಾರ (ವಾಮನ = ಕುಳ್ಳ)
ಪಿತನ... ಹತಮಾಡಿ = ಪರಶುರಾಮಾವತಾರ (ತಂದೆಯ ಮಾತಿನಂತೆ ತಾಯಿಯನ್ನು ಕೊಂದನು)
ನಗವ ಹೊತ್ತು = ಕೂರ್ಮಾವತಾರ (ನಗ = ಬೆಟ್ಟ)
ಪತಿವ್ರತೆಯರ ಭಂಗಿಸಿ = ಬೌದ್ಧಾವತಾರ
ಕ್ಷಿತಿಯೊಳು ರಾವುತನಾದ = ಕಲ್ಕ್ಯವತಾರ

* * * *

## ೨೭೦
## ಭೈರವಿ – ಅಟತಾಳ

**ರಮಣಿ ಕೇಳೆಲೆ ಮೋಹನ ಶುಭಕಾಯನ**
**ಅಮರ ವಂದಿತ ರವಿಶತಕೋಟಿ ತೇಜನ**
**ವಿಮಲ ಚರಿತ್ರದಿ ಮೆರೆವ ಶ್ರೀಕೃಷ್ಣನ**
**ಕಮಲವದನೆ ನೀ ತೋರೆ ॥ಪ॥**

**ಬಾಯೊಳಗಿಹಳ ಗಂಡನ ನಿಜ ತಮ್ಮನ**
**ತಾಯ ಪಿತನ ಮಡದಿಯ ಧರಿಸಿದನ**
**ಸ್ತ್ರೀಯಳ ಸುತನ ಕೈಯಲಿ ಶಾಪಪಡೆದನ**
**ದಾಯಾದಿಯ ಮಗನ**
**ಸಾಯಕವದು ತೀವ್ರದಿ ಬರುತಿರೆ ಕಂಡು**
**ಮಾಯಾಪತಿ ಭೂಮಿಯನೊತ್ತಿ ತನ್ನಯ**
**ಬೀಯಗನ ತಲೆಗಾಯಿದಂಥ**
**ರಾಯನ ಕರೆದು ತೋರೆ ॥೧॥**

**ನಾಲಗೆ ಎರಡರವನ ಭುಂಜಿಸುವನ**
**ಮೇಲೇರಿ ಬಹನ ತಂದೆ ಇಹ ಗಿರಿಯನು**
**ಲೀಲೆಯಿಂದಲಿ ಕಿತ್ತೆತ್ತಿದ ಧೀರನ**
**ಕಾಳೆಗದಲಿ ಕೊಂದನ**
**ಲೋಲಲೋಚನೆಯ ಮಾತೆಯ ಪುತ್ರನಣುಗನ**
**ಮೇಲು ಶಕ್ತಿಗೆ ಉರವನಾಂತು ತನ್ನವರನು**
**ಪಾಲಿಸಿದಂಥ ದಾತನಹ ದೇವನ**
**ಲೋಲೆ ನೀ ಕರೆದು ತೋರೆ ॥೨॥**



**ಉರಿಯೊಳು ಜನಿಸಿದವನ ನಿಜ ತಂಗಿಯ**
**ಸೆರಗ ಪಿಡಿದ ಖಳನಣ್ಣನ ತಂಗಿಯ**
**ವರನ ತಲೆಯನು ಕತ್ತರಿಸಿದ ಧೀರನ**
**ಗುರುವಿನೊಳುದಿಸಿದನ**
**ಶರವ ತಪ್ಪಿಸಿ ತನ್ನ ದಾಸರ್ಗೆ ಅನುದಿನ**
**ಕರೆದು ವರವನಿತ್ತು ಮನ್ನಿಸಿ ಸಲಹುವ**
**ಉರಗಗಿರಿಯ ವೆಂಕಟಾದಿಕೇಶವನ**
**ಗರತಿ ನೀ ಕರೆದು ತಾರೆ ॥೩॥**

ಭಾವ– ಸತಿ ಪತಿ ಭಾವದ ಭಗವದನುಸಂಧಾನದ ಕೀರ್ತನೆ ಇದು. ಕಾದಲೆಯೊಬ್ಬಳು ವಿರಹವನ್ನು ಸಹಿಸಲಾರದೆ ತನ್ನ ಕಾದಲನಾದ ಕೃಷ್ಣನನ್ನು ಕರೆತರುವಂತೆ ಗೆಳತಿಯೊಬ್ಬಳಿಗೆ ವಿನಂತಿಸಿಕೊಳ್ಳುವ ತಂತ್ರವಿಲ್ಲಿದೆ.

ಅರ್ಥ– ಮೋಹಕ ಶುಭ ಕಾಯನ = ಮನಮೋಹಿಸುವ ಸುಂದರ ಶರೀರ ಉಳ್ಳವನು
ಅಮರ ವಂದಿತ = ದೇವತೆಗಳಿಂದ ನಮಸ್ಕರಿಸಿಕೊಳ್ಳುವವನು
ರವಿ ಶತಕೋಟಿ ತೇಜನ = ನೂರು ಕೋಟಿ ಸೂರ್ಯರ ಕಾಂತಿ ಯುಳ್ಳವನು
ವಿಮಲ ಚರಿತದಿ = ಶುದ್ಧ ಚಾರಿತ್ರ್ಯದಿಂದ
ಕಮಲವದನೆ = ಕಮಲದಂತೆ ಮುಖವುಳ್ಳವಳು.

೧. ಬಾಯೊಳಗಿಹಳ = ಸರಸ್ವತಿಯ
ಗಂಡನ = ಬ್ರಹ್ಮನ
ನಿಜ ತಮ್ಮನ = ಮನ್ಮಥನ
ತಾಯ = ಲಕ್ಷ್ಮಿಯ
ಪಿತನ =ಸಮುದ್ರರಾಜನ
ಮಡದಿಯ = ಪತ್ನಿಯಾದ ಗಂಗೆಯ
ಧರಿಸಿದನ = ಶಿವನ

ಸ್ತ್ರೀಯಳ = ಪಾರ್ವತಿಯ
ಸುತನ ಕೈಯಲಿ = ಗಣಪತಿಯ ಕೈಯಿಂದ
ಶಾಪ ಪಡೆದನ = ಚಂದ್ರನ
ದಾಯಾದಿಯ = ಸೂರ್ಯನ
ಮಗನ = ಕರ್ಣನ
ಸಾಯಕವದು = ಸರ್ಪಾಸ್ತ್ರವು
ಮಾಯಾಪತಿ = ಕೃಷ್ಣ
ಬೀಯಗನ = ಬೀಗನ (ತನ್ನ ತಂಗಿ ಸುಭದ್ರೆಯ ಗಂಡನಾದ ಅರ್ಜುನ= ಭಾವ)
ತಲೆಗಾಯಿದಂಥ = ಪ್ರಾಣ ಉಳಿಸಿದಂಥ

೨. ನಾಲಗೆ ಎರಡರವನ = ಸರ್ಪವನ್ನು
ಭುಂಜಿಸುವನ = ತಿನ್ನುವ ನವಿಲಿನ
ಮೇಲೇರಿ ಬಹನ = ಷಣ್ಮುಖನ
ತಂದೆ = ಈಶ್ವರನು
ಇಹ ಗಿರಿಯನು = ಇರುವ ಕೈಲಾಸಪರ್ವತವನ್ನು
ಲೀಲೆಯಿಂದಲಿ... ಧೀರನ = ರಾವಣನ
ಕಾಳೆಗದಲಿ ಕೊಂದನ = ರಾಮನ
ಲೋಲ ಲೋಚನೆಯ = ತಲ್ಲೀನ ಅಥವಾ ಚಲನೆಯ ಕಣ್ಣುಳ್ಳ ಸೀತೆಯ
ಮಾತೆಯ = ಭೂದೇವಿಯ
ಪುತ್ರನ = ನರಕಾಸುರನ
ಅಣುಗನ = ಮಗನಾದ ಭಗದತ್ತನ
ಮೇಲುಶಕ್ತಿಗೆ = ವರಾಹಾಸ್ತ್ರಕ್ಕೆ
ಉರವನಾಂತು = ಎದೆಯನ್ನು ಕೊಟ್ಟು (ಶ್ರೀಕೃಷ್ಣ)

೩. ಉರಿಯೊಳು ಜನಿಸಿದವನ = ದ್ರುಷ್ಟದ್ಯುಮ್ನನ
ನಿಜ ತಂಗಿಯ = ದ್ರೌಪದಿಯ
ಸೆರಗ ಪಿಡಿದ ಖಳನ = ದುಶ್ಶಾಸನನ
ಅಣ್ಣನ = ದುರ್ಯೋಧನನ
ತಂಗಿಯ = ದುಶ್ಶಲೆಯ



ವರನ = ಗಂಡನಾದ ಜಯದ್ರಥನ (ಸೈಂಧವನ)
ತಲೆಯನು... ಧೀರನ = ಅರ್ಜುನನ
ಗುರುವಿನೊಳುದಿಸಿದನ = ಅಶ್ವತ್ಥಾಮನ
ಶರವ ತಪ್ಪಿಸಿ = ನಾರಾಯಣಾಸ್ತ್ರಕ್ಕೆ ಸಿಗದಂತೆ ಮಾಡಿ
ಉರಗಗಿರಿಯ = ಶೇಷಗಿರಿಯ (ತಿರುಪತಿಯ)

* * * *

## ೨೭೧
## ಸಾವೇರಿ – ಅಟತಾಳ

**ಏಣನಯನೆ ಏಣಭೋಜ ಮಧ್ಯಳೆ ತೋರೆ**
**ಏಣಾಂಕ ಬಿಂಬ ಮುಖಿ**
**ಏಣವೈರಿಯ ವೈರಿಯ ಶಿರಕುಚಯುಗೆ ಕರೆತಾರೆ**
**ಏಣಾಂಕಧರ ಸಖನ ॥ಪ॥**

**ಚಳಿಯ ಮಗಳ ತಾಯಳಿಯನ ತನಯನ**
**ಇಳುಹದೆ ಪೊತ್ತಿಹನ**
**ಬಳಿದುಣ್ಣಲೀಸದೆ ಸೆಳೆದುಂಡನಣ್ಣನ**
**ಸಲಹಿದಾತನ ಸುತನ**
**ಕಳದೊಳು ತಲೆ ಚೆಂಡಾಡಿದ ಧೀರನ**
**ಬಳಿ ವಾಘೆಯನು ಪಿಡಿದನ**
**ಇಳೆಯ ಮೊರೆಯನು ಕೇಳಿ ಖಳರುತ್ತಮಾಂಗವ**
**ನಿಳುಹಿದಾತನ ತೋರೆಲೆ ॥೧॥**

**ಇಪ್ಪತ್ತನಾಲ್ಕು ನಾಮಗಳೊಳಗೇಳನು**
**ತಪ್ಪದೆಣಿಸಿ ಕಳೆದು**
**ಬಪ್ಪ ಎಂಟನೆಯ ನಾಮದ ಪೆಸರಿನೊಳ್**
**ಇಪ್ಪ ಕಡೆಯ ಬೀಡಲಿ**
**ಅಪ್ಪ ಜಯದರಸನ ಕೂಡೆ ಜನಿಸಿದ**
**ಕಪ್ಪು ವರ್ಣದ ಮೈಯಳ**
**ಅಪ್ಪನ ಮಿತ್ರನ ಮಗನೆಂಬ ಬೊಮ್ಮನ**
**ಬೊಪ್ಪನ ತೋರೆನಗೆ ॥೨॥**



**ಬಿಡುಗಣ್ಣ ಬಾಲೆ ತನ್ನೊಡೆಯನ ನುಡಿಗೇಳಿ**
**ದೃಢದಿಂದ ನಡೆದು ಬಂದು**
**ಜಡಿವ ಕೋಪಕೆ ಶಾಪ ಪಡೆದುಕೊಂಡಾಕ್ಷಣ**
**ನುಡಿದ ದಿನವು ದಾಟಲು**
**ಪಡೆಯನೆಲ್ಲವ ನಡು ರಣದಲಿ ಸೋಲಿಸಿ**
**ಜಡಿದು ಗೋವುಗಳನೆಲ್ಲ**
**ಒಡನೆ ತನ್ನಯ ಪುರಕೆ ಹೊಡೆತಂದ ಧೀರನ**
**ಒಡೆಯನ ತೋರೆನಗೆ ॥೩॥**

**ಸುರರ ವಾದ್ಯದ ಪೆಸರವನ ಬಸುರಲಿ ಬಂದ**
**ಉರಗನತ್ತೆಯ ಮಗನ**
**ಹಿರಿಯ ತಮ್ಮನ ಸುತ್ತಿ ನುಂಗದೆ ತಂದೆಯ**
**ಮರಳಿ ನುಂಗಿದ ಧೀರನ**
**ಧುರದೊಳು ಧ್ವಜವ ಕೀಲಿಸಿದಾತನ ಕು**
**ವರರೆಲ್ಲರನು ಕೊಂದನ**
**ವರಮಾತೆಯ ಕೂಡೆ ಜನಿಸಿದ ಧೀರನ**
**ಗರುವೆ ನೀ ತೋರೆನಗೆ ॥೪॥**

**ಮೂರು ಬಟೆಯೊಳಿಪ್ಪ ನಾರಿಯ ಗಂಡನ**
**ವೈರಿಯ ಹಿರಿಯಣ್ಣನ**
**ಮೂರೊಂದು ಮಾತಿನ ಸಾರವನೇ ಕದ್ದು**
**ವಾರಿಧಿಯ ಪೊಕ್ಕನ**
**ಬೇರೊಂದು ರೂಪದಿ ಜನಿಸಿ ಖಳನ ಕೊಂದು**
**ಧಾರಿಣಿಸುರರಿಗಿತ್ತನ**
**ಧೀರ ಕಾಗಿನೆಲೆಯಾದಿಕೇಶವ ರಘು**
**ವೀರನ ಕರೆದು ತೋರೆ ॥೫॥**

ಭಾವ– ಸತಿ ಪತಿ ಭಾವದ ಭಗವದನುಸಂಧಾನದ ಕೀರ್ತನೆಯಿದು. ಯಥಾಪ್ರಕಾರ ಕಾದಲೆಯೊಬ್ಬಳು ವಿರಹವನ್ನು ಸಹಿಸಲಾರದೆ ತನ್ನ

ಕಾದಲನಾದ ಶ್ರೀ ಕೃಷ್ಣನನ್ನು (ವಿಷ್ಣು) ಕರೆತರುವಂತೆ ತನ್ನ ಸಖಿಯೊಬ್ಬಳಿಗೆ ವಿನಂತಿಸಿಕೊಳ್ಳುವ ತಂತ್ರ ಇಲ್ಲಿದೆ.

ಅರ್ಥ– ಏಣನಯನೆ = ಜಿಂಕೆಯ ಕಣ್ಣುಳ್ಳವಳೆ

ಏಣಭೋಜ ಮಧ್ಯಳೆ = ಜಿಂಕೆಯನ್ನು ತಿನ್ನುವ ಸಿಂಹದಂತಹ ಸಣ್ಣ ನಡುವುಳ್ಳವಳೆ

ಏಣಾಂಕಬಿಂಬ ಮುಖಿ = ಚಂದ್ರ ಬಿಂಬದಂಥ ಮುಖವುಳ್ಳವಳೆ

ಏಣವೈರಿಯ ವೈರಿಯ = ಜಿಂಕೆಯ ಹಗೆಯಾದ ಸಿಂಹನ ಹಗೆಯಾದ ಆನೆಯ

ಶಿರಕುಚಯುಗೆ = ಕುಂಭಸ್ಥಳದಂಥ ಸ್ತನದ್ವಯಗಳನ್ನುಳ್ಳವಳೆ

ಏಣಂಕಧರ ಸಖನ = ಚಂದ್ರನನ್ನು ಧರಿಸಿದ ಶಿವನ ಗೆಳೆಯನಾದ ವಿಷ್ಣುವನ್ನು

೧. ಚಳಿಯ ಮಗಳ = ಹಿಮವಂತನ ಮಗಳಾದ ಪಾರ್ವತಿಯ

ತಾಯ = ಮೇನಾದೇವಿಯ

ಅಳಿಯನ = ಶಿವನ

ತನಯನ = ಮಗನಾದ ಷಣ್ಮುಖನ

ಇಳುಹದೆ ಪೊತ್ತಿಹನ = ನವಿಲಿನ

ಬಳಿ... ಸೆಳೆದುಂಡನ = ಹಾವನ್ನು ಬಳಿದುಕೊಂಡು ತಿನ್ನಲು ನವಿಲಿಗೆ ಅವಕಾಶ ಕೊಡದೆ, ಮೇಲಕ್ಕೆ ಎತ್ತಿಕೊಂಡು ಹೋಗಿ ತಿನ್ನುವ ಗರುಡನ

ಅಣ್ಣನ = ಅರುಣನನ್ನು

ಸಲಹಿದಾತನ = ಸೂರ್ಯನ

ಸುತನ = ಮಗನಾದ ಕರ್ಣನನ್ನು

ಕಳದೊಳು... ಧೀರನ = ಯುದ್ಧದಲ್ಲಿ ಕೊಂದ ಅರ್ಜುನನ

ಬಳಿ... ಪಿಡಿದನ = ಕುದುರೆಯ ಲಗಾಮು ಹಿಡಿದು ಸಾರಥಿಯಾದವನ

ಇಳೆಯ... ಇಳುಹಿದಾತನ = ಭೂಮಿಯ ಜನರ ಮೊರೆಯನ್ನು ಕೇಳಿ ದುಷ್ಟರ ತಲೆಗಳನ್ನು ಚೆಂಡಾಡಿದ ಕೃಷ್ಣನನ್ನು



೨. ಇಪ್ಪತ್ತುನಾಲ್ಕು ನಾಮಗಳೊಳಗೆ = ಕೇಶವಾದಿ ಕೃಷ್ಣ ಪರ್ಯಂತವಿರುವ ವಿಷ್ಣುವಿನ ಇಪ್ಪತ್ತುನಾಲ್ಕು ಹೆಸರುಗಳಲ್ಲಿ (ಕೇಶವ, ನಾರಾಯಣ, ಮಾಧವ, ಗೋವಿಂದ, ವಿಷ್ಣು, ಮಧುಸೂದನ, ತ್ರಿವಿಕ್ರಮ, ವಾಮನ, ಶ್ರೀಧರ, ಹೃಷಿಕೇಶ, ಪದ್ಮನಾಭ, ದಾಮೋದರ, ಸಂಕರ್ಷಣ, ವಾಸುದೇವ, ಪ್ರದ್ಯುಮ್ನ, ಅನಿರುದ್ಧ, ಪುರುಷೋತ್ತಮ, ಅಧೋಕ್ಷಜ, ನಾರಸಿಂಹ, ಅಚ್ಯುತ, ಜನಾರ್ದನ, ಉಪೇಂದ್ರ, ಶ್ರೀಹರಿ, ಶ್ರೀಕೃಷ್ಣ)

ಏಳನು... ಪೆಸರಿನೊಳ್= ಏಳನು ಕಳೆದರೆ ಬರುವ ಎಂಟನೆಯ ಹೆಸರಾದ ವಾಮನದಲ್ಲಿ

ಇಪ್ಪ ಕಡೆಯ ಬೀಡಲಿ = ಇರುವ ಕಡೆಯ ಅಕ್ಷರ 'ನ'ದಿಂದ ಷುರುವಾಗುವ ನರಕದಲ್ಲಿ

ಅಪ್ಪ ಜಯದರಸನ ಕೂಡೆ ಜನಿಸಿದ = ಯಮಧರ್ಮನ ಜೊತೆಯಲ್ಲಿ ಹುಟ್ಟಿದ

ಕಪ್ಪು ವರ್ಣದ ಮೈಯಳ = ಯಮುನೆಯ

ಅಪ್ಪನ = ಸೂರ್ಯನ

ಮಿತ್ರನ = ಕಮಲದ

ಮಗನೆಂಬ ಬೊಮ್ಮನ = ಕಮಲೋದ್ಭವನಾದ ಬ್ರಹ್ಮನ

ಬೊಪ್ಪನ = ತಂದೆಯಾದ ವಿಷ್ಣುವನ್ನು

೩. ಬಿಡುಗಣ್ಣ ಬಾಲೆ = ಅನಿಮಿಷಳಾದ ಊರ್ವಶಿ

ತನ್ನೊಡೆಯನ = ದೇವೇಂದ್ರನ

ನುಡಿಗೇಳಿ... ಕೊಂಡು = ಉರ್ವಶಿ ಕಾಮಾತುರದಿಂದ ಅರ್ಜುನನನ್ನು ಎಷ್ಟೇ ಬೇಡಿಕೊಂಡರೂ ನೀನು ನನ್ನ ತಾಯಿಗೆ ಸಮಾನ ಎಂದು ಅರ್ಜುನ ಒಪ್ಪದಿದ್ದುದರಿಂದ ಕೋಪಗೊಂಡ ಉರ್ವಶಿ'ನೀನು ಹೆಣ್ಣಿಗನಾಗು' ಎಂದು ಶಾಪ ಕೊಡುತ್ತಾಳೆ. ಆ ಕಥಾವೃತ್ತಾಂತ ಇಲ್ಲಿ ಪ್ರಸ್ತುತ.

ನುಡಿದ ದಿನವು ದಾಟಲು = ಅಜ್ಞಾತವಾಸದವಧಿ ಮುಗಿಯಲು

ಪಡೆಯನೆಲ್ಲವ... ಧೀರನ = ಉತ್ತರಗೋಗ್ರಹಣಕ್ಕಾಗಿ ಬಂದಿದ್ದ ದುರ್ಯೋಧನನ ಕಡೆಯ ಸೈನ್ಯವನ್ನೆಲ್ಲ ಧ್ವಂಸ ಮಾಡಿ, ಅವರು ಹಿಡಿದಿದ್ದ ಗೋವುಗಳನ್ನು ವಿರಾಟನಗರಕ್ಕೆ ಹೊಡೆತಂದ

ಅರ್ಜುನನ
ಒಡೆಯನ = ಸ್ವಾಮಿಯಾದ ಕೃಷ್ಣನನ್ನು

೪. ಸುರರ... ಪೆಸರವನ = ಆನಕದುಂದುಭಿ ಎಂಬ ಹೆಸರುಳ್ಳ ವಸುದೇವನ
ಬಸುರಲಿ... ಉರಗನ = ಹೊಟ್ಟೆಯಲಿ ಹುಟ್ಟಿದ ಬಲರಾಮನ
ಉರಗ = ಶೇಷಾವತಾರಿಯಾದ ಬಲರಾಮ
ಅತ್ತೆಯ ಮಗನ = ಕುಂತಿಯ ಮಗನಾದ ಧರ್ಮರಾಯನ
ಹಿರಿಯ ತಮ್ಮನ = ಭೀಮನ
ಸುತ್ತಿ... ಧೀರನ = ಅರಣ್ಯದಲ್ಲಿ ಭೀಮನ ಮೈಗೆ ಸುತ್ತಿಕೊಂಡರೂ ಅವನನ್ನು ನುಂಗದೆ, ಅವನ ತಂದೆಯಾದ ವಾಯುವನ್ನು ನುಂಗಿದ (ಸರ್ಪಗಳಿಗೆ ಧೂಳುವಾಯುವೇ ಆಹಾರ ಎಂಬ ಪ್ರತೀತಿ) ಸರ್ಪವನ್ನು
ಧುರದೊಳು... ಕೀಲಿಸಿದಾತನ = ರಣರಂಗದಲ್ಲಿ ತನ್ನ ಧ್ವಜದ ಲಾಂಛನವಾಗಿ ಸರ್ಪವನ್ನು ಬಳಸಿಕೊಂಡಿರುವ ದುರ್ಯೋಧನನ
ಕುವರರೆಲ್ಲರನು ಕೊಂದನ = ಮಕ್ಕಳನ್ನು ಕೊಂದ ಅಭಿಮನ್ಯುವಿನ
ವರಮಾತೆ... ಧೀರನ = ತಾಯಿಯಾದ ಸುಭದ್ರೆಯ ಜೊತೆಯಲ್ಲಿ ಹುಟ್ಟಿದ ಕೃಷ್ಣನನ್ನು

೫. ಮೂರು... ನಾರಿಯ = ತ್ರಿಪಥಗಾಮಿನಿಯಾದ ಗಂಗೆಯ
ಗಂಡನ = ಸಾಗರನ
ವೈರಿಯ = ಲಕ್ಷ್ಮಣನ
ಹಿರಿಯಣ್ಣನ = ರಾಮನ
ಮೂರೊಂದು... ಪೊಕ್ಕನ = ನಾಲ್ಕುವೇದ (ಮೂರು+ಒಂದು) ಗಳನ್ನು ಕದ್ದು ಸಾಗರ ಮುಳುಗಿದ ಸೋಮಕನೆಂಬ ರಾಕ್ಷಸನ
ಬೇರೊಂದು... ಇತ್ತನ = ಮತ್ಸ್ಯಾವತಾರವನ್ನೆತ್ತಿ ರಾಕ್ಷಸನನ್ನು ಕೊಂದು ವೇದಗಳನ್ನು ಬ್ರಹ್ಮಜ್ಞಾನಿಗಳಿಗೆ ಕೊಟ್ಟ ಶ್ರೀಕೃಷ್ಣನನ್ನು

* * * *



## ೨೭೨
## ಯದುಕುಲ ಕಾಂಬೋದಿ – ತ್ರಿಪುಡೆ

**ಏನೆ ಮನವಿತ್ತೆ ಲಲಿತಾಂಗಿ ಅಸ**
**ಮಾನ ಗೋವಳ ಕುಲವಿಲ್ಲದವನೊಳು ॥ಪ॥**

**ಮಗಗೆ ಮೈದುನನಾದ ಮಗಳಿಗೆ ಪತಿಯಾದ**
**ಮಗಳಿಗಳಿಯನಾದ ಅಳಿಯಗಳಿಯನಾದ ॥೧॥**

**ಮಗಳ ಮಗಗೆ ಮೈದುನನಾಗಿ ಮಾವನ**
**ಜಗವರಿಯಲು ಕೊಂದ ಕುಲಗೇಡಿ ಗೋವಳ ॥೨॥**

**ಅತ್ತೆಗೆ ವಲ್ಲಭನಾದ ಭೃತ್ಯರಿಗಾಳಾದ**
**ಚಿತ್ತ ಒಲಿದು ಚೆನ್ನ ಆದಿಕೇಶವನೊಳು ॥೩॥**

ಭಾವ– ಪೌರಾಣಿಕ ವಾವೆ ವರಸೆಯ ಆಧಾರದ ಮೇಲೆ ಶ್ರೀಹರಿಯ ಲೀಲೆಗಳನ್ನು ಹೇಳುವ ನಿಂದಾಸ್ತುತಿಯ ಮುಂಡಿಗೆ ಇದು. "ಯಾವ ಗ್ರಾಸ್ತ (<ಗೃಹಸ್ಥ), ಸಾಬಸ್ತ (<ಸಭ್ಯಸ್ಥ) ಎಂದು ನಂಬಿ ಇದ್ದೂ ಇದ್ದೂ ದನಕಾಯುವವನನ್ನು ಒಲಿದು ಮದುವೆಯಾದೆ?" ಎಂದು ಲಕ್ಷ್ಮಿಯನ್ನು ಕೇಳುವ ನೆಪದಲ್ಲಿ ಲಕ್ಷ್ಮೀಪತಿಯ ಮೂಲಚೂಲವನ್ನೆಲ್ಲ ಸೋಸಿ (<ಶೋಧಿಸಿ) ಮುಂದಿಟ್ಟಿರುವ ಮೋಡಿಗೆ ಲಕ್ಷ್ಮಿ ತಬ್ಬಿಬ್ಬಾದಳೋ ಬಿಟ್ಟಳೋ, ಓದುಗರಂತೂ ತಬ್ಬಿಬ್ಬಾಗಿ ಬೆಬ್ಬಳಿಸಿ ಕಣ್‌ಕಣ್ ಬಿಡುವುದು, ತಲೆ ಕೆರೆದುಕೊಳ್ಳುವುದು ತಪ್ಪುವುದಿಲ್ಲ. ಏಕೆಂದರೆ ಈ ಸಿಕ್ಕುಸಿಕ್ಕಾದ ವಾವೆವರಸೆಯ ಸೆಲೆ (ಜಲದಕಣ್ಣು) ಕಾಣದೆ, ನೆಲೆ ಕಾಣುವುದು ಸಾಧ್ಯವಿಲ್ಲ. ಕನಕನನ್ನು ಕೆಣಕಬೇಡ, ಕೆಣಕಿ ತಿಣುಕಬೇಡ– ಎಂಬ ಗಾದೆ ಮೂಡಲು ಪಂಡಿತರ ಗಂಟಲ ಗಾಳವಾದ ಇಂಥ ಮುಂಡಿಗೆಗಳ ಗಾರುಡಿಗತನವೇ ಮೂಲವೆಂದು ತೋರುತ್ತದೆ.

ಅರ್ಥ– ಗೋವಳ = ಗೋಪಾಲ, ಗೊಲ್ಲ
ಅಸಮಾನ = ಸರಿಸಮಾನನಲ್ಲದ

೧. ಮಗಗೆ ಮೈದುನಾದ = ನರಕಾಸುರ ಮತ್ತು ಸೀತೆ ಭೂದೇವಿಯ ಮಕ್ಕಳು ಭೂದೇವಿ ವಿಷ್ಣುವಿನ ಹೆಂಡತಿಯೂ ಹೌದು. ಆಗ ನರಕಾಸುರ ವಿಷ್ಣುವಿನ ಮಗನೂ ಆದಂತಾಯಿತು. ರಾಮಾವತಾರದಲ್ಲಿ ಸೀತೆಯನ್ನು ಮದುವೆಯಾದ್ದರಿಂದ ನರಕಾಸುರನಿಗೆ ಮೈದುನ(ಭಾವ)ನಾದಂತಾಯಿತು.

ಮಗಳಿಗೆ ಪತಿಯಾದ = ಭೂದೇವಿಯ ಮಗಳಾದ ಸೀತೆ, ವಿಷ್ಣುವಿಗೂ ಮಗಳಾದಂತಾಯ್ತು. ರಾಮಾವತಾರದಲ್ಲಿ ಸೀತೆಯನ್ನು ಮದುವೆಯಾದದ್ದರಿಂದ ಪತಿಯಾದಂತಾಯ್ತು.

ಮಗಳಿಗಳಿಯನಾದ = ವಿಷ್ಣುವಿನ ಪಾದದಿಂದ ಗಂಗೆ ಉದ್ಭವವಾದ್ದರಿಂದ ವಿಷ್ಣುವಿಗೆ ಮಗಳಾದಂತಾಯಿತು. ಅವಳು ಸಮುದ್ರರಾಜನ ಪತ್ನಿಯಾಗುತ್ತಾಳೆ. ಸಾಗರನ ಮಗಳು ಲಕ್ಷ್ಮಿಯನ್ನು ವಿಷ್ಣು ಕೈಹಿಡಿದದ್ದರಿಂದ ಸಾಗರನಿಗೆ ಅಳಿಯನಾದಂತಾಯ್ತು; ಆಗ ಮಗಳಾದ ಗಂಗೆಗೂ ಅಳಿಯನಾದಂತಾಯ್ತು.

ಅಳಿಯಗಳಿಯನಾದ = ವಿಷ್ಣುವಿನ ಮಗಳಾದ ಗಂಗೆಯನ್ನು ಸಾಗರ ಮದುವೆಯಾದ್ದರಿಂದ ಸಾಗರ ವಿಷ್ಣುವಿಗೆ ಅಳಿಯನಾದ. ಸಾಗರನ ಮಗಳು ಲಕ್ಷ್ಮಿಯನ್ನು ತಾನು ಮದುವೆಯಾದ್ದರಿಂದ ಅಳಿಯನಾದ ಸಾಗರನಿಗೆ ವಿಷ್ಣು ಅಳಿಯನಾದಂತಾಯ್ತು.

೨. ಮಗಳ ಮಗಗೆ ಮೈದುನನಾಗಿ = ಲಕ್ಷ್ಮಿ ಚಂದ್ರ ಇಬ್ಬರೂ ಸಾಗರನ ಮಕ್ಕಳು. ವಿಷ್ಣು ಪುತ್ರಿ ಸಾಗರನ ಹೆಂಡತಿಯಾದ್ದರಿಂದ ಚಂದ್ರ ಅವಳಿಗೂ ಮಗನಾದಂತಾಯಿತು. ಚಂದ್ರನ ಸೋದರಿ ಲಕ್ಷ್ಮಿಯನ್ನು ವಿಷ್ಣು ಮದುವೆಯಾದ್ದರಿಂದ ವಿಷ್ಣು ಚಂದ್ರನಿಗೆ ಮೈದುನ (ಭಾವ)ನಾದಂತಾಯಿತು. ಮಾವನ ಕೊಂದ ಕುಲಗೇಡಿ ಗೋವಳ = ಮಾವನಾದ ಕಂಸನನ್ನು ಕೊಂದ ಕುಲಕಂಟಕ ಕೃಷ್ಣ.



೩. ಅತ್ತೆಗೆ ವಲ್ಲಭನಾದ = ವಿಷ್ಣು ರಾಮಾವತಾರದಲ್ಲಿ ಸೀತೆಯನ್ನು ಮದುವೆಯಾದ್ದರಿಂದ ಸೀತೆಯ ತಾಯಿಯಾದ ಭೂದೇವಿ ಅತ್ತೆಯಾಗಬೇಕು. ಆದರೆ ಭುದೇವಿ ವಿಷ್ಣುವಿಗೆ ಹೆಂಡತಿಯೂ ಆದ್ದರಿಂದ ಅತ್ತೆಗೆ ಗಂಡನಾದಂತಾಯ್ತು.

ಭೃತ್ಯರಿಗಾಳಾದ = ಸೇವಕರಾದ ಪಾಂಡವರಿಗೆ ಬಂಡಿಯ ಬೋವನಾಗಿ ಕೆಲಸ ಮಾಡಿದ ಕೃಷ್ಣ.

* * * *

## ೨೭೩
## ಆನಂದ ಭೈರವಿ – ಅಟತಾಳ

**ಕರೆತಾರೆ ಕಾಮಿನಿ ಕಮಲಜಪಿತನ**
**ಹರಿಯ ತೋರೆ ಸಾಸಿರ ನಾಮವುಳ್ಳವನ ||ಪ||**

**ಮರೆದಿರಲಾರೆನೆನ್ನ ಪ್ರಾಣವಲ್ಲಭನ– ದಿನ**
**ಕರಕೋಟಿ ಕಿರಣ ಪ್ರಕಾಶವುಳ್ಳವನ ||ಅ||**

**ಬ್ರಹ್ಮ ಕಪಾಲವ ಧರೆಗಿಳುಹಿದನ**
**ತಮ್ಮ ಅಣ್ಣರನು ಕಡಿದಾಡಿಸಿದವನ**
**..............................................**
**.............................................. ||೧||**

**ನಗರಾಜವೈರಿಯ ಮಗನ ಬೀಗನ**
**ನಗವ ಬೆನ್ನಲಿ ಪೊತ್ತು ಜಗವನಾಳುವನ**
**ನಗವ ಕಿತ್ತವನ ಶಿರವ ಹರಿದವನ**
**ನಗಸುತಾ ಪತಿ ಕಾಯದೊಳು ಮೂಡಿಹನ ||೨||**

**ಪಾತಾಳಕಿಳಿದು ಭೂಮಿಯನೊಯ್ದ ಘೋರ ಕಿ**
**ರಾತನನಟ್ಟಿ ಸತಿಯ ಗೆದ್ದವನ**
**ಮಾತು ಕದ್ದವನ ಕುಕ್ಷಿಯ ಸೀಳಿದವನ**
**ಮಾತೆಗೆ ಮಾತು ಕೊಟ್ಟವನ ಮಾವನ ಬೇಗ ||೩||**

**ಕಣ್ಣಿಂದ ಕೇಳುವನ ಹಗೆಯನಾಳುವವನ**
**ಕಣ್ಣಿಂದ ತಿಳಿದು ಕಲ್ಪಿಸಿದವನ**



**ಕಣ್ಣನಿರಿದು ದಾನವ ಬೇಡಿದವನ**
**ಅಣ್ಣಗಳ ಕಂಗಳ ಕಾಲಲೊತ್ತಿದನ ||೪||**

**ಮಂದರಗಿರಿಯ ಕುಗುರದೆ ಎತ್ತಿದವನ**
**ಬೆಂದು ಹೋದಾವೆಂದು ಗೋವ ಕಾಯ್ದವನ**
**ಮಂದೆಗಾಯ್ದವನ ಮನ್ಮಥನ ಪೆತ್ತವನ**
**ತಂದೆ ಬಾಡದ ಬಾಡದಾದಿಕೇಶವನ ||೫||**

ಭಾವ– ಸತಿಪತಿ ಭಾವದ ಭಗವದನುಸಂಧಾನ ಈ ಕೀರ್ತನೆಯ ಆಶಯ. ಕಾದಲೆಯೊಬ್ಬಳು ತನ್ನ ಕಾದಲನನ್ನು ಕರೆದು ತಾ ಎಂದು ತನ್ನ ಸಖಿಗೆ ಬಿನ್ನವಿಸುವ ತಂತ್ರವನ್ನಿಲ್ಲಿ ಅಳವಡಿಸಿಕೊಳ್ಳಲಾಗಿದೆ.

ಅರ್ಥ– ಕಮಲಜಪಿತ = ಬ್ರಹ್ಮನ ತಂದೆ (ವಿಷ್ಣು)
ದಿನಕರ = ಸೂರ್ಯ

೧. ಬ್ರಹ್ಮ... ಗಿಳುಹಿದನ = ಬ್ರಹ್ಮನ ಐದನೆಯ ತಲೆಯನ್ನು ಶಿವ ಕತ್ತರಿಸಿದಾಗ ಬ್ರಹ್ಮಕಪಾಲ ಅವನ ಕೈಗಂಟಿಕೊಂಡಿತೆಂದೂ, ಆಗ ವಿಷ್ಣುವಿನ ಕೃಪೆಯಿಂದ ಕಾಶಿಯಲ್ಲಿ ಸ್ನಾನ ಮಾಡಿದಾಗ ಅದು ಕಳಚಿ ಬಿದ್ದಿತೆಂದೂ ಕಥೆ.
ತಮ್ಮ... ಆಡಿಸಿದನ = ಕೌರವ ಪಾಂಡವರಲ್ಲಿ ಯುದ್ಧದ ಬೆಂಕಿ ಹೊತ್ತಿಸಿದ ಕೃಷ್ಣನನ್ನು

೨. ನಗರಾಜ = ಮೈನಾಕ ಪರ್ವತ
ನಗರಾಜವೈರಿ = ಇಂದ್ರ
ಮಗನ = ಅರ್ಜುನನ
ಬೀಗನ = ಕೃಷ್ಣನನ್ನು
ನಗವ... ನಾಳುವನ = ಮಂದರ ಪರ್ವತ ಹೊತ್ತ ಕೂರ್ಮಾವತಾರಿ ಕೃಷ್ಣನನ್ನು
ನಗವ ಕಿತ್ತವನ = ಕೈಲಾಸ ಪರ್ವತವನ್ನು ಅಲುಗಾಡಿಸಿದ ರಾವಣನ

ಶಿರವ ಹರಿದವನ = ರಾಮನ
ನಗಸುತಾ = ಹಿಮವಂತನ ಮಗಳಾದ ಪಾರ್ವತಿ
ನಗಸುತಾಪತಿ = ಈಶ್ವರ
ಕಾಯದೊಳು = ಶರೀರದಲ್ಲಿ ಅರ್ಥಾತ್ ಹೃದಯದಲ್ಲಿ

೩. ಪಾತಾಳ... ಗೆದ್ದವನ = ಭೂಮಿಯನ್ನು ಕದ್ದು ಪಾತಾಳಕೆ ಕೊಂಡೊಯ್ದ ಹಿರಣ್ಯಾಕ್ಷನನ್ನು ಬೆನ್ನಟ್ಟಿ ಭೂಮಿಯನ್ನು ವಾಪಸ್ಸು ತಂದ ವರಾಹಾವತಾರಿ ವಿಷ್ಣು
ಮಾತು... ಸೀಳಿದವನ = ವೇದ ಕದ್ದ ಸೋಮಕನನ್ನು ಕೊಂದ ಮತ್ಸ್ಯಾವತಾರಿ ವಿಷ್ಣು
ಮಾತೆಗೆ ಮಾತು ಕೊಟ್ಟವನ = ತನ್ನ ತಾಯಿ ಸುಭದ್ರೆಗೆ ವತ್ಸಲೆಯನ್ನು ತರುವುದಾಗಿ ಮಾತು ಕೊಟ್ಟ ಅಭಿಮನ್ಯುವಿನ
ಮಾವನ = ಕೃಷ್ಣನನ್ನು

೪. ಕಣ್ಣಿಂದ ಕೇಳುವನ = ಹಾವಿನ (ಹಾವಿಗೆ ಕಿವಿಯಿಲ್ಲವೆಂದೂ ಕಣ್ಣಿಂದಲೇ ಕೇಳುತ್ತದೆಂದೂ ನಂಬಿಕೆ)
ಹಗೆಯ = ಗರುಡನ
ಕಣ್ಣಿಂದ... ಕಲ್ಪಿಸಿದವನ = ಬಾಹ್ಯ ಚಕ್ಷುಗಳಿಂದ ಕಾಣಲಾರದವನ ಅಂದರೆ ಒಳಗಣ್ಣಿಗೆ ಮಾತ್ರ ಕಾಣುವ ವಿಷ್ಣುವನ್ನು
ಕಣ್ಣನಿರಿದು... ಬೇಡಿದನ = ಬಲಿಯಿಂದ ದಾನ ಬೇಡುವಾಗ ಬಲಿಯ ಗುರುವಾದ ಶುಕ್ರಾಚಾರ್ಯನ ಒಂದು ಕಣ್ಣನ್ನು ಇರಿದನೆಂಬ ಕಥೆ.
ಅಣ್ಣಗಳ... ಒತ್ತಿದನ = ಭೃಗು ಮುನಿ ತನಗೆ ಗೌರವ ತೋರಿಸಲಿಲ್ಲವೆಂದು ವಿಷ್ಣುವನ್ನು ಕಾಲಲ್ಲಿ ಒದ್ದಾಗ ಕೋಪಿಸಿಕೊಳ್ಳದೆ ನೋವಾಯಿತೆ ಎಂದು ಕಾಲೊತ್ತುವ ನೆಪದಲ್ಲಿ ಅವನ ಅಂಗಾಲಲ್ಲಿದ್ದ ಕಣ್ಣನ್ನು ಕೋಪಕ್ಕೆ ಆ ಕಣ್ಣೇ ಕಾರಣವೆಂದು ನಾಶಪಡಿಸಿದ ಎಂಬ ಕಥೆ

೫. ಕುಗುರದೆ = ತೂಕಡಿಸಿದೆ, ಮುದುಡಿಕೊಳ್ಳದೆ



ಗೋವ ಕಾಯ್ದವನ = ಗೋವುಗಳನ್ನು ರಕ್ಷಿಸಿದವನ (ಒಮ್ಮೆ ಗೋವರ್ಧನ ಪರ್ವತಕ್ಕೆ ಬೆಂಕಿ ಬಿದ್ದಾಗ ದನಗಳನ್ನು ಕೃಷ್ಣ ಕಾಪಾಡಿದ ಎಂಬ ಕಥೆ)
ಮಂದೆಗಾಯ್ದವನ = ದನಗಳ ಮಂದೆಯನ್ನು ಮೇಯಿಸಿದವನ
ಬಾಡದ = ಬಾಡಿ ಹೋಗದ, ಅಕ್ಷಯ ಸ್ವರೂಪನಾದ

* * * *

## ೨೬೪
## ಭೈರವಿ – ತ್ರಿಪುಡೆ

**ಭವ ಭಯ ವಿನಾಶ ಭೋ ಭಕ್ತವಿಲಾಸ ಭೋ ಪಾ**
**ಪ ವಿನಾಶಭೋ ಬಾಡದ ರಂಗೇಶ ಭೋ ॥ಪ॥**

**ಹರಿಯ ಸುತನಿಗೆ ಅಭಯವನಿತ್ತೆ**
**ಹರಿಯ ಮಗನಾ ಕೊಂದೆ**
**ಹರಿಯೆನಲು ಹರಿರೂಪ ತಾಳಿದೆ**
**ಹರಿಯೊಳಡಗಿದೆ ಮತ್ತೆ**
**ಹರಿಯನಗ್ರಜ ಕೋಟಿ ತೇಜನ**
**ಹರಿಯ ವದನನೆಂಬ ॥೧॥**

**ಶಿವನ ಮಗಳೊಡಗೂಡಿ ಮತ್ತೆ**
**ಶಿವಮಗಳನು ಮಾವನಿಗಿತ್ತೆ**
**ಶಿವನ ಉಪಟಳಕಳುಕಿ ಗೋಕುಲ**
**ಶಿವನ ಕರದಲಿ ಪೊತ್ತೆ**
**ಶಿವನ ಧನುವನು ಖಂಡಿಸಿ ಮತ್ತೆ**
**ಶಿವನ ತಲೆಯೇರಿ ನಿಂದೆ**
**ಶಿವನ ಭೋಜನವಾಹನ ಸುತನಿಗೆ**
**ಶಿವನ ಪ್ರತಿಪಾಲನೆಂಬ ॥೨॥**

**ಕಮಲವನು ಈರಡಿಯ ಮಾಡಿದೆ**
**ಕಮಲ ಮೊರೆಯಿಡಲಂದು**
**ಕಮಲದಲಿ ಬ್ರಹ್ಮಾಂಡ ತೋರಿದೆ**
**ಕಮಲಧರ ನೀನೆಂದು**
**ಕಮಲವನು ಕದ್ದೊಯ್ದ ಕಳ್ಳನ ಸದೆದು**



**ಕಮಲವ ತಂದೆ**
**ಕಮಲಮುಖಿಯಳ ಕಾಯ್ದ ಕಾಗಿನೆಲೆ**
**ವಿಮಲ ಆದಿಕೇಶನೆಂಬ ॥೩॥**

ಭಾವ– ಒಂದೇ ಶಬ್ದದ ನಾನಾರ್ಥಗಳಲ್ಲಿ ಹರಿ ಮಹಿಮೆಯನ್ನು ಸಾರುವ ಕೀರ್ತನೆ ಇದು.

ಅರ್ಥ– ೧. ಹರಿಯ ಸುತನಿಗೆ ಅಭಯವಿತ್ತೆ = ಇಂದ್ರಪುತ್ರ ಅರ್ಜುನನಿಗೆ ಅಥವಾ ಸೂರ್ಯಪುತ್ರ ಸುಗ್ರೀವನಿಗೆ ಅಭಯ ನೀಡಿದೆ (ಹರಿ = ಇಂದ್ರ; ಸೂರ್ಯ)

ಹರಿಯ ಮಗನಾ ಕೊಂದೆ = ಸೂರ್ಯಪುತ್ರ ಕರ್ಣನನ್ನು ಅಥವಾ ಇಂದ್ರ ಪುತ್ರ ವಾಲಿಯನ್ನು ಕೊಂದೆ.

ಹರಿಯೆನಲು = ಪ್ರಹ್ಲಾದ ಹರಿಸ್ಮರಣೆ ಮಾಡಲು

ಹರಿ ರೂಪ ತಾಳಿದೆ = (ನರ) ಸಿಂಹನ ಅವತಾರ ತಾಳಿದೆ.

ಹರಿಯೊಳಡಗಿದೆ = ಸೂರ್ಯನಲ್ಲಿ ಅಡಗಿ ಸೂರ್ಯನಾರಾಯಣನಾದೆ

ಹರಿಯನಗ್ರಜ = ವಾಮನನ ಅಥವಾ ಉಪೇಂದ್ರನ ಅಣ್ಣ (ಸೂರ್ಯ)

ಹರಿಯ ವದನ = ಹಯ ವದನ (ಹರಿ = ಅಶ್ವ)

೨. ಶಿವನ ಮಗಳೊಡಗೂಡಿ = ಸಾಗರನ ಮಗಳು ಲಕ್ಷ್ಮಿಯನ್ನು ಕೈಹಿಡಿದು (ಶಿವ = ಸಮುದ್ರ)

ಶಿವ ಮಗಳನು ಮಾವನಿಗಿತ್ತೆ = ಗಂಗೆಯನ್ನು ಮಾವನಾದ ಸಾಗರನಿಗೆ ಕೊಟ್ಟೆ (ವಾಮನಾವತಾರದಲ್ಲಿ ಅವನ ಒಂದು ಪಾದ ತಾಕಿ ಗಂಗೆ ಕೆಳಗಿಳಿದು ಬಂದಳು ಎಂಬ ಕಥೆ) ಶಿವ = ನೀರು, ಗಂಗೆ

ಶಿವನ ಉಪಟಳಕಳುಕಿ = ದೇವೇಂದ್ರ ಬಾಧೆಗೆ ಅಳುಕಿ (ಶಿವ = ಇಂದ್ರ)

ಗೋಕುಲ ಶಿವನ = ಗೋವರ್ಧನ ಗಿರಿಯನ್ನು (ಶಿವ = ಪರ್ವತ)

ಶಿವನ ಕರದಲಿ ಪೊತ್ತೆ = ಗೋವರ್ಧನಗಿರಿಯನ್ನು ಕೈಯಲ್ಲಿ ಎತ್ತಿ ಹಿಡಿದೆ.

ಶಿವನ ಧನುವನು ಖಂಡಿಸಿ = ಶಿವನ ಬಿಲ್ಲನ್ನು ಮುರಿದು ಸೀತೆಯನ್ನು ಕೈಹಿಡಿದೆ.
ಶಿವನ ತಲೆಯೇರಿ ನಿಂದೆ = ಕಾಳಿಂಗನ ಹೆಡೆಯೇರಿ ನಿಂದೆ (ಶಿವ = ಸರ್ಪ)
ಶಿವನ ಭೋಜನ ವಾಹನ ಸುತನಿಗೆ = ಹಾವನ್ನು ಆಹಾರವಾಗಿ ಸೇವಿಸುವ ಗರುಡನ ಮೇಲೆ ಬರುವ ವಿಷ್ಣುವಿಗೆ ಮಗನಾದ ಬ್ರಹ್ಮ

೩. ಕಮಲವನು ಈರಡಿ ಮಾಡಿದೆ = ಭೂಮಿಯನ್ನು ಎರಡು ಹೆಜ್ಜೆಯಲ್ಲಿ ಅಳೆದೆ (ಕಮಲ = ಭೂಮಿ)
ಕಮಲ ಮೊರೆಯಿಡಲಂದು = ಕಮಲ ಮುಖಿ ಮೊರೆಯಿಡಲು
ಕಮಲದಲಿ ಬ್ರಹ್ಮಾಂಡ ತೋರಿದೆ = ಬಾಯಲ್ಲಿ ವಿಶ್ವವನ್ನು ತೋರಿಸಿದೆ (ಯಶೋದೆಗೆ)
ಕಮಲ = ಬಾಯಿ
ಕಮಲಧರ ನೀನೆಂದು = ಭೂದೇವಿಯ ಗಂಡ ನೀನೆಂದು
ಕಮಲವನು ಕದ್ದೊಯ್ದ ಕಳ್ಳನ ಸದೆದು
ಕಮಲವ ತಂದೆ = ಭೂಮಿಯನ್ನು ಕದ್ದ ಸೋಮಕನನ್ನು ಕೊಂದು ಭೂಮಿಯನ್ನು ತಂದೆ
ಕಮಲ ಮುಖಿಯುಳ ಕಾಯ್ದ = ದ್ರೌಪದಿಯನ್ನು ಕಾಯ್ದ

* * * *



## ೨೭೪
## ಪೂರ್ವಿ ಕಲ್ಯಾಣಿ – ಅಟ

ಮರೆಯದೆ ನೆನೆ ಚಿನ್ಮಯನ ಹರಿನಾರಾಯಣ ಅಚ್ಯುತನ ॥ಪ॥

ಮಗಳ ತಾನೆ ಮದುವೆಯಾದವನ
ಮಗಳ ಮಗನ ಮೊಮ್ಮಗನ
ಮಗಳ ಗಂಡನ ಮೇಲೆ ಮಲಗಿದ ಜಾಣನ
ಮಗಳ ಮಾವನಿಗೆ ಮೈದುನನ ॥೧॥

ತಂದೆಗೆ ತಾನೆ ತಂದೆಯಾದವನ
ತಂದೆಗೆ ತಾಯಿಯ ತಂದವನ
ತಂದೆಗೆ ಪೂರ್ವದಿ ತಾ ಪುಟ್ಟಿಹನ
ತಂದೆಗೆ ತಂದೆಗೆ ತಂದೆಯಹನ ॥೨॥

ರಾಮನ ಸಮರೋದ್ದಾಮನ ಸುಗುಣಾಭಿ
ರಾಮನ ಸೀತಾ ನಾಯಕನ
ರಾಮನ ಪೆತ್ತನ ಕಮಲದಳಾಕ್ಷನ
ಪ್ರೇಮದಿ ನೆಲೆಯಾದಿಕೇಶವನ ॥೩॥

* * * *

## ೨೭೬
## ಕಲ್ಯಾಣಿ – ಆದಿತಾಳ

**ಬಲ್ಲವರು ನೀವು ಪೇಳಿರಯ್ಯ ಭಾವದುಭಯಾರ್ಥವಿದು ॥ಪ॥**
**ಎಲ್ಲರಿಗೆ ಸುಸಮ್ಮತವಾದುದೀ ನಾಮ ॥ಅ॥**

**ಚಿತ್ತಾ ನಕ್ಷತ್ರದಲಿ ಪುಟ್ಟಿದಾತನ ಸೊಸೆ**
**ಮೃತ್ಯುವೆಂದೆಣಿಸಿ ಹೊರಡಿಸಿದಾತನ**
**ಉತ್ತರಾಯಣ ಮಾವನ ಮಗಳಿಗಳುಪಿದವನ**
**ಹೊತ್ತು ಹೊಗದು ಎನಗೆ ತೋರೆ ತರಳಾಕ್ಷಿ ॥೧॥**

**ಅತ್ತ ಅಣ್ಣನ ಅಗ್ರಜನ ಕೈಯಿಂದ**
**ಬತ್ತಲೆಗನ ಕರೆ ತರಿಸಿ ಒಲಿಸಿಕೊಂಡನ**
**ಉತ್ತ ಹೊಲದಿ, ವೈದರ್ಭನಹನ ತಂಗೆಯ ಕೊಂಡು**
**ಮುತ್ತೈದೆ ಮಾಡಿ ಮೊಮ್ಮಗನ ಪಡೆದವನ ॥೨॥**

**ಉರಿಯ ಆಸರ ಕಳೆಯಲು ನೆರವಿತ್ತಾತನ**
**ಧರೆಯೊಳಗೆ ಮೂವರನು ಗೆಲಿದು**
**ಭೂರಿ ವಾರ್ತೆಯ ಪಡೆದ ಮಹಾ ಮಹಿಮನ**
**ತೋರೆನಗೆ ಕಾಗಿನೆಲೆಯಾದಿಕೇಶವನ ॥೩॥**

ಭಾವ– ಶ್ರೀ ಕೃಷ್ಣನ ಮಹಿಮಾ ಲೀಲೆಗಳನ್ನು ಬೆಡಗು ನುಡಿಯಲ್ಲಿ ಕಂಡರಿಸಿರುವ ಮುಂಡಿಗೆಯಿದು

ಅರ್ಥ– ಭಾವದುಭಯಾರ್ಥ = ಬೆಡಗು, ಮುಂಡಿಗೆ. (ನುಡಿಕೆ, ಹಳೆಗನ್ನಡ ಎಂಬುವುಗಳನ್ನು ಇದೇ ಅರ್ಥದಲ್ಲಿ ಬಳಸಲಾಗಿದೆ)



೧. ಚಿತ್ತಾ.... ಹೊರಡಿಸಿದಾತನ = ಪಾಂಡುವಿನ ಸೊಸೆಯಾದ ದ್ರೌಪದಿಯನ್ನು ಕುಂತಿಯೊಡನೆ ಇರಿಸದೆ ವನವಾಸಕ್ಕೆ ಹೊರಡಿಸಿದಾತನ

ಉತ್ತರಾಯಣ... ಅಳುಪಿದವನ = ಸೂರ್ಯನ ಮಗಳಾದ ಕಾಳಿಂದಿಯನ್ನು ಬಯಸಿ ಕೈಹಿಡಿದಾತನ

೨. ಅತ್ತ... ಒಲಿಸಿಕೊಂಡನ = ಸುಭದ್ರೆಯನ್ನು ಅರ್ಜುನನಿಗೆ ಕೊಡಬೇಕೆಂಬ ಮನಸ್ಸು ಕೃಷ್ಣನಿಗಿದ್ದರೆ ದುರ್ಯೋಧನನಿಗೆ ಕೊಡಬೇಕೆಂಬ ಮನಸ್ಸು ಬಲರಾಮನಿಗಿತ್ತು. ಆದ್ದರಿಂದ ಕೃಷ್ಣ ಅರ್ಜುನನನ್ನು ಬತ್ತಲೆಗ (ಜೈನ ಸಂನ್ಯಾಸಿ)ನ ವೇಷ ಧರಿಸುವಂತೆ ಮಾಡಿ, ಬಲರಾಮನನ್ನೇ ಪುಸಲಾಯಿಸಿ ಕಳಿಸಿದಾಗ, ಆತನನ್ನು ಮನೆಗೆ ಕರೆತಂದು ಅವನ ಉಪಚಾರಕ್ಕೆ ತಂಗಿಯಾದ ಸುಭದ್ರೆಯನ್ನೇ ನೇಮಿಸುತ್ತಾನೆ. ಅಂದರೆ ಸುಭದ್ರೆ ಅರ್ಜುನನ ವಶವಾಗುವಂತೆ ಅಣ್ಣನಾದ ಬಲರಾಮನನ್ನು ನಯವಾಗಿ ಒಲಿಸಿಕೊಂಡ ಕೃಷ್ಣನ ಎಂದು ಭಾವ.

ಉತ್ತ ಹೊಲದಿ... ಪಡೆದವನ = ವಿದರ್ಭದ ಭೀಷ್ಮಕನ ಮಗಳು ರುಕ್ಮಿಣಿ. ಅವಳ ಅಣ್ಣನಾದ ರುಕ್ಮಿ ತನ್ನ ತಂಗಿಯನ್ನು ಕೃಷ್ಣನಿಗೆ ಕೊಡಲು ಇಚ್ಛಿಸದೆ ಶಿಶುಪಾಲನಿಗೆ ಕೊಡಬೇಕೆಂದಿದ್ದನು. ಕೃಷ್ಣ ಅವಳನ್ನು ಹಾರಿಸಿಕೊಂಡು ಬಂದಾಗ, ಬೆನ್ನಟ್ಟಿದ ರುಕ್ಮಿಯನ್ನು ನಿರಾಯುಧನನ್ನಾಗಿ ಮಾಡಿ ಕೊನೆಗೆ ಅವನ ಬಟ್ಟೆಯಿಂದಲೇ ಕೈಕಾಲುಗಳನ್ನು ಕಟ್ಟಿ, ಕತ್ತಿಯಿಂದ ತಲೆ ಬೋಳಿಸುತ್ತಾನೆ. ರುಕ್ಮಿಣಿಯ ಹಾಗೂ ಬಲರಾಮನ ಮಾತಿಗೆ ಬೆಲೆಗೊಟ್ಟು ಕೊಲ್ಲುವುದಿಲ್ಲ. ರುಕ್ಮಿಣಿಯ ಹೊಟ್ಟೆಯಿಂದ ಪ್ರದ್ಯುಮ್ನ ಹುಟ್ಟುತ್ತಾನೆ. ಅವನ ಮಗನಾಗಿ ಅನಿರುದ್ಧ ಹುಟ್ಟುತ್ತಾನೆ. ಆದ್ದರಿಂದ ಕೃಷ್ಣನ ಮೊಮ್ಮಗ ಅನಿರುದ್ಧ (ವೈದರ್ಭನಹನ = ವಿದರ್ಭದ ಭೀಷ್ಮಕನ ಮಗನಾದ ರುಕ್ಮಿಯ)

೩. ಉರಿಯ... ನೆರವಿತ್ತಾತನ = ಅಗ್ನಿ ತನ್ನ ಹಸಿವು ಬಾಯಾರಿಕೆಯನ್ನು ತೀರಿಸಿಕೊಳ್ಳಲು ಖಾಂಡವ ವನ ದಹನಕ್ಕೆ ಕೃಷ್ಣಾರ್ಜುನರ ನೆರವು ಕೇಳಿದ ಕಥಾಸಂದರ್ಭ.

ಧರೆಯೊಳಗೆ... ಗೆಲಿದು = ಭೀಷ್ಮ, ದ್ರೋಣ, ಕರ್ಣರನ್ನು ಗೆದ್ದು (ಅಂದರೆ ಶಿಖಂಡಿಯನ್ನು ಮುಂದು ಮಾಡಿಕೊಂಡು ಹೋಗಿ ಭೀಷ್ಮನನ್ನು, ಧರ್ಮರಾಯನ ಬಾಯಿಂದ "ಅಶ್ವತ್ಥಾಮೋಹತಃ' ಎಂದು ಹೇಳಿಸಿ ದ್ರೋಣನನ್ನು, ಹುಟ್ಟಿದ ಗುಟ್ಟನ್ನು ಹೇಳಿ ಕರ್ಣನನ್ನು ಗೆದ್ದು)

* * * *



## ೨೭೭
## ರಾಗ? – ತಾಳ?

ಎನ್ನ ಮಾನಿನಿ ರನ್ನೆ ತಾನ್ಯಾಕೆ ಬಾರನು
ನೀನೆ ವಿಚಾರಿಸು ಇಬ್ಬರ ನ್ಯಾಯವ ॥ಪ॥

ಮಗಳಿಗೆ ಮಗಳಾದ ಮಗಳಿಗಳಿಯನಾದ
ಮಗಳ ಗಂಡಗೆ ಭಾವ ಮಾವನಾದುದ ಕೇಳಿ
ನಾ ನಿನ್ನ ಪಾದಕೆ ಬಂದೆ ಶ್ರೀಹರಿಯೆ ॥೧॥

ವೈರಿಗೆ ವೈರಿಯಾದೆ ವೈರಿಗೆ ಸುತನಾದೆ
ವೈರಿ ಗಂಡಗೆ ತನ್ನ ಮಗಳ ಕೊಟ್ಟುದ ಕೇಳಿ
ನಾ ನಿನ್ನ ಪಾದಕ ಬಂದೆ ಶ್ರೀಹರಿಯೆ ॥೨॥

ಆನಿ ಬಿದ್ದರ ತನ್ನ ಗ್ಯಾನದಿಂದೇಳುವುದು
ಏನು ಮಾಡಿದರು ಅದರ ಭಾವ ಹಿಂಗದು
ಜ್ಞಾನವಂತ ಕಾಗಿನೆಲೆಯಾದಿಕೇಶರಾಯ ಮುನಿದು ಪೋದನೆ ॥೩॥

* * * *

## ೨೭೮
## ರಾಗ : ಕೇದಾರಗೌಳ

ವಾರಿಜ ಮುಖಿ ವಾರಿಜಾಕ್ಷಿ ವಾರಿಜ ಗಂಧಿ ವಾರಿಸನಳಿಯನನು
ಓರಂತೆ ನೀ ಪಓಗಿ ಕರೆತಾರೆನ್ನಯ ಪ್ರಾಣಾಧಾರ ಕೇಶವ ಮೂರ್ತಿಯ ॥ಪ॥

ನಗ ವೈರಿಯಣುಗನಣ್ಣನಯ್ಯನಾಪ್ತಗೆ ಮಿಗೆ ಹುಟ್ಟಿದನ ತಮ್ಮನ
ಸೊಗಸು ವಸ್ತ್ರಕೆ ಸೋತನ ಸುರಪುತ್ರನ ವಾಜಿಯನಿವ ವೈರಿಯ ಪಗೆಯ
ಜಗದೊಳಗೆ ಹಾಟದೊಳೇರಾಟದ ವನವ... ನವನಿಂದ ನಗೆತೋರಿ ನವು ನಿನಗೆ
ಅಗಣಿತಾಭರಣವೀವೆನು ಅಂಗಜಾಗ್ನಿಯ ತಗಹ ಬಿಡಿಸೆ ತರುಣಿ ॥೧॥

ಮಿಹಿರ ನಂದನನ ತಂದೆಯ ಪಗೆಯವನ ಮಾವನ ಹಿತದ ಮನೆವೆಸರ
ಮಹಿ ವನ ಕೃತಿಗೊಡೆಯನ ಬಂಟನನುಜನ ಸಹಿಸಿ ತಮ್ಮನ ಮಿತ್ರನ
ಕುಹಕದಿ ಶಾಪವಡೆದಳು ಪ್ರಸ್ತರವಾಗಿ ಗಗನ ಮಧ್ಯದೊಳಿರಲು
...ಸಿ ಶಾಪವ ದನುಜ... ಕ್ಷಿತಿಯೊಳು ವಿವರಿಸುವವನ ಕರೆತಾರೆ ॥೨॥

ಸುರಭೇದ ಪ್ರಥಮ ದಾಸಿಯ ಪೆಸರನ ವಾಜಿಯರಸನ ನಖವೈರಿಯ
ಮರೆಯ ಮಾರ್ಗದಿ ಗಮಿಸುವನಾಪ್ತನ ತಾಯ ಧರಿಸಿದಾತನ ಮಿತ್ರನ
ಪೊರೆಯ ದೆಸೆಯ ದಿಕ್ಕರಿಯ ಕೋಪದಿ ಸೀಳ್ದನರಸಿಯಣ್ಣನನೀಕ್ಷಣ
ಕರೆತಂದೆನಗೆ ಕೂಡಿಸು ಕಾಗಿನೆಲೆಯಾದಿಕೇಶವನ ॥೩॥

* * * *



## ೨೭೯
## ಸುರಟಿ – ಛಾಪು ತಾಳ

ಮಂಗಳಾರತಿಯ ಪಾಡಿರೆ ಮಾನಿನಿಯರು ॥ಪ॥

ಅಂಧಕನನುಜನ ಕಂದನ ತಂದೆಯ
ಕೊಂದನ ಶಿರದಲಿ ನಿಂದವನ
ಚಂದದಿ ಪಡೆದವನ ನಂದನೆಯಳ ನಲ
ವಿಂದ ಧರಿಸಿದ ಮುಕುಂದನಿಗೆ ॥೧॥

ರಥವನಡರಿ ಸುರ ಪಥದಲಿ ತಿರುಗುವನ
ಸುತನಿಗೆ ಶಾಪವನಿತ್ತವನ
ಖತಿಯನು ತಡೆದನ ಸತಿಯ ಜನನಿ ಸುತನ
ಸತಿಯರನಾಳಿದ ಚತುರನಿಗೆ ॥೨॥

ಹರಿಯ ಮಗನ ಶಿರ ತರಿದನ ತಂದೆಯ
ಹಿರಿಯ ಮಗನ ತಂದೆಯ ಪಿತನ
ಭರದಿ ಭುಜಿಸಿದವನ ಶಿರದಲಿ ನಟಿಸಿದ
ವರ ಕಾಗಿನೆಲೆಯಾದಿಕೇಶವಗೆ ॥೩॥

ಭಾವ– ವಾವೆವರಸೆಯ ಸುತ್ತು ಬಳಸಿನ ಹಾದಿಯಲ್ಲಿ ಸಾಗುವ ಇದರ ಆಶಯ ಸರ್ವೋತ್ತಮನ ಗುಣಗಾನವೇ.

ಅರ್ಥ– ೧. ಅಂಧಕನ = ಧೃತರಾಷ್ಟ್ರನ
ಅನುಜನ = ಪಾಂಡುವಿನ
ಕಂದನ = ಧರ್ಮರಾಯನ
ತಂದೆಯ = ಯಮನ

ಕೊಂದನ = ಈಶ್ವರನ
ಶಿರದಲಿ ನಿಂದವನ = ಚಂದ್ರನ
ಚಂದದಿ ಪಡೆದವನ = ಸಮುದ್ರ ರಾಜನ
ನಂದನೆಯುಳ = ಲಕ್ಷ್ಮಿಯನ್ನು
ನಲವಿಂದ... ಮುಕುಂದನಿಗೆ = ಸಂತೋಷದಿಂದ ಕೈಹಿಡಿದ ವಿಷ್ಣುವಿಗೆ

೨. ರಥವನಡರಿ... ತಿರುಗುವನ = ಸೂರ್ಯನ
ಸುತನಿಗೆ = ಕರ್ಣನಿಗೆ
ಶಾಪವನಿತ್ತವನ = ಪರಶುರಾಮನ
ಖತಿಯನು ತಡೆದನ = ಕೋಪವನ್ನು ತಡೆದ ಶ್ರೀರಾಮನ
ಸತಿಯ = ಸೀತೆಯ
ಜನನಿ = ಭೂದೇವಿಯ
ಸುತನ = ನರಕಾಸುರನ
ಸತಿಯ... ಚತುರನಿಗೆ = ೧೬ ಸಾವಿರ ಸ್ತ್ರೀಯರನ್ನು ಆಳಿದ ಕೃಷ್ಣನಿಗೆ

೩. ಹರಿಯ ಮಗನ = ಸೂರ್ಯನ ಮಗನಾದ ಕರ್ಣನ
ಶಿರತರಿದನ = ತಲೆ ಕತ್ತರಿಸಿದ ಅರ್ಜುನನ
ತಂದೆಯ = ಪಾಂಡುವಿನ
ಹಿರಿಯಮಗನ = ಧರ್ಮರಾಯನ
ತಮ್ಮನ = ಭೀಮನ
ಪಿತನ = ತಂದೆಯಾದ ವಾಯುವನ್ನು
ಭರದಿ ಭುಜಿಸಿದನ = ಸರ್ಪದ (ಕಾಳಿಂಗನ)
ಶಿರದಿ... ಕೇಶವಗೆ = ಹೆಡೆಯ ಮೇಲೆ ಕುಣಿದ ಕೃಷ್ಣನಿಗೆ

* * * *



# ಅನುಭಾವದ ನಿಗೂಢ ಮುಂಡಿಗೆಗಳು

**Blank**



## ೨೮೦
## ರಾಗ? – ತಾಳ?

**ಬಿತ್ತಾಕ ಹೋದಲ್ಲಿ ಬಿಡದೆ ಮಳೆ ಹೊಡಿದು**
**ಜತ್ತಿಗೆ ತೊಯ್ದು ಮಿಣಿ ತೊಯ್ದು** ॥ಪ॥

**ಜತ್ತಿಗೆ ತೊಯ್ದು ಮಿಣಿ ತೊಯ್ದು– ಉಡಿಯಾಗಿನ**
**ಬಿತ್ತಬೀಜ ತೊಯ್ದು ಮೊಳಕೆ ಹೊಡೆದೊ** ॥ಅ॥

**ಬಿತ್ತಲಿಲ್ಲ ಬೆಳೆಯಲಿಲ್ಲ ಮೊಳದುದ್ದ ತೆನೆ ಹಾಯ್ದೊ**
**ಮೆತ್ತಗೆ ಮೇಯಾಕ ಬಂದ ಗಿಣಿರಾಮ ನಿಬ್ಬೆರಗಾಗಿ ನಿಂತ** ॥೧॥

**ಕಾಗಿನೆಲೆ ಕನಕದಾಸ ಹಾಕಿದ ಮುಂಡಿಗೆಯ**
**ತೂಗಿ ಒಡಚದಿದ್ದರೆ ಗೆಣೆಯ ಆದಿಕೇಶವನಾಣೆ** ॥೨॥

ಭಾವ– ಸತತ ಸಾಧನೆಯ ಉಳುಮೆ ಮಾಡಿ ಬಿತ್ತನೆಗೆ ತೊಡಗಿದಾಗ ಸಿದ್ಧಿಯ ಮಳೆ ಸುರಿದು ಮಡಿಲಲ್ಲಿದ್ದ ಬಿತ್ತಬೀಜ ಮಣ್ಣು ಸೇರದಿದ್ದರೂ ಮೊಳಕೆಯಾಗಿ ಬೆಳೆದು ಫಲ ನೀಡಿದ್ದನ್ನು ಕಂಡು ಆಸ್ವಾದಿಸಲು ಬಂದ ಗಿಣಿರಾಮ (ಪರಮಾತ್ಮ) ನಿಬ್ಬೆರಗಾಗುವುದನ್ನು ಈ ಮುಂಡಿಗೆ ಸೂಚಿಸುತ್ತದೆ.

ಅರ್ಥ– ಜತ್ತಿಗೆ (<ಜೊತ್ತಿಗೆ) = ಎತ್ತುಗಳ ಕೊರಳನ್ನು ಬಳಸಿ ನೊಗಕ್ಕೆ ಕಟ್ಟುವ ಕಣ್ಣಿಹಗಡು
ಮಿಣಿ = ಚರ್ಮದ ಹಗ್ಗ
ಉಡಿ = ಸೊಂಟ, ಮಡಿಲು
ಬಿತ್ತ = ಬೀಜ

ಬಿತ್ತಬೀಜ = ಸಮಾನಾರ್ಥದ ಜೋಡುನುಡಿ ಎಂದೂ ಅರ್ಥೈಸಬಹುದು ಅಥವಾ ಬಿತ್ತುವ ಬೀಜ ಎಂದೂ ಅರ್ಥೈಸಬಹುದು.

ಒಡಚು = ಬಿಡಿಸು, ಹೆಕ್ಕು (ಕುರಿಯ ಬಂಡ = ತುಪ್ಪಟವನ್ನು ಬಿಲ್ಲಿನ ಹೆದೆಯಿಂದ ಎಳೆಎಳೆಯಾಗಿ ಬಿಡಿಸುವುದಕ್ಕೆ ಒಡಚು ಎಂದು ಹೇಳುತ್ತಾರೆ)

* * * *



## ೨೮೧
## ಸೌರಾಷ್ಟ್ರ – ಛಾಪುತಾಳ

ಮುತ್ತುಗಳಾ ಹಣ್ಣು ಕಾಯಾದ ಬಳಿಕಿನ್ನು
ಮತ್ತೊಂದು ಚೋದ್ಯ ಕೇಳಿ
ಚಿತ್ರ ಹೂವಿನ ಹವಳ ಕಾಯಾಗುವ
ಅರ್ಥವ ತಿಳಿದು ಹೇಳಿ ॥೧॥

ಸುಟ್ಟ ಬೀಜವ ಬಿತ್ತಿ ಬೆಳೆಯ ಬಾರದ ಕಾಯಿ
ಬೆಟ್ಟದಿ ಸಾರವನು
ತೊಟ್ಟು ಇಲ್ಲದ ಹಣ್ಣ ಮುಟ್ಟಿ ಕೊಯ್ವನು ಒಬ್ಬ
ಹುಟ್ಟು ಬಂಜೆಯ ಮಗನು ॥೨॥

ಒಣಗಿದ್ದ ಮರನೇರಿ ಹಣ್ಣು ಕಾಯನು ಮಗನು
ದಣಿಯದೆ ಮೆದ್ದಿಳಿದ
ರಣದಲ್ಲಿ ತಲೆ ಹೊಯ್ದ ರುಂಡವು ಬೀಳಲು
ಹೆಣನೆದ್ದು ಕುಣಿದಾಡಿತು ॥೩॥

ಕಣ್ಣಿಲ್ಲದಾತನು ಕಂಡು ಪಿಡಿದ ಮೃಗ
ಕೈಯಿಲ್ಲದಾತನೆಚ್ಚ
ಮಣ್ಣಲಿ ಹೊರಳುವ ಕಾಲಿಲ್ಲದಾತನು
ಗಣ್ಯವಿಲ್ಲದೆ ಪಿಡಿದ ॥೪॥

ಎಲ್ಲರು ಕೇಳಿ ಕನಕ ಹೇಳಿದ ಮಾತ
ಎಲ್ಲರೂ ಗ್ರಹಿಸಿಕೊಳ್ಳಿ
ಬೆಳ್ಳಿ ಕಣ್ಣಿನವಗೆ ತಿಳಿಯಲಾರದ ಮಾತು
ಬಲ್ಲಾದಿಕೇಶವನು ॥೫॥

ಭಾವ– ಜೀವನ್ಮುಕ್ತ ಜ್ಞಾನಿಯ ಇರುವಿಕೆಯನ್ನೂ, ಪುನರ್ಜನ್ಮರಾಹಿತ್ಯವನ್ನೂ ಪರಮಾತ್ಮನ ಅನುಗ್ರಹ ಹಾಗೂ ಲೀಲೆಯನ್ನೂ ಬೆಡಗಿನ ಭಾಷೆಯಲ್ಲಿ ಅಡಗಿಸಿಟ್ಟಿರುವ ಮುಂಡಿಗೆಯಿದು.

ಒಂದನೆಯ ಚರಣ ಜೀವನ್ಮುಕ್ತ (ವಿದೇಹಮುಕ್ತನಲ್ಲ) ಜ್ಞಾನಿ ಕಾಯವೆತ್ತಿರುವ ಕಾಯಿಯಾಗಿದ್ದರೂ ಪೂರ್ವಸ್ಥಿತಿಯ ಎಲ್ಲ ಬಂಧನವಾಸನೆಗಳಿಂದ ಮುಕ್ತವಾದ ನಿರ್ಲಿಪ್ತ ನಿರಂಜನ ಸ್ಥಿತಿಯಲ್ಲಿರುತ್ತಾನೆ ಎಂಬುದನ್ನು ಧ್ವನಿಸುತ್ತದೆ. 'ಚಿತ್ರದ ಹೂವಿನ ಹವಳ ಕಾಯಾಗುವ' ಎಂಬ ಮಾತು, ಸುಟ್ಟಹಗ್ಗ, ಹಗ್ಗದಾಕಾರದಲ್ಲಿದ್ದರೂ, ಕೇವಲ ಭಸ್ಮರೂಪಿ ಎಂಬ ಭಾವವನ್ನು ಸ್ಫುರಿಸಿ, ಮೇಲಿನ ಮಾತಿಗೆ ಪೂರಕವಾಗುತ್ತದೆ.

ಎರಡನೆಯ ಚರಣ ಜೀವಿಯ ಕರ್ಮಬಂಧಗಳೆಲ್ಲ ದಗ್ಧಗೊಂಡ ಮೇಲೆ ಪುನರ್ಜನ್ಮ ಇಲ್ಲ ಎಂಬುದನ್ನೂ, ಜ್ಞಾನಬೆಟ್ಟ (ಸಹಸ್ರಾರ)ದಲ್ಲಿ ಸಾರವನ್ನುಂಡ ಜೀವಿ ತೊಟ್ಟು (ಬಂಧನ) ಕಳಚಿಕೊಂಡ ಹಣ್ಣೆಂದೂ, ಹುಟ್ಟು ಬಂಜೆಯ ಮಗನಾದ ಪರಮಾತ್ಮನ ಅನುಗ್ರಹಕ್ಕೆ ಪಾತ್ರವಾದನೆಂಬುದನ್ನೂ ಧ್ವನಿಸುತ್ತದೆ.

ಮೂರನೆಯ ಚರಣ ಒಣಗಿ ಪುನರ್ಜನ್ಮವೆಂಬ ಫಲ ಬಿಡದ ಮರವನ್ನೇರಿ ಮನೋಸ್ಥಿರತೆಯ ಹಣ್ಣುಕಾಯನ್ನು ಮೆದ್ದಿಳಿಯುತ್ತ, ಜ್ಞಾನವೆಂಬ ಖಡ್ಗದಿಂದ ಸಂಚಿತ ಆಗಾಮಿ ಕರ್ಮಗಳ ರುಂಡವನ್ನು ಕತ್ತರಿಸಿದಾಗ ಪ್ರಾರಬ್ಧ ಕರ್ಮವೆದ್ದು ಕುಣಿದಾಡಿತು ಎಂಬ ಭಾವವಿದೆ.

ನಾಲ್ಕನೆಯ ಚರಣದಲ್ಲಿ ಪ್ರಾಕೃತ ಕರ್ಮೇಂದ್ರಿಯಗಳಿಲ್ಲದ ಅಪ್ರಾಕೃತ ಪರಮಾತ್ಮನು ಜೀವನನ್ನು ನಿರಾಯಾಸವಾಗಿ ಕಂಡು ಹಿಡಿದು, ಅವನ ಉದ್ಧಾರಕ್ಕಾಗಿ ಸಂಸಾರಕ್ಕೆ ನೂಕಿ, ಉನ್ನತಿಯತ್ತ ಕೊಂಡೊಯ್ದು ಆನಂದ ನೀಡುವುದು ಒಂದು ಲೀಲೆ ಎಂಬ ಭಾವವಿದೆ.

ಐದನೆಯ ಚರಣದಲ್ಲಿ ಈ ಬೆಡಗಿನ ನುಡಿ ಸುಜ್ಞಾನಿಗಳಿಗೆ ಅರ್ಥವಾಗುತ್ತದೆಯೇ ವಿನಾ ಅಜ್ಞಾನಿಗಳಿಗೆ ಅರ್ಥವಾಗುವುದಿಲ್ಲ ಎಂಬ ಭಾವವಿದೆ.



ಅರ್ಥ– ಹುಟ್ಟು ಬಂಜೆಯ ಮಗ = ತಂದೆತಾಯಿಗಳಿಲ್ಲದ ಅನಾದಿ ಪರವಸ್ತು,

ಬೆಳ್ಳಿಕಣ್ಣಿನವರು = ದಡ್ಡರು, ಅಜ್ಞಾನಿಗಳು ಉದಾಹರಣೆಗೆ ಬೆಳ್ಳಕ್ಕರಿಗ ಎಂಬುದನ್ನು ನೆನಪಿಸಿಕೊಳ್ಳಬಹುದು.

* * * *

## ೨೮೨
## ಹಿಂದೂಸ್ಥಾನಿ ಕಾಫಿ – ಮಟ್ಟತಾಳ

**ಹಲವು ಜೀವನವ ಒಂದೆಲೆ ನುಂಗಿತು– ಕಾಗಿ**
**ನೆಲೆಯಾದಿ ಕೇಶವನು ಬಲ್ಲನೀ ಬೆಡಗ ॥ಪ॥**

**ಹರಿಯ ನುಂಗಿತು ಪರ ಬ್ರಹ್ಮನ ನುಂಗಿತು**
**ಸುರರಿಗುಂಟಾದ ದೇವರ ನುಂಗಿತು**
**ಉರಿಗಣ್ಣ ಶಿವನ ಒಂದೆಲೆ ನುಂಗಿತೆಲೊ ದೇವ**
**ಹರಿಯ ಬಳಗವ ಒಂದೆಲೆ ನುಂಗಿತು ॥೧॥**

**ಎಂಟು ಗಜವನು ನುಂಗಿ ಕಂಟಕರಯಿವರ ನುಂಗಿ**
**ಉಂಟಾದ ಗಿರಿಯ ತಲೆಯ ನುಂಗಿತು**
**ಕಂಟವ ಪಿಡಿದ ಬ್ರಹ್ಮನ ನುಂಗಿತೆಲೊ ದೇವ**
**ಎಂಟಾರು ಲೋಕ ಒಂದೆಲೆ ನುಂಗಿತು ॥೨॥**

**ಗಿಡವ ನುಂಗಿತು ಗಿಡದೊಡತೊಟ್ಟನು ನುಂಗಿತು**
**ಗಿಡುವಿನ ತಾಯ ತಂದೆಯ ನುಂಗಿತು**
**ಬೆಡಗ ಬಲ್ಲರೆ ಪೇಳಿ ದೇವ ಕನಕದಾಸ ಎ**
**ನ್ನೊಡೆಯಾದಿಕೇಶವ ಬಲ್ಲನೀ ಬೆಡಗ ॥೩॥**

ಭಾವ– ಮೃತ್ಯು ಅಥವಾ ಪ್ರಳಯ ಎಲ್ಲವನ್ನೂ, ಎಲ್ಲರನ್ನೂ ನುಂಗಿ ನೊಣೆಯಿತು ಎಂಬ ಭಾವ ಈ ಮುಂಡಿಎಯಲ್ಲಿ ಕಂಡರಣೆಗೊಂಡಿದೆ.

ಅರ್ಥ– ಒಂದೆಲೆ = ಒಂದು+ಎಲೆ (ಎಲೆ ಎಂಬುದು ಆಶ್ಚರ್ಯಸೂಚಕವಾಗಿಯೂ ಬಳಕೆಯಾದಂತಿದೆ)



೧. ಸುರರಿಗುಂಟಾದ ದೇವರು = ಇಂದ್ರ
೨. ಎಂಟು ಗಜ = ಅಷ್ಟ ಮದಗಳು (ಅನ್ನ ಮದ, ಅರ್ಥ ಮದ, ಯೌವನ ಮದ, ಶೀಲ ಮದ, ರೂಪ ಮದ, ವಿದ್ಯಾ ಮದ, ತಪೋ ಮದ, ರಾಜ್ಯ ಮದ)
ಕಂಟಕರಯಿವರು = ಪಂಚೇಂದ್ರಿಯಗಳು
ಎಂಟಾರು = ಹದಿನಾಲ್ಕು
೩. ಗಿಡ = ಸೃಷ್ಟಿ
ಗಿಡದೊಡತೊಟ್ಟು = ಅಜ್ಞಾನ
ಗಿಡದ ತಾಯಿ ತಂದೆ = ಮಾಯೆ ಮತ್ತು ಕೇಶವ

* * * *

## ೨೮೩
## ಸೌರಾಷ್ಟ್ರ – ಮಟ್ಟೆ ತಾಳ

**ಬೀಜ ಮೂರನು ಬಿತ್ತಿ ಸಾಜ ಬೀಜವ ತೋರಿ**
**ರಾಜನಿಗೆ ಒಂದು ಪಾಲು ರಾಜ್ಯಕ್ಕೆ ಎರಡು ॥ಪ॥**

**ಬೀಜ ಕರಿದಕೆ ಕಾಲು ಬೀಜ ಬಿಳಿದಕೆ ಮೋರೆ**
**ಬೀಜ ಮತ್ತೊಂದಕ್ಕೆ ಹದಿನೆಂಟು ಕಣ್ಣು**
**ರಂಜಕದ ಬೇರಿಗೆ ರಾಗ ಮೂವತ್ತೆರಡು**
**ಕುಂಜರದ ಗಮನೆ ಕೋವಿದನ ಅರಸಿ ॥೧॥**

**ಐದು ಮಾತಿನ ಮೇಲೆ ವೈದಿಕರೆಂಬುವರು**
**ಐದು ದೀವಿಗೆ ಗಾಳಿ ಬೀಸಲೆಂದು**
**ಬೂದಿ ಹಾರಿದ ಮಣ್ಣ ಮೇಲೆ ಮುದ್ದೆಯ ಕಲಸಿ**
**ಆದ ಲೋಲರು ಪೇಳಿ ಈ ಸೊಬಗುಬೆಡಗ ॥೨॥**

**ಎರಡು ನಂದಿಯ ಹೂಡಿ ಗರುಡ ಹೊಲವನು ಉತ್ತು**
**ಹರಗಿ ಮುಚ್ಚಿದ ಕೋಲನರಿದೆನೆಂದು**
**ಹರಿಯ ದಾಸರ ಕನಕ ಹಾಕಿದೀ ಮುಂಡಿಗೆಯ**
**ಸಿರಿಯಾದಿಕೇಶವನಾಣೆ ಬಲ್ಲವರು ಪೇಳಿ ॥೩॥**

ಭಾವ– ಸತ್ತ್ವ, ರಜ, ತಮ ಎಂಬ ತ್ರಿಗುಣಗಳಿಂದ ಕೂಡಿದ ಈ ಪ್ರಪಂಚ–ಸಂಸಾರದ ವೈಚಿತ್ರ್ಯವನ್ನು ಗರ್ಭೀಕರಿಸಿಕೊಂಡಿದೆ ಈ ಮುಂಡಿಗೆ. ರಾಜನಾದ ಭಗವಂತನಿಗೆ ಸತ್ತ್ವಗುಣದ ಒಂದು ಪಾಲಾದರೆ, ರಾಜ್ಯದ ಪ್ರಜೆಗಳಿಗೆ ರಜೋಗುಣ ಹಾಗೂ ತಮೋಗುಣ ಎರಡು ಪಾಲು. ಅಂದರೆ ಪರಮಾತ್ಮನಲ್ಲಿ ಸತ್ತ್ವಗುಣ ಪ್ರಧಾನವಾದರೆ, ಜೀವಾತ್ಮರಲ್ಲಿ



ಸತ್ತ್ವಗುಣ ಗೌಣವಾಗಿ ರಜೋಗುಣ ಹಾಗೂ ತಮೋಗುಣ ಪ್ರಧಾನವಾಗಿರುತ್ತವೆ ಎಂಬ ಭಾವ ಇದ್ದಂತಿದೆ.

ಅರ್ಥ– ೧. ಕರಿಯ ಬೀಜ = ತಮೋಗುಣ
ಬಿಳಿಯ ಬೀಜ = ಸತ್ತ್ವಗುಣ
ಮತ್ತೊಂದು ಬೀಜ = ರಜೋಗುಣ
ಕರಿಯ ಬೀಜಕೆ ಕಾಲು = ತಮೋಗುಣ ಮೋಹಕಾರಕ
ಬಿಳಿಯ ಬೀಜಕೆ ಮೋರೆ = ಸತ್ತ್ವಗುಣ ಪ್ರಕಾಶಕ ಸ್ವಭಾವ
ಮತ್ತೊಂದು... ಕಣ್ಣು = ರಜೋಗುಣ ಪ್ರೇರಕ ಸ್ವಭಾವ
ಹದಿನೆಂಟು ಕಣ್ಣು = ಜ್ಞಾನೇಂದ್ರಿಯ ಪಂಚಕ+ಕರ್ಮೇಂದ್ರಿಯ ಪಂಚಕ+ಪ್ರಾಣಪಂಚಕ+ಮನಸ್ಸು, ಬುದ್ಧಿ, ಅಹಂಕಾರ
ರಂಜಕದ ಬೇರು = ನಾಲಗೆ?
ಕುಂಜರದ ಗಮನೆ = ಗಜಗಮನೆ, ಗಂಭೀರ ನಡಿಗೆಯ
ಕೋವಿದ = ವಿದ್ವಾಂಸ, ಜ್ಞಾನಿ

೨. ಐದು ಮಾತು = ಪಂಚ ಭೂತಗಳು?
ಐದು ದೀವಿಗೆ = ಜ್ಞಾನ ಪಂಚೇಂದ್ರಿಯಗಳು
ಬೂದಿ... ಮುದ್ದೆ ಕಲಸಿ = ದೇಹವೆಂಬ ಮಣ್ಣಗೊಂಬೆಗಳನ್ನು ಮಾಡಿ

೩. ಎರಡು ನಂದಿ = ಎರಡು ಎತ್ತುಗಳು (ಇಡಾಪಿಂಗಳ ನಾಡಿಗಳು)
ಗರುಡ = ಸುಷುಮ್ನಾ ನಾಡಿ
ಹರಗಿ ಮುಚ್ಚಿದ ಕೋಲು = ದೇಹದಲ್ಲೇ ಅಡಗಿರುವ ಪರಮಾತ್ಮ

* * * *

## ೨೮೪
## ಕಾಂಬೋದಿ – ಝಂಪೆತಾಳ

**ಓಹೊ ಎನ ಜೀವ ಮೈಯೆಲ್ಲ ನವಗಾಯ ॥ಪ॥**
**ಗಾಯ ಕಟ್ಟುವರಿಲ್ಲ ಗಾಳಿ ಹಾಕುವರಿಲ್ಲ ॥ಅ॥**

**ಮಾಡಿಲ್ಲ ಮಳೆಯಿಲ್ಲ ಮರದ ಮ್ಯಾಲೆ ನೀರ ಕಂಡೆ**
**ಕಾಡು ಸುಡುವುದ ಕಂಡೆ ಬೂದಿಯ ಕಾಣಲಿಲ್ಲ ॥೧॥**

**ಬಿತ್ತಲಿಲ್ಲ ಬೆಳೆಯಲಿಲ್ಲ ನೆಟ್ಟು ನೀರ ತೋರಲಿಲ್ಲ**
**ಹೊತ್ತುಕೊಂಡು ತಿರುಗಿದೆ ರೊಕ್ಕದಾ ಪ್ರಾಣಿಯನ್ನು ॥೨॥**

**ಅಡಿಕೆಯಷ್ಟು ಆಕಳಣ್ಣ ಹಿಡಿಕೆಯಷ್ಟು ಕೆಚ್ಚಲಣ್ಣ**
**ಒಡನೆ ಕರೆದಾರ ಕರಿತೈತಿ ರಂಜಣಿಗಿ ಹಾಲಣ್ಣ ॥೩॥**

**ಮೂರು ಮೊಳದಾ ಬಳ್ಳಿಗೆ ಆರು ಮೊಳದ ಕಾಯಣ್ಣ**
**ಆರು ಹತ್ತರ ಮೊಳದ, ಕಾಯಿ ಕೊಯ್ಯುವ ಕುಡುಗೋಲಣ್ಣ ॥೪॥**

**ಊರ ಮುಂದೆ ಹಿರಣ್ಯಕನ ಕೊರಳ ಕೊಯ್ವುದ ಕಂಡೆ**
**ಕೊರಳ ಕೊಯ್ವುದ ಕಂಡೆ ರಕುತವ ಕಾಣಲಿಲ್ಲ ॥೫॥**

**ಕಾಗಿನೆಲೆಯ ಕನಕದಾಸ ಹೇಳಿದಂಥ ಮುಂಡಿಗೆಯ**
**ಮಿಗೆ ಒಳ ಹೊರಗೆಲ್ಲ ಬಲ್ಲ ಬಾಡದಾದಿ ಕೇಶವರಾಯ ॥೬॥**

ಭಾವ– ಸ್ಥೂಲ, ಸೂಕ್ಷ್ಮ, ಕಾರಣ ದೇಹಗಳನ್ನೊಳಗೊಂಡ ಈ ಮನುಷ್ಯದೇಹದ ವೈಚಿತ್ರ್ಯಕ್ಕೆ ಕನಕದಾಸರು ಈ ಮುಂಡಿಗೆಯಲ್ಲಿ ಉಂಡಿಗೆ ಹಾಕಿದ್ದಾರೆ ಎನ್ನಿಸುತ್ತದೆ. ಜನಸಾಮಾನ್ಯರನ್ನು ತಮ್ಮ ತೋಳ್ತೆಕ್ಕೆಗೆತ್ತಿಕೊಳ್ಳುವುದಕ್ಕಾಗಿ



ಮೊದಲು ಭೌತಾರ್ಥ ಸ್ಫುರಿಸುವಂತೆ ಮಾಡಿ ತದನಂತರ ಅಭೌತ ಅಥವಾ ಅಧ್ಯಾತ್ಮದರ್ಥ ಸ್ಫುರಿಸುವಂತೆ ಮಾಡಿರುವುದು ಕನಕದಾಸರ ಪ್ರಯೋಗಶೀಲತೆಗೆ ಸಾಕ್ಷಿಯಾಗಿದೆ; ಜನಸಾಮಾನ್ಯರನ್ನು ಭೌತಸ್ತರದಿಂದ ಅಧ್ಯಾತ್ಮಸ್ತರದತ್ತ ಎತ್ತುವಂಥ, ಪ್ರಜ್ಞಾವಂತರನ್ನಾಗಿ ಮಾಡುವಂಥ ಜನಸಂಮುಖ ದೃಷ್ಟಿಗೆ ತೋರ್‌ಬೆರಳಾಗಿದೆ.

ಅರ್ಥ– ೧. ಮಾಡಿಲ್ಲ... ನೀರನು ಕಂಡೆ = **ಭೌತಾರ್ಥ:** ಎಳನೀರು.
**ಅಧ್ಯಾತ್ಮದ ಅರ್ಥ:** ಬೆವರು, ಕಣ್ಣೀರು, ಮೈನೀರು
ಕಾಡು... ಬೂದಿಯ ಕಾಣಲಿಲ್ಲಿ = **ಭೌತಾರ್ಥ:** ಕರ್ಪೂರ
**ಅಧ್ಯಾಥ್ಮದ ಅರ್ಥ:** ಜ್ಞಾನಾಗ್ನಿಯಿಂದ ಅರಿಷಡ್ವರ್ಗಗಳ, ಕರ್ಮಗಳ ದಹನ.

೨. ಬಿತ್ತಲಿಲ್ಲ... ಪ್ರಾಣಿಯನ್ನು = **ಭೌತಾರ್ಥ:** ತಲೆಗೂದಲು
**ಅಧ್ಯಾತ್ಮದ ಅರ್ಥ:** ಆತ್ಮ

೩. ಅಡಿಕೆ... ಹಾಲಣ್ಣ = **ಭೌತಾರ್ಥ:** ಜೇನು ಹುಳು, ಜೇಂಗೊಡ, ಜೇನುತುಪ್ಪ.
**ಅಧ್ಯಾತ್ಮದ ಅರ್ಥ:** ಗುರುಬೋಧೆ ಸೂಕ್ಷ್ಮವಾಗಿದ್ದರೂ, ಅದನ್ನು ಗ್ರಹಿಸುವ ಶಿಷ್ಯನ ಸಾಮರ್ಥ್ಯಕ್ಕನುಗುಣವಾಗಿ ಅದರ ಗಾತ್ರ ಹಿಗ್ಗುತ್ತದೆ; ಕರೆಯುವವರ ಆಪಾನುಶಕ್ತಿ ಹಾಲನ್ನು ನೀಡುತ್ತದೆ.
ರಂಜಣಿಗಿ = ಗುಡಾಣ (ಮಣ್ಣಿನ ದೊಡ್ಡ ಪಾತ್ರೆ)

೪. ಮೂರು ಮೊಳ... ಕುಡುಗೋಲಣ್ಣ = **ಭೌತಾರ್ಥ:** ಸೋರೆಕಾಯಿ, ಜವಳಿ (ರೋಟಿ)
**ಅಧ್ಯಾತ್ಮದ ಅರ್ಥ:** ಮೂರುಗುಣಗಳಿಂದ ಕೂಡಿದ ಈ ದೇಹವೆಂಬ ಬಳ್ಳಿಗೆ ಷಡ್ವೈರಿಗಳೆಂಬ ಆರು ಮೊಳದ ಕಾಯುಂಟು. ಅದನ್ನು ಕೊಯ್ಯುವ ಕುಡುಗೋಲು ಹದಿನಾರು ಮೊಳ (ಜ್ಞಾನೇಂದ್ರಿಯ ಪಂಚಕ, ಕರ್ಮೇಂದ್ರಿಯ ಪಂಚಕ ಪ್ರಾಣಪಂಚಕ ಹಾಗೂ ಮನಸ್ಸು)

೫. ಊರ ಮುಮದೆ... ರಕುತವ ಕಾಣಲಿಲ್ಲ = **ಭೌತಾರ್ಥ:** ಹೇನು, ಇರುವೆ ಮುಂತಾದ ಕ್ರಿಮಿಗಳು

**ಅಧ್ಯಾತ್ಮದ ಅರ್ಥ:** ಪ್ರತಿಯೊಬ್ಬನ ಸೂಕ್ಷ್ಮದೇಹಲ್ಲೂ ಅಭಿಮಾನಿ ದೇವತೆಯಾದ ಹಿರಣ್ಯಗರ್ಭನಿಗೆ ಅಹಂಕಾರವೇ ಶಿರಸ್ಸಾಗಿದೆ. ಅದನ್ನು ವಿಚಾರ ಖಡ್ಗದಿಂದ ಕತ್ತರಿಸಿದುದನ್ನು ಕಂಡೆನಾದರೂ ರಕ್ತ ಕಾಣಲಿಲ್ಲ ಎಂಬ ಭಾವ.

೬. ಮಿಗೆ = ಅಧಿಕವಾಗಿ, ಚೆನ್ನಾಗಿ

* * * *



## ೨೮೫
## ಕಾಂಬೋದಿ – ಝಂಪೆ ತಾಳ

ಮೂವರೇರಿದ ಬಂಡಿ ಹೊರೆನೆನೆದು
ದೇವಕೀ ನಂದನನು ತಾನೊಬ್ಬ ಬಲ್ಲ ॥ಪ॥

ಆಡಿ ಪೊತ್ತವನೊಬ್ಬ ನೋಡಿ ತಿರುಗಿದನೊಬ್ಬ
ಓಡಾಡಿದನೊಬ್ಬ ಈ ಮೂವರು
ಆಡಿದವಗೆ ಕಿವಿಯಿಲ್ಲ ನೋಡಿದವನ ಮಗ ಪಾಪಿ
ಓಡಾಡಿದವನೊಬ್ಬ ಓಡನಯ್ಯ ॥೧॥

ಮಾಯಕಾರನು ಒಬ್ಬ ಕಾಯ ಬಡಲಿಗನೊಬ್ಬ
ಕಾಯಗಿರಿಪೊತ್ತನೊಬ್ಬ ಈ ಮೂವರು
ಮಾಯಕಾರಗ ರೂಪ ಕಾಯಬಡಲಿಗೆ ಚೆಲ್ವ
ಕಾಯಗಿರಿ ಪೊತ್ತವನು ಕಡುಧರ್ಮಿಯು ॥೨॥

ಹರಿಗೆ ಮಾವನು ಆದ ಹರಿಗಳಿಯ ತಾನಾದ
ಹರಿಯು ತನ್ನೊಳಗೆ ತಾ ಹರಿಯೊಳಗೆ ಇಪ್ಪ
ಹರಿಯ ರೂಪದ ತಾಳಿ ಇರುಳು ದೈತ್ಯನ ಕೊಂದ
ಸಿರಿಧರನು ಕಾಗಿನೆಲೆಯಾದಿಕೇಶವರಾಯ ॥೩॥

ಭಾವ– ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳಿಗೆ ಅಭಿಮಾನಿ ದೇವತೆಗಳಾದ ವಿಶ್ವ, ತೈಜಸ ಹಾಗೂ ಪ್ರಾಜ್ಞ ಈ ದೇಹದ ಬಂಡಿ ಏರಿ ಕುಳಿತಿದ್ದಾರೆ ಎಂಬುದು ಈ ಮುಂಡಿಗೆಯ ಮೂಲ ಧಾತು.

ಅರ್ಥ– ೧. ವಿಶ್ವನದು ನೇತ್ರಸ್ಥಾನವಾದುದರಿಂದ ಅವನು ನೋಡುತ್ತಾನೆ. ತೈಜಸನದು ಕಂಠಸ್ಥಾನವಾದುದರಿಂದ ಅವನು (ಮಾತು)

ಆಡುತ್ತಾನೆ. ಪ್ರಾಜ್ಞನದು ಹೃದಯ ಸ್ಥಾನವಾದುದರಿಂದ (ಮನಸು) ಓಡಾಡುತ್ತಾನೆ. ಆಡುವವನಿಗೆ ಕೇಳುವ ಕಿವಿಯಿಲ್ಲ. ನೋಡುವವನಿಗೆ ನಡೆಯುವ ಪಾದವಿಲ್ಲ. ಓಡಾಡುವವನು ಹರಿಗೋಲು ಇದ್ದ ಹಾಗೆ.

ಓಡ = ದೋಣಿ, ಹರಿಗೋಲು

೨. ಅಕಾರ ರೂಪವಾದ ಜಾಗ್ರದವಸ್ಥೆಯ ಸ್ಥೂಲಶರೀರಕ್ಕೆ 'ಮಾಯಕಾರ' ಬ್ರಹ್ಮ; ಅವನದು ರೂಪ. ಉಕಾರ ರೂಪವಾದ ಸ್ವಪ್ನಾವಸ್ಥೆಯ ಸೂಕ್ಷ್ಮ ಶರೀರಕ್ಕೆ 'ಕಾಯಬಡಲಿಗ' ಜೀವ; ಇವನು ಚೆಲುವ. ಮಕಾರ ರೂಪವಾದ ಸುಷುಪ್ತಾವಸ್ಥೆಯ ಕಾರಣ ಶರೀರಕ್ಕೆ 'ಕಾಯಗಿರಿವೊತ್ತವ' ಪ್ರಾಣ; ಇವನು ಕಡುಧರ್ಮಿ.

೩. ಹರಿಗೆ ಮಾವನು ಆದ = ಲಕ್ಷ್ಮಿ ಸಮುದ್ರ ರಾಜನಿಗೆ ಮಗಳಾದುದರಿಂದ ವಿಷ್ಣುವಿಗೆ ಮಾವನಾದ.

ಹರಿಗಳಿಯ ತಾನಾದ = ವಿಷ್ಣುವಿನ ಪಾದೋದ್ಭವೆ ಗಂಗೆ ಸಮುದ್ರ ರಾಜನನ್ನು ಕೂಡಿದ್ದರಿಂದ ಅವನು ವಿಷ್ಣುವಿಗೆ ಅಳಿಯನಾದ.

ಹರಿ = ಸೂರ್ಯ, ಸಿಂಹ

ಇರುಳು = ರಾತ್ರಿ

ದೈತ್ಯ = ರಾಕ್ಷಸ

* * * *



## ೨೮೬
## ಕಾಂಬೋದಿ – ಝಂಪೆ ತಾಳ

**ಸಹಜವಿದು ಈ ನುಡಿಯ ಸಟೆಯ ಮಾತಲ್ಲ ॥ಪ॥**
**ಮಹಿಯೊಳಗೆ ಪೇಳುವೆನು ವಿಹಿತವಾಕ್ಯಗಳ ॥ಅ॥**

**ಶ್ರುತಿ ಶಾಸ್ತ್ರ ಪುರಾಣಗಳ ಓದುವನೆ ಶೂದ್ರ**
**ಅತಿಥಿಗಾದರಿಸುವನೆ ಅತಿಲುಬ್ಧನು**
**ಪ್ರತಿನಿತ್ಯ ಸಂಧ್ಯಾನ ಮಾಡುವವನೇ ಪಾಪಿ**
**ಪತಿಯಾಜ್ಞೆಯಿಂದಿಹಳೆ ಪರಮ ಪಾತಕಿಯು ॥೧॥**

**ದಾನ ಧರ್ಮಂಗಳನು ಬಿಡುವನೇ ಧರ್ಮಾತ್ಮ**
**ಮಾನಾಭಿಮಾನವನು ಹಿಡಿವವನೆ ಯೋಗಿ**
**ಪ್ರಾಣಿಗಳ ಹಿಂಸೆಯನು ಮಾಡುವನೆ ಸುಜ್ಞಾನಿ**
**ದೀನ ಸಜ್ಜನರನ್ನು ಕೆಡಿಸುವನೆ ಸತ್ಪುರುಷ ॥೨॥**

**ಕೆರೆಕಟ್ಟೆ ಪೂದೋಟಗಳ ರಚಿಸುವನೆ ದ್ರೋಹಿ**
**ಗುರು ದೈವ ಹಿರಿಯರನು ಬೈಯುವನೆ ನಿಷ್ಠ**
**ಸಿರಿ ಕಾಗಿನೆಲೆಯಾದಿಕೇಶವನ ಚರಣವನು**
**ನಿರುತಲಿ ಸ್ಮರಿಸುವನೆ ಅವಿಚಾರ ಪುರುಷ ॥೩॥**

ಭಾವ– ಮೇಲಿನ ಸ್ತರದಲ್ಲಿ ನಿಷೇದಾರ್ಥವನ್ನು ಪ್ರತಿಪಾದಿಸುವ ಈ ಮುಂಡಿಗೆಗೆ ಒಳಗಿನ ಸ್ತರದಲ್ಲಿ ಬೇರೊಂದು ಅರ್ಥವನ್ನು ಆವಾಹಿಸಿರುವ ಸಾಧ್ಯತೆ ಇದೆ ಎನ್ನಿಸುತ್ತದೆ. ಏಕೆಂದರೆ ಕನಕದಾಸರು ಅಪ್ರತಿಮ ಪ್ರತಿಭಾವಂತರು ಬಹುಶ್ರುತರು; ಅಂತರ್‌ದೃಷ್ಟಿಯುಳ್ಳವರು

ಮೇಲಿನಸ್ತರದ ಅರ್ಥ– ಇದರ ಮೂರು ಚರಣಗಳ ಪ್ರತಿಯೊಂದು ಸಾಲೂ

ಪ್ರಶ್ನಾತ್ಮಕವಾಗಿದ್ದು, ಅರ್ಥ ನಿಷೇಧಾತ್ಮಕವಾಗಿರುವುದು ಮೇಲು ನೋಟಕ್ಕೆ ಕಂಡು ಬರುತ್ತದೆ.

ಒಳಗಿನ ಸ್ತರದ ಅರ್ಥ– (ಶ್ರೀ ಬುರ್ಲಿಬಿಂದು ಮಾಧವ ಅವರ ವ್ಯಾಖ್ಯಾನವನ್ನಿಲ್ಲಿ ಕೊಡಲಾಗಿದೆ– ಓದುಗರ ಅವಗಾಹನೆಗೆ)

೧. ಶುಚಃ ದ್ರವತೀತಿ ಶೂದ್ರ
ಶುಚಃ = ಶೋಕಮಯವಾದ ಸಂಸಾರದಿಂದ
ದ್ರುವತೀತಿ = ದೂರಹೋಗುವವ (ಛಾಂದೋಗ್ಯ ಉಪನಿಷತ್)
ಶ್ರುತಿಶಾಸ್ತ್ರ ಪುರಾಣಗಳ ಅಧ್ಯಯನದಿಂದ ಪಾಪಗಳನ್ನು ತ್ಯಜಿಸಿ ದೂರವಾಗುವವ.

೨. ಅತಿಥಿ ಸತ್ಕಾರದಿಂದ ಧನ ವೆಚ್ಚವಾದರೂ ಪುಣ್ಯದಲ್ಲಿ ಆಶೆಯುಳ್ಳವ.

೩. ಪಾಪಗಳು ನಾಶವಾಗಲಿ ಎಂಬ ಅನುಸಂಧಾನದಿಂದ ಸಂಧ್ಯಾದಿ ಕರ್ಮಗಳನ್ನು ಮಾಡುವ ಪಾಪಾನುಸಂಧಾನ ಉಳ್ಳವ.

೪. ಪಾಪಯತೀತಿ– ಪಾತಕಿ. ಪಾತಿವ್ರತ್ಯ ಪ್ರಭಾವದಿಂದ ಪಾತಕಿಗಳನ್ನು ಕೆಡವತಕ್ಕವಳು.

೫. ದಾನಧರ್ಮಗಳ ಫಲಾಪೇಕ್ಷೆ ಬಿಟ್ಟವನು ಧರ್ಮಾತ್ಮ.

೬. ಮಾನ = ಜ್ಞಾನ, ಅಭಿಮಾನ = ಶ್ರೇಯಸ್ಕರ ಬುದ್ಧಿ. ಇವುಗಳನ್ನು ಉಳ್ಳವನೇ ಯೋಗಿ.

೭. ಪರಮಾತ್ಮನ ಪೂಜಾರೂಪವಾಗಿ ಹಿಂಸೆ ಮಾಡತಕ್ಕವನು ಸುಜ್ಞಾನಿ (ಗೀತೆ)

೮. ಸಜ್ಜನರ ದೈನ್ಯವೃತ್ತಿ ಮಾಡುವವನೇ ಸತ್ಪುರುಷ

೯. ಕೆರೆ ಕಾಲುವೆ ಮೊದಲಾದವುಗಳನ್ನು ಕಟ್ಟಿಸಿ, ಅವುಗಳನ್ನು ಉಪಯೋಗಿಸುವವರ ಪುಣ್ಯವನ್ನು ಅವರಿಗೆ ತಿಳಿಯದಂತೆ ಹರಣ ಮಾಡುವವನಾದ್ದರಿಂದ ದ್ರೋಹಿ.

೧೦. ಗುರು ಹಿರಿಯರ ಶಾಸ್ತ್ರ ಅಸಮ್ಮತವಾದ ದೋಷಗಳನ್ನು ಬಯಲಿಗೆಳೆಯುವವ ಶಿಷ್ಯ.

೧೧. ಪರಮಾತ್ಮನಲ್ಲಿ ಸರ್ವಸಮರ್ಪಣ ಮಾಡಿ ಶಾಂತನಾದವ ಅ–ವಿಚಾರಿ; ಅಕಾರವಾಚ್ಯನಾದ ಪರಮಾತ್ಮನ ವಿಚಾರ ತಿಳಿದ ಪುರುಷ.

* * * *



## ೨೮೭
## ಸೌರಾಷ್ಟ್ರ – ಅಟತಾಳ

**ಒಂಬತ್ತು ಹೂವಿಗೆ ಒಂದೇ ನಾಳವು ಚಂದಮಾಮ ॥ಪ॥**
**ತುಂಬಿ ನಾಳತುದಿ ತುಂಬಿ ಭಾನು ಪ್ರಭೆ ಚಂದಮಾಮ ॥ಅ॥**

**ಕದರು ಗಾತರ ಕಂಬ ತೆಕ್ಕೆಗಾತರ ಹೂವು ಚಂದಮಾಮ**
**ಆನೆ ಗಾತರ ಕಾಯಿ ಒಂಟೆ ಗಾತರ ಹಣ್ಣು ಚಂದಮಾಮ ॥೧॥**

**ಕಾಲಿಲ್ಲದಾತನು ಹತ್ತಿದನಾ ಮರವನು ಚಂದಮಾಮ**
**ಕೈಯಿಲ್ಲದಾತನು ಕೊಯ್ದನಾ ಹಣ್ಣನು ಚಂದಮಾಮ ॥೨॥**

**ನೆತ್ತಿಲ್ಲದಾತನು ಹೊತ್ತನಾ ಹಣ್ಣ ಚಂದಮಾಮ**
**ತಳವಿಲ್ಲದಾ ಗೂಡೆಯಲಿಳಿಸಿದನಾ ಹಣ್ಣ ಚಂದಮಾಮ ॥೩॥**

**ಮಾರ್ಗ ತಪ್ಪಿ ಮಾರ್ಗ ಹಿಡಿದು ನಡೆದರು ಚಂದಮಾಮ**
**ಸದ್ದಿಲ್ಲದಾ ಸಂತೇಲಿಳಿಸಿದರಾ ಹಣ್ಣ ಚಂದಮಾಮ ॥೪॥**

**ರೊಕ್ಕವಿಲ್ಲದಾತ ಕೊಂಡನಾ ಹಣ್ಣ ಚಂದಮಾಮ**
**ಮೂಗಿಲ್ಲದಾತ ಮೂಸಿದನಾ ಹಣ್ಣ ಚಂದಮಾಮ ॥೫॥**

**ಕಣ್ಣಿಲ್ಲದಾತನು ಕೆಂಪಾನೆ ಹಣ್ಣೆಂದ ಚಂದಮಾಮ**
**ಅಂಗುಳಿಲ್ಲದಾತ ನುಂಗಿದನಾ ಹಣ್ಣ ಚಂದಮಾಮ ॥೬॥**

**ಬಾಯಿಲ್ಲದಾತ ತಿಂದು ಬಸಿರಲಿಂಬಿಟ್ಟ ಚಂದಮಾಮ**
**ಸುಲಭ ಪದವಿದು ನಳಿನಜಾಂಡದೊಳು ಚಂದಮಾಮ ॥೭॥**

**ಗುರುವಿನ ಮಹಿಮೆ ಗುರುವೆ ತಾ ಬಲ್ಲನು ಚಂದಮಾಮ**
**ಮೂಢನಾದವನೇನು ಬಲ್ಲನು ಈ ಮಾತ ಚಂದಮಾಮ ॥೮॥**

**ಕನಕನಾಡಿದ ಗುಟ್ಟು ಆದಿಕೇಶವ ಬಲ್ಲ ಚಂದಮಾಮ**
**ತಿಳಿದವರು ಪೇಳಿರೀ ಹಳೆಗನ್ನಡವ ಚಂದಮಾಮ ॥೯॥**

ಭಾವ– ಜೀವಾತ್ಮ ನವವಿಧ ಭಕ್ತಿಯ ಮುಖಾಂತರ ಪರಮಾತ್ಮನ ಅನುಗ್ರಹಕ್ಕೆ ಪಾತ್ರವಾಗಿ ಒಂದಾದುದು ಈ ಮುಂಡಿಗೆಯ ವಸ್ತು.

ಅರ್ಥ– ಒಂಬತ್ತು ಹೂವು = ನವವಿಧ ಭಕ್ತಿ
ಭಾನು = ಸೂರ್ಯ

೧. ಕದುರು = ರಾಟೆಯಲ್ಲಿ ನೂತ ನೂಲನ್ನು ಸುತ್ತುವ ದಬ್ಬಳದಾಕಾರದ ಕಬ್ಬಿಣದ ಕಡ್ಡಿ
ತೆಕ್ಕೆ ಗಾತ್ರ = ಎರಡು ತೋಳುಗಳಿಂದಲೂ ತಬ್ಬಿಕೊಳ್ಳುವಷ್ಟು ಗಾತ್ರ (ಭಕ್ತಿಯ ಶುಭ್ರತೆ, ತೀವ್ರತೆಯಿಂದಾಗಿ ಹೂವು ಕಾಯಿ ಹಣ್ಣು ಹಿಗ್ಗಿ ವಿಸ್ತಾರಗೊಂಡದ್ದನ್ನು ಸೂಚಿಸುತ್ತದೆ)

೨. ಮನೋಮಾರ್ಗದಿಂದ ಬೆಳೆದ ಆ ಭಕ್ತಿವೃಕ್ಷವನ್ನು ಹತ್ತಲು ಆತ್ಮನಿಗೆ ಕಾಲಿಲ್ಲ, ಕೊಯ್ಯಲು ಕೈಯಿಲ್ಲ.

೩. ನೆತ್ತಿಯಿಲ್ಲದ ಚಿತ್ತ ಅದನ್ನು ಹೊತ್ತುಕೊಂಡು ತಳವಿಲ್ಲದ ಊರ್ಧ್ವಮೂಲವಾದ ಬ್ರಹ್ಮಸ್ಥಾನದ ಗೂಡೆಯಲ್ಲಿಟ್ಟನು.
ಗೂಡೆ = ಬಿದಿರ ದೆಬ್ಬೆಯಿಂದ ಹೆಣೆದ ಹೆಡಗೆ

೪. ಬಾಹ್ಯ ಜಗತ್ತಿನ ಪ್ರವೃತ್ತಿ ಮಾರ್ಗವನ್ನು ಬಿಟ್ಟು, ಅಂತರಜಗತ್ತಿನ ದೈವೀಮಾರ್ಗವನ್ನು ಹಿಡಿದು ನಡೆದು ನಿಶ್ಶಬ್ದವಾದ ಸಂತೆ (ಪರಮಾತ್ಮ ಸಾನ್ನಿಧ್ಯ)ಯಲ್ಲಿ ಇಳಿಸಿದ.

೫. ಪ್ರಾಪಂಚಿಕ ನಾಣ್ಯವಿಲ್ಲದ ಪರಮಾತ್ಮ ಅದನ್ನು ಕೊಂಡನು. ಮೂಗಿಲ್ಲದಾತನು (ವಾಸನಾರಹಿತನಾದ ಪರಮಾತ್ಮ) ಅದನ್ನು ಮೂಸಿ ನೋಡಿದ.



೬. ಪ್ರಾಕೃತ ಕಣ್ಣಿಲ್ಲದಿದ್ದರೂ ಅಪ್ರಾಕೃತ ಕಣ್ಣಿಂದ ಅದನ್ನು ನೋಡಿ ಕೆಂಪಾದ ಪಕಾತಿ (ಪಕ್ವ+ಅತಿ) ಹಣ್ಣಿಂದ. ಪ್ರಾಕೃತ ಅಂಗುಳಿಲ್ಲದಿದ್ದರೂ ಅಪ್ರಾಕೃತ ಅಂಗುಳಿಂದ ಅದನ್ನು ನುಂಗಿದ. ಅಂಗಳು = ಕಿರುನಾಲಗೆಯ ಪ್ರದೇಶ, ತಾಲು.

೭. ಪ್ರಾಕೃತ ಬಾಯಿಲ್ಲದಿದ್ದರೂ ಅಪ್ರಾಕೃತ ಬಾಯಿಂದ ನುಂಗಿ ತನ್ನ ಹೊಟ್ಟೆಯಲ್ಲಿ ಇಂಬುಗೊಟ್ಟ.
ಇಂಬಿಟ್ಟ < (ಇಂಬು+ಇಟ್ಟ) = ಜಾಗ ಅಥವಾ ಆಶ್ರಯ ಕೊಟ್ಟ.
ನಳಿನಜಾಂಡ = ಬ್ರಹ್ಮಾಂಡ

೮. ಒಬ್ಬರ ಯೋಗ್ಯತೆಯನ್ನು ಅರ್ಥ ಮಾಡಿಕೊಳ್ಳಬೇಕಾದರೆ, ಆ ವ್ಯಕ್ತಿಯಲ್ಲೂ ಯೋಗ್ಯತೆ ಇರಬೇಕು. ಯೋಗ್ಯನ ಯೋಗ್ಯತೆಯನ್ನು ಅಯೋಗ್ಯ ಗುರುತಿಸಲಾರ.

೯. ಕನಕನ ಮಾತಿನ ರಹಸ್ಯವನ್ನು ಆದಿಕೇಶವ ಬಲ್ಲ
ಹಳಗನ್ನಡ = ಒಗಟು, ಮುಂಡಿಗೆ (ಹನ್ನೆರಡನೆಯ ಶ.ದ. ಸಿದ್ಧರಾಮನ ವಚನದಲ್ಲಿಯೇ ಒಗಟು ಎಂಬ ಅರ್ಥದಲ್ಲಿ 'ಕನ್ನಡ' ಬಳಕೆಯಾಗಿದೆ: 'ಆನು ನೀನೆಂಬ ಕನ್ನಡ ಕಳೆಯಿತ್ತು')

* * * *

## ೨೮೮
## ಬೇಹಾಗ್ – ಅಟ

**ಮರವ ನುಂಗುವ ಪಕ್ಷಿ ಮನೆಯೊಳಗೆ ಬಂದಿದೆ– ಇದರ**
**ಕುರುಹ ಪೇಳಿ ಕುಳಿತಿರುವ ಜನರು ॥ಪ॥**

**ಒಂಟಿ ಕೊಂಬಿನ ಪಕ್ಷಿ ಒಡಲೊಳಗೆ ಕರುಳಿಲ್ಲ**
**ಗಂಟಲು ಮೂರುಂಟು ಮೂಗು ಇಲ್ಲ**
**ಕುಂಟು ಮನುಜನ ತೆರದಿ ಕುಳಿತಿಹುದು ಮನೆಯೊಳಗೆ**
**ಎಂಟು ಹತ್ತರ ಭಕ್ಷ್ಯ ಭಕ್ಷಿಸುವುದು ॥೧॥**

**ನಡುವೆ ಕಲಿಯುಂಬುವುದು ನಡುನೆತ್ತಿಯಲಿ ಬಾಯಿ**
**ಕಡು ಸ್ವರಗಳಿಂದ ಗಾನ ಮಾಡುವುದು**
**ಅಡವಿಯಲಿ ಹುಟ್ಟುವುದು ಅಂಗವೆರಡಾಗುವುದು**
**ಬಡತನ ಬಂದರೆ ಬಹಳ ರಕ್ಷಿಪುದು ॥೨॥**

**ಕಂಜವದನೆಯರ ಕರದಲ್ಲಿ ನಲಿದಾಡುವುದು**
**ಎಂಜಲನುಣಿಸುವುದು ಮೂಜಗಕೆ**
**ರಂಜಿಪ ಶಿಖಾಮಣಿ ಸಿಂಹಾಸನದ ಮೇಲಿರ್ಪ**
**ಸಂಜೀವ ಪಿತ ಆದಿಕೇಶವನೆ ಬಲ್ಲ ॥೩॥**

ಭಾವ– ಪ್ರಣವ ರೂಪಿ ಪರಮಾತ್ಮ ಬ್ರಹ್ಮಾಂಡ ಪಿಂಡಾಂಡಗಳ ಮನೆಯಲ್ಲಿ ವಾಸ ಮಾಡುತ್ತಿರುವುದನ್ನು ಈ ಮುಂಡಿಗೆ ಧ್ವನಿಸುತ್ತದೆ. ಲೌಕಿಕ ಅಥವಾ ಭೌತ ಅರ್ಥದಲ್ಲಿ ಇದು ರಾಗಿಕಲ್ಲು (ಬೀಸುವ ಕಲ್ಲು). ಅಲೌಕಿಕ ಅಥವಾ ಅಧ್ಯಾತ್ಮದ ಅರ್ಥದಲ್ಲಿ ಪ್ರಣವರೂಪಿ ಪರಮಾತ್ಮ– ಈ ಎರಡನ್ನು ಸಂಲಗ್ನಗೊಳಿಸಿರುವುದರಲ್ಲಿ ಪ್ರತಿಭಾ ಪಕ್ಷಿ ನಿಶ್ಶಿಖರವನ್ನು ಏರಿದೆ ಎನ್ನಬಹುದು.



**ಲೌಕಿಕ ಅಥವಾ ಭೌತ ಅರ್ಥ–** ಮರವ... ಬಂದಿದೆ = ಮೊರದ ರಾಗಿಯನ್ನು ಬರಿದು ಮಾಡುವ ಅರ್ಥಾತ್ ನುಂಗಿ ಹಸಿಟ್ಟನ್ನು (ಹಸಿ+ಹಿಟ್ಟು) ನೀಡುವ ರಾಗಿಕಲ್ಲು ಮನೆಯೊಳಕ್ಕೆ ಬಂದಿದೆ.
ಮರ < ಮೊರ = ಕೊಂಗು

೧. ಒಂಟಿಕೊಂಬಿನ ಪಕ್ಷಿ = ರಾಗಿಕಲ್ಲನ್ನು ಕೈಯಲ್ಲಿ ಹಿಡಿದು ಬೀಸಲು ಮೇಲ್ಭಾಗದ ಹೋಳಿನಲ್ಲಿರುವ ಮರದ ಗೂಟ.
ಒಡಲೊಳಗೆ ಕರುಳಿಲ್ಲ = ಖಾಲಿ ಶರೀರ. ಕರ್ಚಿಪುಟ್ಟಿ (ಜಠರ), ಕಳ್ಳುಪಚ್ಚಿ ಯಾವುದೂ ಇಲ್ಲ.
ಗಂಟಲು ಮೂರುಂಟು = ಮೇಲ್ಭಾಗದ ಹೋಳಿನ ಮಧ್ಯದ ಬಾಯಿ ಅಥವಾ ಕೊರಳಿಂದ ರಾಗಿ ಕೆಳಕ್ಕೆ ಹೋಗಲು ಮಾಡಿರುವ ಮೂರು ರಂದ್ರಗಳು
ಮೂಗು ಇಲ್ಲ = ಉಸಿರಾಟಕ್ಕೆ ವಾಸನಾಗ್ರಹಿಕೆಗೆ ಅವಕಾಶವಿಲ್ಲ
ಕುಂಟು... ಮನೆಯೊಳಗೆ = ರಾಗಿ ಕಲ್ಲು ಅದ್ದ (ಹೂತ) ಕಡೆಯೇ ಇದ್ದುಬಿಡುವಂಥದು.
ಎಂಟು... ಭಕ್ಷಿಸುವುದು = ಹತ್ತೆಂಟು ವಿಧವ ಧಾನ್ಯವನ್ನು ಬೀಸುವುದು ಅಥವಾ ಹತ್ತೆಂಟು ಮುಕ್ಕು (ಗುಕ್ಕು<ಗುಟುಕು) ರಾಗಿಯನ್ನು ಅದರ ಕೊರಳಿಗಿಟ್ಟಾಗ ನಿರಾಯಾಸವಾಗಿ ತಿನ್ನುವಂಥದು.
೨. ನಡುವೆ ಕಲಿಯುಂಬುವುದು = ಎರಡು ಹೋಳುಗಳ ಮಧ್ಯೆ (ಕಲಿ = ರಾಗಿ, ಧಾನ್ಯ) ಉಣ್ಣುತ್ತದೆ.
ನಡುನೆತ್ತಿಯಲಿ ಬಾಯಿ = ಮೇಲ್ಭಾಗದ ಹೋಳಿನಲ್ಲಿ ಬಾಯಿ
ಕಡು... ಮಾಡುವುದು = ಬೀಸುವ ಹೆಂಗಸರ ಕೈಬಳೆಗಳ ಶ್ರುತಿ ತಾಳಗಳಿಂದ ಹಾಡ ಹಾಡುವುದು.
ಅಡವಿಯಲಿ... ಎರಡಾಗುವುದು = ಕಾಡಿನ ಕಲ್ಲು ಇಲ್ಲಿ ಎರಡು ಅಂಗ(ಹೋಳು)ಗಳಾಗಿರುವುದು.
ಬಡನ... ರಕ್ಷಿಪುದು = ಕೆರೆಕಟ್ಟೆಗಳು ತುಂಬಿ ಭತ್ತ ಬೆಳೆಯುವಂತ ಭಾರಿ ಮಳೆ ಬೀಳದಿದ್ದರೂ ಸಾಧಾರಣ ಮಳೆಯಿಂದಲೇ

ಬೆಳೆಯುವ ರಾಗಿಯು ಬಡತನ ಬಂದರೆ (ದುರ್ಭಿಕ್ಷ ಬಂದರೆ) ಜನರನ್ನು ಕಾಪಾಡುವುದು.

೩. ಕಂಜ... ನಲಿದಾಡುವುದು = ಬೀಸುವಾಗ ಕಮಲಮುಖಿಯರ ಕೈಯಲ್ಲಿ ನಲಿದಾಡುವುದು

ಶಿಖಾಮಣಿ = ಮುಡಿಯಲ್ಲಿ ಧರಿಸುವ ರತ್ನ

ಸಂಜೀವ ಪಿತ = ಹನುಮಂತನ ತಂದೆ (ಪ್ರಾಣದಾಯಕ, ವಿಷ್ಣು)

**ಅಲೌಕಿಕ ಅಥವಾ ಅಧ್ಯಾತ್ಮದ ಅರ್ಥ–** ಮರವ... ಬಂದಿದೆ = ಮರೆವು (ವಿಸ್ಮರಣೆ) ನುಂಗುವಂಥ ಚೇತನ್ಯ ರೂಪಿ ಓಂಕಾರರೂಪಿ ಪರಮಾತ್ಮ ದೇಹವೆಂಬ ಮನೆಯೊಳಗೆ ಬಂದು ಕುಳಿತಿದ್ದಾನೆ.

೧. ಒಂಟಿಕೊಂಬನ ಪಕ್ಷಿ = 'ಓಂ' ಎಂಬಲ್ಲಿ 'ಒ' ಅಕ್ಷರದ ಮೇಲೆ ದೀರ್ಘಸ್ವರದ ಕೊಂಬಿದೆ.

ಒಡಲೊಳಗೆ ಕರುಳಿಲ್ಲ = ಸಾಂಸಾರಿಕ ವ್ಯಾಮೋಹದ ಕಳ್ಳುಪಚ್ಚಿ ಯೊಂದೂ ಇಲ್ಲ.

ಗಂಟಲು ಮೂರುಂಟು = ಓಂಕಾರದ ಅಉಮ ಎಂಬ ತ್ರಿಮಾತ್ರೆಗಳು

ಮೂಗು ಇಲ್ಲ = ಈಷಣಾತ್ರಯ ಅಥವಾ ವಾಸನೆಯ ಗುಂಗಿಲ್ಲ ದಿರುವುದು.

ಕುಂಟು... ಮನೆಯೊಳಗೆ = ದೇಹದೊಳಗೆ ಅಲುಗಾಡದೆ ಕುಳಿತಿರುವುದು.

ಎಂಟು... ಭಕ್ಷಿಸುವುದು = ಪಂಚಭೂತಗಳು+ಮನ, ಬುದ್ಧಿ ಅಹಂಕಾರ = ಎಂಟು; ದಶೇಂದ್ರಿಯಗಳು (ಜ್ಞಾನೇಂದ್ರಿಯ ಪಂಚಕ+ಕರ್ಮೇಂದ್ರಿಯ ಪಂಚಕ) ಇವುಗಳ ಮುಖಾಂತರ ಶಬ್ದಾದಿ ವಿಷಯಗಳೆಂಬ ಭಕ್ಷ್ಯವನ್ನು ಭಕ್ಷಿಸುವುದು ಅಂದರೆ ತಿಳಿದು ನಿರ್ಲಿಪ್ತವಾಗಿರುವುದು.

೨. ನಡುವೆ ಕಲಿಯುಂಬುವುದು = ನಾಭಿಯಲ್ಲಿ ಕುಂಡಲಿನಿ ಜಾಗೃತ ಗೊಳ್ಳುವುದು.



ನಡು = ಸೊಂಟ, ಹೊಕ್ಕಳಿನ ಪ್ರದೇಶ

ನಡುನೆತ್ತಿಯಲಿ ಬಾಯಿ = ಆಜ್ಞಾಚಕ್ರ ಅಥವಾ ಸಹಸ್ರಾರವೇ ಬಾಯಿ

ಕಡುಸ್ವರ... ಮಾಡುವುದು = ಜೀವಾತ್ಮ ಆಜ್ಞಾಚಕ್ರಕ್ಕೆ ಬಂದಾಗ ಹೊರಹೊಮ್ಮುವ ನಾದ

ಅಡವಿ... ಎರಡಾಗುವುದು = ಹೃದಯಾರಣ್ಯದಲ್ಲಿರುವ ಪ್ರಾಣ ಇಡಾಂಪಿಗಳ ಎಂಬ ಎರಡು ಹೋಳಾಗಿ ಸಂಚರಿಸುವುದು (ಪರಬ್ರಹ್ಮ ಪುರುಷ ಪ್ರಕೃತಿಯಾಗುವುದು ಅಥವಾ ಬ್ರಹ್ಮಾಂಡ ಪಿಂಡಾಂಡವಾಗುವುದು ಎಂದೂ ಅರ್ಥೈಸಬಹುದು)

ಬಡತನ... ರಕ್ಷಿಪುದು = ಅರಿಷಡ್ವರ್ಗಗಳು, ಕರ್ಮಗಳು ದಗ್ಧವಾಗಿ ಅವುಗಳ ಅಬ್ಬರದ ಐಶ್ವರ್ಯ ನಾಶವಾಗಿ ನಿರ್ಗತಿಕನಾದಾಗ ಇದು ಜೀವಾತ್ಮನನ್ನು ರಕ್ಷಿಸುತ್ತದೆ.

೩. ಕಂಜ... ನಲಿದಾಡುವುದು = ಶಕ್ತ್ಯಂಗನೆಯರ ಕೈಯಲ್ಲಿ ಸಂತೋಷ ಗೊಳ್ಳುವುದು

ಎಂಜಲು... ಜಗಕೆ = ಓಂಕಾರದ, ಹಂಸಮಂತ್ರದ ಎಂಜಲನ್ನು ಎಲ್ಲ ಜೀವಜಂತುಗಳಿಗೂ ಉಣಬಡಿಸುವುದು.

* * * *

## ೨೮೯
## ಸೌರಾಷ್ಟ್ರ – ಅಟತಾಳ

**ಕೆಂಪು ಮೂಗಿನ ಪಕ್ಷಿ ತಂಪಿನೊಳಿರುವುದು**
**ನೆಂಪು ಬಲ್ಲವರು ಪೇಳಿ ||ಪ||**

**ಹಂಪೆಯ ವಿರೂಪಾಕ್ಷ ಲಿಂಗನಲ್ಲಿ**
**ಝಂಪೆಯನಾಡುತಿಹದು ||ಅ||**

**ಆರು ತಲೆ ಹದಿನಾರು ಕಣ್ಣುಗಳುಂಟು**
**ಮೂರು ಮೂರು ನಾಲಗೆ**
**ಬೇರೆ ಹನ್ನೆರಡು ಕಣ್ಣು ಕಿವಿಗಳುಂಟು**
**ಸೇರಿತು ತೆಂಕಲಾಗೆ ||೧||**

**ಬಲೆಯ ಬೀಸಿದರು ಸಿಕ್ಕದಾ ಮೃಗ**
**ಜಲದೊಳು ತಾ ನಿಲ್ಲದು**
**ನೆಲನ ಮೇಲಿರುವುದು ನಿಂತರೆ ಸಾವುದು**
**ಕುಲದೊಳಗಾಡುತಿಹುದು ||೨||**

**ಸಕಲ ಕಲೆಯು ಬಲ್ಲ ಸೀತಳ ಮಲ್ಲಿಗೆ**
**ಬೇರೆ ಬೇರೆನಬಹುದು**
**ಚೆನ್ನಕೇಶವನಲ್ಲಿ ಕೃಪೆಯುಂಟಾದರೆ**
**ಅಲ್ಲುಂಟು ಇಲ್ಲಿಲ್ಲವೆ ||೩||**

ಭಾವ– ಕೊಂಬೆಯಿಂದ ಕೊಂಬೆಗೆ ಲಂಘಿಸುವ ಕಪಿಯಂತೆ ಅನಂತ ವಿಷಯಗಳ ಚಿಂತನೆಯಲ್ಲೇ ಭ್ರಮರದಂತೆ ಸುತ್ತುತ್ತಿರುವ ಮನಸ್ಸೆಂಬ ಪಕ್ಷಿಯನ್ನು ಪ್ರಾಣಗತಿಯೊಡನೆ ಜರುಗವ ಹಂಸಮಂತ್ರವೆಂಬ ಸೂತ್ರದ



ಕುಣಿಕೆ ಹಾಕಿ ಕಟ್ಟಿ ಹಾಕಿದರೆ ಅದು ಎಲ್ಲಿಯೂ ಹೋಗಲಾರದೆ ಒಂದೇ ಕಡೆ ಸ್ವಸ್ಥವಾಗಿರುತ್ತದೆ ಎಂಬುದನ್ನು ಕನಕದಾಸರು ಈ ಮುಂಡಿಗೆಯಲ್ಲಿ ಧ್ವನಿಸಿದ್ದಾರೆ ಎನ್ನಿಸುತ್ತದೆ.

ಮೊದಲನೆಯ ಚರಣ ಷಡಾಧಾರದ ಮೇಲೆ ಜರುಗುವ ರೇಚಕ ಎಂಬ ಊರ್ಧ್ವಮುಖ ಪ್ರಾಣವಾಯುವಿನ ಹಾಗೂ ಪೂರಕ ಎಂಬ ಅಧೋಮುಖಿ ಅಪಾನವಾಯುವಿನ ಚಲನವಲನದೊಡನೆ 'ಸೋಹಂ' ಎಂಬ ಹಂಸ ಮಂತ್ರವೂ ಸಂಲಗ್ನಗೊಂಡು ಇಡಾಪಿಂಗಳ ಸುಷುಮ್ನಾ ನಾಡಿಗಳ ಮುಖಾಂತರ ಹಂಸ ದರ್ಶನವಾದಾಗ ಭಗವನ್ನಿಷ್ಠವಾದ ಮನಸ್ಸೂ ಸಹ ನಿಶ್ಚಂಚಲವೂ ಸ್ವಸ್ಥವೂ ಆಗುವುದನ್ನು ಧ್ವನಿಸುತ್ತದೆ.

ಎರಡನೆಯ ಚರಣ ಕೈಗೂ ಸಿಗದ ಬಾಯ್ಗೂ ಸಿಗದ ಪ್ರಾಣ ಹಾಗೂ ಮನಸ್ಸು ಎಂಬ ಪ್ರಾಣಿ ಜಲದಲ್ಲಿರುವ ಮೀನಿನಂತೆ ಬಲೆಗೆ ಸಿಕ್ಕುವಂಥದಲ್ಲ. ದೇಹದೊಳಗೆ ಅದರ ಬಂಧುಬಾಂಧವರೊಡನೆ (ವಿಷಯಾದಿಗಳೊಡನೆ) ಕುಣಿದು ಕುಪ್ಪಳಿಸುತ್ತಿರುತ್ತದೆ. ಆದರೆ ಅದು ಭಗವನ್ನಿಷ್ಠವಾಗಿ ಒಂದು ಕಡೆ ಸ್ಥಾಣುವಿನಂತೆ ನಿಂತರೆ ಅದು ಸತ್ತ ಹಾಗೆ ಎಂಬ ಭಾವವನ್ನು ಧ್ವನಿಸುತ್ತದೆ.

ಮೂರನೆಯ ಚರಣ ದೇವಲೋಕದಲ್ಲಿ ಮಾತ್ರ ದೇವರಿದ್ದಾನೆ ಎಂಬುದು ಸುಳ್ಳು, ದೇಹಲೋಕದಲ್ಲೂ ಅವನಿದ್ದಾನೆ ಅಂದರೆ ಬ್ರಹ್ಮಾಂಡದಲ್ಲಿ ಮಾತ್ರವಲ್ಲ ಪಿಂಡಾಂಡದಲ್ಲೂ ಇದ್ದಾನೆ ಎಂಬ ಭಾವವನ್ನು ಸ್ಫುರಿಸುವಂತಿದೆ. 'ಅಲ್ಲುಂಟು ಇಲ್ಲಿಲ್ಲವೆ' ಎಂಬ ಮಾತು ಅದನ್ನು ಪುಷ್ಟೀಕರಿಸುತ್ತದೆ.

ಅರ್ಥ– ಆರುತಲೆ = ಮೂಲಾಧಾರ (ಗುದ ) ಸ್ವಾದಿಷ್ಠಾನ (ಲಿಂಗ) ಮಣಿಪೂರ (ನಾಬಿ) ಅನಾಹತ (ಹೃದಯ) ವಿಶುದ್ಧ (ಕಂಠ) ಆಜ್ಞಾ (ಭ್ರೂಮಧ್ಯ) ಎಂಬ ಆರು ಚಕ್ರಗಳ ತಲೆಯುಳ್ಳದ್ದು.

ಹದಿನಾರು ಕಣ್ಣು = ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯ, ಪಂಚಪ್ರಾಣ ಹಾಗೂ ಮನಸ್ಸು

ಮೂರು ಮೂರು ನಾಲಗೆ (ಮೂರು+ಮೂರು) = ಮೂರು ಅವಸ್ಥೆಗಳಾದ ಎಚ್ಚರ, ಕನಸು, ನಿದ್ರೆ ಎಂಬ ತ್ರಿಸ್ಥಾನಗಳನ್ನೂ, ಓಂಕಾರದ ಅಉಮ ಎಂಬ ತ್ರಿಮಾತ್ರೆಗಳನ್ನೂ, ಪ್ರಾಣವಾಯು

ಸಂಚರಿಸುವ ಇಡಾಪಿಂಗಳ ಸುಷುಮ್ನಾ ಎಂಬ ತ್ರಿನಾಡಿಗಳನ್ನು ನಾಲಗೆಗಳನ್ನಾಗಿ ಉಳ್ಳದ್ದು ಎಂದು ಅರ್ಥ.

ಬೇರೆ ಹನ್ನೆರಡು ಕಣ್ಣು ಕಿವಿಗಳುಂಟು = ಋಕ್, ಯಜುರ್, ಸಾಮ, ಅಥರ್ವಣ ಎಂಬ ನಾಲ್ಕು ವೇದಗಳ, ಸಾಂಖ್ಯ, ಯೋಗ, ನ್ಯಾಯ, ವೈಶೇಷಿಕ, ಪೂರ್ವಮೀಮಾಂಸೆ, ಉತ್ತರಮೀಮಾಂಸೆ ಎಂಬ ಆರು ಶಾಸ್ತ್ರಗಳ ಹಾಗೂ ಇತಿಹಾಸಗಳ ಮತ್ತು ಪುರಾಣಗಳ ಸಾರವನ್ನು ಸವಿಯುವಾಗ ಅವು ದರ್ಶನೀಯವಾದಾಗ ಕಣ್ಣು ಮತ್ತು ಶ್ರವಣೀಯವಾದಾಗ ಕಿವಿ ಎಂದು ಅರ್ಥ.

೨. ನೆಲ = ದೇಹ

ನಿಂತರೆ ಸಾವುದು = ಭಗವನ್ನಿಷ್ಠವಾದರೆ ಚಾಂಚಲ್ಯವಳಿದು ನಿಶ್ಚಲವಾಗುವುದು

ಕುಲ = ಮನಸ್ಸಿನ ವಿಷಯಾದಿ ವ್ಯಾಪಾರಗಳು

೩. ಸಕಲ ಕಲೆಯ ಬಲ್ಲ ಶೀತಳಮಲ್ಲಿಗೆ = ಪರಮಾತ್ಮ ಹಾಗೂ ಜೀವಾತ್ಮ.

ಬೇರೆ ಬೇರೆ ಎನಬಹುದು = ಪ್ರತ್ಯೇಕ ಎನಬಹುದು

ಅಲ್ಲುಂಟು ಇಲ್ಲಿಲ್ಲವೆ = ಬ್ರಹ್ಮಾಂಡದಲ್ಲುಂಟು ಪಿಂಡಾಂಡ ದಲ್ಲಿಲ್ಲವೆ?

* * * *



## ೨೯೦
## ಮಾರವಿ – ಅಟತಾಳ

ಎರಡು ಸಾವಿರದ ಜಿಹ್ವೆಯುರಗ ಪೊಗಳಿದ ಹರಿಯೆ ॥ಪ॥
ಪರಂಜ್ಯೋತಿ ಪರಬ್ರಹ್ಮ ಪರಮಪುರುಷ ಓಂ ಎಂದು ॥ಅ॥

ಹುಟ್ಟು ಬಣ್ಣ ಒಂದರೊಳಗೆ ಕಟ್ಟು ಬಣ್ಣ ಒಂದು ಮಾಡಿ
ಕಟ್ಟಿ ಕುಟ್ಟಿ ಕಾಸಿ ಕರಗಿ ಮೂರು ಬಣ್ಣವ
ಮುಟ್ಟಿ ಮಾಡಿ ನಾಲ್ಕು ಬಣ್ಣ ಒಪ್ಪವಿಕ್ಕಿ ಅದರ ಮೇಲೆ
ಗಟ್ಟಿಯಾಗಿ ನೆಲೆಗೆ ನಿಂತವೈದು ಬಣ್ಣವು
ಸೃಷ್ಟಿಯಾರೇಳು ಬಣ್ಣ ಎಂಟು ಒಂಬತ್ತರೊಳಗೆ
ನೆಟ್ಟನೆ ಹತ್ತು ಹನ್ನೊಂದು ಹನ್ನೆರಡು ತೋರುವ
ಘಟ್ಟಿ ಹದಿಮೂರು ಹದಿನಾಲ್ಕು ಹದಿನೈದರಿಂದ
ಕಟ್ಟಕಡೆಗೆ ನಿಂದ ಹದಿನಾರು ಬಣ್ಣ ಓಂ ಎಂದು ॥೧॥

ಭದ್ರಕಂಬ ಒಂದರೊಳಗೆ ಉದ್ದವಾದ ಕೊನೆಯ ಮೇಲೆ
ಸಿದ್ಧಿಯಾದ ಚಿಗುರು ಹೂವು ಕಾಯಿ ಹಣ್ಣನು
ಮೆದ್ದು ಹೋದ ಪಕ್ಷಿ ಬಂದು ಹದ್ದು ಹಿಡಿದು ಉದ್ದಕೆತ್ತಿ
ಬುದ್ಧಿ ಹೀನನಾಗಿ ಬೆಳೆದು ಧರೆಗೆ ಬಿದ್ದುದ
ಕದ್ದು ಮತ್ತೊಬ್ಬ ತರುತಿದ್ದ ದಾರಿಯನ್ನು ಕಟ್ಟಿ
ಒದ್ದು ಹಿಡಿದು ಗುದ್ದಿ ನೂಕಿ ಸೆಳೆದುಕೊಂಡುದ
ಸಾಧ್ಯವಾಯಿತೆಂದು ತನ್ನ ಮನೆಗೆ ತಂದು ಸತಿಗೆ ಕೊಡಲು
ಶುದ್ಧವಾಗಿ ಸುಟ್ಟು ಮಡಗಲೆದ್ದು ಹಾರಿ ಹೋಯಿತೆಂದು ॥೨॥

ತಿಳಿಯುತಿಹುದು ತಿಳಿಯದಿಹುದು ಬೆಳೆಯುತಿಹುದು ಬೆಳೆಯದಿಹುದು
ಹೊಳೆಯುತಿಹುದು ಹೊಳೆಯದಿಹುದು ಸುಳಿಯದಿಹುದು
ತಿಳಿದ ನಾಲ್ಕು ದಿಕ್ಕಿನಲಿ ಹೊಳೆದು ಎಂಟು ದಿಕ್ಕ ತೋರಿ

ಬಳಸಿ ಸುತ್ತ ತಿರುಗುತಿಹುದು ಬಳಲಿ ಬಳಲದೆ
ಒಳಗೆ ಹೊರಗೆ ತೋರುತಿಹುದು ಅಳಿದ ವಸ್ತು ಮುಟ್ಟದಿಹುದು
ಕಳವಳಂಗೆ ಎರಡು ಗುಣವ ತೋರಿ ಮೆರೆವುದು
ತಿಳಿದು ನೋಡೆ ಕೈಗೆ ಸಿಕ್ಕಿ ಒಳಗೆ ಬಯಲ ತೋರುತಿಹುದು
ಪ್ರಣವ ಒಂದು ಕೋಟಿ ನುಂಗಿ ಉಗುಳಿತಿಪ್ಪುದೋಂ ಎಂದು ॥೩॥

ತತ್ತಿಯಾದ ಬ್ರಹ್ಮನೀಗೆ ದಿಕ್ಕು ಅಖಿಲಾಂಡವೆಲ್ಲ
ಹೆತ್ತ ತಂದೆಗಾದವನೆ ನಿತ್ಯವುಳ್ಳವ
ಸತ್ತು ಹುಟ್ಟಲಿಲ್ಲವೆಂದು ಅತ್ತ ನೊಡಿ ಇತ್ತ ತಿರುಗಿ
ತತ್ತಿಯೊಳಗೆ ಬೆಳೆದವೆಲ್ಲ ಸತ್ತವೆನ್ನುತ
ಸತ್ತು ಹೋದ ದೀಪದಂತೆ ಉತ್ಪತ್ತಿಯಾದವಗೆ
ಸತ್ತು ಸತ್ತು ಹುಟ್ಟುವುದು ತಪ್ಪದೆನ್ನುತ
ಎತ್ತಿ ಜಗವ ನುಂಗಿ ತನ್ನ ಹೊಟ್ಟೆಯೊಳಿಂಬಿಟ್ಟುಕೊಂಡು
ಕತ್ತಲೆಗೆ ಕರ್ತೃವೆಂಬ ಜಗವಸತ್ಯ ಕೇಳಿರೋ ಎಂದು ॥೪॥

ಪಂಕಜನ ತಾಯಿ ಸುತನ ಅಂಕದಲ್ಲಿ ಹುಟ್ಟಿ ಜಗವ
ಮಂಕು ಮಾಡುತಿಪ್ಪ ಮಾಯೆ ಹತ್ತು ಶಂಕೆಯ
ಶಂಕೆಕಾರ ಶತ್ರುಮಿತ್ರರಿಬ್ಬರಿಗಾಧಾರವೆಂದು
ಕುಂಕರದಿಪ್ಪತ್ತೊಂದು ಕೋಟಿ ಪಾಶವು
ಓಂಕಾರದೊಳಗೆ ಪುಟ್ಟಿ ಓಂಕಾರದೊಳಗೆ ಬೆಳೆದು
ಓಂಕಾರದೀ ಜಗವ ಎತ್ತಿ ಮೆರೆವುದೋ ಎಂದು ॥೫॥

ಪ್ರಣವ ಒಂದರೊಳಗೆ ಒಂದು ಕೋಟಿಯನ್ನು ತೋರಿ ಪಡೆಯ (ಕಡೆಯ?)
ಕುಣಿಕೆಯೊಳಗೆ ಎಂಟು ಕೋಟಿಯನ್ನು ತೋರುತ
ತೃಣವ ಹಿಡಿದು ಬರೆಯುತಿಪ್ಪ ಒಂದು ರೋಮ ಕೂಪದಲ್ಲಿ
ಕುಣಿಕೆಯೊಳಗೆ ಜಗದ ಜೀವರಾಶಿ ಎಲ್ಲವ
ಸುಳಿದ ವಿಷ್ಣು ಬ್ರಹ್ಮನೆಂಬ ಹಣೆಯ ಕಣ್ಣ ರುದ್ರನೆಂಬ
ಮಣೆಯಗಾರರೆಪ್ಪತ್ತೇಳು ಕೋಟಿ ಸಂಖ್ಯೆಯು



ಹಣೆಯ ಕಾಣದವರ ಕೀಲಿನೆಣಿಕೆಯಲ್ಲಿ ಹೊಲಬುದಪ್ಪಿ
ಪ್ರಣವ ಒಂದು ಕೇಳುತಿಪ್ಪ ಪರಬ್ರಹ್ಮ ಓಂ ಎಂದು ॥೬॥

ನಳಿನಜಾಂಡವೊಂದರೊಳಗೆ ಭುವನ ಪದಿನಾಲ್ಕು ಬಸು
ರೊಳಗೆ ಇಂತು ತಮ್ಮ ಸುಳಿ ನಾಭಿ ಕಮಲ ಮಧ್ಯದಿ
ತಿಳಿದು ನೋಡು ಇತ್ತ ಕೆಳಗೆ ಪಾದ ಮೇಲೆ ಮಸ್ತಕವು
ತೊಳಲಿ ಕಾಣೆ ವೇದವೆಂದು ಬಳಲಿ ಬಳಲದೆ
ಪ್ರಳಯ ಕೋಟಿ ಪ್ರಾಣಿಗಳಿಗೆ ಹೊಳವುಗಾಣಲೀಸದಂತೆ
ಬೆಳೆದು ಹೋಗುವ ಗತಿಯೆಂಬುದಿತ್ತಲರಿಸುತ
ಕಳವಿನವರು ಬಂದು ಇಳೆಯ ಮೇಲೆ ನಿಂದು
ಬಿಳಿಗಿರಿವಾಸ ತಿರುಮಲೇಶ ಆದಿಕೇಶವ ತಾನೆಯೆಂದು ॥೭॥

ಭಾವ– ಓಂಕಾರದಿಂದಲೇ ಜಗತ್ತು ಹುಟ್ಟಿ, ಬೆಳೆದು, ಅದರಲ್ಲೇ ಲಯವಾಗುವ ವೈಚಿತ್ರ್ಯವನ್ನು ಈ ಮುಂಡಿಗೆಯಲ್ಲಿ ವರ್ಣಿಸಲಾಗಿದೆ. ಕನಕದಾಸರು ಕ್ಷೇತ್ರಸಂದರ್ಶನ ಕಾಲದಲ್ಲಿ ಬಿಳಿಗಿರಿ ರಂಗನ ಬೆಟ್ಟಕ್ಕೆ ಹೋಗಿದ್ದಾಗ ರಚಿಸಿದ ಹಾಡಿದು.

ಅರ್ಥ– ೧. ಹುಟ್ಟು ಬಣ್ಣ = ಸ್ವಯಂ ಪ್ರಕಾಶವಾದ ಪರವಸ್ತು
ಕಟ್ಟು ಬಣ್ಣ = ಮಾಯೆ
ಹದಿನಾರು ಬಣ್ಣ = ಹದಿನಾರು ತತ್ತ್ವಗಳು. (ತತ್ವಗಳು ಮೂರು ನಾಲ್ಕು ಐದು ಆರು ಏಳು ಎಂಟು ಒಂಬತ್ತು ಹತ್ತು ಹನ್ನೊಂದು ಹನ್ನೆರಡು ಹದಿಮೂರು ಹದಿನಾಲ್ಕು ಹದಿನೈದು ಹದಿನಾರು ಆದ ಬಗೆಯನ್ನು ಇಲ್ಲಿ ದಾಖಲಿಸಲಾಗಿದೆ. ಪ್ರಧಾನ ತತ್ತ್ವಗಳೊಂದಿಗೆ ಮಿಕ್ಕ ಕೆಲವನ್ನು ಅಂತರ್ಗತಗೊಳಿಸಿ ಆಯಾ ಸಂಖ್ಯೆಯನ್ನು ನಿರ್ಣಯಿಸಲಾಗುತ್ತದೆ)

೨. ಭದ್ರ ಕಂಬ = ಮೂಲಾಧಾರದಿಂದ ಬ್ರಹ್ಮರಂಧ್ರದವರೆಗೂ ಭದ್ರವಾಗಿ ನಿಂತಿರುವ ಬ್ರಹ್ಮದಂಡಿ
ಮಡಗು = ಇಡು

೩. ಬಯಲು = ಶೂನ್ಯ (ಮೋಕ್ಷ, ಪರವಸ್ತು). ವಚನಕಾರರು ಬಳಸಿದ ಪರಿಭಾಷೆಯನ್ನು ಇಲ್ಲಿ ಕನಕದಾಸರು ಬಳಸಿ ಕೊಂಡಿದ್ದಾರೆ.

೪. ತತ್ತಿ = ಅಂಡ, ಮೊಟ್ಟೆ
ಇಂಬು = ಆಶ್ರಯ, ಜಾಗ

೫. ಪಂಕಜ = ಬ್ರಹ್ಮ
ಅಂಕ = ತೊಡೆ
ಕುಂಕರ = ?

೬. ಹೊಲಬು = ದಾರಿ, ಗುರಿ

೭. ನಳಿನಜಾಂಡ = ಬ್ರಹ್ಮಾಂಡ

* * * *



## ೨೯೧
## ಶಂಕರಾಭರಣ – ಏಕತಾಳ

**ಎಂದೆಂದು ಇಂಥ ಚೋದ್ಯ ಕಂಡದ್ದಿಲ್ಲವೊ ॥ಪ॥**

**ಅಂಗಡಿ ಬೀದಿಯೊಳೊಂದು ಆಕಳ ಕರು ನುಂಗಿತು**
**ಲಂಘಿಸುವ ಹುಲಿಯ ಕಂಡು ನರಿಯು ನುಂಗಿತು ॥೧॥**

**ಹುತ್ತದೊಳಾಡುವ ಸರ್ಪ ಮತ್ತ ಗಜವ ನುಂಗಿತು**
**ಉತ್ತರದಿಶೆಯೊಳು ಬೆಳುದಿಂಗಳಾಯಿತಮ್ಮ ॥೨॥**

**ಯೋಗ ಮಾರ್ಗಿ ಕಾಗಿನೆಲೆಯಾದಿಕೇಶವರಾಯ**
**ಭಾಗವತರ ಬೆಡಗಿದು ಬೆಳುದಿಂಗಳಾಯಿತಮ್ಮ ॥೩॥**

ಭಾವ– ಜ್ಞಾನಯೋಗದ ಬಲದಿಂದ ಪರಮಾತ್ಮ ಸಾನ್ನಿಧ್ಯದ ಅಮೃತವರ್ಷ ಪಾನ ಮಾಡುವ ಸೋಜಿಗ ಜೀವಾತ್ಮನಿದೊದಗಿದ್ದನ್ನು ಇದು ಧ್ವನಿಸುವಂತಿದೆ.

ಅರ್ಥ– ೧. ಅಂಗಡಿ... ನುಂಗಿತು = ಖಂಡಜ್ಞಾನವು ಅಖಂಡ ಜ್ಞಾನವನ್ನು ನುಂಗಿತು ಅರ್ಥಾತ್ ಹೊಂದಿತು.
ಲಂಘಿಸುವ... ನುಂಗಿತು = ಅರಿಷಡ್ವರ್ಗಗಳೆಂಬ ಆರ್ಭಟದ ಹುಲಿಯನ್ನು ಜ್ಞಾನಬುದ್ಧಿಗಳ ಯುಕ್ತಿ ನುಂಗಿತು.

೨. ಹುತ್ತ... ನುಂಗಿತು = ಎಚ್ಚೆತ್ತ ಕುಂಡಲಿನೀ ಶಕ್ತಿ ಅಹಂಕಾರವೆಂಬ ಮದಿಸಿದ ಆನೆಯನ್ನು ನುಂಗಿತು.
ಉತ್ತರ ಬೆಳದಿಂಗಳಾಯಿತಮ್ಮ = ಸಹಸ್ರಾರದಲ್ಲಿ ಪರಮಾತ್ಮನಲ್ಲಿ ಒಂದಾಗಿ ಅಮೃತಪಾನ ಮಾಡುವಂಥ ಮೋಕ್ಷಮುಖಿ ಯಾಯಿತು.

೩. ಭಾವಗತರ = ಭಕ್ತ ಕನಕದಾಸರ
ಬೆಡಗು = ಮುಂಡಿಗೆ, ಒಗಟು

* * * *



## ೨೯೨
## ಶಂಕರಾಭರಣ – ಅಟ

ಪಕ್ಕಿಯ ಕುರುಹ ಬಲ್ಲರು ಪೇಳಿರಿ– ತನ್ನ
ಮಕ್ಕಳಿಗೆ ವೈರಿ ಮೂಜಗದೊಳಗೆಲ್ಲ ॥ಪ॥

ಬಣ್ಣ ಬಣ್ಣದ ಪಕ್ಷಿ ಅದಕೆ ವೆಜ್ಜಗಳುಂಟು
ಕಣ್ಣು ಮುಚ್ಚಲಿಲ್ಲ ತೆರೆಯಲಿಲ್ಲ
ಹುಣ್ಣಿಮೆ ಮುಂದಿನ ಬೆಳಗಲಿ ಬಾಹೋದು
ತಣ್ಣನೆ ಹೊತ್ತಲಿ ತವಕಗೊಂಬುವುದು ॥೧॥

ಕೆಂಬಲ್ಲಿನ ಪಕ್ಷಿ ಕೊಂಬುದು ರಸಗಳ
ಹಂಬಲ ಮಾಳ್ಪುದು ಹರುಷದಿಂದ
ತುಂಬಿ ವರ್ಣನ ತೆತ್ತವೆ ನಾಲ್ಕು ರವೆ ಎಂಟು
ಜಾಂಬವರು ಮೆಚ್ಚುವರು ಜಾಣರಿಗಳವಲ್ಲ ॥೨॥

ಉಂಡರೂ ದಣಿಯದು ಊರ ಸೇರದ ಪಕ್ಷಿ
ಮಂಡೆಯ ಮೇಲೆರಡು ಕೋಡದಕೆ
ಗುಂಡಿಗೆಯೊಳು ಮೂಲಗಳುಂಟು ಧರೆಯೊಳು
ಗಂಡನ ನುಂಗುವುದು ಗಜಮುಖದ ಪಕ್ಷಿ ॥೩॥

ಗಿಡ್ಡ ಮೀಸೆಗಳುಂಟು ಗರುಡ ಎನಬೇಡಿ
ಒಡ್ಡನಪ್ಪಿ ಬಾಹೋದು ವರುಷಕೊಮ್ಮೆ
ಗುಡ್ಡದೊಳಿರುವುದು ದೊರೆಗಳಿಗಂಜದು
ಹೆಡ್ಡರಿಗಳವಲ್ಲ ಹೇಮ ವರ್ಣದ ಪಕ್ಷಿ ॥೪॥

**ಹಕ್ಕರಿಕೆ ಗರಿಯಂತೆ ಹರವು ರೆಕ್ಕೆಗಳುಂಟು**
**ಒಕ್ಕಲು ಮೇಲದು ಒಲಿದವಗೆ**
**ದಿಕ್ಕಿನಲ್ಲಿ ಕಾಗಿನೆಲೆಯಾದಿಕೇಶವನ**
**ಮುಕ್ಕಣ್ಣನವತಾರ ಹನುಮಂತ ಬಲ್ಲ** ॥೩॥

ಭಾವ– ಪಕ್ಷಿರೂಪಕದಲ್ಲಿ ಓಂಕಾರ ಅಥವಾ ಪ್ರಣವ ಸ್ವರೂಪಿ ಪರಬ್ರಹ್ಮನ ಮಹಿಮೆಯನ್ನು ಎರಕ ಹೊಯ್ಯಲಾಗಿದೆ ಎಂಬುದು ಸಾವಧಾನದ ಓದಿಗೆ ವೇದ್ಯವಾಗುತ್ತದೆ.

ಅರ್ಥ– ಕುರುಹ = ಗುರುತನ್ನು

ತನ್ನ.... ಮೂಜಗದೊಳಗೆಲ್ಲ = ಓಂಕಾರದಿಂದಲೇ ಜಗತ್ತು ಹುಟ್ಟಿ, ಅದರಿಂದಲೇ ಬೆಳೆದು, ಅದರಲ್ಲೇ ಲಯವಾಗುವುದರಿಂದ, ಹುಟ್ಟಿಸಿದಾತನೇ ಮಕ್ಕಳಿಗೆ ಶತ್ರುವಾಗುವುದನ್ನು ಧ್ವನಿಸುತ್ತದೆ.

೧. ಬಣ್ಣಬಣ್ಣದ ಪಕ್ಷಿ = ಓಂಕಾರ ಮೂರು ಮಾತ್ರೆಗಳಾದ ಅಕಾರ ಕೆಂಪು ಬಣ್ಣ (ರಜೋಗುಣ)ವಾಗಿಯೂ, ಉಕಾರ ಶ್ವೇತವರ್ಣ (ಸತ್ತ್ವಗುಣ)ವಾಗಿಯೂ, ಮಕಾರ ಕಪ್ಪು ಬಣ್ಣ(ತಮೋಗುಣ)ವಾಗಿಯೂ ಇರುವುದರ ಭಾವ.

ವೆಜ್ಜ(ಎಜ್ಜ) = ರಂದ್ರ

ಅದಕೆ ವೆಜ್ಜಗಳುಂಟು = ನಾದ ಬಿಂದು ಕಲಾ ಎಂಬ ರಂದ್ರಗಳುಂಟು (ನಾದ = ಶಬ್ದಗುಣ ಅಥವಾ ಪರೆ, ಪಶ್ಯಂತಿ, ಮಧ್ಯಮೆ, ವೈಖರಿ ಎಂಬ ವಾಣಿ; ಬಿಂದು = ಓಂಕಾರದ ಅಲಕ್ಷ್ಯಾರ್ಥ ರೂಪವಾದ ತುರೀಯಪದ; ಕಲಾ = ಓಂಕಾರದ ಅಕಾರಾದಿ ಮಾತ್ರ ಪರವಾಣಿ ರೂಪವಾದ ಅಂಶ, ಶಬ್ದದ ಅವಯವ)

ಕಣ್ಣುಮುಚ್ಚಲಿಲ್ಲ ತೆರೆಯಲಿಲ್ಲ = ಎವೆಯಿಲ್ಲದ ಓಂಕಾರಸ್ವರೂಪಿ ಪರವಸ್ತು



ಹುಣ್ಣಿಮೆ = ತವಕಗೊಂಬುವುದು = ಪರವಸ್ತು ಪ್ರಳಯದ ಅಮಾವಾಸ್ಯೆಯ ನಂತರ ಹುಣ್ಣಿಮೆಯ ಬೆಳಗಲ್ಲಿ ಸ್ಪಂದನಗೊಳ್ಳುವುದರ ಭಾವ.

೨. ಕೆಂಬಲ್ಲಿನ... ಹರುಷದಿಂದ = ಕೆಂಪುವರ್ಣದ ರಜೋಗುಣ ಆಕಾರದಿಂದ ಪಂಚಭೂತಗಳೂ (ಆಕಾಶ, ವಾಯು, ಅಗ್ನಿ, ಜಲ, ಭೂಮಿ) ಹಾಗೂ ಬ್ರಹ್ಮ ಉದಯವಾದುದರ ಮತ್ತು ರೋಮಾಂಚನಗೊಂಡುದರ ಭಾವ

ತುಂಬಿ... ನಾಲ್ಕು = ಓಂಕಾರದ ನಾಲ್ಕು ಪಾದಗಳು (ಅಕಾರ, ಉಕಾರ, ಮಕಾರ, ಅಮಾತ್ರ ಸ್ವರೂಪ)

ರವೆಯೆಂಟು = ಓಂಕಾರದ ಅಷ್ಟಾಂಗಗಳು (ದೇಹ, ಜೀವ, ಅಭಿಮಾನಿ, ಮಾತ್ರಿಕೆ, ಲೋಕ, ಅವಸ್ಥೆ, ಭೋಗ, ವಾಣಿ ಎಂಬ ಎಂಟು ಅಂಗಗಳು)

ಜಾಂಬವರು = ಚಿನ್ನದಂತೆ ಹೊಳೆಯುವ ಚೇತನ ಸ್ವರೂಪಿಗಳು ಜ್ಞಾನಿಗಳು

ಅಳವಲ್ಲ = ಸಾಧ್ಯವಲ್ಲ

೩. ಉಂಡರೂ... ಪಕ್ಷಿ = ಅ ಉ ಮಗಳ ವಿಲೀನ ಕ್ರಮದ ಭಕ್ಷಣೆಯಿಂದ ಓಂಕಾರಕ್ಕೆ ದಣಿವಾಗುವುದಿಲ್ಲ

ಮಂಡೆಯ... ಕೋಡದಕೆ = ಪ್ರಕೃತಿ ಪುರುಷ ಎಂಬ ಎರಡು ಕೊಂಬುಗಳುಂಟು ಎಂಬ ಭಾವ.

ಗುಂಡಿಗೆಯಲಿ ಮೂಲಗಳುಂಟು = ಅಕಾರಕ್ಕೆ ಬ್ರಹ್ಮ, ಉಕಾರಕ್ಕೆ ವಿಷ್ಣು, ಮಕಾರಕ್ಕೆ ಮಹೇಶ್ವರ ಅಥವಾ ಅಕಾರಕ್ಕೆ ಜಾಗ್ರದವಸ್ಥೆ, ಉಕಾರಕ್ಕೆ ಸ್ವಪ್ನಾವಸ್ಥೆ, ಮಕಾರಕ್ಕೆ ನಿದ್ರಾವಸ್ಥೆ ಎಂಬ ಮೂಲಗಳು

ಗುಂಡಿಗೆ = ಹೃದಯ

ಗಂಡನ... ಪಕ್ಷಿ = ಸೃಷ್ಟಿ ಸ್ಥಿತಿ ಲಯಾಧಿಕಾರಿಗಳನ್ನೇ 'ಗುಳುಂ' ಎಂದು ನುಂಗುವ ಭಾವ

ಗಜಮುಖದ ಪಕ್ಷಿ = ಓಂಕಾರದ ಆಕಾರ. (ಓಂ ಎಂಬ ಕನ್ನಡದ ಅಕ್ಷರ, ಆನೆ ತನ್ನ ಸೊಂಡಿಲನ್ನು ಮೇಲೆತ್ತಿ ತುದಿಯನ್ನು ಮುಂದಕ್ಕೆ ಬಾಗಿಸಿದಂತೆ ಕಂಡು ಬರುವುದರಿಂದ

ಕನಕದಾಸರು ಗಜಮುಖದ ಪಕ್ಷಿ ಎಂದು ಕರದರೋ ಏನೋ)

೪. ಗಿಡ್ಡ... ಎನಬೇಡಿ = ಅ ಉ ಮ ಎಂಬ ಹ್ರಸ್ವ (ಗಿಡ್ಡ) ಅಕ್ಷರಗಳ ಮೀಸೆಯುಂಟು ಎಂಬ ಭಾವ

ಒಡ್ಡನಪ್ಪಿ.... ವರುಷಕ್ಕೊಮ್ಮೆ = ಪ್ರಳಯವಾಗಿ ಎಲ್ಲವೂ ಓಂಕಾರದಲ್ಲೇ ಲಯವಾದಾಗ ಓಂಕಾರ ಸ್ವರೂಪಿ ಪರವಸ್ತು ಅದನ್ನು ಒಂದು ಆಹ್ವಾನ (ಪಣ, ಪಂದ್ಯ)ವನ್ನಾಗಿ ಸ್ವೀಕರಿಸಿ ಮತ್ತೆ ಸ್ಪಂದನಗೊಂಡಾಗ ನಾದ ಹೊರಹೊಮ್ಮಿ ಸೃಷ್ಟಿ ಉನ್ಮೀಲನಗೊಳ್ಳುವುದು ಎಂಬ ಭಾವ. ಒಂದು ಪ್ರಳಯದಿಂದ ಮತ್ತೊಂದು ಪ್ರಳಯದವರೆಗೂ ಪರವಸ್ತುವಿಗೆ ಒಂದು ವರ್ಷ ಎಂಬ ಭಾವ ಇದ್ದಂತಿದೆ.

ಒಡ್ಡು = ಆಹ್ವಾನ, ಪಣ, ಪಂದ್ಯ.

ಗುಡ್ಡ... ಪಕ್ಷಿ = ಯಾರಿಗೂ ಅಂಜದ, ಎಲ್ಲರನ್ನೂ ಎಲ್ಲವನ್ನೂ ಅಂಜಿಸುವ ಆ ವಸ್ತು ಸಾಮಾನ್ಯರಿಗೆ ನಿಲುಕುವ ಸ್ತರದಲ್ಲಿಲ್ಲ, ತುಂಬ ಎತ್ತರವಾದ ಶಿಖರದಲ್ಲಿದ್ದಾನೆ ಎಂಬ ಭಾವ.

೫. ಹಕ್ಕರಿಕೆ = ಒಂದು ಬಗೆಯ ಸೊಪ್ಪು, ಸಸ್ಯ ವಿಶೇಷ

ಹರವು ರೆಕ್ಕೆಗಳುಂಟು = ವಿಶಾಲವಾದ, ದೀರ್ಘವಾದ ರೆಕ್ಕೆ (ಸೋಹಂ ಎಂಬ ದೀರ್ಘಾಕ್ಷರಗಳಿರಬಹುದೇ?)

ಮುಕ್ಕಣ್ಣ = ಈಶ್ವರ

* * * *



೨೯೩

## ಪಂತುವರಾಳಿ – ಝಂಪೆ

**ಬಲ್ಲವರು ಪೇಳಿರ್ರೈ ಬಹುವಿಧದ ಚತುರತೆಯ**
**ಎಲ್ಲರಿಗು ಸಮ್ಮತವು ಏಕಾಂತವಲ್ಲ ॥ಪ॥**

**ಕಂಕಣಕೆ ಮೊದಲೇನು ಕಾರ್ಮುಗಿಲ ಕಡೆಯೇನು**
**ಶಂಕರನ ಮೊಮ್ಮಗನ ಮುಖದ ಸಿರಿಯೇನು**
**ಪಂಕಜಕೆ ಕುರುಹೇನು ಪಾರ್ಥಿಯಳ ತಪವೇನು**
**ಅಂಕಿತಕೆ ಗುರುತೇನು ಅಜನ ಗುಣವೇನು? ॥೧॥**

**ಕಲಿಗಳಿಗೆ ಕಣ್ಣೇನು ಕಾವನಿರುಹುಗಳೇನು**
**ಲಲನೆಯರ ಒಲಿಸುವ... ಇದೇನು**
**ನೆಲಗಳಿಗೆ ಸಾಕ್ಷಿಯೇನು ನ್ಯಾಯದಾ ಪರಿಯೇನು**
**ಬಲವ ನಿಲಿಸುವುದೇನು ಭಾಗ್ಯವು ಇದುಯೇನು? ॥೨॥**

**ಸತ್ಯಕ್ಕೆ ಕುರುಹೇನು ಪೃಥ್ವಿಗೆ ಕಡೆಯೇನು**
**ಚಿತ್ತವನು ಸೆಳೆದೊಯ್ವ ಕಪಟವು ಇದೇನು**
**ಮರ್ತ್ಯದೊಳು ಕಾಗಿನೆಲೆಯಾದಿಕೇಶವನಂಘ್ರಿ**
**ಅರ್ತಿಯಿಂದಲಿ ಕೂಡಿದುದಕೆ ಫಲವೇನು? ॥೩॥**

(ಇದರ ಭಾವಾರ್ಥವನ್ನು ಗ್ರಹಿಸುವುದು ಕಷ್ಟ; ಅವಸರದಲ್ಲಿ ಆಗುವಂಥದಲ್ಲ.)

* * * *

## ೨೯೪
## ಮೋಹನ – ಅಟ

**ಲಟಪಟ ನಾ ಸಟೆಯಾಡುವೆನಲ್ಲ**
**ವಿಠಲನ ನಾಮ ಮರೆತು ಪೋದೆನಲ್ಲ ॥ಪ॥**

**ಶೇಷಗಿರಿಯ ಮೇಲೆ ಸವುತೆಯ ಬಿತ್ತಿ**
**ದೇವಗಿರಿಯ ಮೇಲೆ ಅವತಾರವಿಕ್ಕಿ**
**ಹಾಳೂರಿನೊಳಗೊಬ್ಬ ಕುಂಬಾರ ಸತ್ತ**
**ಗೋಕರ್ಣದೊಳಗೊಬ್ಬ ಪರದೇಶಿ ಅತ್ತ ॥೧॥**

**ಆ ಸಮಯದಿ ಮೂರು ರಾಯರ ಕಂಡೆ**
**ಕುಪ್ಪುಸ ತೊಟ್ಟ ಕೋಳಿಯ ಕಂಡೆ**
**ಬೆಳ್ಳಕ್ಕಿ ಬೆರಣಿಯ ಮಾಳ್ಪುದ ಕಂಡೆ**
**ನರೆಸೂಳೆ ಗೆಯ್ವುದ ಕಣ್ಣಾರೆ ಕಂಡೆ ॥೨॥**

**ನುಸಿಯೊಂದು ರೊಟ್ಟಿಯ ಸುಡುವುದು ಕಂಡೆ**
**ಆಡೊಂದು ಮದ್ದಳೆ ಬಡಿವುದ ಕಂಡೆ**
**ಕಪ್ಪೆ ತತ್ಥೈಯೆಂದು ಕುಣಿವುದ ಕಂಡೆ**
**ಬಾಡದಾದಿಕೇಶವನ ಕಣ್ಣಾರೆ ಕಂಡೆ ॥೩॥**

ಭಾವ– ಜೀವಾತ್ಮ ಪರಮಾತ್ಮನೊಡನೆ ಸಂಲಗ್ನಗೊಂಡ ತೂರ್ಯಾವಸ್ಥೆಯ ಪರಿ ಇಲ್ಲಿ ಝರಿಯಾಗಿ ಜಿನುಗಿದೆ; ಸಾಧನೆಯ ಕ್ರಮಬದ್ಧ ವಿಕಾಸ ಇಲ್ಲಿ ರೂಪಕ ಮೂಲವಾಗಿ ಹೊರಹೊಮ್ಮಿದೆ.

ಅರ್ಥ– ಲಟಪಟ = ಓತಃಪ್ರೋತವಾಗಿ, ಸರಾಗವಾಗಿ (ಹುರುಳಿ ಹುರಿದಾಗ ಚಟಪಟನೆ ಸಿಡಿಯುವಂತೆ)



ಸಟೆ = ಸುಳ್ಳು

ವಿಠಲನ... ಪೋದೆನಲ್ಲ = ಜೀವಾತ್ಮ ಪರಮಾತ್ಮನೊಂದಿಗೆ ಸಂಲಗ್ನಗೊಂಡಾಗ, ವಿಠಲನಾಮಸ್ಮರಣೆ ಸಹಜವಾಗಿಯೇ ಸ್ತಬ್ಧವಾಗುವ, ಆನಂದದಲ್ಲಿ ಲೀನವಾಗುವ ಭಾವ.

೧. ಶೇಷಗಿರಿಯ... ಬಿತ್ತಿ = ಶೇಷಗಿರಿ ಎಂದರೆ ತಿರುಪತಿ ಬೆಟ್ಟ ಎಂಬ ಅರ್ಥವಿದ್ದರೂ, ಇಲ್ಲಿ ಮೂಲಾಧಾರ ಚಕ್ರ ಎಂಬುದು ಗೃಹೀತಾರ್ಥ. ನಾಭಿಯಲ್ಲಿರುವ ಮಣಿಪೂರ ಚಕ್ರದಲ್ಲಿ ತೆಕ್ಕೆ ಹುಯ್ದುಕೊಂಡು ಮಲಗಿ ಅಧೋಮುಖಿಯಾಗಿ ಗುದದಲ್ಲಿರುವ ಮೂಲಾಧಾರ ಚಕ್ರದತ್ತ ತಲೆ ಚಾಚಿರುವ ಕುಂಡಲನೀ ಸರ್ಪವನ್ನು ಊರ್ಧ್ವಮುಖಿಯನ್ನಾಗಿಸುವ, ಉನ್ಮೀಲನಗೊಳಿಸುವ ಕ್ರಿಯೆ 'ಸವುತೆಯ ಬಿತ್ತಿ' ಎಂಬುದರಿಂದ ಧ್ವನಿತವಾಗುತ್ತದೆ.

ದೇವಗಿರಿಯ... ವಿಕ್ಕಿ = ಉನ್ಮುಖಗೊಂಡ ಕುಂಡಲಿನಿ ಶಕ್ತಿ ಇಡಾಪಿಂಗಳ ಸುಷುಮ್ನಾ ನಾಡಿಯ ಮೂಲಕ ಸಹಸ್ರಾರಕ್ಕೇರಿ, ಜೀವಾತ್ಮ ಪರಮಾತ್ಮ ಐಕ್ಯತೆಯ ಆನಂದಾಮೃತ ಪಾನ ಮಾಡುವ ಅವಸ್ಥೆಯನ್ನು 'ಅವತಾರವಿಕ್ಕಿ' ಎಂಬ ಮಾತು ಸೂಚಿಸುತ್ತದೆ. (ಬಂಕಾಪುರ ಮತ್ತು ಹಾವೇರಿಗಳ ಮಧ್ಯೆ ದೇವಗಿರಿ ಎಂಬ ಊರಿದೆ. ಕನಕದಾಸರು ಅದನ್ನಿಲ್ಲಿ ಪರಮಾತ್ಮನಿರುವ ಗಿರಿ ಎಂಬರ್ಥದಲ್ಲಿ ಅರ್ಥಾತ್ ಸಹಸ್ರಾರ ಚಕ್ರಕ್ಕೆ ರೂಪಕವಾಗಿ ಬಳಸಿಕೊಂಡಿದ್ದಾರೆ)

ಹಾಳೂರಿನೊಳಗೊಬ್ಬ... ಸತ್ತ = ಜ್ಞಾನಾಗ್ನಿಯಿಂದ ಕರ್ಮವಾಸನೆಗಳು ದಗ್ಧವಾಗಿ ಮನಸ್ಸು ನಿಶ್ಚಂಚಲವಾದುದನ್ನು ಧ್ವನಿಸುತ್ತದೆ. ವಿಷಯಾದಿ ಕಾಮನೆಗಳು, ವಾಸನೆಗಳು ಧೂಳಿಪಟವಾಗಿ ಹಾಳು ಸುರಿಯುವುದನ್ನು 'ಹಾಳೂರು' ಎಂಬುದೂ, ಮನಸ್ಸು ಸಮಾಧಿಗೊಂಡುದನ್ನು 'ಕುಂಬಾರ ಸತ್ತ' ಎಂಬ ಮಾತೂ ಧ್ವನಿಸುತ್ತವೆ.

ಗೋಕರ್ಣ... ಅತ್ತ = ಜೀವ ಆಜ್ಞಾಚಕ್ರಕ್ಕೆ ಬಂದಾಗ ಕಂಠ (ಗೋನಾಳಿ = ಗಂಟಲನಾಳ) ಹಾಗೂ ಕರ್ಣದಲ್ಲಿ ಒಂದು ಬಗೆಯ ನಾದ ಹೊರಹೊಮ್ಮುತ್ತದೆ ಎಂಬುದರ ಭಾವ 'ಪರದೇಶಿ ಅತ್ತ' ಎಂಬುದರಿಂದ ಸೂಚಿತವಾಗುತ್ತದೆ.

೨. ಮೂರು ರಾಯರು = ಬ್ರಹ್ಮ ವಿಷ್ಣು ಮಹೇಶ್ವರ (ಅಥವಾ ವಿಶ್ವ, ತೈಜಸ, ಪ್ರಾಜ್ಞ?)

ಕುಪ್ಪಸ... ಕಂಡೆ = ಖಂಡ ಜ್ಞಾನ ಅಖಂಡ ಜ್ಞಾನವನ್ನು ತೊಟ್ಟು ಕೊಂಡಿತು ಅರ್ಥಾತ್ ಹೊಂದಿತು ಎಂಬ ಭಾವ.

ಬೆಳ್ಳಕ್ಕಿ... ಕಂಡೆ = ಸತ್‌ಪ್ರಣವ, ಪರಮ ಹಂಸ ಜೀವನನ್ನು ಅನುಗ್ರಹಿಸುವ ಭಾವ. [ಬೆರಣಿ = ಸಗಣಿಯನ್ನು ತಟ್ಟಿ ಒಣಗಿಸಿದ್ದು (ವಾಸನೆಗಳನ್ನು ಸುಟ್ಟದ್ದು) ಎಂಬ ಭಾವ ಸ್ಫುರಿಸುತ್ತದೆ.]

ನರೆಸೂಳೆ... ಕಂಡೆ = ಮಾಯೆ ಅಥವಾ ಅಜ್ಞಾನ ಹಾಸ್ಯಾಸ್ಪದವಾಗಿ ಬಯಲಾಗುವ, ಬತ್ತಲಾಗುವ ಭಾವ.

೩. ನುಸಿ = ಮಾವಿನ ಹಣ್ಣಿನ ಕಾಲದಲ್ಲಿ ಕಣ್ಣಿಗೆ ಮುಸುರುವ ಸಣ್ಣ ಸೊಳ್ಳೆ ಇಲ್ಲಿ ಚಿತ್ ಎಂಬುದು ಗೃಹೀತಾರ್ಥ.

ಆಡು = ಜೀವ

ಕಪ್ಪೆ = ಬ್ರಹ್ಮರಂಧ್ರದ ಶಾಂತಿ (ಜೀವಾತ್ಮ ಪರಮಾತ್ಮ ಒಂದುಗೂಡುವ ದಿವ್ಯ ಕ್ಷಣದಲ್ಲಿ ಜೀವಾತ್ಮನಿಗಾದ ಪುಳಕವನ್ನು, ಆನಂದಾತಿಶಯವನ್ನು 'ಮದ್ದಳೆ ಬಡಿಯುವ' 'ತತ್ಥೈಲ ಕುಣಿಯುವ' ಎಂಬ ಮಾತುಗಳು ಮುಷ್ಟಿಗ್ರಾಹ್ಯಗೊಳಿಸುತ್ತವೆ.)

* * * *



### ೨೯೫
## ನಾದನಾಮಕ್ರಿಯೆ – ಅಟ

ಹೆಣ್ಣುಗಳೊಳು ಹೆಮ್ಮೆಕಾರಿಕೆ ಸತ್ಯ
ಕಣ್ಣುಕಟ್ಟಲ್ಲ ಕವಿಗಳ ಕವಡಲ್ಲ ॥ಪ॥

ಪತಿಗೆ ಶೃಂಗರವೇನು ಶೃಂಗರದಲಿ ರತಿಯೇನು
ರತಿಯಲ್ಲಿ ಮೊದಲೇನು ಮೊದಲಿಗೆ ತುದಿಯೇನು
ಜತೆಗೆ ಮತ್ಸರವೇನು ಮತ್ಸರದಲಿ ಕಥೆಯೇನು
ಕತೆಯಲ್ಲಿ ಕಾಂಬುದೇನು ಕಂಡರೆ ಫಲವೇನು ॥೧॥

ಮನಕೆ ಮುಮ್ಮರೆಯೇನು ಮುಮ್ಮರೆಗೆ ನೆನಹೇನು
ನೆನೆದರೆ ನಂಬಿಗೆಯೇನು ನಂಬಿದರೆ ಅಳವೇನು
ಅಳವಿಗೆ ಕಳವಳವೇನು ಕಳವಳದಲಿ ಕನಸೇನು
ಕನಸಿನಲಿ ಕಾಂಬುದೇನು ಕಂಡರೆ ಭಯವೇನು ॥೨॥

ಮೊ...ಕೆ ಮೊದಲೇನು ಮೊದಲಿಗೆ ನಿಲುಗಡೆಯೇನು
ನಿಲುಗಡೆಗೆ ಸವಿಯೇನು ಸವಿಯಲ್ಲಿ ಸುಖವೇನು
ಅಲರಂಬಿಗೆ ನಲಿವೇನು ನಲಿವಿಗೆ ಗೌಪ್ಯವೇನು
ಸಲೆ ಆದಿಕೇಶವ ನಿನಗೆ ಸೋಲೆಂದರೇನು ॥೩॥

ಭಾವ– 'ಕನಕನನ್ನು ಕೆಣಕಬೇಡ, ಕೆಣಕಿ ತಿಣುಕಬೇಡ' ಎಂಬ ಗಾದೆಯ ಹುಟ್ಟಿಗೆ ಕಾರಣವಾದ ಹಲವಾರು ಗಹನ ಮುಂಡಿಗೆಗಳಲ್ಲಿ ಇದು ಒಂದು.

ಅರ್ಥ– ಕವಡು = ಮೋಸ; ಭ್ರಮೆ

* * * *

## ೨೯೬
## ಕಾಪಿ – ಅಟತಾಳ

**ಸದರವಲ್ಲವೊ ನಿಜಯೋಗ– ಸಚ್ಚಿದಾನಂದ**
**ಸದಮಲ ಗುರುದಿಗಂಬರನ ಸಂಯೋಗ ॥ಪ॥**

**ಅಡಿಯನಂಬರ ಮಾಡದನಕ– ಅಗ್ನಿ**
**ಕಿಡಿಯೆದ್ದು ಮೇಲಣ ಕೊಡುನುಕ್ಕದನಕ**
**ಒಡಲೆರಡೊಂದಾಗದನಕ– ಅಲ್ಲಿ**
**ಒಡಗೂಡಿ ಅಂಗನೆ ನುಡಿಗೇಳದನಕ ॥೧॥**

**ನಾಡಿ ಹಲವು ಕಟ್ಟದನಕ ಬ್ರಹ್ಮ**
**ನಾಡಿಯೊಳು ಪೊಕ್ಕು ಮುಳುಗಾಡದನಕ**
**ಕಾಡುವ ಕಪಿ ಸಾಯದನಕ– ಸತ್ತ**
**ಓಡಿನೊಳಗೆ ರಸ ತೊಟ್ಟಿಕ್ಕದನಕ ॥೨॥**

**ಆದಿಕುಂಭ ಕಾಣದನಕ– ಅಲ್ಲಿ**
**ಸಾಧಿಸಿ ಭೇದಿಸಿ ಸವಿಯುಣ್ಣದನಕ**
**ಭೇದವು ಲಯವಾಗದನಕ– ಬಡ**
**ದಾದಿಕೇಶವ ನಿಮ್ಮ ನೆಲೆಗಾಣದನಕ ॥೩॥**

ಭಾವ– "ಪ್ರತಿಯೊಬ್ಬರ ಅಂತರಂಗದಲ್ಲಿ ಅಂತರ್ಗತವಾಗಿರುವ ಪರಮಾತ್ಮನನ್ನು ಯೌಗಿಕ ಮಾರ್ಗದಿಂದ ಕಾಣಬಹುದು. ಆದರೆ ಅದು ಸುಲಭವಲ್ಲ, ವಿವಿಧ ಸೋಪಾನಗಳನ್ನು ಹತ್ತಿ ನೆತ್ತಿಮುಟ್ಟುವ ತನಕ ಸಾಧನೆ ಮಾಡಬೇಕು" ಎಂಬ ಸತ್ಯವನ್ನು ಯೌಗಿಕ ಪರಿಭಾಷೆಯಲ್ಲೇ ಹಿಡಿದಿಟ್ಟಿರುವ ಈ ಮುಂಡಿಗೆ ತನ್ನ ಬಂಧುರ ಶಿಲ್ಪದಿಂದ, ಸುಂದರ ಭಾವಭಾಷೆಯ ನಿಗೂಢ ಬೆಸುಗೆಯಿಂದ, ಸಾನು ಪ್ರದೇಶದಿಂದ



ಹೊರಟು ಶಿಖರ ಮುಟ್ಟುವ ಪಥಕ್ರಮಣದ ಕ್ರಮಬದ್ಧವಾದ ಬೆಳವಣಿಗೆಯಿಂದ ಆಕರ್ಷಿಸುತ್ತದೆ; ಕೆನೆಗಟ್ಟಿದ ಕಾವ್ಯಧರ್ಮದಿಂದ ಕಂಗೊಳಿಸುತ್ತದೆ.

ಅರ್ಥ– ೧. ಅಡಿಯನಂಬರ ಮಾಡದನಕ = ದೇಹತತ್ತ್ವವನ್ನು ಆತ್ಮತತ್ತ್ವವನ್ನಾಗಿ ಉದ್ದೀಪನ ಮಾಡಿದ ಹೊರತು (ಅಡಿ ಎಂದರೆ ಕೆಳಗೆ ಅಥವಾ ಹೆಜ್ಜೆ. ಅಂದರೆ ಭೂಮಿ. ಯೌಗಿಕ ಪರಿಭಾಷೆಯಲ್ಲಿ ಭೂಮಿ ದೇಹತತ್ತ್ವವನ್ನು ಪ್ರತಿನಿಧಿಸುತ್ತದೆ. ಅಂಬರ (ಆಕಾಶ) ಆತ್ಮತತ್ತ್ವವನ್ನು ಪ್ರತಿನಿಧಿಸುತ್ತದೆ) ಅರ್ಥಾತ್ ಅಧೋಮುಖಿಯಾಗಿರುವ ಕುಂಡಲಿನೀ ಶಕ್ತಿಯನ್ನು ಊರ್ಧ್ವಮುಖಿಯನ್ನಾಗಿ ಮಾಡಿದ ಹೊರತು ಎಂದು ಗೃಹೀತಾರ್ಥ.

ಅಗ್ನಿಕಿಡಿಯೆದ್ದು ಮೇಲಣ ಕೊಡನುಕ್ಕದನಕ = ಕುಂಡಲಾಗ್ನಿ ಕಿಡಿಗೊಂಡು ಅದರ ಕಾವಿನಿಂದ ಅಮೃತದ ಕೊಡ ಉಕ್ಕಿದ ಹೊರತು;

ಒಡಲೆರಡೊಂದಾಗದನಕ = ಇಡಾಪಿಂಗಳ ನಾಡಿಗಳು ಸುಷುಮ್ನಾ ನಾಡಿಯಲ್ಲಿ ಒಂದಾದ ಹೊರತು;

ಅಲ್ಲಿ ಒಡಗೂಡಿ ಅಂಗನೆ ನುಡಿಗೇಳದನಕ = ಹಾಗಾದಾಗ ಉದ್ಭವಿಸುವ ಶಕ್ತ್ಯಂಗನೆಯ ನಾದವನ್ನು ಕೇಳಿದ ಹೊರತು;

೨. ನಾಡಿ ಹಲವು ಕಟ್ಟದನಕ = ಶರೀರದ ಎಲ್ಲ ನಾಡಿಗಳನ್ನೂ ಕಟ್ಟಿದ ಹೊರತು

ಬ್ರಹ್ಮನಾಡಿಯೊಳು ಪೊಕ್ಕು ಮುಳುಗ ದನಕ = ಬ್ರಹ್ಮನಾಡಿಯನ್ನು ಪ್ರವೇಶಿಸಿ ಸಂಪೂರ್ಣ ಮುಳುಗದ ಹೊರತು;

ಕಾಡುವ ಕಪಿ ಸಾಯದನಕ = ವಾಸನಾಯುಕ್ತವಾದ ಚಂಚಲ ಮನಸ್ಸು (ಕಾಡುವ ಕಪಿ) ನಾಶವಾದ ಹೊರತು;

ಸತ್ತ ಓಡಿನೊಳಗೆ ರಸ ತೊಟ್ಟಿಕ್ಕದನಕ = ಹಾಗೆ ನಾಶವಾದ ಓಡಿನಲ್ಲಿ (ಓಡು = ಸುಟ್ಟ ಮಡಕೆಯ ಒಡೆದು ಹೋದ ಬಾಣಲಿಯಾಕಾರದ ಕೆಳ ಭಾಗ) ಅಮೃತಸೇಚನೆಯಾದ ಹೊರತು;

೩. ಆದಿ ಕುಂಭ ಕಾಣದನಕ = ಸಹಸ್ರಾರದ ಅಮೃತಕುಂಭವನ್ನು ಕಂಡ ಹೊರತು;

ಅಲ್ಲಿ ಸಾಧಿಸಿ ಭೇದಿಸಿ ಸವಿಯುಣ್ಣದನಕ = ಸಾಧಿಸಿ ಭೇದಿಸಿ ಅದರ ಸವಿಯುಂಡ ಹೊರತು

ಭೇದವು ಲಯವಾಗದನಕ = ಜೀವ–ಈಶ, ಆತ್ಮ–ಪರಮಾತ್ಮ ಭೇದ ಲಯವಾದ ಹೊರತು;

ಬಡದಾದಿಕೇಶ ನಿಮ್ಮ ನೆಲೆಗಾಣದನಕ = ಬಾಡದಾದಿಕೇಶವನ ನೆಲೆ ಕಂಡ ಹೊರತು.

(ನಿಜಯೋಗ ಸದರವಲ್ಲ ಎಂಬುದು ಗೃಹೀತಾರ್ಥ)

* * * *



## ೨೯೭
## ಕಾಂಬೋದಿ – ಝಂಪೆ

ಬಲ್ಲವರು ಪೇಳಿರಿ ಲೋಕದ ಈ ಪದನು
ಪುಲ್ಲಶರನನು ರಂಗ ಪೆತ್ತ ಮಹಿಮೆಯನು ||ಪ||

ಗರಿಯುಂಟು ನೋಡಿದರೆ ಪಕ್ಷಿಕುಲ ತಾನಲ್ಲ
ಧರೆಯ ಬೆನ್ನಲಿ ಶಿರವ ಮಡಗಿಕೊಂಡಿಹುದು
ಬರಿಗಾಲ ಭಾರದಲಿ ನಡೆಯಲೊಲ್ಲದು ಮುಂದೆ
ಎರಡು ಮೈ ಒಂದಾಗಿ ಕೂಡಿಕೊಂಡಿಹುದು ||೧||

ಇಳೆಯಲ್ಲಿ ಒಂದು ಪದ ಗಗನದಲಿ ಒಂದು ಪದ
ಕುಲ ವೈರಿಗಳ ಕೊಂದು ನಲಿದಾಡುತಿಹುದು
ಹೊಲದೊಳಗೆ ಜೋಡಗಲಿ ತಿರುಗಾಡುತಿಹದು ಅದು
ಕಳದೊಳಗೆ ಕಂಬುಗಳ ಹರಡಿಕೊಂಡಿಹುದು ||೨||

ಜನಿಸಿದಾ ಬಳಿಯಲ್ಲಿ ತಾ ಲಜ್ಜೆದೊರೆದಿಹುದು
ಕುಣಿದಾಡುತಿದೆ ಹರಿಯ ತಲೆ ತುರಗವೇರಿ
ಕನಕನೊಡೆಯನು ಕಾಗಿನೆಲೆಯಾದಿಕೇಶವನು
ಜನಕೆ ನಿತ್ಯವು ಪ್ರಸಾದವನು ಕೊಡುತಿಹನು ||೩||

ಭಾವ– ದಶಾವತಾರಗಳ ಹಿನ್ನೆಲೆಯುಳ್ಳ ಮುಂಡಿಗೆ ಇದು.

ಅರ್ಥ– ಪುಲ್ಲ = ಅರಳಿದ ಹೂ
ಪುಲ್ಲ ಶರ = ಹೂಬಾಣ (ಮನ್ಮಥ)

೧. ಗರಿಯುಂಟು... ತಾನಲ್ಲ = ಮತ್ಸ್ಯಾವತಾರ. (ಮೀನಿಗೆ ಎರಡು ಕಡೆಯೂ ಗರಿಯಿದೆ, ಹಾರುವುದಕ್ಕಲ್ಲ, ಈಜುವುದಕ್ಕೆ.)

ಧರೆಯ... ಕೊಂಡಿಹುದು = ಕೂರ್ಮಾವತಾರ (ಆದಿಶೇಷ ನಂತೆಯೇ ಕೂರ್ಮವೂ ಭೂಮಿಯನ್ನು ಹೊತ್ತಿದೆ ಎಂಬ ನಂಬಿಕೆ.)

ಬರಿಗಾಲ... ಮುಂದೆ = ವರಾಹಾವತಾರ (ಕದ್ದೊಯ್ದ ಭೂಮಿಯನ್ನು ಹೊತ್ತು ತರುತ್ತದೆ. ಭೂಮಿಯನ್ನು ಆದಿಶೇಷ ಹೊತ್ತಿದ್ದಾನೆ ಎಂಬ ನಂಬಿಕೆ ಇರುವುದರಿಂದ ಹಾವಿಗೆ ಕಾಲಿಲ್ಲವಾದ್ದರಿಂದ "ಬರಿಗಾಲ ಭೂಮಿಯನು " ಎಂದು ಬಳಸಿರಲು ಸಾಧ್ಯವಿದೆ)

ಎರಡು... ಕೊಂಡಿಹುದು = ನರಸಿಂಹಾವತಾರ (ಅರ್ಧ ಮನುಷ್ಯ ಅರ್ಧ ಸಿಂಹಾಕಾರ)

೨. ಇಳೆಯಲ್ಲಿ... ಒಂದು ಪದ = ವಾಮನಾವತಾರ

ಕುಲ... ತಿಹುದು = ಪರಶುರಾಮಾವತಾರ

ಹೊಲದೊಳಗೆ... ತಿರುಗಾಡುತಿಹುದು = ರಾಮಾವತಾರ (ವನವಾಸಕ್ಕೆ ಹೋದಾಗ ಭರತ ರಾಮನ ಪಾದುಕೆಗಳನ್ನು ತಂದು ರಾಜ್ಯಭಾರ ಮಾಡುತ್ತಾನೆ. ಆದ್ದರಿಂದ ಜೋಡು (ಪಾದುಕೆ)+ಅಗಲಿ ಎಂಬ ಪದಪ್ರಯೋಗ ಮಾಡಿರಬಹುದು ಅಥವಾ ಸೀತೆಯನ್ನು ಅಗಲಿ (ಜೋಡಿ = ಜೊತೆ) ಎಂಬ ಅರ್ಥದಲ್ಲಿ 'ಜೋಡಗಲಿ' ಎಂದು ಬಳಸಿರಬಹುದು.

ಕಳದೊಳಗೆ... ಹರಡಿಕೊಂಡಿಹುದು = ಕೃಷ್ಣಾವತಾರ (ಧರ್ಮರಾಯನ ಬಾಯಿಂದ ಅಶ್ವತ್ಥಾಮೋ ಹತಃ ಎಂದು ಹೇಳಿಸಿ, ಕುಂಜರ (ಆನೆ) ಎಂಬ ಶಬ್ದ ಕೇಳಿಸದ ಹಾಗೆ ಕಂಬು (ಶಂಖ) ಊದಿದ್ದರಿಂದ 'ಕಂಬುಗಳ' ಎಂಬ ಪ್ರಯೋಗವಾಗಿರ ಬಹುದು. ಅಥವಾ ಹೆಣಗಳಿಗೆ ರೂಪಕವಾಗಿ 'ಕಂಬುಗಳ' ಎಂಬ ಪ್ರಯೋಗ ಬಂದಿರಬಹುದು (ಕಬ್ಬುಗಳ ಎಂಬ ಪಾಠಾಂತರವೂ ಇದೆ)



೩. ಜನಿಸಿದಾ... ತೊರೆದಿಹುದು = ಬೌದ್ಧಾವತಾರ

ಕುಣಿದಾಡುತಿದೆ... ತುರುಗವೇರಿ = ಕಲ್ಕ್ಯಾವತಾರ

ಹರಿಯ ತಲೆ ತುರಗವೇರಿ = ಶ್ರೇಷ್ಠ ಕುದುರೆಯನ್ನೇರಿ

* * * *

## ೨೯೮
## ಮುಖಾರಿ – ಝಂಪೆ ತಾಳ

**ನಿಜವರಿತು ಲಿಂಗವನು ಪೂಜೆ ಮಾಡುವರಾರು**
**ನಿಜನೇಮ ನಿಷ್ಠೆಯೊಳು ನಿಂದವರ ತೋರು ॥ಪ॥**

**ಆತ್ಮವೆಂಬುದರೊಳಗೆ ಅಮೃತ ಚಿಲುಮೆಯ ತೆಗೆದು**
**ನೀತಿ ಮಾರ್ಗವೆನ್ನುವ ಕೊಡನ ಪಿಡಿದು**
**ಮೂತೆರದ ಭೇದಗಳ ಕಡಿದು ಕಣ್ಣಿಯ ಮಾಡಿ**
**ಚಿತ್‌ಲಿಂಗಕಗ್ಗವಣಿ ತಂದವರ ತೋರು ॥೧॥**

**ಪಂಚಪ್ರಾಣಗಳ ಗೊತ್ತು ಗುರಿ ಜಾಡನು ತಿಳಿದು**
**ಪಂಚಾಕ್ಷರಿಯೆಂಬ ಅರಮನೆಯೊಳಗೆ**
**ಪಂಚಭೂತಗಳೆಂಬ ಬಯಲಜಗಲಿಯೇರಿ ಪ್ರ**
**ಪಂಚಧರ ಚಿಹ್ನೆಯನು ಕಾಣುವರ ತೋರು ॥೨॥**

**ಮೂಲವಾಸನೆಯಳಿದು ಕಾಯ ವಾಸನೆ ಕಳೆದು**
**ಮೇಲೆ ಕಾರುಣ್ಯನೆಲೆಯೆಂಬುದನು ಕಂಡು**
**ನಾಲಗೆಯಿರದ ಘಂಟೆ ನಾದದಲೆಯನು ಕೇಳಿ**
**ಸಲೆ ಸೂರ್ಯ ಚಂದ್ರರೆಡೆ ಸುಳಿದವರ ತೋರು ॥೩॥**

**ಅಂತರಂಗದೊಳಗೆ ಅಷ್ಟ ಜ್ಯೋತಿಯನಿಟ್ಟು**
**ದಂತಿ ಎಂಟನು ಪಿಡಿದು ತರಿದು ಬಿಸುಟು**
**ಆಂತರ್ಯದ ಸಂತತ ಭೇರಿ ಶಬ್ದವ ಕೇಳಿ**
**ಅಂತರಾತ್ಮ ಲಿಂಗವ ಪೂಜಿಪರ ತೋರು ॥೪॥**



**ಪರಬ್ರಹ್ಮ ತನ್ನೊಳಗೆ ಪರಿಪೂರ್ಣವಾಗಿರಲು**
**ಪರಂಜ್ಯೋತಿ ಲಿಂಗವ ಬಯಸಿ ನೋಡು**
**ವರ ಬಾಡಬಂಕಾಪುರದ ಆದಿಕೇಶವನ**
**ಕುರಿತು ತಿಳಿಯೊ ಹಳೆಗನ್ನಡದ ಸೊಬಗ ॥೫॥**

ಭಾವ– ಇದು ಬೆಡಗಿನ ಅಥವಾ ಮುಂಡಿಗೆಯ ರೂಪದ ಕೀರ್ತನೆ. ನೇಮ ನಿಷ್ಠೆಯಿಲ್ಲದ ಆದರೆ ನಟನೆ ಇರುವ ಕೆಲವು ಲಿಂಗವಂತರನ್ನು ದೃಷ್ಟಿಯಲ್ಲಿಟ್ಟುಕೊಂಡು ರಚಿತವಾಗಿರುವಂಥದು. ಅಷ್ಟಾಂಗ ಯೋಗದ ಮೂಲಕ ಅಂತರಾತ್ಮನನ್ನು ಕಾಣುವ ಆಶಯ ಆಂತರ್ಯದಲ್ಲಿದೆ.

ಅರ್ಥ– ಕೊಡನ = ಕೊಡವನ್ನು (ಗಡಿಗೆ ಅಥವಾ ಬಿಂದಿಗೆಯನ್ನು)
ಮೂತೆರದ ಭೇದಗಳು = ಸತ್ತ್ವಗುಣ, ರಜೋಗುಣ, ತಮೋ ಗುಣ
ಕಣ್ಣಿ = ಹಗ್ಗ
ಅಗ್ಗವಣಿ = ನೀರು
ಪಂಚಪ್ರಾಣಗಳು = ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ
ಪಂಚಾಕ್ಷರಿ = ಐದು ಅಕ್ಷರಗಳ ಮಂತ್ರ (ಓಂ ನಮಃ ಶಿವಾಯ)
ಪಂಚಭೂತಗಳು = ಆಕಾಶ, ವಾಯು, ಅಗ್ನಿ, ಜಲ, ಭೂಮಿ
ಪ್ರಪಂಚಧರ = ಪರಮಾತ್ಮ
ಅಷ್ಟಜ್ಯೋತಿ = ಅಷ್ಟಾಂಗಗಳು (ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ)
ದಂತಿ ಎಂಟು = ಅಷ್ಟಮದಗಳು (ಧನ, ರೂಪ, ವಿದ್ಯಾ, ಯೌವನ, ಕುಲ, ಬಲ, ರಾಜ್ಯ, ತಪ)

* * * *

## ೨೯೯
## ಮುಖಾರಿ – ಅಟತಾಳ

**ನಾಮ ಮುಂದೊ ಸ್ವಾಮಿ ವಿಭೂತಿ ಮುಂದೊ ॥ಪ॥**

**ಭೂಮಿ ಆಕಾಶ ಪೊತ್ತೊ ಆಕಾಶ ಭೂಮಿಯ ಪೊತ್ತೊ**
**ಭೂಮಿಯು ಮುಂದೊ ಆಕಾಶ ಮುಂದೊ ಸ್ವಾಮಿ ॥೧॥**

**ತತ್ತಿ ಹಕ್ಕಿಯ ಪೊತ್ತೊ ಹಕ್ಕಿ ತತ್ತಿಯ ಪೊತ್ತೊ**
**ತತ್ತಿಯು ಮುಂದೊ ಹಕ್ಕಿಯು ಮುಂದೊ ಸ್ವಾಮಿ ॥೨॥**

**ಬೀಜ ವೃಕ್ಷವ ಪೊತ್ತೊ ವೃಕ್ಷ ಬೀಜವ ಪೊತ್ತೊ**
**ಬೀಜವು ಮುಂದೊ ವೃಕ್ಷವು ಮುಂದೊ ಸ್ವಾಮಿ ॥೩॥**

**ಗಂಡ ಹೆಂಡಿರ ಪೊತ್ತೊ ಹೆಂಡಿರು ಗಂಡನ ಪೊತ್ತೊ**
**ಗಂಡನು ಮುಂದೊ ಹೆಂಡಿರು ಮುಂದೊ ಸ್ವಾಮಿ ॥೪॥**

**ಕನಕನು ಹೇಳಿದ ಬೆಡಗಿದು ಕಂಡವರೆಲ್ಲರು**
**ಮನದಲಿ ಚಿಂತಿಸಿ ಮಥಿಸಿ ನವನೀತ ಕಾಣಿರಿ ॥೫॥**

ಭಾವ– ವಿಷ್ಣು ದೊಡ್ಡವನೊ ಶಿವ ದೊಡ್ಡವನೊ ಎಂಬ ಹರಿಹರ ಮತ ಭ್ರಾಂತರ ಹಗರಣದ ಕಾದೆಣ್ಣೆಯ ಬಾಣಲಿಯಲ್ಲಿ ಕನಕದಾಸರು ತಮ್ಮ ದರ್ಶನದ ಹೂರಣಗಡುಬನ್ನು ಕರಿದು ಇಟ್ಟಿದ್ದಾರೆ ಈ ಮುಂಡಿಗೆ ಯಲ್ಲಿ– ಇತ್ತಂಡಗಳು ಗುಲ್ಲೆಬ್ಬಿಸುವುದನ್ನು ಬಿಟ್ಟು ಸುಮ್ಮನೆ ಮೆಲ್ಲಿ ಎಂದು ಕಿವಿ ಹಿಂಡಿ ಹೇಳುವಂತೆ. ನಾಮ ವಿಷ್ಣುವನ್ನು ಪ್ರತಿನಿಧಿಸುತ್ತದೆ; ವಿಭೂತಿ ಶಿವನನ್ನು ಪ್ರತಿನಿಧಿಸುತ್ತದೆ. ದೇವರು ಗಳನ್ನು ನೇರವಾಗಿ ಹೆಸರಿಸದೆ, ಸಂಬಂಧಪಟ್ಟ ಲಾಂಛನಗಳನ್ನು



ಹೆಸರಿಸಿ, ನಮ್ಮದು ಮುಂದು ತಮ್ಮದು ಮುಂದು ಎಂದು ಕಚ್ಚಾಡು ವವರ ಮುಂದೆ ಸತ್ಯದ ಹಲವಾರು ದೃಷ್ಟಾಂತಗಳ ಗಟ್ಟಿ ತುಣುಕು ಗಳನ್ನು ಎಸೆದಿದ್ದಾರೆ– ಬಾಯಲ್ಲಿಟ್ಟು ಕೊಂಡು ಕಟಕಟನೆ ಕಡಿಯುತ್ತಾ ಲಲುವುತ್ತಾ ಕಚ್ಚಾಟ ನಿಲ್ಲಿಸಲಿ ಎಂದು! ನಾಮಧಾರಿಯಾದ ಕನಕದಾಸರು ಹಂಪೆಯ ವಿರೂಪಾಕ್ಷ ದರ್ಶನಕ್ಕೆಂದು ಹೋದಾಗ ವಿಭೂತಿಧಾರಿಗಳು ತಡೆದರೆಂದೂ, ಆಗ ವಾದ ಪ್ರತಿವಾದಗಳ ರಂಗೇರಿದಾಗ ಕನಕದಾಸರು ಕಟ್ಟಿ ಹಾಡಿದ ಕೀರ್ತನೆ ಇದೆಂದೂ ಪ್ರತೀತಿ.

ಅರ್ಥ– ೧. ಅಧ್ಯಾತ್ಮದ ಯೌಗಿಕ ಪರಿಭಾಷೆಯಲ್ಲಿ ಭೂಮಿ ತನುವಿಗೆ ಸಂಕೇತ ವಾದರೆ, ಆಕಾಶ ಆತ್ಮಕ್ಕೆ ಸಂಕೇತ. ಆತ್ಮಕ್ಕೆ ತನುವಿನ ಆವರಣ ಬೇಕು; ತನುವಿನ ಆವರಣಕ್ಕೆ ಆತ್ಮ ಜ್ಯೋತಿಯ ಬೆಳಕು ಬೇಕು. ಅವಳಿ ಜವಳಿ ಮಕ್ಕಳಂತಿರುವ ಇವುಗಳಲ್ಲಿ ಒಂದು ಮುಂದು ಒಂದು ಹಿಂದು, ಒಂದು ಹೆಚ್ಚು ಒಂದು ಕಮ್ಮಿ ಎಂದು ಭಾವಿಸುವುದು ಖಂಡ ದೃಷ್ಟಿಯೇ ವಿನಾ ಅಖಂಡ ದೃಷ್ಟಿಯಲ್ಲ ಎಂಬ ಭಾವ.

೨. ತತ್ತಿ (ಮೊಟ್ಟೆ) ಪರಮಾತ್ಮನ ಸಂಕೇತ; ಹಕ್ಕಿ ಜೀವಾತ್ಮನ ಸಂಕೇತ. ಜೀವಾತ್ಮ ಪರಮಾತ್ಮಗಳೆರಡೂ ಪರಬ್ರಹ್ಮನ ಅವಳಿಜವಳಿ ಮಕ್ಕಳು. ಇವುಗಳಲ್ಲಿ ಮುಂದಾವುದು? ಹಿಂದಾವುದು? ಈ ಬಗೆಯ ಕಚ್ಚಾಟವೇ ಅಜ್ಞಾನಮೂಲ.

೩. ಬೀಜ ಪರಮಾತ್ಮನ ಸಂಕೇತ; ವೃಕ್ಷ ಜೀವಾತ್ಮನ ಸಂಕೇತ. ಅವೆರಡೂ ಪರಬ್ರಹ್ಮನ ಅವಳಿ ಜವಳಿ ಮಕ್ಕಳು. ಇವುಗಳಲ್ಲಿ ಮುಂದಾವುದು? ಹಿಂದಾವುದು? ಭಿನ್ನ ಪಂಥದವರ ಇಂಥ ಮೊಂಡಾಟವೇ ಮೌಢ್ಯ ಮೂಲ.

೪. ಗಂಡ ಎಂದರೆ ಲಿಂಗ (ದೇವರು) ಹೆಂಡತಿ ಎಂದರೆ ಶರಣ (ಭಕ್ತ). ಜ್ಞಾನದ ತೂರ್ಯಾವಸ್ಥೆಯಲ್ಲಿ ಶಿವನಿಲ್ಲದೆ ಶರಣನಿಲ್ಲ, ಶರಣನಿಲ್ಲದೆ ಶಿವನಿಲ್ಲ ಎಂಬ ಸತ್ಯ ಗೊತ್ತಾಗುತ್ತದೆ. ಆದ್ದರಿಂದ ಯಾವುದೂ ಮುಂದಲ್ಲ, ಯಾವುದೂ ಹಿಂದಲ್ಲ– ಆಡಿನ

ಜೋಡಿ ಮೊಲೆ ಇದ್ದ ಹಾಗೆ ಯಾವಾಗಲೂ ಸರಿಸಮಾನ ಜೊತೆ.

೫. ಬೆಡಗು = ಮುಂಡಿಗೆ, ಒಗಟು
ನವನೀತ = ಬೆಣ್ಣೆ

* * * *



## ೩೦೦
## ಮಧ್ಯಮಾವತಿ – ಮಟ್ಟೆತಾಳ

ಪರಮಪುರುಷ ನೀ ನೆಲ್ಲಿಕಾಯಿ ॥ಪ॥
ಸರಸಿಯೊಳಗೆ ಕರಿ ಕೂಗಲುಕಾಯಿ ॥ಅ॥

ಹಿರಿದು ಮಾಡಿದ ಪಾಪ ನುಗ್ಗೆ ಕಾಯಿ
ಹರಿ ನಿನ್ನ ಧ್ಯಾನ ಬಾಳೆಕಾಯಿ
ಸರುವ ಜೀವರಿಗುಣಿಸಿಯುಂ ಬದನೆಕಾಯಿ
ಅರಿಷಡ್ವರ್ಗಗಳೊದಗಿಲಿ ಕಾಯಿ ॥೧॥

ಕ್ರೂರ ವ್ಯಾಧಿಗಳೆಲ್ಲ ಹೀರೆಕಾಯಿ
ಘೋರ ದುಷ್ಕೃತಗಳು ಸೋರೆಕಾಯಿ
ಭಾರತ ಕಥೆ ಕರ್ಣ ತುಪ್ಪಿರೆ ಕಾಯಿ
ವಾರಿಜಾಕ್ಷನೆ ಗತಿಯೆಂದಿಪ್ಪೆ ಕಾಯಿ ॥೨॥

ಮುರಹರ ನಿನ್ನವರು ಅವರೆಕಾಯಿ
ಗುರು ಕರುಣಾಮೃತ ಉಣಸಿಕಾಯಿ
ವರ ಭಕ್ತ ವತ್ಸಲನೆಂಬ ಹೆಸರಕಾಯಿ
ಸಿರಿಯಾದಿ ಕೇಶವ ನಿನ್ನ ನಾಮ ಮೆಣಸೆಕಾಯಿ ॥೩॥

ಭಾವ– ಜನಸಾಮಾನ್ಯರಿಗೆ ಚಿರಪರಿಚಿತವಾದ ದಿನಬಳಕೆಯ ತರಕಾರಿ–ಕಾಯಿಗಳನ್ನು ಬಳಸಿಕೊಂಡು ಕೆಳಸ್ತರವ ಜನರಲ್ಲಿ ಮೊದಲು ಕುತೂಹಲ ಮೂಡಿಸಿ, ತರುವಾಯ, ಅವರು ಸಾವಧಾನವಾಗಿ ಮೆಲುಕು ಹಾಕಿದಂತೆಲ್ಲ ರುಚಿ ಹತ್ತಿ, ಸೊರಬಿಟ್ಟು ನಿಂತ ಉನ್ನತಾರ್ಥದ ಕೆಚ್ಚಲಿಗೆ ಬಾಯಿ ಹಾಕಿ ತಾವಾಗಿಯೇ ಹಾಲು ಕುಡಿಯುವಂತೆ ಮಾಡಿ, ಅವರನ್ನು ಅರಿವಿನ ಮೇಲುಸ್ತರಕ್ಕೆತ್ತುವ ಪ್ರಯತ್ನವನ್ನು ಮಾಡಿದ್ದಾರೆ ಕನಕದಾಸು–

ಈ ಕೀರ್ತನೆಯಲ್ಲಿ. ಕೆಳಸ್ತರದ ಸಾಮಾನ್ಯ ಜನರಲ್ಲಿ, ದೀನ ದಲಿತರಲ್ಲಿ ಅರಿವಿನ ಸ್ಪಂದನ ಮೂಡಿಸಬಯಸುವ ಕನಕದಾಸರ ಈ ನಿಲುವು ಅವರ ಜನಸಂಮುಖ ದೃಷ್ಟಿಯನ್ನು ಸೂಚಿಸುತ್ತದೆ. ಈ ಮುಂಡಿಗೆಯಲ್ಲಿ ಬಳಕೆಯಾಗಿರುವ ನೆಲ್ಲಿಕಾಯಿ, ಕೂಗಲುಕಾಯಿ (ಮೋ.ತ.ಯಲ್ಲಿ ಕೂಗಲುಕಾಯಿ ಪ್ರಸ್ತಾಪವಿದೆ)... ನುಗ್ಗೆಕಾಯಿ, ತುಪ್ಪೀರೆ ಕಾಯಿ, ಇಪ್ಪೆಕಾಯಿ, ಅವರೆಕಾಯಿ, ಉಣಿಸೆಕಾಯಿ, ಹೆಸರಕಾಯಿ, ಮೆಣಿಸೆಕಾಯಿಗಳಿಗೆ ಬೇರೊಂದು ಬಗೆಯ ಅರ್ಥ ಆವಾಹನೆ ಗೊಳ್ಳುವಂತೆ ಮಾಡಿರುವ ಕೌಶಲ್ಯ ಕನಕಯೋಗ್ಯವಾದುದು; ಕನಕ ವಿಶಿಷ್ಟವಾದುದು.

ಅರ್ಥ– ನೀ ನೆಲ್ಲಿಕಾಯಿ ಎಂಬುದನ್ನು ನೀನು+ಎಲ್ಲಿ+ಕಾಯಿ ಎಂದು ಅರ್ಥೈಸಬೇಕು.

ಸರಸಿ... ಕಾಯಿ = ಸರೋವರದಲ್ಲಿ ಆನೆ ಮೊಸಳೆಬಾಯಿಗೆ ಸಿಕ್ಕಿ ಕೂಗಿಕೊಂಡಾಗ ಅದನ್ನು ಕಾಪಾಡು ಎಂದರ್ಥ.

೧. ಹಿರಿದು... ನುಗ್ಗೆಕಾಯಿ = ನುಗ್ಗೆ (ನುರ್ಗು<ನುರ್ಕು=ಪುಡಿಮಾಡು) ಅಂದರೆ ಮಾಡಿದ ಪಾಪವೆಲ್ಲ ಪುಡಿಪುಡಿಯಾಗಿ ನಾಶವಾಗುವಂತೆ ಮಾಡಿ ಕಾಪಾಡು.

ಹರಿ... ಬಾಳೆಕಾಯಿ = ಬಾಳೆ ಎಂದರೆ ಬಾಳುವಂತೆ, ಸದಾ ಇರುವಂತೆ ಕಾಪಾಡು

ಸರುವ... ಬದನೆಕಾಯಿ = ಸರ್ವ ಜೀವರಿಗೂ ಉಣಿಸಿ, ನೀನು ಮಾತ್ರ ಉಣ್ಣದವನು ನಮ್ಮನ್ನು ಕಾಪಾಡು ಎಂದರ್ಥ. ಉಣಸಿ+ಉಂಬದನೆ (ಉಣ್ಣದವನೆ) ಎಂದು ಪದವಿಭಾಗ ಮಾಡಿಕೊಳ್ಳಬೇಕು.

ಅರಿ... ಇಲಿ ಕಾಯಿ = ಕಾಮಕ್ರೋಧಾದಿ ಷಡ್‌ವೈರಿಗಳು ಒದಗದಂತೆ ಕಾಯಿ; ಕನ್ನಡದಲ್ಲಿ 'ಇಲಿ' ಎಂಬ ಪ್ರತ್ಯಯ ಸೇರಿದರೆ ಇಲ್ಲ ಎಂಬ ಅರ್ಥ ಬರುತ್ತದೆ. ಉದಾ: ನಾಣಿಲಿ = ನಾಚಿಕೆ ಇಲ್ಲದ. ಒದಗಿಲಿ ಎಂದರೆ ಒದಗದಂತೆ ಎಂದರ್ಥ (ಮಲೆನಾಡಿನಲ್ಲಿ ಇಲಿಕಿವಿ ಸೊಪ್ಪನ್ನು 'ಅಕ್ಕಿಬೋಜ' ಎಂಬ ಮದ್ಯ ತಯಾರಿಕೆಗೆ ಬಳಸುತ್ತಾರೆ. ಇಲಿಕಿವಿಸೊಪ್ಪಿನ ಹಸಳೆ (ಮಜ್ಜಿಗೆ ಬಿಟ್ಟ ಸಾರು) ಮಾಡಿಕೊಂಡು ಬಸುರಿಯರು ಊಟ ಮಾಡುತ್ತಾರೆ– ವಾಂತಿ ನಿಲ್ಲುತ್ತದೆ ಎಂದು)



೨. ಕ್ರೂರ... ಹೀರೆಕಾಯಿ = ಕ್ರೂರ ರೋಗಗಳೆಲ್ಲ ಹೀರಿ ಹೋಗುವಂತೆ ಅಥವಾ ಬತ್ತಿ ಹೋಗುವಂತೆ ಮಾಡಿ ನಮ್ಮನ್ನು ಕಾಯಿ.

ಘೋರ... ಸೋರೆಕಾಯಿ = ಕೆಟ್ಟ ಕೃತ್ಯಗಳು ಸೋರಿ ಹೋಗುವಂತೆ ಮಾಡಿ ಕಾಪಾಡು ಎಂದರ್ಥ.

ಭಾರತ... ತುಪ್ಪಿರೆಕಾಯಿ = ತುಪ್ಪು ಎಂದರೆ ಉಗಿ, ಜಿನುಗು ಎಂದು ಅರ್ಥ. ಭಾರತ ಕಥೆ ಕರ್ಣದಲ್ಲಿ ಜಿನುಗುತ್ತಿರುವ ಭಕ್ತರನ್ನು ಕಾಯಿ ಎಂದರ್ಥ.

ವಾರಿಜಾ... ಇಪ್ಪೆಕಾಯಿ = ಇಪ್ಪೆ (<ಇರ್ಪೆ = ಇರುವೆ) ಎಂದರೆ ಇರುವೆ, ಇದ್ದೇನೆ. ನೀನೇ ಗತಿಮತಿಯೆಂದು ನಾನಿದ್ದೇನೆ, ಕಾಪಾಡು ಎಂದರ್ಥ.

೩. ಮುರಹರ... ಅವರೆಕಾಯಿ = ಅವರೆ ಎಂದರೆ ಇದ್ದಾರೆ ಎಂದರ್ಥ. ಇದ್ದಾರ? ಎಂಬರ್ಥದಲ್ಲಿ ಇಂದಿಗೂ ಹಳೇ ಮೈಸೂರಿನ ಕಡೆ 'ಮನೇಲಿ ಅವರ?' ಎಂದು ಕೇಳುವ ರೂಢಿ ಉಂಟು.

ಗುರು... ಉಣಿಸಿ ಕಾಯಿ = ಗುರು ಕರುಣಾಮೃತವನ್ನು ಉಣ್ಣಿಸಿ ಕಾಪಾಡು

ವರ... ಹೆಸರಕಾಯಿ = ಭಕ್ತರ ಮೇಲೆ ವಾತ್ಸಲ್ಯ ಜಾಸ್ತಿ ಎಂಬ ನಿನ್ನ ಹೆಸರ(ಕೀರ್ತಿ)ನ್ನು ಕಾದುಕೊ ಅಥವಾ ಉಳಿಸಿಕೊ.

ಸಿರಿ.... ಮೆಣಿಸೆಕಾಯಿ = ನಿನ್ನ ನಾಮ ಮೆಣಿಸೆಕಾಯಿ ಎಂಬುದನ್ನು ನಾಮಂ+ಎಣಿಸೆ+ಕಾಯಿ ಎಂದು ಪದವಿಭಾಗ ಮಾಡಿ ಕೊಂಡರೆ ಉಚಿತಾರ್ಥ ಲಭಿಸುತ್ತದೆ. ಅಂದರೆ ಕೇಶವಾದಿ ಕೃಷ್ಣ ಪರ್ಯಂತ ನಿನ್ನ ೨೪ ಹೆಸರುಗಳನ್ನು ಯಾರು ನಿತ್ಯ ಪಾರಾಯಣ ಮಾಡುತ್ತಾರೊ ಅಂಥ ಭಕ್ತನರ್ನು ಕಾಪಾಡು ಎಂದರ್ಥ.

* * * *

## ೩೦೧
## ಪಂತುವರಾಳಿ – ಅಟತಾಳ

**ಒಡವೆ ಹೋಯಿತು ಮನ ದೃಢವಾಯಿತು ॥ಪ॥**
**ಹಿಡಿದರೋಡುವ ಕಳ್ಳ ಬಿಡದೆ ಕದ್ದುಕೊಂಡು ಹೋದ ॥ಅ॥**

**ಆರು ಜೋಡಿನ ಓಲೆಯಿತ್ತು ಮೂರು ಮುತ್ತಿನ ಮೂಗುತಿಯಿತ್ತು**
**ಚಾತುತರದ ಇಪ್ಪತ್ನಾಲ್ಕೆಳೆಯ ಸರವು ಒಂದಿತ್ತು**
**ಈರೈದು ತಾಳಿಗಳಿತ್ತು ಬಿರುದಿನ ಕಪ್ಪೆಂಟಿತ್ತು**
**ದಾರಿ ನೋಡಿಕೊಂಡು ಇದ್ದ ಛಾಯನೆಂಬ ಕಳ್ಳ ಕದ್ದ ॥೧॥**

**ಎಪ್ಪತ್ತೆರಡು ಸಾವಿರ ಸೂತ್ರದ ಹಸ್ತಕಟ್ಟು ಎರಡಿತ್ತು**
**ಕಪ್ಪು ಬಿಳುಪು ಕೆಂಪು ವರ್ಣದ ಪದಕ ಒಂದಿತ್ತು**
**ಒಪ್ಪವಿತ್ತ ಹಸ್ತಕಡಗ ಆಶಾಪಾಶವೆರಡಿತ್ತು**
**ಒಪ್ಪವನ್ನು ಸಾಧಿಸಿ ನೇತ್ರನೆಂಬ ಕಳ್ಳ ಕದ್ದ ॥೨॥**

**ಹುಟ್ಟು ಸಾವು ಎರಡು ಎಂಬ ಘಟ್ಟಿ ತೂಕದ ನಗವಿತ್ತು**
**ಕಷ್ಟ ಸುಖ ಕರ್ಮಗಳೆಂಬ ಸಂಚಿಗಳಿತ್ತು**
**ಅಷ್ಟು ಇಷ್ಟು ಚಿಲ್ಲರೆ ಒಡವೆ ಪೆಟ್ಟಿಗೆಯಲಿ ತುಂಬಿತ್ತು**
**ದೃಷ್ಟಿ ನೋಡಿಕೊಂಡು ಇದ್ದ ಧರ್ಮನೆಂಬ ಕಳ್ಳ ಕದ್ದ ॥೩॥**

**ಎಲ್ಲ ಒಡವೆ ಹೋಯಿತಾದರು ಪುಲ್ಲಳಾಗಿ ಮೆರೆಯುತಾಳೆ**
**ಚೆಲ್ವನೊಬ್ಬ ಪುರುಷನ ಕಂಡು ತಾಳಲಾರದೆ**
**ಬಲ್ಲಿದಳು ಈಕೆ ಎಂದು ಇವಳ ಬಗೆ ತಿಳಿಯಿತೆಂದು**
**ಕೊಲ್ಲಬಾರದೆನುತ ಹೇಳಿ ಮನೆಯ ಬಿಟ್ಟು ಹೊರಗಟ್ಟಿದ ॥೪॥**



**ಇಂಥ ಒಡವೆ ಹೋಯಿತೆಂದು ಚೋದ್ಯಪಟ್ಟು ನೋಡುತಿರಲು**
**ತಂತ್ರ ಮಾಡಿ ಆದಿಕೇಶವ ಶ್ರೀಹರಿಯು ತಾನೆ ಬಂದು**
**ತಂತ್ರವನ್ನು ಹೇಳಿ ಜ್ಞಾನ ಮಾರ್ಗವನ್ನು ಬಿಟ್ಟುಕೊಟ್ಟು**
**ಸಂತಸದಿಂದ ಇರು ಎಂದು ಚಿಂತೆ ಬಿಡಿಸಿ ಸಲೆ ಸಲಹಿದ ॥೫॥**

ಭಾವ– ಅಂತರಾತ್ಮನಾದ ಚೆಲುವರಾಯನನ್ನು ಕಾಣಲು ತೊಡಕಾಗಿದ್ದ ಎಲ್ಲ ಉಪಾಧಿಗಳನ್ನು ಕಳೆದುಕೊಂಡು ಬರಿ–ಗೈಯಾದಾಗ, ಜ್ಞಾನಶಕ್ತಿಯೆಂಬ ಬೆಡಗಿ ಚೆಂದುಳ್ಳಿ ಚೆಲುವನನ್ನು ಕಂಡು ತಕಪಕನೆ ತಹತಹ ಪಡುತ್ತಾಳೆ. ಇದನ್ನರಿತ ಆ ಸುಂದರ ಪುರುಷ ಸೂಕ್ತ ತಂತ್ರವನ್ನು ಮಾಡಿ ಸಂತಸದಿಂದಿರುವ ಮಂತ್ರ ಬೋಧಿಸಿದ್ದನ್ನು ಈ ಕೀರ್ತನೆ ಧ್ವನಿಸುತ್ತದೆ.

ಅರ್ಥ– ಆರು ಜೋಡಿನ ಓಲೆಯಿತ್ತು = ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳೆಂಬ ಆರು ಹಗೆಗಳ ಹರಳು ಅದ್ದಿದ ಓಲೆಯಿತ್ತು. ಮೂರು ಮುತ್ತಿನ ಮೂಗುತಿ ಇತ್ತು = ಸ್ಥೂಲ ದೇಹ, ಸೂಕ್ಷ್ಮದೇಹ (ಲಿಂಗದೇಹ) ಕಾರಣ ದೇಹಗಳೆಂಬ ಮೂರುಕಲ್ಲಿನ ಮೂಗು ಬಟ್ಟಿತ್ತು.

ಚಾರುತರದ = ಸುಂದರವಾದ

| | | |
|---|---|---|
| ಇಪ್ಪತ್ನಾಲ್ಕೆಳೆಯ ಸರವೊಂದಿತ್ತು = | ಪಂಚಭೂತಗಳು | ೫ |
| | ಪಂಚ ಜ್ಞಾನೇಂದ್ರಿಯ | ೫ |
| | ಪಂಚ ಕರ್ಮೇಂದ್ರಿಯ | ೫ |
| | ಪಂಚ ತನ್ಮಾತ್ರಗಳು | ೫ |
| | ಅಂತರಂಗ ಚತುಷ್ಟಯ | ೪ |
| | | ೨೪ |

ಈರೈದು ತಾಳಿಗಳಿತ್ತು = ಪಂಚಕರ್ಮೇಂದ್ರಿಯಗಳ ಹಾಗೂ ಪಂಚಜ್ಞಾನೇಂದ್ರಿಯಗಳ ಹತ್ತು ತಾಳಿಗಳಿದ್ದವು.

ಬಿರುದಿನ ಕಪ್ಪೆಂಟಿತ್ತು = ಅಷ್ಟಮದಗಳ ಕೈಕಪ್ಪವಿತ್ತು

೨. ಎಪ್ಪತ್ತೆರಡು... ಇತ್ತು = ಎಪ್ಪತೆರಡು ಸಾವಿರ ನಾಡಿಗಳ ಎರಡು ಹಸ್ತಕಟ್ಟಿತ್ತು.

ಕಪ್ಪು... ಪದಕ ಒಂದಿತ್ತು = ಸತ್ತ್ವ ರಜಸ್ಸು ತಮಸ್ಸು ಎಂಬ ಪದಕವೊಂದಿತ್ತು

ಒಪ್ಪ.... ಎರಡಿತ್ತು = ಆಶಾಪಾಶಗಳೆಂಬ ಎರಡು ಹಸ್ತಕಡಗಗಳಿದ್ದವು.

ಹುಟ್ಟು... ನಗವಿತ್ತು = ಜನ್ಮಮರಣವೆಂಬ ಶಾಶ್ವತಸತ್ಯದ ಆಭರಣವಿತ್ತು.

ಕಷ್ಟ... ಸಂಚಿಗಳಿತ್ತು = ಕಷ್ಟ ಸುಖ ಕರ್ಮಗಳೆಂಬ ತಾಂಬೂಲ ಚೀಲಗಳಿದ್ದವು.

೪. ಪುಲ್ಲಳಾಗಿ = ಅರಳಿದ ಹೂವಿನಂತೆ ನಗುನಗುತ

೫. ಚೋದ್ಯ = ಆಶ್ಚರ್ಯ

* * * *



## ೩೦೨
## ರಾಗ? – ತಾಳ?

**ಬಯಲ ಬಾವಿ ನೀರಿಗ್ಹೋಂಟಾಳೊಬ್ಬ ಬಾಲಿ**
**ಹರಿಯೋ ಹೊಳಿ ನೀರಿಗ್ಹೋಂಟಾಳೊಬ್ಬ ಬಾಲಿ ॥ಪ॥**

**ಕಾಲಿಟ್ಟು ಮೊಗಿಬ್ಯಾಡ ಕೈಯಿಟ್ಟು ಹೊರಬ್ಯಾಡ**
**ನೀರಿಲ್ಲದೆ ಮನಿಗಿ ಬರಬ್ಯಾಡ ॥೧॥**

**ಸತ್ತದ್ದು ತರಬೇಡ ಜೀವದ್ದು ಕೊಲಬ್ಯಾಡ**
**ಬಾಡಿಲ್ಲದೆ ಮನಿಗಿ ಬರಬ್ಯಾಡ ॥೨॥**

**ಕಾಗಿನೆಲೆ ಕನಕದಾಸ ಹಾಕಿದ ಮುಂಡಿಗಿ**
**ಬಲ್ಲಂಥ ಒಡೆಯರು ಒಡೆದು ಹೇಳಿರಣ್ಣ ॥೩॥**

ಭಾವ– ಪರಮಾತ್ಮಾನುಸಂಧಾನದಲ್ಲಿ ಕಾರ್ಯಮಗ್ನವಾದ ಜೀವಾತ್ಮ ಮತ್ತು ಜ್ಞಾನಕನ್ಯೆಯ ಮಧ್ಯೆ ಜರುಗಿದ ಸಂವಾದ ರೂಪದ ಮುಂಡಿಗೆ ಇದು. ಪ್ರಾಪಂಚಿಕ ಅರ್ಥ ಹಾಗೂ ಪಾರಮಾರ್ಥಿಕ ಅರ್ಥಗಳೆರಡನ್ನೂ ಇದರಲ್ಲಿ ಮೇಳೈಸಿ ಹೇಳಲಾಗಿದೆ.

ಲೌಕಿಕ ಅರ್ಥ ೧. ಕಾಲಿಟ್ಟು... ಬರಬ್ಯಾಡ = ಎಳನೀರು
೨. ಸತ್ತದ್ದು... ಬರಬ್ಯಾಡ = ಕೋಳಿ ಮೊಟ್ಟೆ

ಅಲೌಕಿಕ ಅರ್ಥ ೧. ಪರಮಾತ್ಮನ ಪೂಜೆಗೆ ತರುವ ಅಗ್ಘವಣಿ ಕಾಲಿನ ಸ್ಪರ್ಶದಿಂದ ಮತ್ತು ಕರಸ್ಪರ್ಶದಿಂದ ಮೀಸಲಳಿಯುವುದು ಬೇಡ ಎಂಬುದು ಜ್ಞಾನಕನ್ಯೆಗೆ ಜೀವಾತ್ಮನು ಹೇಳುವ ಮಾತು.

೨. ಕೊಳೆತ ಮನಸ್ಸನ್ನಾಗಲೀ ಅಥವಾ ಕೊಲೆಗೈದ ಮನಸ್ಸನ್ನಾಗಲೀ ತರದೆ ಏಕಾಗ್ರಗೊಂಡ ಮನಸ್ಸನ್ನು ಪರಮಾತ್ಮನಿಗೆ ತಂದೊಪ್ಪಿಸು ಎಂದು ಜ್ಞಾನಕನ್ಯೆ ಗಂಡನಾದ ಜೀವಾತ್ಮನಿಗೆ ಹೇಳುತ್ತಾಳೆ. (ಇಬ್ಬರ ಸಂಭಾಷಣೆಯಲ್ಲೂ ಮಾನಸಪೂಜೆಗೆ ಒತ್ತು ಬಿದ್ದಿದೆ ಎನ್ನಿಸುತ್ತದೆ)

ಬಹುಶಃ ಕನಕದಾಸರ ಈ ಮುಂಡಿಗೆಯ ಪಾರಮಾರ್ಥಿಕ ಅರ್ಥ ನಮಗೆ ಹೆಚ್ಚು ಸ್ಪಷ್ಟವಾಗುತ್ತದೆ– ಬಸವಣ್ಣನವರ ಇದೇ ಅರ್ಥದ ಎರಡು ವಚನಗಳ ಮೇಲೆ ಕಣ್ಣಾಡಿಸಿದರೆ, ಕಾವು ಕೂತರೆ!

೧. ಮೀಸಲು ಬೀಸರವಾಗದ ಪರಿಯ ನೋಡ
ಕಾಲು ತಾಗಿದ ಅಗ್ಘವಣೆ ಕೈಮುಟ್ಟಿದ ಅರ್ಪಿತ
ಮನಮುಟ್ಟಿದ ಆರೋಗಣೆಯನೆಂತು ಘನವೆಂಬೆನಯ್ಯಾ?
ಬಂದ ಪರಿಯಲಿ ಪರಿಣಾಮಿಸಿ, ನಿಂದ ಪರಿಯಲಿ ನಿಜ ಮಾಡಿ
ಆನೆಂದ ಪರಿಯಲಿ ಕೈಕೋ ಕೂಡಲ ಸಂಗಮದೇವಾ

೨. ಎಲ್ಲರ ಗಂಡರು ಬೇಂಟೆಯ ಹೋದರು
ನೀನೇಕೆ ಹೋಗೆ ಎಲೆ ಗಂಡನೆ
ಸತ್ತುದ ತಾರದಿರು, ಕೈಮುಟ್ಟಿ ಕೊಲ್ಲದಿರು
ಅಡಗಿಲ್ಲದೆ ಮನೆಗೆ ಬಾರದಿರು
ದೇವರ ಧರ್ಮದಲೊಂದು ಬೇಂಟೆ ದೊರೆಕೊಂಡಡೆ
ಕೂಡಲ ಸಂಗಮದೇವನಿಗರ್ಪಿತವ ಮಾಡುವೆ, ಎಲೆ ಗಂಡನೆ

* * * *



## ೩೦೩
## ರಾಗ? – ತಾಳ?

ಮುಳ್ಳು ಮೊನಿಯ ಮ್ಯಾಲ ಮೂರು ಕೆರಿಯ ಕಟ್ಟಿ
ಎರಡು ಹೂಳು, ಒಂದು ತುಂಬಲೆ ಇಲ್ಲ ॥೧॥

ತುಂಬದ ಕೆರೆಗೆ ಮೇಯಾಕ ಬಂದವು ಮೂರು ಎಮ್ಮಿ
ಎರಡು ಗೊಡ್ಡು, ಒಂದು ಕಂದು ಹಾಕಿ ಕರುವೆ ಇಲ್ಲ ॥೨॥

ಕರುವಿಲ್ಲದ ಎಮ್ಮಿಯ ಕೂಡಿದರ ಮೂವರು ಹೆಣ್ಮಕ್ಕಳಾ
ಇಬ್ಬರು ಬಂಜೆಯರು, ಒಬ್ಬಾಕಿ ಹಡೆದೇ ಇಲ್ಲ ॥೩॥

ಹಡೆಯದ ಹೆಣ್ಣ ಕೂಡಿಕೊಂಡರು ಮೂವರು ಕುಂಬಾರರು
ಇಬ್ಬರು ಚೊಂಚರು, ಒಬ್ಬಗೆ ಕೈಯೇ ಇಲ್ಲ ॥೪॥

ಕೈಯಿಲ್ಲದ ಕುಂಬಾರ ಮಾಡಿಕೊಟ್ಟ ಮೂರು ಮಡಿಕಿಗಳ
ಎರಡು ದದ್ದು, ಒಂದಕೆ ತಳವೆ ಇಲ್ಲ ॥೫॥

ತಳವಿಲ್ಲದ ಮಡಕಿಗಿ ಕೊಟ್ಟಾರ ಮೂರು ರೊಕ್ಕ
ಎರಡು ನಕಲು, ಒಂದು ಸವಕಲು ॥೬॥

ಸವಕಲು ರೊಕ್ಕದಾಗ ಕುಚ್ಚಲಿಕೆ ತಂದಾರ ಮೂರು ಕಡುಬ
ಎರಡು ಕುದಿಯಲಿಲ್ಲ, ಒಂದು ಬೇಯಲಿಲ್ಲ ॥೭॥

ಬೇಯದ ಕಡುಬಿಗಿ ಬಂದಾರ ಮೂವರು ಬೀಗರ
ಇಬ್ಬರು ಬೊಚ್ಚರು, ಒಬ್ಬಗೆ ಹಲ್ಲೇ ಇಲ್ಲ ॥೮॥

**ಹಲ್ಲಿಲ್ಲದ ಬೀಗನಿಗೆ ಕೊಟ್ಟಾರ ಮೂರು ಚಿಕಣಿ ಅಡಕಿ**
**ಎರಡು ಗೋಟು, ಒಂದು ಸಿಡಿದು ಕಾಣೆಯಾಯಿತು ॥೯॥**

**ಕಾಣೆಯಾದ ಅಡಿಕಿಯ ನೋಡಾಕಂತ ಹೋಗ್ಯಾರ ಮೂರ ಮಂದಿ**
**ಇಬ್ಬರು ಒಂಚೊರಿ, ಒಬ್ಬಗೆ ಕಣ್ಣೇ ಇಲ್ಲ ॥೧೦॥**

**ಕಣ್ಣಿಲ್ಲದವನ ಕರೆತರಬೇಕಂತ ಹೋಗ್ಯಾರ ಮೂರ ಮಂದಿ**
**ಇಬ್ಬರು ಕುಂಟರು, ಒಬ್ಬಗೆ ಕಾಲೇ ಇಲ್ಲ ॥೧೧॥**

**ಕಾಲಿಲ್ಲದವನ ಹೊತ್ತು ತರಬೇಕಂತ ಹೋಗ್ಯಾರ ಮೂರು ಮಂದಿ**
**ಇಬ್ಬರು ಲಂಡರು, ಒಬ್ಬ ಮೊಂಡ ॥೧೨॥**

**ಕಾಗಿನೆಲೆ ಕನಕದಾಸ ಹಾಕಿದ ಮುಂಡಿಗಿ**
**ಇದ ತಿಳಿದವ ಜಾಣ, ಒಡೆದು ಹೇಳದವ ಕೋಣ ॥೧೩॥**

ಭಾವ– ಜೀವ ದೇಹ ರಚನೆಯ ಹಾಸು ಹೊಕ್ಕಿನ ನೇಯ್ಗೆ ಈ ಮುಂಡಿಗೆಯ ಭಾವ ಇದ್ದಂತಿದೆ.

ಅರ್ಥ– ೧. ಮುಳ್ಳು ಮೊನಿ = ಅಣು ಪ್ರಮಾಣದ ಜೀವ
ಮೂರು ಕೆರಿ = ದೇಹತ್ರಯ (ಸ್ಥೂಲ, ಸೂಕ್ಷ್ಮ, ಕಾರಣ)
ಎರಡು ಹೂಳು = ಸೂಕ್ಷ್ಮಕಾರಣ ದೇಹಗಳು; ತುಂಬದ್ದು ಸ್ಥೂಲದೇಹ

೨. ಮೂರು ಎಮ್ಮಿ = ಅವಸ್ಥಾತ್ರಯ (ಜಾಗ್ರತ, ಸ್ವಪ್ನ, ಸುಷುಪ್ತಿ)
ಎರಡು ಗೊಡ್ಡು (ಬರಡು) = ಸ್ವಪ್ನ, ಸುಷುಪ್ತಿ; ಜಾಗ್ರತ ಒಮ್ಮೆ ಸತ್ತ ಕರುವನ್ನು ಈದು ಮತ್ತೆ ತುಂಬಾಗಿ ಹಡೆಯುವ ಹಂತಕ್ಕೆ ಬಂದಿಲ್ಲ.

೩. ಮೂವರು ಹೆಣ್ಮಕ್ಕಳು = ಕರ್ಮತ್ರಯ (ಸಂಚಿತ, ಆಗಾಮಿ, ಪ್ರಾರಬ್ಧ)
ಇಬ್ಬರು ಬಂಜಿಯರು = ಸಂಚಿತ ಆಗಾಮಿ ಬಂಜೆಯರು ಪ್ರಾರಬ್ದ ಇನ್ನು ಬಸಿರಾಗಿ ಹಡೆದಿಲ್ಲ.

೪. ಮೂವರು ಕುಂಬಾರರು = ವಿಷ್ಣು, ಬ್ರಹ್ಮ, ಮಹೇಶ್ವರ (ವಿಶ್ವ, ತೈಜಸ, ಪ್ರಾಜ್ಞ?)
ಇಬ್ಬರು ಚೊಂಚರು = ವಿಷ್ಣು ಬ್ರಹ್ಮ ಇಬ್ಬರೂ ಸೊಟ್ಟಗೈಯವರು, ಇನ್ನು ಮಹೇಶ್ವರನಿಗೆ ಕೈಯೇ ಇಲ್ಲ.

೫. ಮೂರು ಮಡಕಿಗಳು = ಬಾಲ್ಯ, ಯೌವನ, ಮುಪ್ಪು
ಎರಡು ದದ್ದು (ಒಡಕು) = ಬಾಲ್ಯ, ಮುಪ್ಪು; ತಳವಿಲ್ಲದ್ದು ಯೌವನ

೬. ಮೂರು ರೊಕ್ಕ = ಈಷಣಾತ್ರಯ (ದಾರೇಷಣ, ಪುತ್ರೇಷಣ, ವಿತ್ತೇಷಣ ಅಥವಾ ಹೆಣ್ಣು, ಹೊನ್ನು, ಮಣ್ಣು)
ಎರಡು ನಕಲು (ಖೋಟಾ) = ದಾರೇಷಣ, ಪುತ್ರೇಷಣ; ಸವಕಲಾರದ್ದು ವಿತ್ತೇಷಣ

೭. ಮೂರು ಕಡುಬು = ಜ್ಞಾನ, ಭಕ್ತಿ, ವೈರಾಗ್ಯ
ಕುದಿಯದ ಎರಡು = ಜ್ಞಾನ, ವೈರಾಗ್ಯ; ಬೇಯದ ಒಂದು ಭಕ್ತಿ

೮. ಮೂವರು ಬೀಗರು = ತ್ರಿವಿಧ ಭಕ್ತಿ (ರಾಜಸ, ತಾಮಸ, ಸಾತ್ತ್ವಿಕ)
ಇಬ್ಬರು ಬೊಚ್ಚರು (ಹಲ್ಲು ಉದುರಿ ಹೋದವರು) = ರಾಜಸ, ತಾಮಸ; ಹಲ್ಲಿಲ್ಲದವನು ಸಾತ್ತ್ವಿಕ.

೯. ಮೂರು ಚಿಕಣಿ (ಗಟ್ಟಿ) ಅಡಕಿ = ಕರ್ತವ್ಯ, ಜ್ಞಾತವ್ಯ, ಪ್ರಾಪ್ತವ್ಯ
ಎರಡು ಗೋಟು = ಜ್ಞಾತವ್ಯ, ಪ್ರಾಪ್ತವ್ಯ; ಕಾಣೆಯಾದದ್ದು ಕರ್ತವ್ಯ.

೧೦. ಮೂರು ಮಂದಿ = ತ್ರಿಕರಣ (ವಾಕ್, ಕಾಯ, ಮನಸು)
ಇಬ್ಬರು ಒಂಚೊರಿ (ಮೆಳ್ಳೆಗಣ್ಣು, ಮಾಲುಗಣ್ಣು) = ವಾಕ್, ಕಾಯ; ಕಣ್ಣಿಲ್ಲದ್ದು ಮನಸು

೧೧. ಮೂರು ಮಂದಿ = ಚಿತ್ತ, ಬುದ್ಧಿ, ಅಹಂಕಾರ
ಇಬ್ಬರು ಕುಂಟರು = ಚಿತ್ತ, ಅಹಂಕಾರ; ಕಾಲಿಲ್ಲದ್ದು ಬುದ್ಧಿ

೧೨. ಮೂರು ಮಂದಿ = ಜ್ಞಾತೃ, ಜ್ಞಾನ, ಜ್ಞೇಯ
ಇಬ್ಬರು ಲಂಡರು = ಜ್ಞಾತೃ, ಜ್ಞಾನ; ಮೊಂಡ = ಜ್ಞೇಯ

* * * *

Blank



## ೩೦೪
## ಉದಯರಾಗ – ಝಂಪೆ

ಏಳು ನಾರಾಯಣ ಏಳು ಲಕ್ಷ್ಮೀರಮಣ
ಏಳು ಶ್ರೀಗಿರಿಯೊಡೆಯ ವೆಂಕಟೇಶ
ಏಳಯ್ಯ ಬೆಳಗಾಯಿತು ॥ಪ॥

ಕಾಸಿದ್ದ ಹಾಲುಗಳ ಕಾವಡಿಯಲಿ ತುಂಬಿ
ಲೇಸಾಗೆ ಹಾಲ್ಮೊಸರು ಬೆಣ್ಣೆಯಾ ಕಡೆದು
ಶೇಷಶಯನನೆ ಏಳು ಸಮುದ್ರ ಮಥನವ ಮಾಡು
ದೇಶ ಕೆಂಪಾಯಿತು ಏಳಯ್ಯ ಹರಿಯೆ ॥೧॥

ಅರಳುಮಲ್ಲಿಗೆ ಜಾಜಿ ಪರಿಮಳದ ಪುಷ್ಪಗಳ
ಸುರರು ಸುಜನರೆಲ್ಲ ತಂದಿಹರು
ಅರವಿಂದ ಲೋಚನ ಮದನ ಗೋಪಾಲ ಕೃಷ್ಣ
ನೆರೆ ಕೋಳಿ ಕೂಗಿತು ಏಳಯ್ಯ ಹರಿಯೆ ॥೨॥

ದಾಸರೆಲ್ಲರು ಬಂದು ದೂಳಿದರ್ಶನಗೊಂಡು
ಲೇಸಾಗಿ ತಾಳದಂಡಿಗೆ ಪಿಡಿದು
ಶ್ರೀಶಾದಿಕೇಶವನೆ ನಿನ್ನ ನಾಮವ ಸ್ಮರಿಸಿ
ಏಸೊಂದು ಸ್ತೋತ್ರವಗೈಯುತಿಹರೇಳಯ್ಯ ॥೩॥

ಭಾವ– ಆದಿ ಕೇಶವನನ್ನು ಕುರಿತ ಉದಯರಾಗವಿದು

ಅರ್ಥ– ಕಾವಡಿ = ಅಡ್ಡೆ; ಹೆಗಲ ಮೇಲಿನ ಬಿದಿರ ದೆಬ್ಬೆಗೆ ಮುಂದೊಂದು ಹಿಂದೊಂದು ಗಡಿಗೆಯನ್ನು ಕಟ್ಟಿ ಅವುಗಳಲ್ಲಿ ಹಾಲನ್ನು ಅಥವಾ ನೀರನ್ನು ಹೊತ್ತು ತರುವ ಸಾಧನ.

* * * *

೩೦೫
## ಉದಾಯರಾಗ

**ಏಳಯ್ಯ ಪಾರ್ವತೀ ರಮಣ ಪಾವನ ಚರಣ**
**ಏಳಯ್ಯ ಫಣಿಕುಲಾಭರಣ ಪಾವಕ ನಯನ**
**ಏಳಯ್ಯ ಬೆಳಗಾಯಿತು ॥ಪ॥**

**ಕಮಲ ಸಂಭವ ಮುಖ್ಯ ವಿಮಲ ವಿಶ್ವಾಮಿತ್ರ**
**ಜಮದಗ್ನಿ ಕಶ್ಯಪ ವಶಿಷ್ಟ ಕಣ್ವಾದಿಗಳು**
**ಸುಮನ ತತಿ ಬಂದು ಕಾದಿಹರು ಬಾಗಿಲೊಳೀಗ**
**ಉಮೆಯರಸ ಒಲಿದುಪ್ಪವಡಿಸಯ್ಯ ಹರನೆ ॥೧॥**

**ಇಂದ್ರ ದಿಕ್ಪಾಲಕರು ಕೂಡಿ ಒಂದೆಶೆಯೊಳಗೆ**
**ವಂದಿಸುತ ನಾರದನು ಒಲಿದು ಗಾನವ ಪಾಡಿ**
**ನಂದಿ ಭೃಂಗೀಶರು ನಾಟ್ಯವಾಡುತಲಿಹರು**
**ಚಂದ್ರಧರ ಒಲಿದುಪ್ಪವಡಿಸಯ್ಯ ಹರಿಯೆ ॥೨॥**

**ಗರುಡ ಗಂಧರ್ವ ಯಕ್ಷ ಕಿನ್ನರ ಕಿಂಪುರುಷ**
**ಪರಮ ಪುರುಷರು ನಿನ್ನ ಪಾದವೇ ಗತಿಯೆಂದು**
**ನಿರುತದಿಂ ಬಂದು ಓಲೈಸುತಿಹರು ತ್ರಿಪುರ**
**ಹರನೆ ಪಂಪಾಪತಿಯೆ ಏಳಯ್ಯ ಬೆಳಗಾಯಿತು ॥೩॥**

ಭಾವ– ಈಶ್ವರನನ್ನು ಕುರಿತ ಉದಯರಾಗವಿದು. ಶಿವ ವಿಷ್ಣು ಏಕಸ್ಥರು ಎಂಬ ನಿಲುವು ಕನಕದಾಸರದು.

ಅರ್ಥ– ೧. ಕಮಲಸಂಭವ = ಬ್ರಹ್ಮ



ಸುಮನ ತತಿ = ದೇವತೆಗಳ ಸಮೂಹ
ಉಮೆಯರಸ = ಪಾರ್ವತೀಪತಿ (ಈಶ್ವರ)

೨. ಚಂದ್ರಧರ = ಈಶ್ವರ
ಉಪ್ಪವಡಿಸು = ಏಳು

೩. ತ್ರಿಪುರ ಹರ = ಅಂತರಿಕ್ಷದಲ್ಲಿ ತಿರುಗುತ್ತಿದ್ದ ಮೂರು ಪಟ್ಟಣಗಳನ್ನು ಧ್ವಂಸ ಮಾಡಿದವನು

* * * *

## ೩೦೬
## ಗಜೇಂದ್ರ ಮೋಕ್ಷ

ಶ್ರೀನಾಥ ಪಾರ್ವತೀ ನಾಥ ಶರಣೆಂಬೆ ||ಪ||
ವಾಣಿ ಸರಸ್ವತಿಯ ಭಾರತಿಯ ಬಲಗೊಂಬೆ ||ಅ||

ನಾನು ಬಲ್ಲಷ್ಟು ಪೇಳುವೆನು ಈ ಕಥೆಯ
ಶ್ರೀನಾಥ ಗಜರಾಜಗೊಲಿದ ಸದ್ಗತಿಯ ||೧||

ಚಪ್ಪನ್ನ ದೇಶದೊಳಗೆ ಉತ್ತಮವಾಗಿ
ಇಪ್ಪ ಗೌಳಿ ದೇಶದ ರಾಜ ಇಂದ್ರದ್ಯುಮ್ನ ||೨||

ವೈರಾಗ್ಯ ಮೂಡಿ ಭೂಸುರರ ಸೇವಿಸುತ
ನಾರಾಯಣನ ಮನದಿ ನೆನೆದು ಮೈಮರೆತ ||೩||

ಪುತ್ರ ಮಿತ್ರಾದಿ ಬಂಧುಗಳ ವರ್ಜಿಸಿದ
ನಿತ್ಯ ನರಹರಿಯ ಎಡೆಬಿಡದೆ ಚಿಂತಿಸಿದ ||೪||

ಆನೆ ಕುದುರೆ ರಾಜ್ಯಗಳನೆ ವರ್ಜಿಸಿದ
ತಾನೆ ನದಿಗಿಳಿದು ಸ್ನಾನಾದಿಗಳ ಮಾಡಿ ||೫||

ಸಂಧ್ಯಾವಂದನೆಗೈದು ಪದ್ಮಾಸನ ಹಾಕಿ
ಚಂದಾಗಿ ಧರಿಸಿದ ದ್ವಾದಶ ನಾಮಗಳ ||೬||

ಇಂದಿರಾ ಪತಿಯ ಧ್ಯಾನದಿ ಅವನಿರುವಾಗ
ಬಂದನಾ ಎಡೆಗೆ ಅಗಸ್ತ್ಯಮುನಿವರೇಣ್ಯ ||೭||



ಎದ್ದು ತನಗೆ ವಂದಿಸಲಿಲ್ಲವೆಂದೆನುತ
ಕುದ್ದು ಕುಂಜರನಾಗೆಂದು ಶಾಪವಿತ್ತ ||೮||

ನಂದು ತಪ್ಪುಂಟು ಮಹರ್ಷಿಯೆ ಕಾಪಾಡು
ಮುಂದೆನಗೆ ವಿಶ್ಶಾಪವೆಂದು ಹೇಳೆನಲು ||೯||

ವಿಷ್ಣು ಚಕ್ರವು ಬಂದು ನಿಮ್ಮ ಸೋಕಿದರೆ
ಆಕ್ಷಣ ವಿಶ್ಶಾಪವೆಂದು ಮುನಿ ನುಡಿದ ||೧೦||

ಜ್ಞಾನವಡಗಿ ಅಜ್ಞಾನ ವೆಗ್ಗಳಿಸಿತು
ದಿನಪ ಮುಳುಗಿ ಕತ್ತಲೆ ಆವರಿಸಿದಂತೆ ||೧೧||

ಧ್ಯಾನಿಸುತ ಹಿಂದು ಮುಂದಾಗಿ ನಿಂದಿರಲು
ಆನೆಯಾದನು ನೃಪನು ಆಕ್ಷಣದಿ ತಾನು ||೧೨||

ಮೇಲುಗಿರಿ ಪರ್ವತವೆ ಕದಲಿ ಬಂದಂತೆ
ಮೇಲುಮದ ಕೀಳುಮದದಿಂದ ಘೀಳಿಟ್ಟು ||೧೩||

ಹೆಣ್ಣಾನೆಗಳ ಕೂಡಿ ಸಂತತಿಯ ಪಡೆದು
ಹಣ್ಣೊಗೆನೆಗಳ ಮೆದ್ದು ತಣ್ಣನೆಯ ನೀರ್ಕುಡಿದು ||೧೪||

ಕಂಡಕಂಡಲ್ಲಿ ಓಡುತಲಿ ಇಳಿಯುತಲಿ
ತುಂಡು ತುಂಡಾಗಿ ಮರಗಳನೆ ಮುರಿಮುರಿದು ||೧೫||

ಹಿಂಡು ಹಿಂಡಾಗಿದ್ದ ಸತಿ ಸುತರ ಕೂಡಿ
ದಂಡು ದಾಳಿಯನಿಟ್ಟ ತೆರದಿ ಅಂಡಲೆಯೆ ||೧೬||

ಬೆಂಡಾಗಿ ಬಾಯಾರಿ ಸುತ್ತಲೂ ನೋಡಿ
ಹೊಂಡ ಕಂಡತ್ತ ಧಾವಿಸಿತು ಸಕುಟುಂಬಿ ||೧೭||

ಸುತ್ತಮುತ್ತ ಅಶ್ವತ್ಥ ಹೇರಳೆ ಕಿತ್ತಳೆ
ಒತ್ತಾಗಿ ದಾಳಿಂಬ ದ್ರಾಕ್ಷಿ ಖರ್ಜೂರ ॥೧೮॥

ಬಾಗಿ ತೂಗುತ್ತ ಫಲವಾದ ಫಲವೆಲ್ಲ
ತೂಗಿ ಕರೆಯುತ್ತ ಮೇಲಾದ ಹೂವೆಲ್ಲ ॥೧೯॥

ಉಲಿವ ಗಿಳಿ ಹಿಂಡುಗಳು ಕುಣಿವ ನವಿಲುಗಳು
ನಲವಿಂದ ಸರಗೈವ ಕೋಗಿಲೆಯ ದಂಡು ॥೨೦॥

ದಂಡೆಯೊಳು ಒಳಗೊಂಡ ತಾವರೆಯ ಕೊಳಕೆ
ಶುಂಡಾಲವಿಳಿದು ನೀರೋಕುಳಿಯನಾಡಿ ॥೨೧॥

ಸೊಂಡಿಲಿಂದಪ್ಪಳಿಸುತ ತೊತ್ತಳ ತುಳಿದು
ಹೊಂಡವನು ಕಲಕಿ ರಣಾಂಗಣಗೈದಾಗ ॥೨೨॥

ಆ ಮಡುವಿನಲ್ಲಿದ್ದ ಶಾಪಗ್ರಸ್ತವಹ
ಮಾಮೊಸಳೆಯೊಂದು ಹಿಡಿಯಿತಾನೆಯ ಕಾಲ ॥೨೩॥

ಕಾಲೆತ್ತಲೂ ಬರದು ಕಿತ್ತರೂ ಬರದು
ಆಲಿಟ್ಟುದನು ಕೇಳಿ ಸತಿಸುತರೆಲ್ಲ ॥೨೪॥

ಒಗ್ಗೂಡಿ ಎಳೆದೆಳೆದು ಸೊರಗಿ ಸುಸ್ತಾಗಿ
ಕುಗ್ಗಿ ಕಂಗೆಟ್ಟು ಹಿಮ್ಮೆಟ್ಟಿ ನಿಂತಾಗ ॥೨೫॥

ದೇವರಿಟ್ಟಂತಾಗಲಿ ನೀವು ತೆರಳಿರೆನೆ
ನೋವುಗೊಂಡವು ಬಂದ ದಾರಿಯ ಹಿಡಿದವು ॥೨೬॥

ಇತ್ತ ಆ ಮಕರಿ ಕಚ್ಚುತ್ತ ಕಡಿಯುತ್ತ
ನೆತ್ತರಾಯಿತು ಮಡುವಾದ ಮಡುವೆಲ್ಲ ॥೨೭॥



ಗಜರಾಜ ನನಗಿನ್ನು ದಿಕ್ಕಾರು ಎಂದು
ಅಜಪಿತಗೆ ಮೊರೆಯಿಟ್ಟಿತು ಪರಿಪರಿಯಿಂದ ॥೨೮॥

ಈರೇಳು ಭುವನವನು ಕಾಯುವಾ ದೇವ
ನೀರೊಳಗೆ ಸಾಯುತಿಹೆ ಬದುಕಿಸೋ ಎನ್ನ ॥೨೯॥

ವೇದ ಕದ್ದೊಯ್ದ ದಾನವನ ಭೇದಿಸಿದ
ವೇದವಿದ ಮತ್ಸ್ಯಾವತಾರಿ ಸಲಹೆನ್ನ ॥೩೦॥

ಕಡೆಗೋಲು ಕುಸಿದಾಗ ಹಿಡಿದೆತ್ತಿ ನಿಂತ
ದೃಢದೇಹಿ ಕೂರ್ಮಾವತಾರಿ ಸಲಹೆನ್ನ ॥೩೧॥

ಹಿರಣ್ಯಾಕ್ಷನ ಕೊಂದು ಧರಣಿಯನೆ ತಂದ
ವರಾಹಾವತಾರಿಯೆ ಬಂದು ಕಾಯೆನ್ನ ॥೩೨॥

ರಕ್ಕಸನ ಸೀಳಿ ಕರುಳ ಮಾಲೆ ಧರಿಸಿದ
ಬೆಕ್ಕಸಬೆರಗಿನ ನೃಸಿಂಹಾವತಾರಿ ಕಾಯೆನ್ನ ॥೩೩॥

ಬಲಿಯ ದಾನವ ಬೇಡಿ ಪಾತಾಳಕೆ ತುಳಿದ
ಕಲಿ ವಾಮನಾವತಾರಿಯೆ ರಕ್ಷಿಸೆನ್ನ ॥೩೪॥

ತಂದೆ ಸಾವಿಂದ ಕ್ಷತ್ರಿಯರ ಕೊಲೆಗೈದ
ತಂದೆ ಪರಶುರಾಮಾವತಾರಿ ಸಲಹೆನ್ನ ॥೩೫॥

ದಶಕಂಠನನೆ ಕೊಂದು ದರಣಿಜೆಯ ತಂದ
ದಾಶರಥಿ ರಾಮಾವತಾರಿ ಸಲಹೆನ್ನ ॥೩೬॥

ವ್ಯಾಳನ ತುಳಿದು ಸೋಳಸಾಸಿರ ಹೆಣ್ಣ
ನಾಳಿನ ಕೃಷ್ಣಾವತಾರಿ ಕಾಯೆನ್ನ ॥೩೭॥

ಕತ್ತಲೆ ಜಗದ ಕನ್ಯೆಯರ ವ್ರತಗೆಡಿಸಿದ
ಬತ್ತಲೆಯ ಬೌದ್ಧಾವತಾರಿ ಉಳಿಸೆನ್ನ ॥೩೮॥

ಜಗವದುರೆ ಹಯವೇರಿ ದುಷ್ಟರನು ಕೊಂದ
ಮಿಗೆ ಚದುರ ಕಲ್ಕ್ಯವತಾರಿ ಎತ್ತೆನ್ನ ॥೩೯॥

ಕರುಣಾಕರನೆ ಭಕ್ತ ವತ್ಸಲನೆ ಕಾಯೊ
ಮರೆಯದಿರು ಮಾಧವನೆ ಅಚ್ಯುತಾನಂತನೆ ॥೪೦॥

ಇಂತು ಪ್ರಾಣದ ಹಂಗುದೊರೆದು ಚೀರ್ದಾಗ
ಕಂತುಪಿತ ಕೇಳಿ ಮಂತಾಡಿದಂತಾಗಿ ॥೪೧॥

ಹಾಲ್ಗಡಲ ವಾಸಿ ಹಾವು ಹಾಸಿಗೆ ಬಿಟ್ಟು
ಪಾಲಿಸಲು ಪರಿತಂದ ಗಜೇಂದ್ರನ ಬಳಿಗೆ ॥೪೨॥

ಹರನು ಪಾರ್ವತಿಯೊಡನೆ ವೃಷಭವನೇರಿ
ತ್ವರಿತದಿಂ ಬಂದರಲ್ಲಿಗೆ ಕಾತರದಿ ॥೪೩॥

ದೇವಾನುದೇವತೆಗಳು ಮುನಿವರೇಣ್ಯರು
ಕಾವನಯ್ಯನ ಹಿಂದೆ ಬಂದರೋಡೋಡಿ ॥೪೪॥

ನಕ್ರನ ಹಲ್ಲು ಮುರಿವಂತೆ ಜಗದೊಡೆಯ
ಚಕ್ರದಲಿಡಲು ಶಾಪ ವಿಮುಕ್ತಿ ದೊರಕಿತು ॥೪೫॥

ಋಷಿ ದೇವಲನ ಶಾಪದಿಂ ಗಂಧರ್ವ
ಋಷಿ ಅಗಸ್ತ್ಯನ ಶಾಪದಿಂ ಪ್ರದ್ಯುಮ್ನ ॥೪೬॥

ಇರ್ವರೂ ವಿಶ್ವಾಪದಿ ಮೊದಲಂತಾದರು
ಸರ್ವರೂ ಆದಿಕೇಶವನ ಕೊಂಡಾಡಿದರು ॥೪೭॥



ಭಾವ– ದೇವರು ಭಕ್ತವತ್ಸಲ ಎಂಬುದನ್ನು ರುಜುವಾತುಗೊಳಿಸುವ ಆಶಯದ ಉದಯರಾಗವಿದು.

ಅರ್ಥ– ಚಪ್ಪನ್ನ = ಐವತ್ತಾರು
ಇಪ್ಪ = ಇರುವ
ಕುದ್ದು (<ಕುದಿದು) = ಕೋಪಗೊಂಡು
ಕುಂಜರ = ಆನೆ
ದಿನಪ = ಸೂರ್ಯ
ಕದಲಿ = ಚಲಿಸಿ
ಹೊಂಡ = ಮಡು, ಸರೋವರ
ಒತ್ತಾಗಿ = ಸಾಂದ್ರವಾಗಿ
ದಂಡೆ = ದಡ
ಶುಂಡಾಲ = ಆನೆ
ಮಾಮೊಸಳೆ (<ಮಹಾಮೊಸಳೆ) = ದೊಡ್ಡ ಮೊಸಳೆ
ಆಲಿಡು = ಚೀರು
ಮಕರಿ = ಮೊಸಳೆ
ನೆತ್ತರು = ರಕ್ತ
ಅಜಪಿತ = ವಿಷ್ಣು
ವೇದವಿದ = ಜ್ಞಾನಸ್ವರೂಪ
ಧರಣಿಜೆ = ಸೀತೆ
ವ್ಯಾಳ = ಹಾವು
ಸೋಳಸಾಸಿರ = ಹದಿನಾರು ಸಾವಿರ
ಕಂತುಪಿತ = ಮನ್ಮಥನ ತಂದೆ (ವಿಷ್ಣು)
ಮಂತಾಡಿದಂತಾಗಿ = ಎದೆ ಕಲಕಿದಂತಾಗಿ
ಮಂತು = ಕಡೆಗೋಲು
ವೃಷಭ = ಎತ್ತು
ಕಾವನಯ್ಯ = ಮನ್ಮಥನ ತಂದೆ (ವಿಷ್ಣು)

* * * *

### ೩೦೭

ಓಂ ನಮೋ ನಾರಾಯಣ ಶೌರಿ
ಓಂ ನಮೋ ನಾರಾಯಣ
ಓಂ ನಮೋ ನಾರಾಯಣಾಯ ಬ್ರಹ್ಮ ವಂದಿತ
ಓಂ ನಮೋ ಪರಬ್ರಹ್ಮ
ಪನ್ನಗಾಧಿಪಶಾಯಿ ಪಾವಕಾಂಬಕ ಮಿತ್ರ
ಸನ್ನುತಾಮರ ಮುಖ್ಯ ಸಕಲ ಸನ್ಮುನಿ ಸೌಖ್ಯ
ಚನ್ನಕೇಶವ ಪಾಹಿಮಾಂ ಶೌರಿ ಓಂ ನಮೋ ॥ಪ॥

ಕೃತಯುಗದೊಳೊಬ್ಬನತಿ ಕ್ರೂರ ದೈತ್ಯಾಧಮನು
ಕ್ಷಿತಿಯೊಳುದಿಸಿದನು ಸುತನೆನಿಸಿ ಆತಗೆ ನಾಮ
ಹಿತದೊಳೊಪ್ಪಿತು ಹೇಮ ಕಶ್ಯಪು ತಾನೆನಲವನ
ಸತಿ ಸುಶೀಲೆ ಎಂಬಳ
ವ್ರತ ಪುಣ್ಯದಿಂದ ಶ್ರೀಪತಿ ಪದಾಂಬುಜ ಭಕ್ತ
ಚತುರ ಮಾನ ವರ ಪ್ರಹ್ಲಾದ ನಾಮಾಖ್ಯಾತ
ಸುತನೊರ್ವ ಜನಿಸಿದನು ಸತಿಯ ಸುಕೃತವದೇನೊ
ಮಿತವಿಲ್ಲ ಮಹಿಯೊಳಗೆ ॥೧॥

ಮದಮುಖನು ಮನದಿ ಹಿಗ್ಗಿದನು ಮಗುವನು ನೋಡಿ
ಸುದತಿಯ ತಕ್ಕೈಸಿ ಶುಕ್ರಾದಿ ಗುರುಗಳನು
ವಿಧವಿಧದೊಳರ್ಚಿಸುತ ವಿಭವದಿಂದೊಯ್ದಾಡಿ
ಮನಸಿಜ ವೈರಿಯ ಪೂಜಿಸಿ
ಮುದದಿಂದ ಮಗನ ತೆಗೆದಪ್ಪಿ ಮುದ್ದಿಸುತೊಮ್ಮೆ
ಮೃದು ನುಡಿಗಳ ಲಾಲಿಸಿ ಸುತಗೊದಗಲೈದಾರ್ವರುಷ



ಅದರೊಳೊಂದು ದಿನ ತಮ್ಮ ಗುರು ಶುಕ್ರಾಚಾರ್ಯ
ರನು ಕರೆಸಿ ನೇಮವನಿತ್ತನು ॥೨॥

ಪರಮಗುರು ನೀನೆನುತ ತರಳನನು ಪತಿಕರಿಸಿ
ಕರುಣದಿಂದೋದಿಸು ಒರೆದು ಶಾಸ್ತ್ರಾಗಮನವ
ಪರಿಪರಿಯ ವಿದ್ಯಗಳನರುಹು ರಾಕ್ಷಸ ಬೃಂದ
ಗುರುವರನೆ ಮರ್ಮವಿಡದೆ

ತೆರಳಿನ್ನು ಸುತಸಹಿತ ಕರುಣನಿಧಿ ನೀಯೆಂದು
ತರಿಸಿ ದಿವ್ಯಾಂಬರ ಸುಗಂಧ ತಾಂಬೂಲವನು
ಹರುಷದಿಂದಿತ್ತು ಸತ್ಕರಿಸಿ ಗುರುವರನಂಘ್ರಿ
ಗೆರಗಿ ಕೈಮುಗಿದು ನುಡಿದ ॥೩॥

ಮತ್ತೆ ಲಾಲಿಪುದು ನಾ ಪೆತ್ತ ಭಕ್ತನಿಗೆ ಓಂ
ದರ್ತಿಯಿಂ ಮೊದಲಿನಭ್ಯಾಸದಲಿ ಎನ್ನನುರೆ
ವಿಸ್ತರಿಸಿ ಪೊಗಳ್ವ ತೆರನಂತೆ ಓದಿಸು ಜೀಯ
ಪುತ್ರರತ್ನವನೆನುತ
ಉತ್ತರವ ಕೊಡಲು ಗುರು ಚಿತ್ತದಲಿ ಹರ್ಷಿಸುತ
ಭಕ್ತ ಚಿಂತಾಮಣಿಯೆ ಬಾರೆಂದು ಮುಗಳ್ನಗೆಯಿಂದ
ಎತ್ತಿ ತಕ್ಕೈಸಿ ಮುದ್ದಾಡಿ ಮುಗಳ್ನಗೆಯಿಂದ
ಉತ್ತಮರ ಸಾಲೆಗೊಯ್ದ ॥೪॥

ಓದಿಸಿದ ಸಕಲ ವೇದಾದಿ ಪೌರಾಣಗಳ
ಸಾಧನೆಯ ಮಾಡಿಸಿದ ಶಾಸ್ತ್ರ ತರ್ಕಂಗಳಿಗೆ
ಆದಿಯಲಿ ಓಂ ನಮೋ ಹಿರಣ್ಯಕಶ್ಯಪು ಎಂಬ
ಭೇದಾಕ್ಷರವ ಪೇಳೆನಲು
ಶ್ರೀಧರಾಚ್ಯುತ ಮುಕುಂದಾದಿಕೇಶವ ಕೃಷ್ಣ
ಮಾಧವಾ ಎಂಬ ಮುರಹರಿಯ ನಾಮವ ಪೊಗಳೆ

ಸಾಧು ಸುಜನನ ಬೈದು ಜಡಿದು ದಂಡಿಸಿ ಇವನು
ವಾದಿ ನಮಗೆಂದ ವಿಪ್ರ ॥೫॥

ಒಡನೆ ಮನ್ನಿಸುತ ತೊಡೆಯ ಮೇಲಿಂಬಿಟ್ಟು
ನುಡಿ ಮಗನೆ ನಿನ್ನ ಪಡೆದವನ ನಾಮವನೆನಲು
ಮೃಡನಾಣೆ ಕಾಮನಯ್ಯನ ಅಡಿಯ ಪೊಗಳದೆಯೆ
ಬಿಡೆನು ಘನವೆನ್ನಲೀ
ಒಡೆಯನಹ ವಾಸುದೇವನ ಪೊಗಳ್ವ ಸುಜನರಿಗೆ
ಈಡಾರು ತ್ರಿಜಗದೊಳು ಕಡುದಯಾನಿಧಿ ಎನಲು
ಪಿಡಿದೆತ್ತಿ ಮಂಕು ಮರಳಿನ ಮಗನೆ ಕಮಲಾಕ್ಷ
ಕಡುದ್ರೋಹಿ ನಮಗೆಂದನು ॥೬॥

ಎಂದ ನುಡಿಗೇಳುತಿಂತೆಂದ ಗುರುವರ ನಿನ್ನ
ಮಂದಮತಿಗಿನ್ನೇನು ನಾನು ಬಿನ್ನೈಸುವೆನು
ಇಂದಿರಾ ದೇವಿಯರಸನ ಮಹಿಮೆಗಳ ಪೊಗಳೆ
ಚಂದ್ರಶೇಖರನಿಗರಿದು
ಸಿಂಧು ಶಯನನ ಚರಿತೆ ಶ್ರವಣ ಮಾಡಲು ಪಾಪ
ಬಂಧನವೆಲ್ಲವು ಪರಿದು ಪೋಪುದು ದಾನ–
ವೇಂದ್ರನನು ಪೊಗಳಿ ನರಕವನು ಸಾರುವೆನೆ ಸಂ
ಕ್ರಂದನಾರ್ಚಿತನ ॥೭॥

ಉತ್ತರವ ಪೇಳಿಯೊಡನೆಂದನುತ್ತರವನು ಕೊಡಲಾಗ
ಅತ್ಯುಗ್ರದಿಂದ ಶಿರವೆತ್ತಿ ಗರ್ಜಿಸುತೆದ್ದು
ಒತ್ತಿ ಪಿಡಿದೆಳೆದು ಪುರುಷೋತ್ತಮ ತತ್ಪದಾಂ
ಬುಜ ಭೃತ್ಯನ
ಕಿತ್ತಿಟ್ಟು ಬಾಯ ದಾಡೆಯ ಪಿಡಿದು ಒಳದೊಡೆಯ
ಮತ್ತೆ ಪಿಡಿದೊಡದಿರುಹೆ ನೆತ್ತನೊರೆಯಲು ಕಂಡು
ಚಿತ್ತದಲಿ ಕಡುನೊಂದು ಚಿಣ್ಣ ಮೊರೆಯಿಟ್ಟನಾ
ಚಿತ್ತಜನ ಪೆತ್ತಾತಗೆ ॥೮॥



ಅನಿತರೊಳಗಾ ಉಪಾಧ್ಯನು ಕರುಣದಿಂದಲಾ
ಘನತರಾದ್ಭುತಮಪ್ಪ ಕಠಿಣತರ ದಂಡನೆ
ಯನು ಭರದಿ ಮನ್ನಿಸುತ ನೆನೆ ಪಿತನ ಎನಲಾಗ
ನೆನೆದ ನರಹರಿಯಂಘ್ರಿಯ
ವನಜದಳ ನಯನನನು ವಲಿದಾಗಿ ಪೊಗಳುತಿರೆ
ಮನದಿ ಯೋಚಿಸಿದ ಮತ್ತೊಂದು ಗುರುಮಠದೊಳಿಹ
ತನಯರುಗಳೀ ಹದನ ತಪ್ಪಿಸುವರಲ್ಲದಿರೆ
ತನಗಸಾಧ್ಯವಿದೆಂದ ॥೯॥

ಎಂದು ಚಿಂತಿಸುತಲಾ ನಂದನರ ಕರೆದು ಈ
ನಂದನನು ಮತ್ತಾ ಮುಕುಂದನನು ಪೊಗಳುವನು
ಮಂದಮತಿ ಬಿಡಿಸಿವನ ತಂದೆಯನು ಪೊಗಳಿಸುವ
ಅಂದ ನಿಮ್ಮದು ಕೇಳಿರೊ
ಎಂದು ನೇಮಿಸೆ ಗುರುಗೆ ವಂದಿಸುತ ತರಳರೈ
ತಂದ ಪ್ರಹ್ಲಾದನಿಂಗಂದು ಮಣಿಯಲು ಸಖರಿ
ಗಂದೊರೆದನಾಗಲರವಿಂದನಾಭನ ಕೃತಿಯ
ಸುಂದರದ ಮೃದು ನುಡಿಯ ॥೧೦॥

ಉಪದೇಶವಿತ್ತನಾ ನಿಪುಣ ಬಾಲಕನೆಂದು
ಚಪಳರಾದರು ಹಿಂದಣಪರಿಮಿತ ಜನ್ಮಗಳ
ರಿಪುಗಳ ಪಾಪವ ನೀಗಿ ಕೃಪೆಯಾದ ಹರಿಯೆಂದು
ಗುಪಿತವಿಲ್ಲದೆ ಪೇಳುತ
ಜಪ ತಪ ಧ್ಯಾನ ಷಟ್ಕರ್ಮ ನಮಗೇಕಿನ್ನು
ಸಫಲವಾಯಿತು ಪೆತ್ತ ಜನನಿ ಜನಕರ ಉದರ
ಅಪಭ್ರಷ್ಟನೀ ಶುಕ್ರನಿಂತು ಪೇಳಿದ ಕುಟಿಲ
ಕಪಟ ನೀತಿಗಳ ಸುಡಲಿ ॥೧೧॥

ಎಲ್ಲಿಯವನಿವನೆಮಗೆ ಒಳ್ಳೆ ನೀತಿಯ ಪೇಳ್ದ
ಸೊಲ್ಲಿನೊಳಗೆ ಗರವೆಳ್ಳನಿತಿಲ್ಲ ಹರಿಯೆಂಬ

ಪುಲ್ಲನಾಭನ ಧ್ಯಾನ ಪರತತ್ತ್ವ ರಚನೆಗಳ
ನಿಲ್ಲಿ ಕಂಡೆವೆಂದರು
ಬಲ್ಲೆವಿನ್ನೇಕೆ ನಮಗಿಲ್ಲ ಗುರು ನೀನಲ್ಲ
ದೆಲ್ಲರನು ಭಾವಿಸುವವರಲ್ಲ ವೈಕುಂಠ
ವಲ್ಲಭನ ತೋರೆನುತ ಎಲ್ಲರಾ ಬಾಲಕನ
ಪಲ್ಲವಾಂಘ್ರಿಗೆ ಮಣಿದರು ॥೧೨॥

ಅನಿತರೊಳು ಬಂದನಾ ದನುಜ ಗುರುಮಠದೊಳಿಹ
ತನಯರೆಲ್ಲರು ವಿಷ್ಣು ವನಜಾಂಘ್ರಿ ಪೊಗಳುತಿರೆ
ಘನ ಮಹಿಮ ನೀನರಿದೆನ್ನ ಗಣನೆಗೊಳನೆಂ
ದೆನುತ ದನುಜೇಶನೆಡೆಗೆ ಬಂದಾ
ತನಿಗೆ ಸಾಗದು ನಿನ್ನ ತನಯನಭ್ಯಾಸಿಸಿದ
ಚಿನುಮಯಾತ್ಮನ ಚರಣ ಸ್ಮರಣೆಯನು ಸರ್ವರಿಗೆ
ಎಣಿಸಲಳವಡದು ನಿನ್ನಣುಗನಂತರವೆನಲು
ದನುಜ ಗರ್ಜಿಸುತೆದ್ದನು ॥೧೩॥

ಬಂದು ಸಾಲೆಯೊಳಿರ್ದ ನಂದನನ ಬಿಗಿಯಪ್ಪಿ
ಕಂದ ನೀ ಕಲಿತುದೇನೆಂದು ಪೇಳೆಂದೆನಲು
ತಂದೆ ಲಾಲಿಪುದು ಗೋವಿಂದನಾ ಚಾರಿತ್ರ
ದಂದವನು ಪೇಳ್ವೆನೆಂದ
ಎಂದ ಬಾಲಕನೊಳಿಂತೆಂದನಾ ದೈತ್ಯಪತಿ
ಸಂದುದಲ್ಲವು ನಾವು ವಂದಿಸುವುದು ಹರಿಗೆ
ಚಂದದಿಂದೆನ್ನ ಓಂ ಹಿರಣ್ಯಕಶಿಪು ಎಂಬು
ದೊಂದನೊರಲು ಎಂದನು ॥೧೪॥

ಪಿತನೆ ಲಾಲಿಸು ಹಿಂದೆ ಶತಮಖನ ಸಹಿತ ದಿ
ಕ್ಪತಿಗಳೆಲ್ಲರು ಲಕ್ಷ್ಮೀಪತಿಯ ನಾಮಾಮೃತವ
ನತಿಶಯದಿ ಜಪಿಸುವ ಪರಿಯೊಳು ಉನ್ನತಿಯ
ಶ್ರುತಿ ವಚನ ಶಬ್ದಗಳಲಿ



ಸತತ ನಂಬಿರಲು ಸದ್ಗತಿಯಲ್ಲಿ ಧನ್ಯರ
ಗತಿಯ ಬಯಸುವರುಂಟೆ ಕ್ಷಿತಿಯೊಳೀ ಜನ್ಮಕ್ಕೆ
ಮಿತಿಯಿಲ್ಲ ವಿಷ್ಣು ನಾಮವ ಪೊಗಳ್ವ ಸುಜನರಿಗೆ
ಗತಿಯಿಲ್ಲದಿಲ್ಲ ಜಗದಿ ॥೧೫॥

ಎಂದರುಹುತಿರೆ ಕರ್ಣಗಳಿಗೆ ನಾಟಿದ ಶಸ್ತ್ರ
ದಂದವಾದುದು ಇವನು ನಂದನನೆ ಎನಗೆ ಮುಕು
ಕುಂದ ವರದನ ಕೃಪೆಯನೊಂದನಾರೈಸಿದನು
ಮಂದರಾದ್ರಿಯ ಮೇಲೆ
ಚಂದದಿಂದೊಯ್ದು ಭೂಮಿಗೆ ಕೆಡಹಿಸೆಂದೆನುತ
ಲಂದು ಕಟ್ಟಳೆಯಿತ್ತು ಮಂದಿರಕೆ ಸಾರಲಾ
ಕಂದನನು ಸೆಳೆದೊಯ್ದು ಗಿರಿಯನೇರಿಸಿ ನಿನ್ನ
ತಂದೆಯನು ಪೊಗಳೆನ್ನಲು ॥೧೬॥

ವಾಸುಕಿಶಯನ ವಾಸವನಮಿತ ವನಜಾಕ್ಷ
ಕೇಶವ ಮುರಾರಿ ಕೌಸ್ತುಭ ವಕ್ಷ ಕಮಲಾಕ್ಷ
ಭೂಸತಿ ರಮಣ ನಗಧರಾಚ್ಯುತನೆನ್ನುವ
ಈಶಸಖಭಯವಿನಾಶ
ವಾಸಿ ತಗ್ಗಿತು ಪ್ರಾಣದಾಸೆ ನಿಮ್ಮದು ಜೀಯ
ದೋಷಕರು ಎನ್ನ ಗಾಸಿಗೊಳಿಸುತ ಎಳೆತಂದು
ಲೇಸು ದಯವಿಲ್ಲದಾಯಾಸಪಡಿಸುವರೆನ್ನ
ಪೋಷಣೆಯು ನಿಮ್ಮದೆನುತ ॥೧೭॥

ಮೊರೆಯಿಡುವ ಬಾಲಕನ ಪರಿಯ ನೋಡದೆ ಕೊಂಡು
ಗಿರಿಯ ಮೇಲಕೈತಂದು ತರಳನೆನ್ನದೆ ಹಿಡಿದು
ಚಾರು ಕರಕಮಲಗಳ ಕರ ಚರಣವುರೆ ಕಟ್ಟಿ
ನಿರ್ದಯದಿ ಹೊರಳಿಸಿದರಾಗ ಧರೆಗೆ
ಸಿರಿಧರನೆ ನಿನೆ ಗತಿಯೆಂದು ಸ್ಮರಣೆಯಗೈದು
ಕರುಣನಿಧಿ ಕಾವುದೆಂದೆನುತ ಕಂಗಳ ಮುಚ್ಚಿ

ಗಿರಿಶಿರದ ಜರಿಯೊಳಿರಲು ತಾ ಬೀಳೆ ಧರಣಿ ಸತಿ
ಮರುಗಿ ಮಗುವನು ಪಿಡಿದಳು ॥೧೮॥

ಬಾಲಕನ ಪಿಡಿದು ಬಿಗಿದಪ್ಪಿ ಲಾಲಿಸಿ ಪುಣ್ಯ
ಶೀಲ ಭಯಬೇಡ ಎನ್ನಾಲಿಯಂ ನೋಡೆನ್ನ
ನೀಲವರ್ಣನ ಪಾದ ನಿರುತ ನಂಬಲು ನಿನ್ನ
ಪಾಲಿಪನು ಪರಮ ಪುರುಷ
ಶೂಲಿ ಸನ್ಮಿತ್ರ ಸುಚರಿತ್ರ ಗುರು ಮುನಿಸ್ತೋತ್ರ
ವ್ಯಾಳಶಯನ ಗಾತ್ರ ಉಷ್ಣಾಂಶು ಶಶಿನೇತ್ರ
ಲೀಲೆಯಿಂ ಪೊರೆವ ಪೋಗೆಲೆ ಮಗನೆ ಮನೆಗೆನಲು
ಕಾಲಿಗೆರಗುತ ಸಾರಿ ಮನೆಗೆ ಬರಲು ॥೧೯॥

ಬಂದು ಮಠದೊಳಗಿರ್ದ ಕಂದನಾಕೃತಿ ಕೇಳಿ
ಮಂದಿರದೊಳಿರ್ದ ಮಾತೆಯು ಮರುಗಿ ಮಗನೆಡೆಗೆ
ಬಂದಾಗ ಎತ್ತಿ ತಕ್ಕೈಸಿ ಕಣ್ಣಲಿ ನೀರ
ತಂದು ಸುತಗಿಂತೆಂದಳು
ಇಂದಿರಾ ಪತಿ ದೈತ್ಯರಿಗೆ ದ್ರೋಹಿಯು ಅವನನು
ವಂದಿಸುವುದುಚಿತವೇ ತಂದೆಯಾಜ್ಞೆಯ ಮೀರ
ಲೆಂದಿಗಂ ನರಕ ತಪ್ಪದು ಎನಲು ವೈಷ್ಣವನು
ಅಂದ ಮಾತೆಯ ಮನ್ನಿಸಿ ॥೨೦॥

ತಾಯೆ ಲಾಲಿಪುದೆನ್ನ ಬಾಯ ವಚನವ ನಿನ್ನ
ಪ್ರಿಯನನು ಪೊಗಳಿದೊಡೆ ಹೇಯ ನರಕವು ಮುಂದೆ
ನೋಯಲಾರೆನು ಹೀನ ಜೀವಿಗಳು ಉದ್ಭವಿಸಿ
ಆಯಾಸಗಳಲಿ ಸಿಲ್ಕಿ
ಮಾಯದಪವಾದಗಳ ಮಹಿಯ ಭೋಗವ ಸುಡಲಿ
ತಾಯಾರೆನಗೆ ತಂದೆಯಾರೆಂಬ ಕುರುಹೆಲ್ಲಿ
ನೋಯಲೇತಕೆ ನಿನ್ನ ಜೀವವಲ್ಲಭನೆಡೆಗೆ
ತಾಯೆ ನೀ ತೆರಳೆನ್ನಲು ॥೨೧॥



ಮರುಗಿದಳು ಮಗನ ಭಾವದ ಪರಿಯ ಬಣ್ಣಿಸುತ
ತೆರಳಿದಳು ಹರಿಯೆ ಕರುಣಿ ಸುಕಂದನನು ನಿನ್ನ
ಚರಣ ನಂಬಿದ ಬಳಿಕ ಪೊರೆವ ಬಿರುದಿನ ಪರಿಯ
ಸಿರಿಯರಸ ನಿನ್ನದೆನುತ
ಹರಿಗೆ ಮೊರೆಯಿಡುತ ತನ್ನರಮನೆಗೆ ನಡೆತಂದು
ಅರಸನಿರ್ದೆಡೆಗೈದಿ ಅರಿಯ ಸುತ ನೀತಿಯನು
ದೊರೆಯೆ ಮನ್ನಿಸಿ ಮಗನ ಪೊರೆವುದು ಚಿತವೆಂದಾ
ತರುಣಿಗಿಂತೆಂದನಾ ದೈತ್ಯ ॥೨೨॥

ಬಿಡು ಕಾಂತೆ ಜಠರದೊಳು ನೀ ಪಡೆದ ಮಗನಲ್ಲ
ಪಡಿಯಿಡಲು ನಮ್ಮ ಕುಲಕೆಡಮೃತ್ಯುವಾಗಿಹನು
ನುಡಿಯದೆಮ್ಮನು ಎನ್ನ ಒಡೆಯ ವಿಷ್ಣುವು ಎನ್ನು
ತಡಿಗಡಿಗೆ ಪೊಗಳುತಿಹನು
ಒಡನೆ ಮುರಹರಿ ಎಂದು ಸ್ಮರಿಸಲಾತನ ಶಿರವ
ಕೆಡಹಿದಲ್ಲದೆ ಬಿಡೆನು ಮಡದಿ ನಿನ್ನರಮನೆಗೆ
ನಡೆಯೆನುತ ಗರ್ಜಿಸಲು ಪೊಡವಿ ನಡುಗಿದುದೊಡನೆ
ನಡೆದನತಿ ರೌದ್ರದಿಂದ ॥೨೩॥

ಅರಮನೆಗೆ ಬಂದೋರ್ವ ಚರನನಟ್ಟಿ ಕರೆಸಿದನು
ತರಳನನು ತಮ್ಮ ಕುಲಗುರು ಶುಕ್ರಚಾರ್ಯನನು
ಬರಲು ಸತ್ಕರಿಸಿದನು ಹರುಷ ಮಿಗೆ ಮನ್ನಿಸಿದ
ಸಿರಿವರನ ಸೇವಕನನು
ಮರಳಿ ಕೇಳ್ಮಗನೆ ಶ್ರೀಹರಿಯ ನಾಮಾಕೃತಿಯ
ಸ್ಮರಿಸಲಾತನೀಜಗದಿ ಮಿಗಿಲೆ ಮೂಢನವನು
ಅರಿಯೆ ನೀ ಮಗನೆ ನರ ಕುರಿಯ ತೆರನಂತೆ
ಸಿರಿಹರಿಯೇನು ಘನವೋ ನಿನಗೆ ॥೨೪॥

ಇನ್ನಾದರೆಲೆ ಮಗನೆ ಎನ್ನ ನೀ ಪೊಗಳೆನಲು
ಪನ್ನಗಾರಿಧ್ವಜನ ಪಾದಗಳ ವಂದಿಸುತ

ಓಂ ನಮೋ ನಾರಾಯಣಾ ಎಂದು ಧ್ವನಿಯೆತ್ತಿ
ಚಿಣ್ಣನೋದಿದ ಶ್ರುತಿಗಳ
ಉನ್ನತದ ವಚನಗಳು ಉಪನಿಷದ್ ವಾಕ್ಯದಲಿ
ಚೆನ್ನಕೃಷ್ಣಾ ಎಂಬ ಚೆಲುವ ನಾಮವ ಪೊಗಳೆ
ಮನ್ನಿಸದೆ ಮನದ ಕೋಪದಿ ದೈತ್ಯ ಪೊರೆಗಳೆದ
ಪನ್ನಗಾಂಕನ ಪೊಗಳ್ದನು ॥೨೫॥

ಎಲೆ ಹಸುಳೆ ಹರಿಯಾವ ನೆಲೆಯೊಳಿರುತಿಹನವನ
ಬಲುಹ ನೋಡುವೆನೆನಗೆ ತಿಳಿಯ ಪೇಳೆಂದೆನಲು
ಅಳುಕದವನೊಡನೆಂದನೆಲೆ ದೈತ್ಯ ಕೇಳೊಮ್ಮೆ
ನಳಿನನಾಭನ ಪರಿಯನು
ಜಲಧಿ ಮಧ್ಯದೊಳಿರುವ ಜಲಧಿ ಮೇಲೊರಗಿರುವ
ಇಳೆಯು ಮೂರರಲಿರುವ ಇಳೆಗೊಡೆಯನೆನಿಸಿರುವ
ಒಳಗಿರುವ ಹೊರಗಿರುವನೊಲಿದು ಸರ್ವದಲಿರುವ
ನೆಲೆಯಿಲ್ಲ ನಗಧರನಿಗೆ ॥೨೬॥

ಎನೆ ಕೇಳಿ ಕೋಪದಿಂದಲಿ ಗರ್ಜಿಸುತಲೆದ್ದು
ದನುಜಾಧಿಪತಿ ತನ್ನ ತನಯನಂ ದಂಡಿಸುತ
ಚಿನುಮಯಾತ್ಮನ ತೋರು ಸ್ತಂಭದೊಳಗಿಲ್ಲದಿರೆ
ಶಿರವ ಖಂಡಿಪೆನೆನುತ
ಘನ ರೋಷ ವಹ್ನಿ ಜ್ವಾಲೆಯಲಿ ಕಿಡಿಯಿಡುತೊಡನೆ
ತನ್ನ ಕರದ್ವಯದೊಳಗೆ ದಿವ್ಯ ಖಡ್ಗವ ಪಿಡಿದು
ತನಯನೆನ್ನದೆ ತಲೆಯನರಿವ ತವಕದಿ ಬರಲು
ಮನದೊಳಳುಕದೆ ನೆನೆದ ಮಧುವೈರಿಯ ॥೨೭॥

ತಾತ ನೀ ಕಾವುದೀ ಪಾತಕನು ಎನ್ನನುರೆ
ಘಾತಿಸುವ ಲೋಕವಿಖ್ಯಾತ ಮೂರುತಿ ನಿನಗೆ
ಮಾತುವಾಸೆಯ ಮೇಲೆ ಮಮತೆ ಇರ್ದಡೆ ಎನ್ನ
ಪ್ರೀತಿಯಲಿ ಪಾಲಿಸೊ



ಮಾತೆ ಮುನಿದಿಹಳೆನ್ನ ಭ್ರಾತೃಬಂಧುಗಳಿಲ್ಲ
ನೀತಿಯಲ್ಲವು ಎಂಬ ಮಾತು ಪೇಳ್ವರ ಕಾಣೆ
ಭೂತನಾಥಾದಿ ವರಬ್ರಹ್ಮ ವಂದಿತ ನೋಡು
ಈತನಿಂ ಮೃತನಾಗುವೆ ॥೨೮॥

ತರಹರಿಸಲಾರೆನೀ ದುರುಳನುರವಣೆಗೆನ್ನ
ಪರಿ ನೋಡದೆಯೆ ನಿಮ್ಮ ಸಿರಿಯ ಸಂಪತ್ತಿನಲಿ
ಮರೆದು ಮರೆಯೊಳಗಿರ್ಪ ಮುರಹರನೆ ನೋಡೆನ್ನ
ತರಿದು ಸುಡುವ ಧರೆಯೊಳು
ಕರುಣ ನಿನಗೇಕಿಲ್ಲ ಕಾವರಿಳೆಯೊಳಗಿಲ್ಲ
ಮರಣ ನಿಶ್ಚಯವಲ್ಲದಿರವು ಕಾಣಿಸಲಿಲ್ಲ
ದುರುಳ ಮನ್ನಿಪುದಿಲ್ಲ ದೋಷಕಂಜುವನಲ್ಲ
ಹರಿಯೆ ನೀನಲ್ಲದಿಲ್ಲ ॥೨೯॥

ಎಂದೊರಲುತಿರೆ ದೈತ್ಯನಂದು ಕೋಪದಿ ತನ್ನ
ನಂದನನ ಕಠಿನದಿಂ ಕೊಂದೆಳೆವೆನೆಂದು ಬರೆ
ನೊಂದು ನಿನ್ನಾಣೆ ನಾರದವಿನುತ ಕಾಪಾಡು
ತಂದೆ ಬಂದು ತ್ವರೆಯಿಂದೆ
ಇಂದೆನಗೆ ದಿಕ್ಕಾರು ನಿನ್ನುಳಿದು ಗೋವಿಂದ
ಮುಂದೆನಗೆ ದಿಕ್ಕಾರು ನಿನ್ನುಳಿದು ಸಿರಿವರದ
ಬಂದೀಗ ಕಾಯೆನ್ನ ಅರವಿಂದನಾಭನೆನೆ
ಭಕ್ತ ವರದನು ಹೊರಟನು ॥೩೦॥

ಅಗಧರನು ತಾಳ್ದ ನರಮೃಗದ ರೂಪೊಂದಾಗಿ
ಪೊಗೆಯಡರಿ ಕಂಬವಿಬ್ಭಾಗವಾಗಿ ದಳ್ಳುರಿ
ಭುಗಿಲು ಭುಗಿಲೆನುತೆದ್ದು ನರಹರನ ಕೈಲಾಸ
ಕೆಗರಿತಾ ಕಿಡಿಗಳು
ನಗಧರನ ರಿಪು ಪುರಿಯ ಮಿಗೆ ಜಗದ ನೆರೆ ನಾಲ್ಕು

ಮೊಗದವನ ಪಟ್ಟಣವ ನೆಗೆದು ಪಾವಕನದಿರೆ
ನಿಗಮಗೋಚರನಾಗ ಜಗದೊಳಗವತರಿಸಿದನು
ಮಗುವು ಮೊರೆಯಿಡಲು ಕೇಳಿ ॥೩೧॥

ಸಿಟ್ಟಿನಿಂದಾಗ ಕಡುಕೆಟ್ಟ ದಾನವನ ತಾ
ಕುಟ್ಟಿ ನಿಟ್ಟೆಲುಬುಗಳ ಮುರಿದೊಟ್ಟಿ ಬಾಗಿಲೊಳು
ದಿಟ್ಟವಹ ತೊಡೆಯ ಮೇಲಿಟ್ಟು ನಖ ಶಸ್ತ್ರದಿಂ
ಮುಟ್ಟಿ ಹೊಟ್ಟೆಯನು ಬಗೆದ
ತೊಟ್ಟಿಡುವ ಶೋಣಿತವ ನೆಟ್ಟನಾಪೋಶಿಸುತ
ಇಟ್ಟು ಕರುಳಿನ ಮಾಲೆ ಜಟ್ಟಿಯಾದನು ಜಗದಿ
ಧೃಷ್ಟ ಮೂರುತಿ ಕಂಡು ಸುರರು ಪೊಗಳುತ ಪುಷ್ಪ
ವೃಷ್ಟಿಗಳ ಸುರಿದರಾಗ ॥೩೨॥

ದುರುಳನನು ತರಿದ ನರ ಹರಿಯ ಕೋಪಜ್ವಾಲೆಯು
ಉರೆಯಾವರಿಸೆ ಜಗವ ಗಿರಿಜೆಯರಸನು ಒಡನೆ
ಸರಸಿಜಾಸನ ಸಹಿತ ಸುರಪತಿಯು ಮೊದಲಾಗಿ
ನೆರೆದು ದಿಕ್ಪಾಲಕರೆಲ್ಲ
ಪರಿಪರಿಯಲರ್ಚಿಸುತ ಸ್ಮರಣೆಗೈಯಲು ಶೌರಿ
ಕರುಣವಿನಿತಿಲ್ಲದುರುಹುತಿರೆ ಲೋಕವ ಸ್ಮರಿಸಿ
ದರು ಸಿರಿಯ ಸತ್ಕರಿಸಿದರು ಬಾಲಕನ ಹರಿಯ
ಮನ್ನಿಸಲೋಸುಗ ॥೩೩॥

ಒಡನೆ ಬಾಲಕನು ಅಡಿಯಿಡುವ ಲಕ್ಷ್ಮೀ ಸಹಿತ
ನಡೆತರಲು ಕಂಡು ಕೈಪಿಡಿದೆಳೆದು ಮಡದಿಯನು
ತೊಡೆಯ ಮೇಲಿಟ್ಟು ಮೈದಡವಿ ಬಾಲನನೆತ್ತಿ
ನುಡಿದ ನರಸಿಂಹನಾಗ
ಬಿಡು ಮಗನೆ ನಿನ್ನ ಮನದೊಳಗಿರ್ದ ಭಯಗಳನು
ಮಡಿದ ರಾಕ್ಷಸನು ಈ ಪೊಡವಿಯಲಿ ಸುಖಬಾಳು



ನಡೆಯೆನುತ ಮಗುವ ಮುದ್ದಾಡಿ ಮುಗುಳುನಗೆಯಿಂ
ತೊಡೆಯಿಳುಹಿ ಕಳುಹಿದಾಗ ॥೩೪

ಹರಬ್ರಹ್ಮ ಮೊದಲಾದ ಸುರರು ದಿಕ್ಪಾಲಕರು
ಹರಸಿದರು ತರಳ ಸುಖ ಬಾಳು ಧರಣಿಯೊಳೆಂದು
ಮೊರೆದುದಾ ದೇವ ದುಂದುಭಿಗಳಂಬರದೆಡೆಯ
ನೆರೆದು ನಾರಿಯರಾಕ್ಷಣ
ಹರಿಯೆ ಕರುಣಾಳು ಕಂಜಜನಯ್ಯ ನೀ ಎಮ್ಮ
ಸೆರೆಯ ಹರಿಸಿದೆ ಎಂದು ಸ್ಮರಿಸಿ ಸ್ವರ್ಗಕೆ ಸಾರೆ
ಹರನು ಮೊದಲಾದ ದಿಕ್ಪಾಲಕರು ಸಾರಿದರು
ಹರಿಯಂಘ್ರಿಗೆರಗಿ ಮುದದಿ ॥೩೫॥

ಕಡಲಸುತೆ ಸಹಿತಲಾಗ ಕಡು ಮನ್ನಿಸುತೆ ಕಳುಹಿ
ನಡೆದು ವೈಕುಂಠದೊಡೆಯನಾದನು ಶೌರಿ
ಅಡಿಯ ನಂಬಿಹ ದಾಸರೆಡೆಬಿಡದೆ, ಕಾಯ್ದಿಹನು
ನುಡಿಯಲಳವಡದ ಮಹಿಮೆ
ಮೃಡನ ಸಖನಡಿಯ ಮನ ದೃಢದಿ ಭಜಿಸುವ ಸುಜನ
ರೆಡೆಗೆ ಬಾರರು ಜಗದಿ ಯಮರಾಜ ಕಿಂಕರರು
ಜಡದೇಹಿಗಳಿಗೆಲ್ಲ ಕೊಡುವ ಸದ್ಗತಿಗಳನು
ಕಡು ಕೃಪಾನಿಧಿ ಕೃಷ್ಣನು ॥೩೬॥

ಆರಾದರಿದನು ಉದಯದಲಿ ಭಜಿಸಲು ಪೂರ್ವ
ಪ್ರಾರಬ್ಧ ಕರ್ಮ ಬಯಲಾಗಿ ಪರಿದೋಡುವುದು
ಶ್ರೀರಮಣನೊಲಿದು ಸದ್ಗತಿಯ ಕೊಡುವನು ಕಡೆಯ
ಲಾರೊಂದು ಜನ್ಮಗಳಿಗೆ
ವಾರಿಜಾಕ್ಷನ ಪಾದ ವನಜವನು ಪೊಗಳಿದೊಡೆ
ಚಾರುತರ ಸಾಮ್ರಾಜ್ಯ ಸಂಪದವು ಸಿದ್ಧಿಪುದು
ಧಾರಿಣಿಯೊಲತ್ಯಧಿಕವೆನಿಪ ಘಂಟಾಪುರಿಯ
ನಾರಾಯಣನ ಕರುಣದಿ ॥೩೭॥

ಭಾವ– ಘಂಟಾಪುರಿಯ ನಾರಾಯಣನನ್ನು ಕುರಿತ ಉದಯರಾಗವಿದು. ನರಸಿಂಹಾವತಾರದ ಕಥಾವಸ್ತು ಇಲ್ಲಿ ನಾಟಕೀಯ ಸನ್ನಿವೇಶದೊಂದಿಗೆ ಕಲಾತ್ಮಕವಾಗಿ ಕಂಡರಣೆಗೊಂಡಿದೆ.

ಅರ್ಥ– ಪನ್ನಗಾಧಿಪ = ಆದಿಶೇಷ
ಪಾವಕಾಂಬಕ = ಕೆಂಡಗಣ್ಣ (ಶಿವ)

೧. ದೈತ್ಯ = ರಾಕ್ಷಸ
ಕ್ಷಿತಿ = ಭೂಮಿ
ಪದಾಂಬುಜ = ಪಾದಕಮಲ
ಸುಕೃತ = ಪುಣ್ಯ
ಮಹಿ = ಭೂಮಂಡಲ

೨. ಮದಮುಖನು = ಅಹಂಕಾರಿ
ಸುದತಿಯ = ಪತ್ನಿಯ
ತಕ್ಕೈಸಿ = ಅಪ್ಪಿಕೊಂಡು
ಮನಸಿಜ ವೈರಿ = ಮನ್ಮಥನ ಶತ್ರು (ಶಿವ)
ನೇಮವನಿತ್ತನು = ಆಜ್ಞೆ ಮಾಡಿದನು

೩. ಪತಿಕರಿಸಿ = ಪ್ರೀತಿಸಿ
ಅರುಹು = ತಿಳಿಸು
ಬೃಂದ (<ವೃಂದ) = ಸಮೂಹ
ಅಂಘ್ರಿ = ಪಾದ

೪. ಅರ್ತಿ = ಪ್ರೀತಿ
ಉರೆ = ವಿಶೇಷವಾಗಿ
ಸಾಲೆ = ಪಾಠಶಾಲೆ

೫. ವಿಪ್ರ = ಬ್ರಾಹ್ಮಣ, ಬ್ರಹ್ಮಜ್ಞಾನಿ

೬. ಇಂಬಿಟ್ಟು = ಆಶ್ರಯ ಕಒಟ್ಟು
ಮೃಡ = ಈಶ್ವರ
ಕಾಮನಯ್ಯ = ಮನ್ಮಥದ ತಂದೆ (ವಿಷ್ಣು)



ವಾಸುದೇವ = ವಸುದೇವನ ಮಗ (ಕೃಷ್ಣ)
ಈಡಾರು = ಸಮ ಯಾರು
ಕಮಲಾಕ್ಷ = ವಿಷ್ಣು

೭. ಇಂದಿರಾ = ಲಕ್ಷ್ಮಿ
ಚಂದ್ರಶೇಖರ = ಈಶ್ವರ
ಅರಿದು = ಅಸಾಧ್ಯ
ಸಿಂಧುಶಯನ = ಸಾಗರದಲ್ಲಿ ಮಲಗುವವನು (ವಿಷ್ಣು)
ಸಂಕ್ರಂದನ = ಇಂದ್ರ

೮. ಪುರುಷೋತ್ತಮ = ವಿಷ್ಣು
ಭೃತ್ಯ = ಸೇವಕ
ದಾಡೆ = ಹಲ್ಲು, ದವಡೆ
ನೆತ್ತರೊರೆಯಲು = ರಕ್ತ ಸುರಿಯಲು
ಚಿತ್ತಜ = ಮನ್ಮಥ

೯. ಉಪಾಧ್ಯ = ಉಪಾಧ್ಯಾಯ
ನರಹರಿ = ನರಸಿಂಹ
ವನಜದಳ ನಯನ = ಕಮಲಾಕ್ಷ (ವಿಷ್ಣು)
ವಲಿದಾಗಿ = ಸಾಲು ಸಾಲಾಗಿ, ಅಲೆಅಲೆಯಾಗಿ
ಹದನ = ರೀತಿ

೧೦. ಮುಕುಂದ = ವಿಷ್ಣು
ಅರವಿಂದನಾಭ = ಹೊಕ್ಕುಳಲ್ಲಿ ಕಮಲವುಳ್ಳವನು (ವಿಷ್ಣು)
ಒರೆದ = ಹೇಳಿದ

೧೧. ರಿಪುಗಳ = ಶತ್ರುಗಳ
ಗುಪಿತ (<ಗುಪ್ತ) = ಗೋಪ್ಯ, ರಹಸ್ಯ
ಷಟ್ಕರ್ಮ = ಆರು ಕರ್ಮಗಳು (ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹ)

೧೨. ಸೊಲ್ಲು = ಮಾತು
ಗರ = ವಿಷ
ಫುಲ್ಲನಾಭ = ವಿಷ್ಣು

ವಲ್ಲಭ = ಒಡೆಯ
ಪಲ್ಲವ = ಚಿಗುರು
ಅಂಘ್ರಿ = ಪಾದ
೧೩.ದನುಜ = ರಾಕ್ಷಸ
ವನಜ = ಕಮಲ
೧೪.ಒರಲು = ಹೇಳು
೧೫.ಮಖ = ಯಾಗ
ಶತಮಖ = ಇಂದ್ರ
೧೬.ಮುಚುಕುಂದ ವರದ = ವಿಷ್ಣು
ಕಟ್ಟಳೆ = ಆಜ್ಞೆ
೧೭.ವಾಸುಕಿ = ಆದಿಶೇಷ
ವಾಸವ = ಇಂದ್ರ
ವಕ್ಷ = ಎದೆ
ನಗಧರ = ಬೆಟ್ಟವನ್ನು ಹೊತ್ತವನು (ವಿಷ್ಣು)
ವಾಸಿ = ವಚನ, ಭಾಷೆ
ಲೇಸು (<ಲೇಶ) = ಕೊಂಚವೂ
೧೮.ಜರಿ = ಬದಿ, ಪಕ್ಕ
ಧರಣಿ ಸತಿ = ಭೂದೇವಿ
೧೯.ಆಲಿ = ಕಣ್ಣು
ನೀಲವರ್ಣ = ವಿಷ್ಣು
ಶೂಲಿ = ಈಶ್ವರ
ವ್ಯಾಳ = ಸರ್ಪ
ಉಷ್ಣಾಂಶು = ಸೂರ್ಯ
ಗಾತ್ರ = ದೇಹ
ನೇತ್ರ = ಕಣ್ಣು
೨೦.ಮಠ = ಪಾಠಶಾಲೆ
ಇಂದಿರಾಪತಿ = ಲಕ್ಷ್ಮಿಯ ಗಂಡ (ವಿಷ್ಣು)
ವೈಷ್ಣವನು = ವಿಷ್ಣು ಭಕ್ತನಾದ ಪ್ರಹ್ಲಾದ
ಅಂದ = ಹೇಳಿದ



೨೧.ಮಹಿ = ಭೂಮಿ
ಕುರುಹು = ಗುರುತು
ಜೀವ ವಲ್ಲಭ = ಬಾಳಸಂಗಾತಿ (ಹಿರಣ್ಯಕಶ್ಯಪ)
೨೨.ಸಿರಿಯರಸ = ಲಕ್ಷ್ಮಿಯ ಗಂಡ (ವಿಷ್ಣು)
ಅರಿಯ = ತಿಳಿಯನು
೨೩.ಪಡಿ = ಪ್ರತಿ; ಕದ
ಪೊಡವಿ = ಭೂಮಿ
೨೪.ಚರ = ದೂತ
ಸಿರಿಹರಿ (<ಶ್ರೀಹರಿ)
೨೫.ಪನ್ನಗಾರಿ ಧ್ವಜ = ವಿಷ್ಣು
ಚಿಣ್ಣ = ಬಾಲಕ
ಪನ್ನಗಾಂಕ = ಹಾವನ್ನು ಆಭರಣವಾಗುಳ್ಳವನು (ಶಿವ)
೨೬.ನಳಿನನಾಭ = ವಿಷ್ಣು
ಒರಗಿರುವ = ಮಲಗಿರುವ
ನಗಧರ = ವಿಷ್ಣು
೨೭.ವಹ್ನಿ = ಅಗ್ನಿ
ಕರದ್ವಯ = ಎರಡು ಕೈಗಳು
ಮಧುವೈರಿ = ವಿಷ್ಣು
೨೮.ಮಾತುವಾಸೆ (<ಮಾತು+ಭಾಷೆ) = ವಚನ
೨೯.ಉರವಣೆ = ಅಬ್ಬರ, ಕಾಟ
೩೦.ತ್ವರೆ= ಬೇಗ
ವರದ = ವರ ನೀಡುವವನು
೩೧.ಅಗಧರ = ಬೆಟ್ಟ ಹೊತ್ತವನು (ವಿಷ್ಣು)
ನರಮೃಗ = ನರಸಿಂಹ
ನಗಹರನ = ಈಶ್ವರನ
ರಿಪು ಪುರಿ = ಶತ್ರು ಪಟ್ಟಣ
ಪಾವಕ = ಬೆಂಕಿ
೩೨.ನಿಟ್ಟೆಲುಬು = ನಿಡಿದಾದ ಮೂಳೆ
ಶೋಣಿತ = ರಕ್ತ

ಧೃಷ್ಟ = ಧೈರ್ಯಶಾಲಿ
ವೃಷ್ಟಿ = ಮಳೆ
೩೩.ಸರಸಿಜಾಸನ = ಬ್ರಹ್ಮ
೩೪.ಇಳುಹಿ = ಇಳಿಸಿ
೩೫.ದುಂದುಭಿ = ವಾದ್ಯ
ಕಂಜಜ = ಕಮಲದಲ್ಲಿ ಹುಟ್ಟಿದ ಬ್ರಹ್ಮ
ಸಾರೆ = ಹೋಗಲು
೩೬.ಕಡಲ ಸುತೆ = ಲಕ್ಷ್ಮಿ
ಕಿಂಕರ = ಸೇವಕ
೩೭.ಆರೊಂದು = ಏಳು
ಚಾರುತರ = ಸುಂದರ

* * * *



## ೩೦೮
## ಭೂಪಾಳ – ಝಂಪೆ ತಾಳ

ವಾಸುದೇವಾಯ ನಮೋ ವಾಸುಕಿಶಯನಾಯ
ವಾಸವಾದ್ಯಖಿಳ ಮುನಿನಮಿತ ಚರಣಾಂಭೋಜ
ಭೂಸುರ ಪ್ರಿಯ ಭಕ್ತ ಪೋಷಕನೆ ರಕ್ಷಿಪುದು
ಕೇಶವ ಮುಕುಂದರೊಲಿದು ॥ಪ॥

ಶುಂಡಾಲ ಪುರದೊಳಗೆ ಮರುಳ ದುರ್ಯೋಧನನು
ಪಾಂಡುನಂದನರೊಡನೆ ಕಪಟದ್ಯೂತವನಾಡಿ
ಗಂಡರೈವರ ಮುಂದೆ ದ್ರುಪದ ನಂದಿನಿ ಸೆರಗ
ಲಂಡ ದುಶ್ಯಾಸ ಪಿಡಿದು
ಅಂಡಲೆದು ಸೀರೆಯನು ಸೆಳೆಯುತಿರೆ ದ್ರೌಪದಿಯು
ಕಂಡು ಮನದಲಿ ಬೆದರಿ ಪರಮಾತ್ಮ ಪರಿಪೂರ್ಣ
ಪುಂಡರೀಕಾಕ್ಷ ರಕ್ಷಿಪುದೆಂದು ಮೊರೆಯಿಟ್ಟ
ಳಂಡಜ ತುರಂಗಗಾಗ ॥೧॥

ಪಾವಕನ ಉರಿಯೊಳಗೆ ಹೊಕ್ಕು ಹೊರಡಲು ಬಹುದು
ಹಾವುಗಳ ಹೆಡೆ ಹಿಡಿದು ಎಳೆದೆಳೆದು ತರಬಹುದು
ತೀವಿರ್ದ ಮಡುವ ದುಮುಕಲು ಬಹುದು ಗರಳವನು
ಸೇವಿಸಬಹುದು ಉರದಿ
ಸಾವಿಗಂಜದೆ ಕೊರಳನುತ್ತರಿಸಿಕೊಳಬಹುದು
ಜೀವಯಿದ್ದಂತೆ ಲಜ್ಜೆಯನು ತೊರೆಯಲಾರೆನು
ಆವ ಪರಿಯಲಿ ನಿನ್ನ ನಂಬಿರುವನಾಥೆಯನು
ದೇವ ಅಭಿಮಾನವನು ಕಾಯೊ ॥೨॥

ಪತಿಗಳೈವರು ಸತ್ಯವ್ರತದಿ ಸುಮ್ಮನೆ ಇಹರು
ಅತಿಕ್ಲೇಶ ಪಡುತಿಹರು ವಿದುರ ಭೀಷ್ಮಾದಿಗಳು
ಸುತರ ಮೇಲಣ ಮೋಹದಿಂದಂಜಿ ಹೇಳದಿಹ
ಗತವಿಲೋಚನ ಮಾವನು
ಪತಿಕರಿಸಿಹರು ಶಕುನಿ ಕರ್ಣ ದುರ್ಯೋಧನರು
ಹಿತವ ಬಯಸುವರಿಲ್ಲ ನೆರೆದಿರ್ದ ಸಭೆಯೊಳಗೆ
ಗತಿಯಿಲ್ಲದರಿಗೆ ಸದ್ಗತಿ ನೀನೆ ನಂಬಿದೆನು
ರತಿಪತಿಯ ಪಿತನೆ ಸಲಹೊ ॥೩॥

ಅತ್ತೆಯಲ್ಲವೆ ಎನಗೆ ಗಾಂಧಾರಿದೇವಿಯರೆ
ಮೃತ್ಯುವಂತೆಳೆವವನ ಬಿಡಿಸಬಾರದೆ ತಾಯೆ
ಉತ್ತಮಳಲಾ ನೀನು ಭಾನುಮತಿ ನಗೆಹೆಣ್ಣೆ
ಇತ್ತ ದಯಮಾಡಿ ನೋಡೆ
ಸುತ್ತ ನೆರೆದಿಹ ಸಭೆಯ ಪರಿವಾರದವರೆಲ್ಲ
ಪೆತ್ತುದಿಲ್ಲವೆ ಎನ್ನ ಪೋಲ್ವ ಪೆಣ್ಮಕ್ಕಳನು
ಹತ್ತು ಜನರ ನಡುವಣ ಹಾವು ಸಾಯಲುಬಹುದೆ
ತತ್ತ್ವ ಬಾಹಿರರಾದಿರಿ ॥೪॥

ಆರಿಗೊರಲಿದರೆನ್ನ ದೂರು ಕೇಳುವರಿಲ್ಲ
ಪಾರಗಾಣಿಸುವವರ ಕಾಣೆ ನಾನಿವರೊಳಗೆ
ಸಾರಿದರೆ ಪೊರೆವ ಕಂಸಾರಿ ನೀನಲ್ಲದಿ–
ನ್ನಾರೆನಗೆ ಆಪ್ತಬಂಧು
ಮಾರಿದರು ಧರ್ಮದೇವತೆಗೆನ್ನ ವಲ್ಲಭರು
ಭಾರ ನಿನ್ನದು ಎಂದು ನಂಬಿದ ಅನಾಥಳನು
ಕ್ಷೀರದೊಳಗದ್ದು ನೀರೊಳಗದ್ದು ಗತಿನೀನೆ
ನಾರಾಯಣನೆ ರಕ್ಷಿಸೊ ॥೫॥

ಅಸುರ ಬೆನ್ನಟ್ಟಿ ಬರೆ ಪಶುಪತಿಯ ರಕ್ಷಿಸಿದೆ
ಋಷಿಯ ಶಾಪವ ತರಿದು ಅಂಬರೀಷನ ಪೊರೆದೆ



ವಸುಧೆಯೊಳು ಕಲ್ಲಾಗಿ ಬಿದ್ದಹಲ್ಯೆಯ ಕಾಯ್ದೆ
ಶಿಶುವು ಪ್ರಹ್ಲಾದಗೊಲಿದೆ
ಪಸುಳೆ ಧ್ರುವರಾಯನಿಗೆ ಪೆಸರುಳ್ಳ ಪದವಿತ್ತೆ
ದಶಕಂಠನನುಜಂಗೆ ಸ್ಥಿರ ಪಟ್ಟವನು ಕೊಟ್ಟೆ
ಪೆಸರುಗೊಂಡರೆ ಪಸುಳೆ ಅಜಮಿಳನ ರಕ್ಷಿಸಿದೆ
ವಸುದೇವ ಸುತನೆ ಸಲಹೊ ॥೬॥

ಲಕ್ಷ್ಮೀ ಮನೋಹರನೆ ಇಕ್ಷು ಚಾಪನ ಪಿತನೆ
ಯಕ್ಷ ಗಂಧರ್ವಾಮರೇಂದ್ರ ಮುನಿವಂದಿತನೆ
ಅಕ್ಷಯ ಸುಲೀಲೆಯಲಿ ಜಗವ ಸೃಜಿಸುತ ಸ್ಥೂಲ
ಸೂಕ್ಷ್ಮದೊಳು ವಿರಾಜಿಪನೆ
ಕುಕ್ಷಿಯೊಳಗೀರೇಳು ಜಗವ ಪಾಲಿಸುವವನೆ
ಅಕ್ಷಾಸುರಾಂತಕಗೆ ಅಜಪದವನಿತ್ತವನೆ
ದಕ್ಷಸುತೆಪತಿಸಖನೆ ಪಕ್ಷಿವಾಹನ ಸ್ವಾಮಿ
ರಕ್ಷಿಸು ಅನಾಥ ಬಂಧು ॥೭॥

ತಂದೆ ತಾಯಿಯು ನೀನೆ ಬಂಧು ಬಳಗವು ನೀನೆ
ಇಂದೆನ್ನ ಕುಲಸ್ವಾಮಿ ಗುರುಪಿತಾಮಹ ನೀನೆ
ಎಂದು ನಂಬಿದ ನನ್ನ ಮಾನಾಭಿಮಾನವ ಮು
ಕುಂದ ನಿನಗೊಪ್ಪಿಸಿದೆನು
ಸಂದೇಹವೇಕೆ ಕೊಂದರೆ ಒಳಿತು ಕಾಯ್ದರೊಳಿ
ತೆಂದೆರಡು ಕಣ್ಗಳಂ ಮುಚ್ಚಿ ಕರಗಳ ಮುಗಿದು
ಇಂದು ಪ್ರಾಣವ ಬಿಡುವೆನೆಂದು ನಿಶ್ಚೈಸಿ ಗೋ
ವಿಂದ ಎಂದೊದರೆ ತರಳೆ ॥೮॥

ಇಂತೆಂದು ದ್ರೌಪದಿಯ ಮೊರೆಯಿಡುವ ಧ್ವನಿ ಕೇಳಿ
ಅಂತರಾತ್ಮಕ ಕೃಷ್ಣ ದ್ವಾರಕಾಪುರದೊಳಗೆ
ಕಾಂತೆ ರುಕ್ಮಿಣಿ ಸತ್ಯ ಭಾಮೆಯರ ಕೊಡೆ ಏ
ಕಾಂತ ಭವನದೊಳು ತಿಳಿದು

ಕುಂತಿ ನಂದನರ ಸತಿ ಉಟ್ಟುದಕ್ಷಯವಾಗಿ
ಸಂತಸವಗೊಳಲೆಂದು ವರವಿತ್ತ ಶ್ರೀಕೃಷ್ಣ
ಎಂತುಂಟೋ ತನ್ನ ನೆನೆವರ ಮೇಲೆ ಕರುಣವು ಅ
ನಂತ ವಸ್ತ್ರಗಳಾದುವು ॥೯॥

ಸೆಳೆಯುತಿರ್ದನು ಖಳನು ಬೆಳೆಯುತಿರ್ದವು ಸೀರೆ
ಬಿಳಿದು ಪೊಂಬಟ್ಟೆ ನಾನಾ ವಿಚಿತ್ರದ ಬಣ್ಣ
ಹೊಳಲು ತುಂಬುವ ತೆರದಿ ಎಳೆದೆಳೆದು ಪಾಪಾತ್ಮ
ಬಳಲಿ ಇಳೆಯೊಳು ಬಿದ್ದನು
ಕಳೆಯಗುಂದಿತು ಮೋರೆ ಕರ್ಣ ದುರ್ಯೋಧನರ
ಬಳಿಯೆ ನಿಂದಿರ್ದ ದೂತನ ಕರೆದು ನೇಮಿಸಿದ
ತಳುವದೀ ವಸ್ತ್ರಗಳ ಕಳುಹು ಬೊಕ್ಕಸಕೆನಲು
ನಳಿನಾಕ್ಷಿ ತಿಳಿದಳಾಗ ॥೧೦॥

ಸಿಟ್ಟಿನಲಿ ದ್ರೌಪದಿಯು ಕಣ್ದೆರೆದು ನೋಡಲಾ
ಬೆಟ್ಟದಂತೊಟ್ಟಿರ್ದ ವಸ್ತ್ರರಾಶಿಗಳೆಲ್ಲ
ಸುಟ್ಟಗ್ನಿ ಹೊರಸೂಸಿ ಪಟ್ಟಣದ ಗೃಹವೆಲ್ಲ
ನೆಟ್ಟನಾಹುತಿಗೊಂಡವು
ಕೊಟ್ಟಳಾ ಕಮಲಾಕ್ಷಿ ಕುರುಪತಿಗೆ ಶಾಪವನು
ಕಟ್ಟಾಳು ಭೀಮಸೇನನು ರಣದಿ ಗದೆಯಿಂದ
ಕುಟ್ಟಿ ಬಿಸುಡಲಿ ನಿನ್ನ ತೊಡೆಗಳೆರಡನೆನ್ನುತ
ಇಟ್ಟ ನುಡಿ ತಪ್ಪಲುಂಟೆ ॥೧೧॥

ಮೂಡಿದವು ಪ್ರತಿಸೂರ್ಯ ಧೂಮಕೇತುಗಳು ಓ
ಡಾಡಿದುವು ಗಗನದೊಳು ಹದ್ದು ಕಾಗೆಗಳು ಕಾ
ದಾಡಿದುವು ಮೃಗಜಾತಿ ಚಲಿಸಿದುವು ಶಿಲೆ ಪ್ರತಿಮೆ
ರೂಢಿ ಗಡಗಡ ನಡುಗಿತು
ಕೂಡಿ ನಕ್ಷತ್ರ ಸೂಸಿದುವು ಬಾಂದಳದಿ ಮಾ
ತಾಡಿದುವು ಅಶರೀರ ವಾಕ್ಯ ಪುರಜನರು



ಕೇಡು ಕೌರವಗಾಗದಿರದೆಂದು ನಿಶ್ಶೈಸಿ
ಓಡಿ ಮನೆಗಳ ಪೊಕ್ಕರು ॥೧೨॥

ಹರುಷಪಟ್ಟರು ಮನದಿ ವಿದುರ ಭೀಷ್ಮಾದಿಗಳು
ಸುರರು ನಾರದರೆಲ್ಲ ನೆರೆದರಂಬರದಲ್ಲಿ
ಹರಸಿ ಜಯಜಯವೆನುತ ದ್ರೌಪದಿಯ ಸಿರಿಮುಡಿಗೆ
ಸುರಿಸಿದರು ಪೂಮಳೆಗಳ
ಹರಿಯ ನಾಮಾವಳಿಯ ಪೊಗಳುತಲಿ ದಿವಿಜೇಂದ್ರ
ತಿರುಗಿ ಪೋದನು ತನ್ನಮರಾವತಿಯರಮನೆಗೆ
ಹರಿನಾಮ ನೆನೆವರೇಸು ಧನ್ಯರೊ ದ್ರೌಪದಿಯ
ಹರಿನಾಮವೇ ಕಾಯ್ದುದು ॥೧೩॥

ಆವನಿದನುದಯ ಕಾಲದೊಳೆದ್ದು ಭಕುತಿಯಲಿ
ಭಾವಶುದ್ಧಿಯಲಿ ಹೇಳುವನೊ ಕೇಳುವನೊ ಅವನ–
ಘಾವಳಿಯ ಪರಿಹರಿಸಿ ದಿವ್ಯ ಜ್ಞಾನವನೀವೆ
ಅವಸಾನ ಸಮಯದಲ್ಲಿ
ಶ್ರೀ ವಾಸುದೇವನಾಜ್ಞಾಪಿಸಿದ ರುಕ್ಮಿಣಿಗೆ
ದೇವಿ ಕೇಳೆನ್ನ ಭಾಷೆಯ ಮುಂದೆ ಅರ್ಜುನಗೆ
ನಾವೆ ಸಾರಥಿಯಾಗಿ ಸಲಹುವೆವು ಅವರೆಮ್ಮ
ಜೀವ ಪಾಂಡವರೆಂದನು ॥೧೪॥

ಮಂಗಳಂ ಶ್ರೀಧರಗೆ ಮಂಗಳಂ ಭೂಧರಗೆ
ಮಂಗಳಂ ಮುರಹರಗೆ ಮಂಗಳಂ ನರಹರಿಗೆ
ಮಂಗಳಂ ಗರುಡವಾಹನ ಕೃಷ್ಣ ದೇವಂಗೆ
ಮಂಗಳಂ ಕರಿವರದಗೆ
ಮಂಗಳಂ ತರಳೆಯಭಿಮಾನವನು ಕಾಯ್ದಂಗೆ
ಮಂಗಳಂ ಮುನಿಜನರ ಮನದ ಕೊನೆಯಲ್ಲಿಹಗೆ
ಮಂಗಳಂ ಕಾಗಿನೆಲೆಯಾದಿಕೇಶವಗೆ ಜಯ
ಮಂಗಳಂ ಸಿರಿವರನಿಗೆ ॥೧೫॥

ಭಾವ– ದ್ರೌಪದಿಯ ವಸ್ತ್ರಾಪಹರಣ ಪ್ರಸಂಗದ ಹಿನ್ನೆಲೆಯಲ್ಲಿ ದೇವರು ಹೇಗೆ ಭಕ್ತವತ್ಸಲ ಎಂಬುದನ್ನು ಸುಂದರವಾಗಿ ಚಿತ್ರಿಸಲಾಗಿದೆ ಇದರಲ್ಲಿ. ಕನಕದಾಸರ ಕವಿಪ್ರತಿಭೆ ಭಾವ ಭಾಷೆಯ ಸುಂದರ ಕಂಡರಣೆಯಲ್ಲಿ ಕೋರೈಸಿದೆ; ವಾರ್ಧಕ ಷಟ್ಪದಿಯ ಬೀಸುನಡಿಗೆಯಲ್ಲಿ ಸಾಗುವ, ಕಾವ್ಯಧರ್ಮ ಕೆನೆಗಟ್ಟಿದಂತಿರುವ ಕಲಾತ್ಮಕ ಕಥನಗೀತೆ ಎಂದರೂ ಒಪ್ಪುತ್ತದೆ.

ಅರ್ಥ– ವಾಸುದೇವ = ವಸುದೇವ ಮಗ (ಕೃಷ್ಣ)
ವಾಸುಕಿಶಯನ = ಹಾವನ್ನೇ ಹಾಸಿಗೆಯಾಗುಳ್ಳವನು (ವಿಷ್ಣು)
ವಾಸವ = ಇಂದ್ರ
ಚರಣಾಂಭೋಜ = ಪಾದಕಮಲ
ಭೂಸುರ = ಬ್ರಾಹ್ಮಣ, ಬ್ರಹ್ಮಜ್ಞಾನಿ

೧. ಶುಂಡಾಲ = ಆನೆ
ಶುಂಡಾಲಪುರ = ಹಸ್ತಿನಾವತಿ
ಪುಂಡರೀಕಾಕ್ಷ = ಕಮಲದಂತೆ ಕಣ್ಣುಳ್ಳವನು (ವಿಷ್ಣು)
ಅಂಡಜ = ಮೊಟ್ಟೆಯಿಂದ ಹುಟ್ಟಿದ (ಗರುಡ)
ತುರಂಗ = ಕುದುರೆ
ಅಂಡಜ ತುರಂಗ = ಗರುಡವಾಹನ (ವಿಷ್ಣು)

೨. ಪಾವಕ = ಬೆಂಕಿ
ತೀವಿರ್ದ = ತುಂಬಿದ್ದ
ಮಡುವ = ನದಿಯ ಆಳವಾದ ನೀರಿನ ಸುಳಿಯಿರುವ ಭಾಗ
ಗರಳ = ವಿಷ
ಉರದಿ = ಎದೆಯಲ್ಲಿ (ಹೊಟ್ಟೆಯಲ್ಲಿ)
ಉತ್ತರಿಸು = ಕತ್ತರಿಸು
ಲಜ್ಜೆ = ಮಾನ

೩. ಗತವಿಲೋಚನ = ಕಣ್ಣಿಲ್ಲದವನು (ಧೃತರಾಷ್ಟ್ರ)
ಪತಿಕರಿಸು = ಸಮರ್ಥಿಸು
ರತಿಪತಿಯ ಪಿತನೆ = ಮನ್ಮಥನ ತಂದೆಯೆ (ವಿಷ್ಣು)



೪. ನಗೆಹೆಣ್ಣೆ = ವಾರಗಿತ್ತಿ (ಓರಗಿತ್ತಿ) = ನೆಗಣ್ಣಿ

೫. ಒರಲು = ಗೋಳು ತೋಡಿಕೊಳ್ಳು
ಪಾರ = ದಡ
ಪಾರಗಾಣಿಸು = ದಡ ಸೇರಿಸು
ಸಾರಿದರೆ = ಹತ್ತಿರ ಬಂದರೆ ಅಥವಾ ಕೂಗಿಕೊಂಡರೆ
ಕಂಸಾರಿ = ಕಂಸನ ಶತ್ರು (ಕೃಷ್ಣ)
ವಲ್ಲಭರು = ಗಂಡಂದಿರು
ಕ್ಷೀರ = ಹಾಲು

೬. ಅಸುರ = ರಾಕ್ಷಸ (ಭಸ್ಮಾಸುರ)
ಪಶುಪತಿ = ಈಶ್ವರ
ತರಿದು = ಹೋಗಲಾಡಿಸಿ, ಸಂಹರಿಸಿ
ವಸುಧೆ = ಭೂಮಿ
ದಶಕಂಠ = ರಾವಣ
ದಶಕಂಠನನುಜ = ರಾವಣನ ತಮ್ಮ (ವಿಭೀಷಣ)

೭. ಇಕ್ಷುಚಾಪನ ಪಿತನೆ = ಕಬ್ಬನ್ನೇ ಬಿಲ್ಲನ್ನಾಗುಳ್ಳ ಮನ್ಮಥನ ತಂದೆ (ವಿಷ್ಣು)
ಕುಕ್ಷಿ = ಹೊಟ್ಟೆ
ಈರೇಳು = ಹದಿನಾಲ್ಕು
ಅಕ್ಷಾಸುರ = ರಾವಣನ ಮಗ
ಅಕ್ಷಾಸುರಾಂತಕ = ಅವನನ್ನು ಸಂಹರಿಸಿದ ಹನುಮಂತ
ಅಜಪದವ = ಬ್ರಹ್ಮಪದವಿಯ
ದಕ್ಷಸುತೆಪತಿಸಖನೆ = ದಕ್ಷನ ಮಗಳ ಗಂಡನಾದ ಈಶ್ವರನ ಗೆಳೆಯನೆ
ಪಕ್ಷಿವಾಹನ = ಗರುಡವಾಹನನಾದ ವಿಷ್ಣು

೮. ಪಿತಾಮಹ = ತಂದೆಯ ತಂದೆ (ತಾತ)
ಒದರೆ = ಕೂಗಿಕೊಳ್ಳಲು

೯. ಏಕಾಂತ ಭವನ = ಶಯ್ಯಾಗೃಹ
ಕುಂತೀ ನಂದನರ ಸತಿ = ಪಾಂಡವರ ಪತ್ನಿಯಾದ ದ್ರೌಪದಿ

೧೦. ಪೊಂಬಟ್ಟೆ (<ಪೊನ್+ಬಟ್ಟೆ) = ಚಿನ್ನದ ಬಣ್ಣದ ವಸ್ತ್ರ
ಹೊಳಲು = ಪಟ್ಟಣ
ಇಳೆ = ಭೂಮಿ
ಕಳೆಯಗುಂದಿತು = ಕಾಂತಿ ಕುಂದಿತು
ಮೋರೆ = ಮುಖ
ತಳುವದೆ = ತಡಮಾಡದೆ
ನಳಿನಾಕ್ಷಿ = ಕಮಲದಂತೆ ಕಣ್ಣುಳ್ಳವಳು (ದ್ರೌಪದಿ)

೧೧. ಒಟ್ಟಿರ್ದ = ಗುಡ್ಡೆ ಮಾಡಿದ್ದ, ರಾಶಿ ಹಾಕಿದ್ದ
ಕಟ್ಟಾಳು = ಶೂರ

೧೨. ಗಗನ = ಆಕಾಶ
ರೂಢಿ = ಭೂಮಂಡಲ
ಬಾಂದಳ = ಆಕಾಶ

೧೩. ನೆರೆದು = ಸೇರಿ, ಗುಂಪುಕೂಡಿ
ಅಂಬರ = ಆಕಾಶ
ಅವಳಿ = ಗುಂಪು, ಸರಮಾಲೆ
ದಿವಿಜೇಂದ್ರ = ದೇವೇಂದ್ರ

೧೪. ಅಘಾವಳಿ = ಪಾಪಸಮೂಹ
ಭಾಷೆಯ = ಆಣೆಯನ್ನು

೧೫. ಕರಿವರದ = ಆನೆಗೆ ವರವಿತ್ತವನು (ವಿಷ್ಣು)

* * * *



## ೩೧೯
## ಭೂಪಾಳಿ – ಝಂಪೆ

ತಂಗದಿರನನಿಮಿಷ ತಾರಕೆಗಳು ಮಸುಳಿಸೆ ಪ
ತಂಗ ಪರ್ವತವನಡರಿ ಬಂದನು
ಜಂಗಮುಗಳೆದ್ದು ಜಯಜಯವೆನುತಿರೆ ನರ
ಸಿಂಗನೊಲಿದುಪ್ಪವಡಿಸೊ ಹರಿಯೆ ॥ಪ॥

ಮೂಡುಗಡೆ ಮುಗಿಲು ಕೆಂಪಾದುದಡವಿಯ ತಾಮ್ರ
ಚೂಡ ಕಾಳೋದರವು ಕೋಗಿಲೆಗಳುಲಿಯುತಿರೆ
ನಾಡ ನಾನಾ ತಪೋಧನರು ತತ್ಕಾಲದಲಿ
ಬೀಡ ಹೊರಹೊಂಟು ನಡೆದುದು
ಕ್ರೋಡದಂಷ್ಟ್ರಜೆ ಕೃಷ್ಣವೇಣಿಯ ವರುಣೆ
ಕೂಡಿ ಗಂಗಾಸ್ನಾನಗಳ ಮಾಡಲುದ್ಯೋಗಿಸಿದರಖಿಳ
ಸಾಧುಗಳು ಅರಿವಿಭಾಡನೊಲಿದುಪ್ಪವಡಿಸೊ ಹರಿಯೆ ॥೧॥

ಕುಗ್ಗಿದುವು ಕುಮುದ ಕುಂದ ಚಕೋರಾದಿಗಳು ಭುಜ
ಹಿಗ್ಗಿದುವು ಚಕ್ರವಾಕಾಕಾಶದಲಿ ನೆರೆದು
ಮೊಗ್ಗಿದುವು ಮಧುಪ ಸಂಕುಲ ಪುಷ್ಪವಾಟಿಯೊಳು
ಜಗ್ಗಿದುವು ಜಡಿವ ತೆರದಿ ವರಕವಿಗಳೆದೆಯ ಮಧುರೋಕ್ತಿ ಎನಿಸಿ
ನೆಗ್ಗಿದುವು ನಿಜಕುಲಾದ್ರಿಗಳಲಿ ಭಾನುವಿನ ಕಿರಣ
ನುಗ್ಗಿ ಪೃಥ್ವಿಯೊಳು ಪಸರಿಸಿತು ಅನರ್ಘ್ಯನೊಲಿದುಪ್ಪ–
ವಡಿಸಯ್ಯ ಹರಿಯೆ ॥೨॥

ಅಂಜನಾಸೂನು ಫಣಿಪತಿ ಗರುಡ ಪ್ರಹ್ಲಾದ
ಕುಂಜರಾಧಿಪ ಬಲಿ ವಿಭೀಷಣ ಧ್ರುವ
ರಂಜಕದ ಮೋಹಿನಿಯ ಗೆಲಿದ ರುಕಮಾಂಗದನು ಧ

ನಂಜಯನಾತ್ಮಸಂಭವನ ಸಂಜಾತ ವಿದುರನಕ್ರೂರ
ಮುಂಜಾವದಲಿ ಮುಮುಕ್ಷುಗಳು ಬಂದರು ದಯಾ
ಪಂಜರವೊಲಿದುಪ್ಪವಡಿಸೊ ಹರಿಯೆ ||೩||

ಶ್ವೇತಗಜ ಮಹಿಷ ಮಾನವ ನೆಗಳು ಏಣು ಸು
ಜಾತಶ್ವ ವೃಷಭ ಮೇಷ ವಾಹನರು
ಭೂತಳದೊಳಿದ್ದ ಮನುಮುನಿ ನಿರ್ಝರವ್ರಾತ ವಾಣೀಶನೊಡನೆ
ಆತ ತನ್ನಮಳ ಹಯವನೇರಿಕೊಂಡು ಪ್ರ
ಖ್ಯಾತ ದುಂದುಭಿಯ ರಭಸದೊಡನೆ ಚೇತ
ನಾತುಮಕನೆ ನಿನ್ನಯ ಬಳಿಗೆ ಬಂದರು ವಿಶ್ವ
ನಾಥನೊಲಿದುಪ್ಪವಡಿಸಯ್ಯ ಹರಿಯೆ ||೪||

ತಾಳದಂಡಿಗೆ ಪಿಡಿದು ತುಂಬುರು ನಾರದರು ಭೂ
ಪಾಳಿ ದೇಶಾಕ್ಷಿ ನಾರಾಯಣಿ ಗುರ್ಜರಿ
ಮಾಳವಿ ಶ್ರೀದೇವಿ ಗಾಂಧಾರಿ ಮಲಹರಿ
ಸಾಳಗವು ಸೌರಾಷ್ಟ್ರ– ಗುಂಡಕ್ರಿಯಾ ಲಲಿತ
ಸುಳಾದಿಯಲಿ ನಾಮ ಕೀರ್ತನೆಗಳ ಪಾಡಿ
ಮೇಳೈಸಿ ವಾದ್ಯ ನೃತ್ಯಗಳಾಡುತಿಹರು ಪಶು
ಪಾಲನುಪ್ಪವಡಿಸೊ ಹರಿಯೆ ||೫||

ಮೂಜಗದ ವ್ಯವಹಾರಿ ಮುಂಕೊಂಡು ಭರ
ದ್ವಾಜ ರೋಮಷ ಅತ್ರಿ ಗಾರ್ಗೇಯ ಜ–
ಯ ಜಯಾಸನ ಶುಕ ಪರಾಶರ ರಿಪುಮಾನ್ಯ ಪ–
ಯೋಜಸಂಭವ ಸಂತತಿ
ಭೋಜವರ ಭೃಗು ಕಪಿಲ ಮಾರಹರ ಗೌತ–
ಮಜಾನುಜ ಋಷಿ ಕೌಶಿಕ ವಶಿಷ್ಠ
ಬೀಜಾಕ್ಷರದ ಕೀರ್ತನೆಗೈದು ಇನಕೋಟಿ
ತೇಜನೊಲಿದುಪ್ಪವಡಿಸಯ್ಯ ಹರಿಯೆ ||೬||



ವಾಗೀಶ ಬೃಹಸ್ಪತಿ ಹಜಾರದೊಳು ತಲೆ
ದೂಗಿ ಶ್ರುತಿಶಾಸ್ತ್ರದಲಿ ಸ್ತುತಿಸಿಹರು
ನಾಗಿಣಿಯರಮರಲೋಕದ ನರ್ತಕಿಯರು
ಬಾಗಿಲೊಳು ಮಂಗಳೋದಕವಿಡಿದು ಕೆಲವರು
ರಾಗಿಸುತ ರತ್ನದಾರತಿಯ ತಾಳ್ದರು
ಕಾಗಿನೆಲೆಯಾದಿಕೇಶವರಾಯನಮರ ಸಂಯೋಗಿ
ಒಲಿದುಪ್ಪವಡಿಸಯ್ಯ ಹರಿಯೆ ||೭||

ಭಾವ– ನಾರಸಿಂಹನನ್ನು ಕುರಿತ ಉದಯರಾಗವಿದು. ದೇವರನ್ನು ನಿದ್ರೆಯಿಂದ ಏಳು ಎಂದು ಭಕ್ತ ನಾನಾ ಪರಿಯಲ್ಲಿ ಕೇಳಿಕೊಳ್ಳುವ ಭಾವವಿಲ್ಲಿ ಕಂಡರಣೆಗೊಂಡಿದೆ.

ಅರ್ಥ– ತಂಗದಿರ = ಚಂದ್ರ
ಅನಿಮಿಷ ತಾರಕೆಗಳು = ಪ್ರಕಾಶಮಾನವಾದ ನಕ್ಷತ್ರಗಳು
ಮಸುಳಿಸೆ = ಕಾಂತಿಗುಂದಲು
ಪತಂಗ = ಸೂರ್ಯ
ಅಡರಿ = ಏರಿ, ಹತ್ತಿ
ಜಂಗಮಗಳು = ಜೀವಜಂತುಗಳು
ಉಪ್ಪವಡಿಸು = ಏಳು

೧. ತಾಮ್ರ ಚೂಡ = ಕೋಳಿ
ಕಾಳೋದರ = ಕಾಗೆ
ಕ್ರೋಡದಂಷ್ಟ್ರಜೆ = ವರಾಹನ ದಾಡೆಯಿಂದ ಹುಟ್ಟಿದವಳು (ತುಂಗಭದ್ರೆ)
ಅರಿವಿಭಾಡ = ಶತ್ರುನಾಶಕ

೨. ಕುಮುದ = ಕನ್ನೈದಿಲೆ
ಕುಂದ = ಮೊಲ್ಲೆ
ಚಕೋರ = ಚಂದ್ರನ ಬೆಳದಿಂಗಳನ್ನು ಕುಡಿದು ಬದುಕುವ ಪಕ್ಷಿ ಎಂಬ ನಂಬಿಕೆ

ಚಕ್ರವಾಕ = ರಥಾಂಗ ಪಕ್ಷಿ, ಕೋಕಪಕ್ಷಿ
ಮಧುಪ = ದುಂಬಿ
ಕುಲಾದ್ರಿ = ಕುಲಪರ್ವತ

೩. ಅಂಜನಾಸೂನು = ಆಂಜನೇಯ
ಫಣಿಪತಿ = ಆದಿಶೇಷ
ಕುಂಜರ = ಆನೆ
ಧನಂಜಯ... ಸಂಜಾತ = ಪರೀಕ್ಷಿತ
ಮುಮುಕ್ಷುಗಳು = ಮೋಕ್ಷ ಸಾಧಕರು

೪. ಶ್ವೇತಗಜ = ಐರಾವತ (ಇಂದ್ರವಾಹನ)
ಮಹಿಷ = ಕೋಣ (ಯಮನ ವಾಹನ)
ಮಾನವ = ಮನುಷ್ಯ (ನಿರ್‌ಋತಿಯ ವಾಹನ)
ನೆಗಳು = ಮೊಸಳೆ (ವರುಣವಾಹನ)
ಏಣು = ಜಿಂಕೆ (ವಾಯುವಿನ ವಾಹನ)
ಸುಜಾತಶ್ವ = ಕಳಂಕರಹಿತ ಕುದುರೆ (ಕುಬೇರನ ವಾಹನ)
ವೃಷಭ = ಎತ್ತು (ಈಶಾನನ ವಾಹನ)
ಮೇಷ = ಟಗರು (ಅಗ್ನಿಯ ವಾಹನ)
ನಿರ್ಝರ ವ್ರಾತ = ದೇವ ಸಮೂಹ
ವಾಣೀಶ = ಬ್ರಹ್ಮ

೫. ದಂಡಿಗೆ = ತಂಬೂರಿ
ಪಶುಪಾಲ = ವಿಷ್ಣು (ಗೋಪಾಲನಾದ ಕೃಷ್ಣ)

೬. ಜಯ = ವಿಶ್ವಾಮಿತ್ರನ ಪುತ್ರ
ಜಯಾಸನ = ?
ಪಯೋಜಸಂಭವ ಸಂತತಿ = ಬ್ರಹ್ಮನ ಸಂತತಿ
ಭೋಜವರ = ಕಶ್ಯಪ ಕುಲೋತ್ಪನ್ನರಾದ ಋಷಿಗಳು
ಮಾರಹರ = ಕಾಮವನ್ನು ಗೆದ್ದವನು
ಇನ = ಸೂರ್ಯ

೭. ಮಂಗಳೋದಕ = ಪವಿತ್ರವಾದ ನೀರು
ರಾಗಿಸುತ = ಪ್ರೀತಿಸುತ್ತ

* * * *



## ೩೧೦
## ಭೂಪಾಳಿ – ಝಂಪೆ

ಪೂಸರನ ಜನಕನೇ ಶತಕೋಟಿತರಣಿ ಪ್ರ
ಕಾಶ ಅಗಣಿತ ಕೋಟಿ ಬ್ರಹ್ಮಾಂಡನಾಯಕನೆ
ವಾಸವಮರಾಳಿ ಪರಮೇಷ್ಠಿವಂದಿತ ವೆಂಕ
ಟೇಶನೊಲಿದುಪ್ಪವಡಿಸಯ್ಯ ಹರಿಯೆ ||ಪ||

ಉರ್ವಿಯೊಳು ತಮ ಸಾರಿ ಪ್ರಕಟಿಸುತ ಐದಿರಲು
ಪೂರ್ವಾದ್ರಿಯೊಳು ಪ್ರಭಾಕರನುದಿಸೆ ಹರುಷದಲಿ
ಉರ್ವಿಯಲಿ ಕಮಲಗಳು ಬಾಯ್ದೆರೆಯೆ ಅಭ್ರದಲಿ
ಚೀರ್ವ ಭ್ರಮರಾಳಿ ಎರಗೆ
ಪಾರ್ವ ಖಗ ಉಲಿಯುತಿರೆ ಸಕಲ ಜನ ನಲಿಯುತಿರೆ
ಗೀರ್ವಾಣ ಪತಿ ಅಭವ ಕಮಲಭವರೈದಿಹರು
ಸರ್ವೇಶನೊಲಿದುಪ್ಪವಡಿಸಯ್ಯ ಹರಿಯೆ ||೧||

ಸುರವಾದ್ಯ ಮೊಳಗಲಂಬುಜಷಂಡ ಬೀಳ್ವಂದದಲಿ
ವರರುದ್ರವೀಣೆಗಳ ಪಿಡಿದು ಸನಕಾದಿಗಳು
ಹರುಷದಲಿ ತ್ರಯದಶದ್ವಯ ರಾಗದಿಂ ಸಪ್ತ
ಸ್ವರದಿ ಪಾಡುತಲೈದಿಹರು ಪರಮ ಕಲ್ಯಾಣಿ
ಸುರನದಿಯು ಯಮುನೆ ಗೌತಮಿಯು
ವರ ಕೃಷ್ಣವೇಣಿ ಭಾಗೀರಥಿಯರೈತಂದು
ಭರದಿ ಹಾರೈಸುತಿಹರು ಜಲಕ್ರೀಡೆಗೇಳಯ್ಯ
ಸ್ಮರನ ಪಿತನೊಲಿದುಪ್ಪವಡಿಸಯ್ಯ ಹರಿಯೆ ||೨||

ವಿದುರ ಪ್ರಹ್ಲಾದ ರುಕ್ಮಾಂಗದ ವಿಭೀಷಣರು
ಮದಗಜ ಅಜಾಮಿಳ ರುದ್ರ ವರ ಮಾರ್ಕಾಂಡೇಯ

ಕದನದಲಿ ಕಲಿ ಹನುಮ ಸುಗ್ರೀವ ಜಾಂಬವಾಂ
ಗದ ಶಬರಿ ದ್ರೌಪದಿಯರು
ನದಿಸುತನು ಅಕ್ರೂರ ಪಾಂಡವರು ಐವರೂ
ಒದಗಿ ಬಂದಿಹರು ಭಾಗವತ ಜನನಿವಹ ಸುಮನಸ
ಸುದತಿಯರು ರತ್ನದಾರತಿಯ ಬೆಳಗಲೈ
ದಿದರು ಸರ್ವೇಶನೊಲಿದುಪ್ಪವಡಿಸಯ್ಯ ಹರಿಯೆ ॥೩॥

ಶುಕ ವ್ಯಾಸ ದುರ್ವಾಸ ಕುಂಭಸಂಭವರು ಕೌ
ಶಿಕ ಪರಾಶರ ಅಂಬರೀಷ ಗೌತಮನು ಪೌಂ
ಡ್ರಿಕನು ವಾಲ್ಮೀಕಿ ಭೃಗು ಕಶ್ಯಪ ವಶಿಷ್ಠಮುನಿ
ನಿಕರವಿದೆ ರಕ್ಷಿಸುವುದೆನುತ
ಮುಖಮಾರ್ಜನವ ಮಾಡಿ ಉದ್ಧರಿಸು ಊರ್ಧ್ವ ಪುಂ
ಡ್ರಕವನ್ನು ಸಕಲ ಮಧು ಪರ್ಕ ಮೃಷ್ಟಾನ್ನವ ಸುವ
ರ್ಣಕದ ಹರಿವಾಣದೊಳು ಆರೋಗಣೆಯ ಮಾಡು
ರುಕುಮಿಣಿಯರಸನೊಲಿದುಪ್ಪವಡಿಸಯ್ಯ ಹರಿಯೆ ॥೪॥

ನುಡಿಯ ಕದ್ದೊಯ್ದವನ ಒರಸಿ ಸುಧೆಯನು ತರಿಸಿ
ಪೊಡವಿಯನು ಧರಿಸಿ ಮನ್ನಿಸಲೈದಿ ಅರ್ಭಕನ
ಅಡಿಯಿಟ್ಟಳೆಯೆ ಭೂಮಿಯನು ಕ್ಷತ್ರಿಯರ ಶಿರವ
ತಡೆಗಡಿಯೆ ರಘುಪತಿ ಕೃಷ್ಣನೆ
ಪೊಡವಿಪತಿ ವೈಕುಂಠವೆನಿಪ ಶೇಷಾದ್ರಿಯೊಳು
ಸಡಗರದಿ ಒಲಿದು ಭಕ್ತರ ಪಾಲಿಪ ನೆಲೆಯಾದಿಕೇಶವ ಜಗ
ದೊಡೆಯ ತಿರುವೆಂಕಟೇಶ ಜಗದೀಶ
ಒಡನೆ ಒಲಿದುಪ್ಪವಡಿಸಯ್ಯ ಹರಿಯೆ ॥೫॥

ಭಾವ– ಶ್ರೀ ಹರಿಯನ್ನು ಎಚ್ಚರಗೊಳಿಸುವ ಉದಯರಾಗವಿದು.

ಅರ್ಥ– ಪೂಸರ (<ಪುಷ್ಪಶರ) = ಹೂವನ್ನು ಬಾಣವಾಗುಳ್ಳವನು (ಮನ್ಮಥ)
ಪೂಸರನ ಜನಕ = ವಿಷ್ಣು



ತರಣಿ = ಸೂರ್ಯ
ವಾಸವ = ಇಂದ್ರ
ಅಮರಾಳಿ = ದೇವತೆಗಳ ಸಮೂಹ
ಪರಮೇಷ್ಠಿ = ಬ್ರಹ್ಮ
ಉಪ್ಪವಡಿಸಯ್ಯ = ಏಳಯ್ಯ

೧. ಉರ್ವಿ = ಭೂಮಂಡಲ
ಪ್ರಭಾಕರ = ಸೂರ್ಯ
ಅಭ್ರ = ಮೋಡ
ಭ್ರಮರಾಳಿ = ದುಂಬಿಗಳ ಹಿಂಡು
ಗೀರ್ವಾಣಪತಿ = ದೇವತೆಗಳ ಒಡೆಯ (ಇಂದ್ರ)
ಅಭವ = ಈಶ್ವರ
ಕಮಲಭವ = ಬ್ರಹ್ಮ

೨. ಅಂಬುಜ ಷಂಡ = ತಾವರೆ ಸಮೂಹ
ತ್ರಯದಶದ್ವಯ = ೩೨
ಗೌತಮಿ = ಗೋದಾವರಿ
ಭಾಗೀರಥಿ = ಗಂಗೆ
ಸ್ಮರನ ಪಿತ = ಮನ್ಮಥನ ತಂದೆ (ವಿಷ್ಣು)

೩. ಸುಮನಸ ಸುದತಿಯರು = ಅಪ್ಸರೆಯರು
ಐದಿದರು = ಬಂದರು

೪. ಕುಂಭಸಂಭವ = ಅಗಸ್ತ್ಯ
ಕೌಶಿಕ = ವಿಶ್ವಾಮಿತ್ರ
ಪೌಂಡ್ರಿಕ = ಪುಂಡರೀಕ
ಊರ್ಧ್ವ ಪುಂಡ್ರ = ಉದ್ದ ನಾಮ
ಸುವರ್ಣಕದ = ಚಿನ್ನದ

೫. ಒರಸಿ = ನಾಶ ಮಾಡಿ
ಅರ್ಭಕ = ಮಗು (ಪ್ರಹ್ಲಾದ)
ಪೊಡವಿಪತಿ = ಜಗದೀಶ

* * **

## ೩೧೧
## ಭೂಪಾಳಿ – ಝಂಪೆ

ಸಿಂಗರದ ಸಿರಿಧರನೆ ಅಸಿತಕಂಠಸನ್ನುತನೆ
ಗಂಗೆಯನು ಉಂಗುಟದಿ ಪೆತ್ತ ಮೂರುತಿಯೆ– ಕಲುಬಗಿರಿ
ರಂಗನೊಲಿದುಪ್ಪವಡಿಸಯ್ಯ ಹರಿಯೆ ||ಪ||

ಕುಸುಮಸೌರಭವ ಎಡೆವೆರಸಿ ಮಾರುತ ತೀಡೆ
ಎಸೆವ ರೋಪಣಸಿ ಪೆಸರ್ವಕ್ಕಿ ಝೇಂಕಾರ ಮಾಡೆ
ಪೊಸ ಶಾಸ್ತ್ರ ಕ್ರಮ ಕೂಗೆ ಜಾರ ತಸ್ಕರ ತತಿಯು
ಬಸವಳಿದು ಭಯದಿ ಪೋಗೆ
ಶಶಿತಾರೆಗಳು ಸರಿಯೆ ನೀಲಾಬ್ಜ ಮೈಮರೆಯೆ
ಬಿಸಿಗದಿರ ಪೂರ್ವಾಚಲವನಡರಿ ಬಂದ ಪೀತ
ವಸನ ನೀನೊಲಿದುಪ್ಪವಡಿಸಯ್ಯ ಹರಿಯೆ ||೧||

ಭಕುತರೊಳು ಘಂಟಕರ್ಣನು ಜಯ ಸುವರ್ಣಕ ಪುತ್ರ
ಮುಕುತಿ ದೇಹಿಕ ಸಿಲೀಮುಖನಯ್ಯ ಧ್ರುವದೇವ
ಅಖಿಳ ಸುವ್ರತ ಕ್ಷೋಣಿಯಿಂದಲಿ ಹಿರಿಯ ಪ್ರಕೃತಿರಹಿತಾಂಬರೀಷ
ವಿಕಟ ವಧುವಿನ ಮಾಯೆ ಗೆಲಿದ ರುಕಮಾಂಗದನು
ಸುಕೃತಿವಂತನು ಯಮನ ತನಯ ಭೀಮಾರ್ಜುನರು
ನಕುಲ ಸಹದೇವಕರು ಬಂದರೇಳೈ ಭೃತ್ಯ
ನಿಕರಕೊಲಿದು ಉಪ್ಪವಡಿಸಯ್ಯ ಹರಿಯೆ ||೨||

ಗಂಡುವೆಣ್ಣಿನ ರೂಪವೆತ್ತು ರಾಜಿಸುವವನು
ಮಂಡೆಯಲಿ ಕೊಂಡಾಂತು ಮೈ ಜುಮ್ಮುತಾಳಲು–
ದ್ಧಂಡಧಾರನು ತನ್ನ ತಲೆದೋರಿ.....
ತುಂಡವಿಕ್ರಮ ವರುಣನು
ತುಂಡದೊಳು ಚಂಡವುಳ್ಳವನ ಬಲವನು ಮುರಿದೆ
ಡಿಂಡೀರ ಸರ್ವಕೃತ್ ಆನೆ ವಾಹನ.....
ಅಂಡಲೆದು ಓಡುವ ವ್ಯಾಘ್ರಾನುಚರ್ಮ ಕಂದ ರಮೆಯ
ಗಂಡನೊಲಿದುಪ್ಪವಡಿಸಯ್ಯ ಹರಿಯೆ ||೩||

ವಲ್ಮೀಕಿ ದುರ್ವಾಸ ವಿದುರ ಪಟಿಪರಿ ಪೂರ್ವ
ಜಲಜಾಪ್ತ ವರಗಾಲವಾನ್ವಿತ ಅತ್ರಿ ಶಾಂಡಿಲ್ಯ
ಚಲದಂಕ ಕೌಶಿಕನು ಕಟಿಲ ಮಾರ್ಕಂಡೇಯ
ತಳಕಾಲ ನಯನದವನು
ಜಲಧಿಯನು ಪೀರ್ದ ಮಹಾಬಲದ ಬಲವಂತನು
ಸುಲಭ ವಶಿಷ್ಠನು ಪರಾಶರನು ಶುಕಮುನಿಯು
ಕಲಕಂಠ ಹೊಳೆಯೆ ನಿಟ್ಟಿಸಿದವನು ಬಂದನೆಲೆ
ಜಲಜಾಕ್ಷನೊಲಿದುಪ್ಪವಡಿಸಿಯ್ಯ ಹರಿಯೆ ||೪||

ವೇದ ತಸ್ಕರನೊಡನೆ ಕಾದಿ ವೇದವ ಸೆಳೆದು
ಭೂಧರವ ನೆಗಹಿ ತಾಮಸನ ಜೀವವನಳಿದು
ವಾದಿಸುವ ಹಿರಣ್ಯಕನ ಕರುಳ ನಖದಲಿ ಬಗೆದು
ಪಾದದಲಿ ಧರೆಯನಳೆದು
ಯೋಧಾರ್ಜುನನ ಅರೆದು, ಸ್ವಾದು ಅನ್ನವ ತೊರೆದು
ಕ್ರೋಧಿಯಸುವೀಂಟಿ ತ್ರಿಪುರವ ಮುರಿದು ಹಯವೇರು
ಏದರಾಲಸ್ಯಮೇಳೇಳು ಮಾಧವನೆ ಕಲುಬ
ಗಿರಿಯಲ್ಲಿ ಬಳಲಿ ಪವಡಿಸಿದೆ
ಸಾಧು ನರಸಿಂಹ ಕಾಗಿನೆಲೆ ಆದಿಕೇಶವನ ಮುಂದ–
ಗಾಧ ಕಾರ್ಯಗಳಿವೆ ಭೂಧರನೊಲಿದುಪ್ಪವಡಿಸಯ್ಯ ಹರಿಯೆ ||೫||

ಭಾವ– ಕಲುಬಗಿರಿಯ ರಂಗನನ್ನು ಕುರಿತ ಉದಯರಾಗವಿದು. (ಕಲುಬಗಿರಿ ಎಂದರೆ ಕಲುಬುರಿಗಿ. ಇದು ಶಾಸನಗಳಲ್ಲಿ ಕಲುಂಬುರಿಗಿ ಎಂದಿದೆ. ಕಲುಬುಗಿರಿ<ಕಲುಬುರಿಗಿಯಾಗಿದೆ ಕೊನೆಯ ಎರಡು ಅಕ್ಷರಗಳ ಪಲ್ಲಟದಿಂದ.

ಅರ್ಥ– ಸಿರಿಧರ = ವಿಷ್ಣು, ಅಸಿತಕಂಠ = ಈಶ್ವರ

೧. ಮಾರುತ = ಗಾಳಿ,
ರೋಪಣಸಿ = ?
ಪೊಸಶಾಸ್ತ್ರ ಕ್ರಮ ಕೂಗೆ = ಬೆಳಗಿನ ಜಾವ ಕೂಗುವ ಮುಸಲ್ಮಾನರ ಪೂಜಾಕ್ರಮವನ್ನು ಕನಕದಾಸರು ಹೀಗೆ ಅಭಿವ್ಯಕ್ತಿಸಿರಬಹುದೆ?
ತಸ್ಕರ ತತಿಯು = ಕಳ್ಳರ ಸಮೂಹ
ನೀಲಾಬ್ಜ = ಕನ್ನೈದಿಲೆ
ಬಿಸಿಗದಿರ = ಬಿಸಿಯಾದ ಕಿರಣಗಳನ್ನುಳ್ಳವನು (ಸೂರ್ಯ)

೨. ಪೀತವಸನ = ಪೀತಾಂಬರಧಾರಿ (ವಿಷ್ಣು)
ಘಂಟಾಕರ್ಣ = ಇವನೊಬ್ಬ ಶಿವಭಕ್ತ (ಅನ್ಯ ದೇವರ ಹೆಸರು ಕಿವಿಗೆ ಬೀಳದಿರಲೆಂದು ಕಿವಿಗೆ ಗಂಟೆ ಕಟ್ಟಿಕೊಂಡಿದ್ದನೆಂದು ಕಥೆ.)
ಸುವರ್ಣ ಪುತ್ರ = ಪ್ರಹ್ಲಾದ
ಸಿಲೀಮುಖ = ಬಾಣ
ಸಿಲೀಮುಖನಯ್ಯ = ಬಲಿ
ಪ್ರಕೃತಿರಹಿತ = ಸಂಯಮಿ
ವಿಕಟವಧು = ಮೋಹಿನಿ
ಯಮನತನಯ = ಧರ್ಮರಾಯ

೩. ಗಂಡು... ರಾಜಿಸುವವನು = ಅರ್ಧನಾರೀಶ್ವರ
ಮಂಡೆಯಲಿ ಕೊಂಡಾಂತು = ಗಂಗೆಯನ್ನು ತಲೆಯಲ್ಲಿ ಧರಿಸಿ
ಉದ್ದಂಡಧಾರ = ತ್ರಿಶೂಲಧಾರಿ = ಶಿವ
ತುಂಡದೊಳು ಚಂಡವುಳ್ಳವನ = ಕಾಕಾಸುರನ
ಡಿಂಡೀರ = ?

೪. ಪೂರ್ವ ಜಲಜಾಪ್ತ = ಕಮಲಸಖನಾದ ಸೂರ್ಯ
ಕಟಿಲ = ಕಪಿಲ ಎಂದಿರಬಹುದೆ?
ತಳಕಾಯ ನಯನದವನು = ಅಂಗಾಲಿನಲ್ಲಿ ಕಣ್ಣುಳ್ಳ ಭೃಗು ಮಹರ್ಷಿ
ಜಲಧಿಯನು... ಬಲವಂತನು = ಅಗಸ್ತ್ಯ
ಜಲಜಾಕ್ಷ = ವಿಷ್ಣು



೫. ಮೇದಿನಿ = ಭೂಮಿ
ನಖ = ಉಗುರು
ಯೋಧಾರ್ಜುನ = ಕಾರ್ತವೀರ್ಯ
ವೇದ... ಸೆಳೆದು = ಮತ್ಸ್ಯಾವತಾರ
ಭೂಧರವನೆಗಹಿ = ಕೂರ್ಮಾವತಾರ
ತಾಮಸನ ಜೀವವನಳಿದು = ವರಾಹಾವತಾರ
ವಾದಿಸುವ.... ಬಗೆದು = ನರಸಿಂಹಾವತಾರ
ಪಾದದಲಿ..... ಅಳೆದು = ವಾಮನಾವತಾರ
ಯೋಧಾರ್ಜುನನ ಅರೆದು = ಪರಶುರಾಮಾವತಾರ
ಪಾದದಲಿ... ಅಳೆದು = ವಾಮನಾವತಾರ
ಸ್ವಾದು... ವೀಂಟಿ = ರಾಮಾವತಾರ (ಅರಮನೆಯ ಪುಷ್ಕಳ ಭೋಜನವನ್ನು ತೊರೆದು, ವನವಾಸ ಯಾತ್ರೆ ಕೈಗೊಂಡು ರಾವಣನನ್ನು ಕೊಂದವನು.
ತ್ರಿಪುರವ ಮುರಿದು = ಬೌದ್ಧಾವತಾರ
ಹಯವೇರು = ಕಲ್ಕ್ಯವತಾರ

* * * *

**Blank**



**೩೧೨**

**ಯಮನು ಮುನ್ನೆ ಮಾಂಡವ್ಯಶಾಪದಿಂದೆರಡು ಜ**
**ನುಮ ಶೂದ್ರ ಯೋನಿಯೊಳಗೆ ಪುಟ್ಟಿದನು. ಮೊದಲ ಜ**
**ನುಮ ವಿದುರನಾಗಿ, ಬಳಿಕ ಕುರುಬರ ಕುಲದಲಿ ಜನಿಸಿದೆನಗೀ ಜ**
**ನುಮದಲಿ ಮುಕ್ತಿ ಎಂತು ಎಂಬೆ.**

(ವ್ಯಾಸರಾಯರಿಗೆ ಮೂರು ಜನ್ಮಗಳೆಂದೂ ಶ್ರೀಪುರಂದರ ದಾಸರಿಗೆ ಎರಡು ಜನ್ಮಗಳೆಂದೂ ಇದೇ ಊಗಾಭೋಗದಲ್ಲಿ ಹೇಳಿರುವರೆಂದೂ ಆ ಭಾಗ ತಮಗೆ ದೊರೆಯಲಿಲ್ಲವೆಂದೂ ಸಂಪಾದಕರಾದ ಬಿ. ಶಿವಮೂರ್ತಿ ಶಾಸ್ತ್ರಿಗಳು ಮತ್ತು ಕೆ.ಎಂ.ಕೃಷ್ಣರಾವ್ ಹೇಳಿದ್ದಾರೆ. ಆದರೆ ಕನಕದಾಸರು ಕುರುಬರು ಎಂಬುದಕ್ಕೆ ಖಚಿತ ಆಧಾರ ಅವರ ಬಾಯಿಂದಲೇ ದೊರಕಿದೆ.)

**೩೧೩**

**ನೀರಿಲ್ಲದ ಭಾವಿ ಊರಿಲ್ಲದ ಮಠವು**
**ನೆರಳಿಲ್ಲದ ಮರ ತಿರುಳಿಲ್ಲದ ಮಾತು**
**ಧನವಿಲ್ಲದ ದಾತ ದಯವಿಲ್ಲದ ನಾಥ**
**ಮನಸಿಲ್ಲದ ಶಕುತಿ ಭಯವಿಲ್ಲದ ಭಕುತಿ**
**ನರಹರಿ ಮುಕುಂದ ಶ್ರೀ ಕೃಷ್ಣ ಎನ್ನದ**
**ನರರಿದ್ದರೇನು ಇಲ್ಲದಿದ್ದರೇನು?**

**೩೧೪**

**ಬೆನಕನನೊಲ್ಲೆನವ್ವ ತುಲಕಿ ಆಡುವನ**
**ಷಣ್ಮುಖನನೊಲ್ಲೆನವ್ವ ಬಹುಬಾಯಿಯವನ**
**ಇಂದ್ರನನೊಲ್ಲೆನವ್ವ ಮೈಯೆಲ್ಲ ಕಣ್ಣಿನವನ**
**ಚಂದ್ರನನೊಲ್ಲೆನವ್ವ ಕಳೆಗುಂದುವವನ**
**ರವಿಯನೊಲ್ಲೆನವ್ವ ಉರಿದು ಮೂಡುವನ**

ಹರನನೊಲ್ಲೆನವ್ವ ಮರುಳುಗೊಂಬುವನ
ಚೆನ್ನರಾಯ ಚೆಲುವ ಜಗಕೆಲ್ಲ ಒಡೆಯನ
ಕರೆದು ತಾರೆ ಎನಗೆ ಕಾಗಿನೆಲೆಯಾದಿಕೇಶವನ

**೩೧೫**

ಮಣ್ಣಲಿ ಮೂಡಿಹ ಮಡಕೆ ಮಸಿಯಾಗೆ
ಮಣ್ಣಿಂದಲೆ ತಿಕ್ಕೆ ಮಸಿ ಹೋಗುವುದು.
ಕಣ್ಣು ಕಿವಿಗಳ ನಡೆಪ ಮನ ಮಲಿನವಾಗೆ
ಕಣ್ಣು ಕಿವಿಗಳಿಂದಲಿ ಮನ ತಿದ್ದಲಾಗುವುದೆ?
ಹಣ್ಣಾಗುವುದು ಮನ ಶ್ರೀಹರಿ ಧ್ಯಾನ ಮಾಡೆ
ಹುಣ್ಣಾಗಿ ಕಾಡಿಪುದು ಅವನ, ಅದ ಮರೆಯೆ.
ಕಣ್ಣಲಿ ಕಣ್ಣಾಗಿ ಕತ್ತಲಲಿ ಬೆಳಕಾಗಿ

**೩೧೬**

ಅಳಿವ ದೇಹವಾ ಸಿಂಗರಿಸುವೆಯೇಕೆ
ಬೆಳೆಸು ಹರಿಭಕ್ತಿ ಮನದೊಳು ನಿರತ
ಕಳೆವ ತನುವಿದು ಶಾಶ್ವತವಲ್ಲ ತಿಳಿ
ಒಳಗಿನ ಆತ್ಮ ನಿರಂತರವಾಗಿರಲು
ಘಳಿಗೆಗೊಮ್ಮೆ ಅವನ ಧ್ಯಾನವ ಮಾಡು
ಸುಳಿಯಲಿ ಸಿಕ್ಕಿರಲು ನೀನುಳಿವ ದಾರಿ
ತಿಳಿ; ನೀ ಕರೆ ಸೇರೆ ನಿನ್ನನಾ
ನಳಿನಾಕ್ಷ ಶ್ರೀ ಆದಿಕೇಶವರಯ ಪೊರೆವ

* * * *



# ಕನಕದಾಸರ ಕೀರ್ತನೆಗಳ ಅಕಾರಾದಿ

**ಊ**



**ಎ**



**ಏ**

**ಒ**



**ಓ**



**ಕ**







**ಗ**

**ಪ**



**ಬ**

## ಭ







## ಯ



ಕನಕದಾಸರ ಉಪಾಸ್ಯದೈವವಾದ ಕಾಗಿನೆಲೆಯ
ಶ್ರೀ ನರಸಿಂಹ ವಿಗ್ರಹ



ಕಾಗಿನೆಲೆಯ ಶ್ರೀನರಸಿಂಹ ದೇವಾಲಯ





ಶ್ರೀ ಆದಿಕೇಶವ ಹಾಗು ಶ್ರೀ ನರಸಿಂಹ ದೇವಾಲಯಗಳ
ಮಧ್ಯದಲ್ಲಿರುವ ಕಲ್ಯಾಣಮಂಟಪ



ಕಾಗಿನೆಲೆಯಲ್ಲಿರುವ ಶ್ರೀ ಕನಕದಾಸರ ಸಮಾಧಿಯ ಮೇಲಿರುವ
ಅಶ್ವತ್ಥವೃಕ್ಷ





ಬಾಡ ಗ್ರಾಮದಲ್ಲಿ ಶ್ರೀ ಕನಕದಾಸರ ಅರಮನೆಯಲ್ಲಿದ್ದ ನಿವೇಶನ



ಶ್ರೀ ಕನಕದಾಸರು ಉಪಯೋಗಿಸುತ್ತಿದ್ದ ವಸ್ತುಗಳು :
(೧) ಬೆತ್ತದ ಕಡ್ಡಿ, (೨) ಊಟ ಮಡುತ್ತಿದ್ದ ಮರದ ತಣಿಗೆ,
(೩) ಶಂಖ ಮತ್ತು (೪) ಭವನಾಸಿ





ಶ್ರೀ ಕನಕದಾಸರ ಆರಾಧ್ಯ ದೇವರು ಕಾಗಿನೆಲೆ ಶ್ರೀ ಆದಿಕೇಶವಸ್ವಾಮಿ



ಕಾಗಿನೆಲೆಯಲ್ಲಿರುವ ಶ್ರೀ ನರಸಿಂಹಸ್ವಾಮಿ ಉತ್ಸವಮೂರ್ತಿ





ಕಾಗಿನೆಲೆಯಲ್ಲಿರುವ ಶ್ರೀ ಆದಿಕೇಶವಸ್ವಾಮಿಯ ದೇವಾಲಯ

